# THE MYSORE REVENUE & AGRICULTURAL GAZETTE.

ವಾಲ್ಯೂಂ ೩.] ಭಾನುವಾರ, ೧ನೆ ನವಂಬರ್ ೧೯೦೮. [ನಂ. ೧.

## Contents.



## ಅನುಕ್ರಮಣಿಕೆ.



## Co-operative Societies.

## ಪರಸ್ಪರ ಸಹಾಯಕ ಸಂಘಗಳು.

ಇಂಡಿಯಾ ಗೌರ್ನಮೆಂಟಿನ ರೆವಿನ್ಯೂ ಇಲಾಖೆ ಸೆಕ್ರೆಟರಿಯವರ ಅಗ್ರಾಸನಾಧಿಪತ್ಯಕ್ಕೊಳಪಟ್ಟು ಕೋ ಆಪರೇಟೀವ್ ಸೊಸೈಟಿಗಳ ರಿಜಸ್ಟ್ರಾರ‍್ರವರ ೩ನೆ ಸಭೆಯು ಇದೇ ಅಕ್ಟೋಬರ್ ತಿಂಗಳು ೫ನೆ ತಾರೀಖು

ನಿಂದ ೮ನೆ ತಾರೀಖಿನವರೆಗೆ ಸಿಮ್ಲಾದಲ್ಲಿ ನಡೆಯಿತು. ಈ ಸಭೆಗೆ ಮೈಸೂರು ಸರ್ಕಾರದಿಂದ ಮೆ|| ಶಾಮರಾವ್ ಎಂ. ಎ., ಯವರು ಕಳುಹಿಸಲ್ಪಟ್ಟಿದ್ದರು.

ಹೋದ ವರುಷದಲ್ಲಿ (೧೯೦೭—೦೮) ಇಂಡಿಯಾ ದೇಶದಲ್ಲಿ ಈ ಕೋಆಪರೇಟೀವ್ ಸೊಸೈಟಿಗಳ ಅಭಿವೃದ್ಧಿಯು ಅತಿ ತೃಪ್ತಿಕರವಾಗಿರುತ್ತೆಂದು ಸಭೆಯಲ್ಲಿ ನಿರ್ಧರಿಸಲ್ಪಟ್ಟಿತು. ಸೊಸೈಟಿಗಳ ಒಟ್ಟು ಸಂಖ್ಯೆಯು ೮೪೩ರಿಂದ ೧೩೫೭ಕ್ಕೆ ಹೆಚ್ಚಿರುವದಲ್ಲದೆ ಬಂಡವಾಳವು ಸಹ ೪೪½ ಲಕ್ಷ ರೂಪಾಯಿಗಳವರೆಗೆ ಇಮ್ಮಡಿಸಿರುವದು. ಗ್ರಾಮಿಣಾಯ ಸೊಸೈಟಿಗಳ ಅಭಿವೃದ್ಧಿಯು ವಿಶೇಷವಾಗಿರುವದು. ಈ ಗ್ರಾಮಿಣಾಯ ಸೊಸೈಟಿಗಳ ಸಂಖ್ಯೆ ೭೪೩ರಿಂದ ೧೫೦೧ರ ತನಕ ಹೆಚ್ಚಿರುವದಲ್ಲದೆ ಒಟ್ಟು ಮೆಂಬರುಗಳ ಸಂಖ್ಯೆಯು ೯೩,೫೦೦ ಆಗಿರುತ್ತೆ. ಮೇಲೆ ಹೇಳಿದ ೪೪½ ಲಕ್ಷ ಬಂಡವಾಳದಲ್ಲಿ ೨೪½ ಲಕ್ಷ ಈ ಗ್ರಾಮಿಣಾಯ ಸೊಸೈಟಿಗಳದೇ ಆಗಿರುತ್ತೆ.

೨. ನಮ್ಮ ಮೈಸೂರು ಶೀಮೆಯಲ್ಲಿ ಈ ಕೋಆಪರೇಟೀವ್ ಕಾನೂನು ಒಂದು ವರುಷದಮೇಲೆ ಜಾರಿಗೆ ಬಂತು. ಆದರೂ ಕಳೆದ ವರುಷದ ಅಭಿವೃದ್ಧಿಯು ಈ ಕೆಳಗೆ ತೋರಿಸಲ್ಪಟ್ಟಂತೆ ಇರುತ್ತೆ.

| ಸಾಲು. | ಸೊಸೈಟಿಗಳ ಸಂಖ್ಯೆ. | ಮೆಂಬರುಗಳ ಸಂಖ್ಯೆ. | ಬಂಡವಾಳ. |
|---|---|---|---|
| 1906—07 | 15 | 1,191 | 27,423 |
| 1907—08 | 27 | 22,51 | 64,126 |

ಗ್ರಾಮಾಂತರಗಳಲ್ಲಿ ಈ ಸೊಸೈಟಿಗಳು ವ್ಯಾಪಿಸಲಿಕ್ಕೆ ಇನ್ನೂ ವಿಶೇಷ ಅವಕಾಶವಿರುತ್ತೆ.

೩. ಸಿಮ್ಲಾದಲ್ಲಿ ನಡೆದ ಸಭೆಯಲ್ಲಿ ಸೊಸೈಟಿಗಳ ಅಭಿವೃದ್ಧಿ ವಿಷಯಕವಾದ ಅನೇಕ ಸಂಗತಿಗಳು ಚರ್ಚಿಸಲ್ಪಟ್ಟವು. ಕೋ ಆಪರೇಟಿವ್ ಸೊಸೈಟಿಗಳಿಗೆ ಗ್ರಾಮಾಂತರಗಳಲ್ಲಿ ಬಂಡವಾಳವು ಯಾವ ವಿಧದಲ್ಲಿ ಒದಗಬೇಕು, ಈ ಬಂಡವಾಳವು ಸದಾ ಗೌರ್ನಮೆಂಟಿನಿಂದಲೇ ಕೊಡಲ್ಪಡುತ್ತಾ ಇರಬೇಕೆ, ಅಥವಾ ಒಂದು ಸೊಸೈಟಿಯಿಂದ ಮತ್ತೊಂದು ಸೊಸೈಟಿಗೆ ಅವರುಗಳೇ ಕೊಟ್ಟುಕೊಂಡು ಅದರ ವಿಚಾರಣೆಯು ಸೊಸೈಟಿಗಳನ್ನೇ ಹೊಂದಿರಬೇಕೆ, ಮತ್ತು ಕ್ಷಾಮ ಮೊದಲಾದ ದುರ್ಭಿಕ್ಷ ಕಾಲಗಳಲ್ಲಿ ಈ ಬಂಡವಾಳದ ವಿಷಯದಲ್ಲಿ ಸರ್ಕಾರದವರು ತಕಾವಿ ರೂಪವಾಗಿ ಯಾವ ವಿಧದಲ್ಲಿ ಸೊಸೈಟಿಗಳಿಗೆ ಸಹಾಯ ಮಾಡಬಹುದು ಎಂಬ ಇವೇ ಮೊದಲಾದ ವಿಷಯಗಳು ಚರ್ಚಿಸಲ್ಪಟ್ಟವು.

---

## Wheat Cultivation.*—*Concld.*

## ಗೋಧಿ ಸಾಗುವಳಿ.

(ಹಿಂದಿನ ಸಂಚಿಕೆಯ ಶೇಷ.)

(೬) ಜಮೀನಿನ ಯೋಗ್ಯತೆ ಮತ್ತು ಸ್ಥಿತಿಯನ್ನನುಸರಿಸಿ ಬೀಜವು ಹೆಚ್ಚಾಗಿಯೂ ಕಮ್ಮಿಯಾಗಿಯೂ ಹಿಡಿಯುತ್ತದೆ. ಅಂದರೆ, ಉತ್ತಮವಾದ ಜಮೀನಿನಲ್ಲಿ ಜಾಗ್ರತೆಯಾಗಿ ಬಿತ್ತನೆ ಮಾಡಿದರೆ ಹೆಚ್ಚು ಬೀಜ ಬೇಕಾಗುವದಿಲ್ಲ. ಕೀಳು ಜಮೀನಿನಲ್ಲಿ ಕಾಲವನ್ನತಿಕ್ರಮಿಸಿ ಬಿತ್ತನೆ ಮಾಡಿದರೆ ಜಾಸ್ತಿ ಬೀಜ ಬೇಕಾಗುತ್ತೆ. ನೀರು ಹಾಯಿಸಿ ಬೆಳೆ ಮಾಡುವದರಲ್ಲಿಯೂ ಹೆಚ್ಚು ಬೀಜ ಬೇಕಾಗುತ್ತದೆ. ಅಂತು ಎಕರೆ ಒಂದಕ್ಕೆ ೬೦ ರಿಂದ ೧೦೦ ಪೌಂಡುವರಿಗೆ ಬಿತ್ತಿದರೆ ಸಾಕಾಗುತ್ತೆ.

(೭) ಬಿತ್ತನೆ ತೀರಿದ ನಂತರ ಕುಂಟೆ ಹೊಡಿಯುವ ಅವಶ್ಯಕತೆಯು ಕಮ್ಮಿ. ಪರಂತು ಕುಂಟೆ ಹೊಡದರೇನೆ ಕಳೆ ಬೆಳಿಯಲಿಕ್ಕೆ ಅವ

---

* ಇಂಡಿಯನ್ ಅಗ್ರಿಕಲ್ಚರಿಸ್ಟ್.—೧—೫—೦೮.

ಕಾಶವಿಲ್ಲದೆ ಜಮೀನಿನ ಮೇಲ್ಭಾಗವು ಸಡಲುವದರಿಂದ ಪ್ರಯೋಜನ ವುಂಟು.

(೪) ತೆನೆಗಳ ಕೆಳಗಿನ ಹುಲ್ಲು ಹಚ್ಚಗಿರುವದು ತಪ್ಪಿ ಹಳದಿ ಅಥ ವ ಎಣ್ಣೆಗೆಂಪು ಛಾಯೆಗೆ ತಿರುಗುತ್ತಲೆ ಕಟಾವು ಮಾಡಬೇಕು. ಆದರೆ ಮುರಿದು ಹೋಗುವಷ್ಟು ಬಹಳ ಒಣಗುವ ತನಕ ತಡಿಯಬಾರದು. ಹು ಲ್ಲು ಹೆಚ್ಚಾಗಿ ಒಣಗಿದರೆ ಕಾಳು ಉದರಿಹೋಗುತ್ತೆ ಮತ್ತು ಧಾನ್ಯದ ಬ ಣ್ಣವು ಕಮ್ಮಿಯಾಗುತ್ತೆ. ಅಲ್ಲದೆ ಬಹಳ ಮುಂಚೆಯೇ ಕಟಾವುಮಾಡಿದ ಲ್ಲಿ ಕಾಳು ಮೆತುವಾಗಿ ಒಣಗಿದ ನಂತರ ನರಟಿಕೊಳ್ಳುತ್ತದೆ. ಗೋಧಿ ಬೆ ಳೆಯನ್ನು ಕಟಾವು ಮಾಡಬೇಕಾದರೆ, ಕುಡಗೋಲುಗಳಿಂದ ಪೈರನ್ನು ನೆ ಲಮಟ್ಟ ಕೊಯ್ಯುವದುಂಟು. ನಂತರ ಹುಲ್ಲನ್ನು ಹೊರೆ ಕಟ್ಟಿ ಒಂದೆರ ಡು ದಿನ ಬಿಸಲಿನಲ್ಲಿ ಚೆನ್ನಾಗಿ ಒಣಗಿಸಿ ಕಣಕ್ಕೆ ಒಯ್ಯಬೇಕು. ನಂತರ ಕಾಳು ಬಡಿಯಬಹುದು. ಆದರೆ ಹೊಟ್ಟು ಕಸ ಕಡ್ಡಿ ಮೊದಲಾದವುಗಳೇ ನೂ ಇಲ್ಲದೆ ಶುದ್ಧವಾದ ಕಾಳೇ ಬೀಳುವಂತೆ ಬಡಿಯಬೇಕು. ಹೀಗೆ ಮಾ ಡುವದರಿಂದ ಹೆಚ್ಚು ಬೆಲೆ ದೊರೆಯುತ್ತೆ. ಗೋಧಿ ಮತ್ತು ಹುರುಳಿ ಪೈರುಗಳನ್ನು ಒಟ್ಟಿಗೆ ಇಟ್ಟರೆ ಚೆನ್ನಾಗಿ ಆಗುತ್ತವೆ. ಏಕ ಕಾಲದಲ್ಲಿ ಎರಡನ್ನು ಬಿತ್ತಿ, ಒಂದೇರೀತಿ ಬೆಳೆಯಬಹುದು. ಈರೀತಿ ಬೆಳೆ ಮಾಡಬೇ ಕಾದರೆ ಒಂದು ಸಾಲಿನಲ್ಲಿ ಗೋಧಿ, ಮತ್ತೊಂದು ಸಾಲಿನಲ್ಲಿ ಹುರುಳಿಯ ನ್ನು ಚೆಲ್ಲಬೇಕು. ಗೋಧಿಗೆ ಸಾಮಾನ್ಯವಾಗಿ ಗೊಬ್ಬರ ಹಾಕುವದಿಲ್ಲ. ಪರಂತು ಗೊಬ್ಬರ ಸಿಕ್ಕಿದರೆ ಬೀಜ ಬಿತ್ತುವದಕ್ಕೆ ಸ್ವಲ್ಪ ಕಾಲಕ್ಕೆ ಮುಂಚೆ ಹಾಕಿದರೆ ಪ್ರಯೋಜನವುಂಟು. ಗೋಧಿಯನ್ನು ಅವರೆ, ಹು ರುಳಿ, ಬಟಾಣಿ, ಮುಂತಾದ ಪೈರಿಟ್ಟ ಜಮೀನಿನಲ್ಲಿ ಬೆಳೆದರೆ ಒಳ್ಳೇ ಫಸಲಾ ಗುತ್ತದೆ. ಗೋಧಿ ಪೈರು ಕಟಾವು ಮಾಡಿದನಂತರ ಇದರ ಕೂಳೆಗಳನ್ನು ಭೂಮಿಯಲ್ಲಿಯೇ ನಿಲ್ಲಿಸಿದರೆ ಉತ್ತಮ. ಹೇಗಂದರೆ, ಇವು ಅದೇ ಜಮೀ ನಿನಲ್ಲಿ ಮುಂದೆ ಇಡಬಹುದಾದ ಪೈರಿಗೆ ಅನುಕೂಲಿಸುತ್ತೆ.

## Cocoanut. *

## ತೆಂಗು.

ಸಿಲೋನ್ ದ್ವೀಪದ ದಕ್ಷಿಣ ಪ್ರದೇಶಗಳಲ್ಲಿನ ತೆಂಗು ಸಾಗುವಳಿ ವಿಚಾರವಾಗಿ ಮೆ|| ಹೆಚ್. ಅಮರಸೂರಯ್ಯನವರು (Mr. H. Amarasuriya) ಬರೆದಿರುವದರ ಕೆಲವು ಮುಖ್ಯಾಂಶಗಳನ್ನು ನಮ್ಮ ವಾಚಕರ ತಿಳುವಳಿಕೆಗೆ ಇಲ್ಲಿ ತರುತ್ತೇವೆ.

೧. ಈ ಬೆಳೆಗೆ ಸಮುದ್ರ ತೀರದಲ್ಲಿ ಸಮಭೂಮಿಯು ಬಹಳ ಅನುಕೂಲ. ಹೇಗಂದರೆ, ಇಲ್ಲಿ ತೆಂಗಿಗೆ ಬೇಕಾಗುವ ಉಪ್ಪು ಮತ್ತು ಸುಣ್ಣವು ಭೂಮಿಯಲ್ಲಿ ಸ್ವಭಾವವಾಗಿಯೇ ವಿಶೇಷವಾಗಿರುತ್ತೆ. ಇಂಥಾ ಜಮೀನುಗಳಲ್ಲಿ ಚೆನ್ನಾಗಿ ಬಲಿತ ಮರಗಳಲ್ಲಿ ಹೆಚ್ಚು ವ್ಯವಸಾಯವಿಲ್ಲದಿದ್ದರೂ ಕೂಡ ಗಿಡ ಒಂದಕ್ಕೆ ಸರಾಸರಿ ೧೦೦ ಕಾಯಿಗಳು ಬಿಡುತ್ತವೆ. ಸಮುದ್ರತೀರಗಳ ಜಮೀನುಗಳನ್ನು ಬಿಟ್ಟರೆ ಮಳೆಗಾಲದಲ್ಲಿ ದಡಗಳ ಮೇಲೆ ನೀರು ಹೊರಳುವ ನದಿಗಳ ಅಕ್ಕಪಕ್ಕದ ಜಮೀನುಗಳು ಉತ್ತಮ. ನದಿ ದಡಗಳಲ್ಲಿನ ಗಿಡಗಳಲ್ಲೂ ಬಹಳ ಕಾಯಿಗಳು ಬಿಡುತ್ತವೆ. ಆದರೆ ಸಮುದ್ರತೀರದಲ್ಲಾಗುವಷ್ಟು ಮಾತ್ರ ಬಿಡುವದಿಲ್ಲ. ಈ ಜಮೀನುಗಳನ್ನು ಬಿಟ್ಟು ಒಳ ಪ್ರಾಂತ್ಯಗಳಿಗೆ ಹೋದ ಹಾಗೆಲ್ಲಾ ತೆಂಗಿನ ಸಾಗಿಗೆ ಜಮೀನು ಲಾಯಖಾಗಿರುವದು ಕಡಮೆಯಾಗುತ್ತದೆ. ಇಂಥಾ ಜಮೀನುಗಳಿಗೆ ವಿಶೇಷ ಮುತವರ್ಜಿಯೂ ಮತ್ತು ಕ್ರಮವಾದ ವ್ಯವಸಾಯವೂ ಅಗತ್ಯ. ಪರಂತು ಹಳ್ಳಿ ಮತ್ತು ಹಳ್ಳಿ ಮನೆಗಳಿಂದ ಸುಮಾರು ೧೦೦-೧೫೦ ಅಡಿ ಫಾಸಲೆಯಲ್ಲಿರುವ ತೋಟಗಳಿಗೆ ಮಾತ್ರ ಇಷ್ಟು ಶ್ರಮ ಪಡಬೇಕಾದುದಿಲ್ಲ. ಈ ತೋಟಗಳು ಚೆನ್ನಾಗಿಯೇ ಇರುತ್ತವೆ. ಇದಕ್ಕೆ ಕಾರಣವೇನೆಂದರೆ, ಗ್ರಾಮಸ್ಥರು ತಿಳಿದ ಹಾಗೆಯೋ ತಿಳಿಯದಹಾಗೆಯೋ ಈ ಮರಗಳಿಗೆ ಹೆಚ್ಚು ಆರೈಕೆ ಮಾಡುತ್ತಾರೆ. ಹೇಗೆಂದರೆ, ಗ್ರಾಮಸಾರ ಮತ್ತು ಕಸಕಡ್ಡಿಗಳನ್ನು ತೆಂಗಿನ ಗಿಡಗಳ ಸುತ್ತಲೂ ಚೆಲ್ಲುವುದರಿಂದ ಗಿಡಗಳಿಗೆ ಒಳ್ಳೆ ಗೊಬ್ಬರವು ಒದಗಿದಂತಾಗುತ್ತದೆ.

* ಇಂಡಿಯನ್ ಅಗ್ರಿಕಲ್ಚರಿಸ್ಟ್.—೨—೩—೦೮

೨. ಇಂಥಾ ಒಳಾಗ್ರದ ಜಮೀನುಗಳು ಸಾಮಾನ್ಯವಾಗಿ ಸಮನಾಗಿಲ್ಲದೆ ಹಳ್ಳ ದಿಬ್ಬಗಳಾಗಿಯೂ ಮತ್ತು ಸೊಪ್ಪು ಸದೆ ಜಂಗಲು ಗಿಡಗಳು ಬೆಳೆದಿರುವ ಗುಡ್ಡ ಪ್ರದೇಶವಾಗಿಯೂ ಇರುತ್ತವೆ. ಇವುಗಳನ್ನು ಹಸನು ಪಡಿಸಿಕೊಳ್ಳಬೇಕಾದರೆ ಮೊದಲು ಜಂಗಲನ್ನು ಡಿಸಂಬರ್ ತಿಂಗಳಲ್ಲಿ ಸವರಿಕೊಂಡು ಬರುವ ಫೆಬ್ರವರಿಯಲ್ಲಿ ಸುಟ್ಟುಬಿಡಬೇಕು. ಸುಟ್ಟ ಬೂದಿ ಮುಂತಾದ ಕಸವನ್ನು ತೆಗದು ಹಾಕಿ, ಅನುಕೂಲವಾದ ರಸ್ತೆಗಳನ್ನು ಮಾಡಿಕೊಳ್ಳಬೇಕು. ಈ ರಸ್ತೆಗಳು ಮುಂದೆ ಗಿಡಗಳು ಫಲ ಬಿಡುವ ಕಾಲದಲ್ಲಿ ಉದರಿಸಿದ ಕಾಯಿಗಳನ್ನು ಸಾಗಿಸುವದಕ್ಕೆ ಅನುಕೂಲಪಡುತ್ತವೆ. ಜಮೀನು ಮೇಲಿನ ಸಾರವೆಲ್ಲಾ ಬಸದುಹೋಗದ ರೀತಿ ೨೦ ಅಡಿಗೆ ಒಂದಡಿ ಓಟವಿಟ್ಟು ಅಲ್ಲಲ್ಲಿ ಕಡಗುಗಳನ್ನು ಕಡಿಯಬೇಕು. ನಂತರ ೩ ಅಡಿ ಚದರವುಳ್ಳ ಗುಣಿಗಳನ್ನು ಚಚ್ಚೌಕವಾದ ಸಾಲುಗಳಲ್ಲಿ ೨೫ ಅಡಿ ದೂರ ದೂರವಾಗಿ ಅಂದರೆ ಎಕರೆಯೊಂದಕ್ಕೆ ೭೦ರಂತೆ ತೋಡಬೇಕು. ಸಸಿಗಳಿಡುವದಕ್ಕೆ ಮುಂಚೆ ಗುಣಿಗಳಲ್ಲಿ ಒಂದು ಅಡಿ ಮಟ್ಟ ಸಮುದ್ರದ ಮರಳನ್ನು ಭರ್ತಿ ಮಾಡಬೇಕು. ಸಮುದ್ರದ ಮರಳು ಹಾಕುವದರಿಂದ ಎಳೆ ಸಸಿಗಳಿಗೆ ಗೆದ್ದಲು ಹತ್ತುವದಿಲ್ಲ. ಮತ್ತು ಬೇಸಿಗೆಯಲ್ಲಿನ ಬಾಧಕಗಳು ತಪ್ಪುತ್ತವೆ. ಹಾಗೂ ಸಸಿಗಳು ಜಾಗ್ರತೆಯಾಗಿ ಬೇರು ಬಿಡುವದಕ್ಕೆ ಅನುಕೂಲಿಸುತ್ತೆ. ಜಮೀನಿನಲ್ಲಿ ಸಸಿಗಳನ್ನೆಲ್ಲಾ ಪೂರ್ತಿಯಾಗಿಟ್ಟ ತರುವಾಯ ಮೂರು ವರ್ಷಕಾಲ ತಿಂಗಳು ತಿಂಗಳಿಗೂ ಕಳೆ ಕೀಳುತ್ತಿರಬೇಕು. ಇದಕ್ಕೆ ತಗಲುವ ಖರ್ಚನ್ನು ಗೆಣಸು ಬೆಳದು ಎಬ್ಬಿಸಬಹುದು. ತೋಟಕ್ಕೆ ದನಗಳು ನುಗ್ಗದಂತೆ ನೋಡಿಕೊಳ್ಳಬೇಕು. ಮೂರು ವರ್ಷಗಳ ನಂತರ ಜಮೀನಿನಲ್ಲೆಲ್ಲಾ ಕಳೆ ತೆಗೆಯುವದು ಅಗತ್ಯವಿಲ್ಲ. ಗಿಡಗಳ ಸುತ್ತಲು ಇನ್ನು ಮೂರು ವರ್ಷಗಳು ಕಳೆ ತೆಗದರೆ ಸಾಕು. ಮಿಕ್ಕ ಜಮೀನಿನಲ್ಲಿನ ಸೊಪ್ಪು, ಸದೆಯನ್ನು ಎರಡು ವರ್ಷಕ್ಕೊಂದಾವರ್ತಿ ತೆಗದು ಹಾಕುತ್ತಿರಬೇಕು. ಹುಲ್ಲು ಬೆಳೆದರೆ ಬಾಧಕವಿಲ್ಲ.

ಎಮ್ಮೆ ಹುಳಗಳು (Black Beetle) ಗಿಡಗಳಿಗೆ ಹತ್ತದಂತೆ ನೋಡಿಕೊಳ್ಳಬೇಕು. ನಂತರ ಗಿಡಗಳಿಗೆ ಕಾಂಡಗಳು ಕಾಣುವದಕ್ಕೆ

ಶುರುವಾಗುತ್ತವೆ. ಈ ಕಾಲದಲ್ಲಿ ಗಿಡಗಳಿಗೆ ಮುಳ್ಳುಹಂದಿಗಳ ಕಾಟ ಬಹಳ. ಹತ್ತು ವರ್ಷಗಳ ನಂತರ ಗಿಡಗಳಲ್ಲಿ ಹೂ ಬಿಡಲಾರಂಭವಾಗುತ್ತೆ. ಕೆಲವರು ತೆಂಗು ಏಳನೆ ವರ್ಷದಲ್ಲೇ ಹೂ ಬಿಟ್ಟು ಫಲ ಬಿಡುತ್ತೆಂದು ಹೇಳುತ್ತಾರೆ. ಆದರೆ ಇದು ಸಾಮಾನ್ಯವಾಗಿ ತಪ್ಪು. ಸಮುದ್ರ ತೀರದಲ್ಲಿನ ಗಿಡಗಳು ಮಾತ್ರ ಇಷ್ಟು ಜಾಗ್ರತೆಯಾಗಿ ಫಲಿಸುತ್ತವೆ.

(ಸಶೇಷ.)

## Rice*—*Concld.*

## ಬತ್ತ.

(ಹಿಂದಿನ ಸಂಚಿಕೆಯ ಶೇಷ.)

ಎಷ್ಟು ಅಕ್ಕಿಗೆ ಎಷ್ಟು ಹುಲ್ಲು ಉತ್ಪತ್ತಿಯಾಗುತ್ತೆಂಬುವದನ್ನು ವಿಚಾರಮಾಡತಕ್ಕ ಅಂಶವಾಗಿರುತ್ತೆ. ೧೦೦ ಪೌಂಡು ಅಕ್ಕಿಗೆ ೧೫೦ರಿಂದ ೨೫೦ ಪೌಂಡು ತೂಕದವರೆಗೂ ಹುಲ್ಲು ಆಗುವದಾಗಿ ಅನೇಕ ಅಜಮಾಯಿಷಿಗಳಿಂದ ಗೊತ್ತುಮಾಡಲ್ಪಟ್ಟಿದೆ. ಆದರೆ ಇದು ಹುಲ್ಲನ್ನು ಎಷ್ಟು ಮಟ್ಟಕ್ಕೆ ಕೊಯ್ಯುತ್ತೇವೆಯೋ ಅದಕ್ಕನುಸಾರವಾಗಿ ಹೆಚ್ಚು ಕಡಿಮೆಯಾಗುತ್ತೆ. ಹುಲ್ಲನ್ನು ಹೆಚ್ಚಾಗಿ ಒದಗಿಸಿಕೊಂಡಹಾಗೆಲ್ಲಾ ಭೂಮಿಯಲ್ಲಿನ ಸಾರವು ಕಡಿಮೆಯಾಗುವದಲ್ಲದೆ ಇದಕ್ಕೆ ತಕ್ಕ ಪ್ರತಿಫಲವು ದೊರೆಯುವದಿಲ್ಲ. ಕೆಲವು ಶಾಸ್ತ್ರೀಯ ಕ್ರಮಗಳನ್ನು ಅನುಸರಿಸುವದರಿಂದಲೂ ಮತ್ತು ನೂತನ ಎಂತ್ರಗಳ ಉಪಯೋಗದಿಂದಲೂ ಹೊಟ್ಟು ಬೀಳುವದನ್ನು ಈಗಿನಗಿಂತಲೂ ಬಹಳಮಟ್ಟಿಗೆ ಕಮ್ಮಿಮಾಡಬಹುದು. ಹೇಗಂದರೆ, ಅಮೇರಿಕಾ ದೇಶದಲ್ಲಿ ೫ ಪೌಂಡು ಬತ್ತ ಕುಟ್ಟಿದರೆ ೧ ಪೌಂಡು ಹೊಟ್ಟು ಹೊರಡುವದಾಗಿ ಗೊತ್ತಾಗಿದೆ. ಇಂಡಿಯಾದಲ್ಲಾದರೋ ೬ ಪೌಂಡು ಬತ್ತಕ್ಕೆ ೨ ಪೌಂಡು ಹೊಟ್ಟು ಬೀಳುವದು.

ಮೇಲೆ ಹೇಳಿರುವ ಅಂಶಗಳೆಲ್ಲಾ ಅತಿ ಸಾಮಾನ್ಯವಾದವು ಮತ್ತು ಈ ಭಾಗಗಳಲ್ಲಿ ಪರಿಚಯವನ್ನು ಹೊಂದುವದಕ್ಕೆ ವ್ಯವಸಾಯ ಶಾಸ್ತ್ರದ

* ಇಂಡಿಯನ್ ಅಗ್ರಿಕಲ್ಚರಿಸ್ಟ್. ೧—೭—೦೮.

ಲ್ಲಿ ಪ್ರೌಢಾಭ್ಯಾಸವೇನೂ ಅವಶ್ಯಕವಿಲ್ಲ. ಪರಂತು ಈ ದೇಶದಲ್ಲಿ ವ್ಯವಸಾಯೋದ್ಯೋಗವು ಬಹು ಕಾಲದಿಂದಲೂ ಅನಾಗರೀಕ ಮಾರ್ಗದಲ್ಲೇ ನಡೆಯುತ್ತಿದ್ದರೂ ಕೂಡ ಈ ಕ್ರಮಗಳನ್ನು ವಿಶೇಷವಾಗಿ ಉತ್ತಮಪಡಿಸಲು ಅವಕಾಶವುಂಟು. ಶಾಸ್ತ್ರೀಯವಾದ ವ್ಯವಸಾಯಜ್ಞಾನವು ಇಂಡಿಯಾದಲ್ಲಿ ಸರ್ವರಿಗೂ ಸಾಮಾನ್ಯವಾಗಿ ಉಂಟಾದರೆ ಈ ಭಾಗದಲ್ಲಿ ವಿಶೇಷ ಅನುಕೂಲಗಳು ಗೋಚರವಾಗುವವು.

ಬೆಳೆಯುವವರಿಗೆ ಅನ್ವಯಿಸುವ ಅಂಶಗಳನ್ನು ಇದುವರಿವಿಗೂ ವಿಚಾರಿಸಿದ್ದಾಯಿತು. ಅಕ್ಕಿಯು ರಫ್ತಾಗುವ ಸರಕುಗಳಲ್ಲಿ ಮುಖ್ಯವಾಗಿರುವ ಕಾರಣ ಇದನ್ನು ಸ್ವಲ್ಪ ವಿಚಾರಮಾಡೋಣ. ಇಲ್ಲಿನ ಅಕ್ಕಿ ಅನ್ಯದೇಶಗಳಿಗೆ ವಿಶೇಷವಾಗಿ ಸಾಗಿಹೋಗುತ್ತೆ. ೧೯೦೪—೦೫ನೆ ಸಾಲಿನಲ್ಲಿ ೨೪೫ ಲಕ್ಷ ಟನ್ ಅಕ್ಕಿ ರಫ್ತಾಗಿ ಇದಕ್ಕೆ ಪ್ರತಿಯಾಗಿ ಸುಮಾರು ೧೯೪ ಕೋಟಿ ರೂಪಾಯಿ ಬಂತು. ೧೯೦೭—೦೭ರಲ್ಲಿ ೧೯೪ ಲಕ್ಷ ಟನ್ ಅಕ್ಕಿ ರಫ್ತಾಗಿ ಸುಮಾರು ೧೮೪ ಕೋಟಿ ರೂಪಾಯಿ ಉತ್ಪತ್ತಿಯಾಗಿರುತ್ತೆ. ಇಲ್ಲಿನ ಅಕ್ಕಿಯು ಅನ್ಯದೇಶಗಳಲ್ಲಿ ಬುಷಲು ಒಂದಕ್ಕೆ ೧—೫—೦ ರಿಂದ ೩ ರೂಪಾಯಿವರೆಗೂ ಮಾರಾಟವಾಗುತ್ತೆ. ಅಮೇರಿಕಾ ದೇಶದ ಅಕ್ಕಿಗಾದರೋ ಬುಷಲೊಂದಕ್ಕೆ ರೂ. ೧-೧೪-೦ ರಿಂದ ರೂ.೩-೧೦-೦ ವರೆಗೂ ದೊರೆಯುತ್ತೆ. ಆದ್ದರಿಂದ ಈ ದೇಶದ ಅಕ್ಕಿಗೂ ಅನ್ಯದೇಶಗಳಲ್ಲಿ ಇನ್ನೂ ಜಾಸ್ತಿ ಬೆಲೆ ಬರುವಂತೆ ಮಾಡಲು ಪ್ರಯತ್ನಪಡಬೇಕು. ಹೀಗೆ ಅನುಕೂಲವಾದ ಬೆಲೆ ಬರಬೇಕಾದರೆ ಇಲ್ಲಿನ ಸರಕನ್ನು ಗಿರಾಕಿ ಇರತಕ್ಕ ಸ್ಥಳಗಳಲ್ಲಿ ಪಸಂದಾಗುವರೀತಿ ಮಾಡಬೇಕು. ಅಮೇರಿಕಾದೇಶದಲ್ಲಿ ಅಕ್ಕಿಯನ್ನು ಮಾರಾಟಕ್ಕೆ ತರುವದಕ್ಕೆ ಮುಂಚೆ ಅದಕ್ಕೆ ಒಂದು ತರಹೆ ಹೊಳಪು ಕೊಡುತ್ತಾರಂತೆ. ಇದರಿಂದ ಅಕ್ಕಿಯಲ್ಲಿ ಕೊಳ್ಳುವವರ ನೋಟಕ್ಕೆ ಅಂದವಾದ ಮುತ್ತಿನ ಕಾಂತಿ ಹುಟ್ಟಿ, ಒಳ್ಳೆ ಬೆಲೆ ದೊರೆಯುತ್ತದೆ. ಇದು ಬಹಳ ಸುಲಭ. ಹೇಗಂದರೆ, ಅಕ್ಕಿ ಕಾಳಿಗೆ 'ಪೆರಾಫಿನ್' (Paraffin) ಎಂಬ ಎಣ್ಣೆಯನ್ನು ಸವರಿ, ಚರ್ಮದ ಚೂರುಗಳಿಂದ ಮೆಲ್ಲಗೆ ಉಜ್ಜಬೇಕು. ಈ ಧಾನ್ಯದ ಗುಣವನ್ನು ಉತ್ತಮಪಡಿಸುವದು ಮಾತ್ರ

ದು ಮುಖ್ಯವಾದ ಭಾಗ. ಅಕ್ಕಿಯಲ್ಲಿ ಅನೇಕ ರಖಂಗಳಿದ್ದು ಧಾರಣೆಯು ಲ್ಲಿ ಎಷ್ಟೊ ವೆತ್ಯಾಸಗಳಿರುವದು ಸರ್ವರಿಗೂ ತಿಳಿದಿರುತ್ತೆ. ಹೇಗಂದರೆ, ಒಂದು ಬುಸಲು ಅಕ್ಕಿಗೆ ೧ ರೂಪಾಯಿ ಆಗಬಹುದು. ಪರಂತು ಇಷ್ಟೆ ಅಳತೆ ಅವಲ್ ಅಕ್ಕಿಗೆ ೫ ರೂಪಾಯಿವರಿಗೂ ಬೆಲೆಯಾಗುತ್ತೆ. ರೈತರು ಸಾಮಾನ್ಯವಾಗಿ ಕೀಳು ತರಹೆ ಅಕ್ಕಿಯನ್ನು ವಿಶೇಷವಾಗಿ ಬೆಳೆಯುತ್ತಾರೆ. ಏಕಂದರೆ, ಇವರು ಬೆಳೆಯುವದು ತಮ್ಮ ಸ್ವಂತ ಉಪಯೋಗಕ್ಕಾಗಿಯೇ ವಿನಹ ಮಾರಾಟಕ್ಕಲ್ಲ. ಇದೂ ಅಲ್ಲದೆ, ಬತ್ತದ ಬೆಳೆಗೆ ಆದಿಯಲ್ಲಿ ತಗ ಲುವ ಖರ್ಚು ನಂತರ ಸರಿಯಾದ ಗಿರಾಕಿಯನ್ನು ಹೊಂದಿಸಲು ಪಡಬೇ ಕಾದ ಪ್ರಯಾಸವು ವಿಶೇಷವಿರುವದ್ದರಿಂದ, ರೈತರು ಹಿಂತೆಗೆಯುತ್ತಾರೆ. ಈಗಿರುವ ರೈಲು ಮಾರ್ಗಗಳನ್ನು ಹೆಚ್ಚಿಸಿ ಅನ್ಯ ದೇಶಗಳೊಂದಿಗೆ ಈ ದೇಶದ ವ್ಯಾಪಾರವನ್ನು ಹೆಚ್ಚಿಸುವದರಿಂದ ಗಿರಾಕಿಯನ್ನು ಸುಲಭವಾಗಿ ಹೊಂದಿಸಬಹುದು. ವ್ಯಾಪಾರಕ್ಕೆ ಅನುಕೂಲವಾಗುವಂತೆ ವ್ಯವಸಾಯ ನ ಡೆಸಿದರೆ ತಗಲುವ ಹೆಚ್ಚು ಖರ್ಚನ್ನು ಎಬ್ಬಿಸಬಹುದು. ಹಣಗಾರರು ಶಾಸ್ತ್ರೀಯವಾಗಿ ವ್ಯವಸಾಯ ಮಾಡಲು ಭಾರಿಯಾಗಿ ಪ್ರವರ್ತಿಸಿದಲ್ಲದೆ ಇಂಡಿಯಾ ದೇಶದ ಕಾರ್ಷಿಕ ಕಸಬುಗಳು ಅಭಿವೃದ್ಧಿ ಸ್ಥಿತಿಗೆ ಬರುವದು ಸಾಧ್ಯವಲ್ಲ. ಬಂಗಾಳಾ ವ್ಯವಸಾಯ ಇಲಾಖೆಯ ಡೆಪ್ಯುಟಿ ಡೈರೆಕ್ಟರಾದ ಮೆ|| ಸ್ಮಿತ್‌ಯವರು (Mr. Smith) ಒಂದೇ ವರ್ಷದಲ್ಲಿ ಬತ್ತವನ್ನೂ ಜೂ ಟ್ ನಾರನ್ನೂ ಪರಿವರ್ತನೆಯಿಂದ ಬೆಳೆಯಬಹುದೆಂದು ಈಚೆಗೆ ಅಜಮಾ ಯಿಷಿಗಳಿಂದ ಕಂಡುಹಿಡಿದಿರುತ್ತಾರೆ. ಜಮೀನನ್ನು ನಿಸ್ಸಾರವಾಗಿ ಮಾ ಡದೆ ಈ ವಿಧಾನವನ್ನನುಸರಿಸುವದು ಸಾಧ್ಯವಾದರೆ ಈ ದೇಶದ ಬತ್ತದ ಉತ್ಪತ್ತಿಯೂ ಮತ್ತು ರೈತನ ಆದಾಯವೂ ಹೆಚ್ಚಿ ಇದರ ಧಾರಣೆಯೂ ಇಳಿದು ತಿನ್ನತಕ್ಕವರಿಗೂ ಅನುಕೂಲವಾಗಿ ಪರಿಣಮಿಸುವದು.

## Correspondence.—Water Lifts.

## ಕರೆಸ್‌ಪಾಂಡೆನ್ಸ್.—ನೀರು ಎತ್ತುವ ಯಂತ್ರಗಳು.

ಕೋಲಾರ ಡಿಸ್ಟ್ರಿಕ್ಟ್ ಮುಳಬಾಗಲ್ ತಾಲ್ಲೂಕು ಮೊತಕಪಲ್ಲಿ ಗ್ರಾ

ಮದಲ್ಲಿರುವ ಮೆ|| ಗಳಾದ ಬಿ. ವೆಂಕಟರಾಮೇಗೌಡರು, ಪಿ. ವೆಂಕಟೇಗೌಡರು ಮತ್ತು ಪಟೇಲ್ ವೆಂಕಟರಾಮೇಗೌಡರು ಈ ಮೂವರು ಫಸಲು ಸಾಗುವಳಿಗೆ ಸುಮಾರು ೨೫—೩೦ ಅಡಿ ಘಾತವಿರುವ ಭಾವಿಗಳಲ್ಲಿ ದೀಪದ ಸಹಾಯದಿಂದ ತನ್ನಷ್ಟಕ್ಕೆ ತಾನೇ ಒಂದು ಕಪಿಲೆ ನೀರು ಎತ್ತುವ ಯಂತ್ರ, ಬೇಕಾಗಿರುವದ್ದರಿಂದ ಇದು ಸಿಕ್ಕುವ ಸ್ಥಳ, ಇದರ ಖರೀದಿ, ವಗೈರೆ ತಪ್ಸೀಲುಗಳನ್ನಪೇಕ್ಷಿಸಿ ರೆವಿನ್ಯೂ ಕಮೀಷನರವರ ಆಫೀಸಿಗೆ ಬರೆದುಕೊಂಡಿರುತ್ತಾರೆ. ಅರ್ಜಿದಾರರು ಬೆಂಗಳೂರಿಗೆ ಬಂದು ಈ ಆಫೀಸಿನಲ್ಲಿ ಸಮಕ್ಷಮ ವಿಚಾರಿಸಿದಲ್ಲಿ ಕೆಲವು ನೀರು ಎತ್ತುವ ಪಂಪುಗಳನ್ನು ಕೆಲಸಮಾಡಿಸಿ ತೋರಿಸಲು ಏರ್ಪಟಡಲಾದೀತು. ಮತ್ತು ಇವರು ಅಪೇಕ್ಷಿಸುವ ಇತರ ತಪ್ಸೀಲುಗಳನ್ನು ತಿಳಿಸಬಹುದು. ಇಲ್ಲವೆ ಆವಶ್ಯವಾದ ಸಂಗತಿಗಳನ್ನು ಇಪೇಟೆಂಗಳೂರು ಸಿದ್ದಿಕಟ್ಟೆಯಲ್ಲಿ ಮೇಲ್ಕಂಡ ಪಂಪು ಮುಂತಾದ ಎಲ್ಲಾ ತರದ ವ್ಯವಸಾಯ ಮುಟ್ಟುಗಳಲ್ಲಿ ವ್ಯಾಪಾರ ಮಾಡುವ ಮೆಕ್ಯಾನಿಕಲ್ ಇಂಜನಿಯರ್ಸ್ ಮೆ|| ಎಸ್. ನೃಸಿಂಹನ್ ಬ್ರದರ್ಸ್ ಯವರಲ್ಲಿಗೆ ಸೀದ ಬರೆದು ತಿಳಿದುಕೊಳ್ಳಬಹುದು.

---

## Government Proceedings.

## ಸರ್ಕಾರಿ ಹುಕುಂಗಳು.

### I

ನಂ. ಆರ್. ೨೮೯೬-೨೫೦೫—ಅಗ್ರಿ. ೩೮-೦೮-೪, ತಾ|| ೨೮-೧೦-೦೮.

೧. ಗೌರ್ನ್ಮೆಂಟನವರು ೧೯೦೮-೦೯ನೆ ಸಾಲಿನಲ್ಲಿ (೧) ಸಾಗುವಳಿ ಬಗ್ಗೆ ಭಾವಿಗಳನ್ನು ತೆಗೆಯುವವರಿಗೆ ಸಾಲ ಕೊಡುವುದಕ್ಕೂ, (೨) ಭೂಮಿಯನ್ನು ಉತ್ತಮ ಸ್ಥಿತಿಗೆ ತರುವ ಬಗ್ಗೆ ಲ್ಯಾಂಡ್ ಇಂಪ್ರೂವ್‌ಮೆಂಟ್ ಲೋನ್ಸ್ ರೆಗ್ಯುಲೇಷನ್ ಅನುಸರಿಸಿ ಸಾಲ ಕೊಡುವದಕ್ಕೂ ಮತ್ತು (೩) ತಕಾವಿ ಅಡ್ವಾನ್ಸುಗಳನ್ನು ಕೊಡುವದಕ್ಕೂ ಒಟ್ಟು ೯೦,೭೫೦ ರೂ

ಬಾಬುಗಳನ್ನು ಈ ಕೆಳಗೆ ಕಾಣುವಂತೆ ಎಲ್ಲಾ ಡಿಸ್ಟ್ರಿಕ್ಟುಗಳಿಗೂ ಮಂಜೂರ್ಮಾಡಿರುತ್ತಾರೆ:—

| ಡಿಸ್ಟ್ರಿಕ್ಟು. | ನಾಗುವಳಿ ಜಾನವಾರುಗಳಿಗೆ ಬಿತ್ತನೆ ಬೀಜಗಳಿಗೆ ಕೊಡತಕ್ಕದ್ದು. | ಕಬ್ಬು ನಾಗುವಳಿಗಾಗಿ ಎಂತ್ರ ಮುಟ್ಟುಗಳನ್ನು ಕೊಳ್ಳುವದಕ್ಕೂ ಮತ್ತು ಇನಾಂ ಕೆರೆಗಳನ್ನು ರಿಪೇರಿಗಾಗಿಯೂ ಮಂಜೂರ್ಮಾಡಿರುವ ಸ್ಪೆಷಲ್ ಸಾಲಗಳು ದೇಖಲು. | | ಜುಮ್ಲಾ. |
|---|---|---|---|---|
| | | ಲ್ಯಾಂಡ್ ಇಂಪ್ರೂವ್‌ಮೆಂಟ್ ಲೋನ್ಸ್ ರೆಗ್ಯುಲೇಷನ್ ಅನುಸರಿಸಿ ಸಾಲ ಕೊಡುವದಕ್ಕೆ. | ತಕಾವಿ ಅಡ್ವಾನ್ಸುಗಳು. | |
| ಬೆಂಗಳೂರು... | 3,000 | 12,950 | 14,500 | 30,450 |
| ಕೋಲಾರ... | 2,600 | 300 | 1,000 | 3,900 |
| ತುಮಕೂರು... | 16,500 | 800 | 4,000 | 21,300 |
| ಮೈಸೂರು ... | 300 | 11,000 | 1,000 | 12,300 |
| ಹಾಸನ ... | 200 | 1,000 | 750 | 1,950 |
| ಶಿವಮೊಗ್ಗ ... | 300 | 2,000 | 1,000 | 3,300 |
| ಕಡೂರು ... | 500 | 500 | 2,500 | 3,500 |
| ಚಿತ್ರದುರ್ಗ. | 9,100 | 2,350 | 2,600 | 14,050 |
| ಜುಮ್ಲಾ... | 32,500 | 30,900 | 27,350 | 90,750 |

೨. ಈ ಮೊಬಲಗನ್ನು ಸಂದರ್ಭಾನುಸಾರ ಆಯಾಯ ಡಿಸ್ಟ್ರಿ

ಕ್ಟುಗಳಿಗೆ ಪುನಃ ಹಂಚುವದಕ್ಕೆ ರೆವಿನ್ಯು ಕಮಿಷನರವರು ಸ್ವತಂತ್ರರಿರುತ್ತಾರೆ.

೩. ಗತಸಾಲಿನಲ್ಲಿ ಬೆಂಗಳೂರು ಡಿಸ್ಟ್ರಿಕ್ಟಿನಲ್ಲಿ ಲೋನ್ ಅಪ್ಲಿಕೇಷನ್‌ಗಳ ವಿಚಾರದಲ್ಲಿ ಕೆಳ ಅಧಿಕಾರಿಗಳು ಬಹಳ ಫಡಪ್ರೋಸಿಮಾಡಿದ ಸಬಬು ಇದಕ್ಕಾಗಿ ಮಂಜೂರ್ಮಾಡಿದ್ದ ಮೊಬಲಗೆಲ್ಲಾ ಲ್ಯಾಪ್ಸಾಯಿತು. ಚಿತ್ರದುರ್ಗ ಡಿಸ್ಟ್ರಿಕ್ಟ್ ವಿನಾಯಿಸಿ ಇತರ ಡಿಸ್ಟ್ರಿಕ್ಟುಗಳಲ್ಲಿಯೂ ಸರ್ಕಾರದಿಂದ ಮಂಜೂರಾದ ಮೊಬಲಗನ್ನು ತಕ್ಕಹಾಗೆ ಉಪಯೋಗಿಸಿರುವದಿಲ್ಲ.

೪. ರೆವಿನ್ಯು ಆಫೀಸರುಗಳು ಮುತವರ್ಜಿ ವಹಿಸಿ ರೈತರುಗಳು ಸಾಗುವಳಿಗೆ ಬೇಕಾಗುವ ಜಲಾಶಯಗಳನ್ನು ಉತ್ತಮಪಡಿಸಿಕೊಳ್ಳುವದಕ್ಕೋಸ್ಕರ ಮೇಲ್ಕಂಡ ಸೌಕರ್ಯಗಳನ್ನು ಸಕಾಲದಲ್ಲಿ ಉಪಯೋಗಿಸಿಕೊಳ್ಳಲು ತಿಳುವಳಿಕೆ ಕೊಟ್ಟು ಲೋನ್ ದರಖಾಸ್ತುಗಳನ್ನು ಸುಸ್ತಿ ಇಲ್ಲದೆ ವಿಚಾರಮಾಡಿ ಸ್ಯಾಂಕ್ಷನ್ ಆದ ಮೊಬಲಗನ್ನು ಪೂರ್ತಿಯಾಗಿ ಉಪಯೋಗಕ್ಕೆ ತರುವದರಲ್ಲಿ ರೆವಿನ್ಯು ಕಮಿಷನರವರು ಡೆಪ್ಯುಟಿ ಕಮಿಷನರವರುಗಳಿಗೆ ಹುಕುಂ ಮಾಡತಕ್ಕದ್ದು.

---

## II

ಮೈಸೂರು ಡಿಸ್ಟ್ರಿಕ್ಟ್ ಕ್ರಿಷ್ಣರಾಜಪೇಟೆ ತಾಲ್ಲೂಕು ಗಾಣದಹಳ್ಳಿ ಗ್ರಾಮದ ಕುಲವಾಡಿಗೆ ರೈತ ಕುಳಗಳಿಂದ ಸಲ್ಲುವ ಮಿರಾಶಿಯೊಂದಿಗೆ ಸ್ವಲ್ಪ ನೌಕರಿ ಇನಾಮನ್ನು ಸರ್ಕಾರದವರು ಮಂಜೂರ್ ಮಾಡಿರುವ ಅಂಶವನ್ನು ಈ ಪತ್ರಿಕೆಯ ಕಳೆದ ಸೆಪ್ಟೆಂಬರ್ ೧೫ನೆ ತಾರೀಖಿನ ಸಂಚಿಕೆಯಲ್ಲಿ ಪ್ರಾಯಿಷ್ಕಾಮಡಿರುವದು ಸರಿಯಷ್ಟೆ. ಇದೇ ಮೇರೆ ನಂಜನಗೂಡು ತಾಲ್ಲೂಕು ಬಂಟನಹಳ್ಳಿ ಗ್ರಾಮದ ಜಮಾಬಂದಿ ೧೫೦ ರೂಪಾಯಿ ಮತ್ತು ಜನ ಸಂಖೆ ಸುಮಾರು ೧೦೦ ಆಗುವದರಿಂದ ಗ್ರಾಮ ಕುಲವಾಡಿಗೆ ಮಿರಾಶಿ

ಯಿಂದಲೇ ಜೀವನ ನಡೆಸುವದು ಕಷ್ಟವಾಗಿರುವದಲ್ಲದೆ ಗ್ರಾಮವು ಜಂಗ್ಲಿ ಪ್ರದೇಶದಲ್ಲಿದ್ದು ಆಗಾಗ್ಯೆ ಆನೆ ಮುಂತಾದ ಇತರ ಕಾಡು ಮೃಗಗಳ ಕಾಟವು ಬಹಳವಾಗಿ, ಇವನ ಸ್ಥಿತಿಯು ಸ್ವಲ್ಪ ಅಪಾಯಕರವಾಗಿಯೇ ಇರುತ್ತಾದ್ದರಿಂದ ಗೌರ್ನಮೆಂಟಿನವರು ಈ ಗ್ರಾಮದ ಚಕ್ರದನಿಗೂ ಸ್ವಲ್ಪ ಜಮೀನನ್ನು ೧ ರೂಪಾಯಿ ಜೋಡಿ ಮೇಲೆ ನೌಕರಿ ಇನಾಮಾಗಿ ಕಳೆದ ನೆವೆಂಬರ್ ೧೬ನೆ ತಾರೀಖಿನ ಆರ್. ೧೮೯೭—೮—ಎಲ್. ಆರ್. ೧೧೪—೦೮—೨ನೆ ನಂಬರ್ ಹುಕುಂನಲ್ಲಿ ಮಂಜೂರ್ಮಾಡಿರುತ್ತಾರೆ.

---

## Private Agricultural Farms.

### ಖಾಸಗಿ ವ್ಯವಸಾಯಕ ಫಾರಂಗಳು.

ಆಗ್ರ ಮತ್ತು ಔಡ್ ಯುನೈಟೆಡ್ ಪ್ರಾವಿನ್ಸಸ್‌ನಲ್ಲಿ ಕೆಲವು ಖಾಸಗಿ ವ್ಯವಸಾಯಕ ಫಾರಂಗಳು ಸ್ಥಾಪಿತವಾಗಿ, ಇವುಗಳ ಆಡಳಿತಗಳು ಅಲ್ಲಿನ ಸರ್ಕಾರಿ ವ್ಯವಸಾಯ ಇಲಾಖೆಯವರ ಸಹಾಯದಿಂದ ನಡೆಯುತ್ತಲಿವೆ. ಸದರಿ ಇಲಾಖೆಯ ಡೈರೆಕ್ಟರವರು ೧೯೦೬—೦೭ನೆ ಸಾಲಿನ ರಿಪೋರ್ಟಿನಲ್ಲಿ ಈ ಫಾರಂಗಳ ವಿಚಾರವಾಗಿ ಬರೆದಿರುವದೇನಂದರೆ.—

ಫಾರಂಗಳ ಉದ್ದೇಶ ಮತ್ತು ಸ್ಥಿತಿ ಸಹ ಭಿನ್ನವಾಗಿವೆ. ಮೀರಟ್ ಫಾರಂನಲ್ಲಿ ಮಾಲೀಕರಿಗೂ ನೆರೆಯವರಿಗೂ ಲಾಭಕರವಾಗಿರುವರೀತಿ ಬುದ್ಧಿವಂತಿಕೆಯಿಂದ ಸಾಮಾನ್ಯ ವ್ಯವಸಾಯವನ್ನು ನಡೆಸುತ್ತಿರವದಲ್ಲದೆ ದನಗಳನ್ನು ಸಾಕುತ್ತಾರೆ. ಆಗ್ರಾದಲ್ಲಿ ಜಟೌ ಫಾರಮಿನ ಮಾಲೀಕರು ತಮ್ಮ ಕುಳಗಳಿಗೆ ಲಾಭಕರವಾಗಿರುವ ರೀತಿ ಕೆಲಸಗಳನ್ನು ನಡೆಸುತ್ತಿದ್ದರು. ಈಚಿಗೆ ಇವರು ಫೌತಿ ಪಟ್ಟರು. ಈಗಿನ ಮಾಲೀಕರು ಮೈನ್‌ಪುರಿ ಡಿಸ್ಟ್ರಿಕ್ಟಿನಲ್ಲಿ ಮತ್ತೊಂದು ಫಾರಮನ್ನು ಸ್ಥಾಪಿಸಿರುತ್ತಾರೆ. ಮುಜಫರ್‌ನಗರಿನ ಸಿಸಾಲಿ ಫಾರಂನಲ್ಲಿ ಮಾರುವದಕ್ಕೆ ಬೀಜದ ಧಾನ್ಯಗಳನ್ನು

ಒದಗಿಸುವದೇ ಮುಖ್ಯೋದ್ದೇಶವಾಗಿರುತ್ತೆ. ಈ ಉದ್ಯೋಗವು ಬಹಳ ಮುಖ್ಯವಾದದ್ದು. ಮತ್ತು ಈ ಫಾರಂನವರಿಗೆ ಸ್ವಲ್ಪ ಗಿರಾಕಿಯನ್ನು ಒದಗಿಸಿದ್ದರಲ್ಲಿ ತೃಪ್ತಿಕರವಾದ ಫಲಿತಾಂಶಗಳು ಕಂಡು ಬಂದಿರುತ್ತವೆ. ವಿಸಾರಟ್ಟಿನ ಖರೌಲಿ ಫಾರಂ ಸ್ವಾರಸ್ಯವಾದ ಒಂದು ಚಿಕ್ಕ ಫಾರಂ ಆಗಿರುತ್ತೆ. ಇದರ ಮಾಲೀಕರು ಫಾರಮನ್ನು ಅಭಿವೃದ್ಧಿ ಪಡಿಸುವದರಲ್ಲಿ ಕೇವಲ ಉತ್ಸಾಹಶೀಲರಾಗಿರುತ್ತಾರೆ. ವಿಸಾರಟ್ಟಿನಲ್ಲಿರುವ ಫಜಿಯಾಬಾದ್ ಫಾರಂ ಅಷ್ಟು ಭಾರಿಯಲ್ಲ. ಇಲ್ಲಿ ರೈತರ ಹುಡುಗರಿಗೆ ವ್ಯವಸಾಯ ವಿಚಾರಕವಾದ ಬೋಧೆಯನ್ನು ಮುಫತ್ತಾಗಿ ಕೊಡಿಸುವ ಏರ್ಪಾಡಿಟ್ಟಿರುತ್ತೆ. ರಾಯ್ ಬರೈಲಿಯಲ್ಲಿ ಸಾಮರೌಟಾ ಫಾರಮಿನ ಮಾಲೀಕರು ತಮ್ಮ ಫಾರಂನಲ್ಲಿ ಒಳ್ಳೆ ಬೆಳೆ ತೆಗೆಯಲಿಕ್ಕೆ ಅವಶ್ಯಕವಾದ ಹೊಸತರಹ ಮುಟ್ಟುಗಳನ್ನು ಕಣಗೆಲಸದಲ್ಲಿ ಉಪಯೋಗಿಸುವದಕ್ಕೆ ತಕ್ಕ ಯಂತ್ರಗಳನ್ನೂ ಒದಗಿಸುವದರಲ್ಲಿ ಆತುರರಾಗಿರುತ್ತಾರೆ. ಲಕ್ನೊವಿನ ಕಾಶೀಪುರ ಫಾರಂನಲ್ಲಿ ಸಾಮಾನ್ಯ ಸಂಗತಿಗಳಲ್ಲಿ ಬೋಧೆ ಕೊಡುವದಕ್ಕಾಗಿ ಒಂದು ವ್ಯವಸಾಯಕ ಶಾಲೆಯಿರುತ್ತೆ. ಇಲಾಖೆಯ ಪೈಕಿ ಒಬ್ಬರನ್ನು ಫಾರಂ ಮಾಲೀಕರಿಗೆ ಸಹಾಯ ಮಾಡುವದಕ್ಕಾಗಿ ಕಳುಹಿಸುವ ಏರ್ಪಾಡಿಟ್ಟಿದ್ದಾಗ್ಯೂ ಕೂಡ ಫಾರಂ ಕೆಲಸಕ್ಕೆ ಬಂಡವಾಳವಿಲ್ಲದೆ ಇದ್ದದರಿಂದಲೂ ಶಾಲೆಗೆ ವಿದ್ಯಾರ್ಥಿಗಳು ಒದಗದೆ ಇದ್ದದರಿಂದಲೂ ಹೆಚ್ಚು ಕೆಲಸವೇನೂ ಜರಗಿರುವದಿಲ್ಲ.

---

## Notification.

### ಇಸ್ತಿಹಾರ್‌ನಾಮೆಗಳು.

ನಂ. ೪೧೧೨ ತಾರೀಖು ೧೯—೧೦—೦೯.

ಮೈಸೂರು ಸರ್ವಿಸ್ ರೆಗ್ಯುಲೇಷನ್ಸ್ ೧೭೭ನೆ ಪ್ರಕರಣದ ಮೇರೆ ನಗರ ತಾಲ್ಲೂಕು ಆಕ್ಟಿಂಗ್ ಅಮಲ್‌ದಾರ್ ಮೆ|| ಯು. ರಾಮಚಂದ್ರರಾಯ

ರಿಗೆ ೧೯೦೮ನೆ ಆಗಸ್ಟ್ ೧೫ನೆ ತಾರೀಖು ಲಾಗಾಯಿತು ೬ ದಿನಗಳ ಪ್ರಿವಿಲೇಜ್ ರಜಾ ಕೊಟ್ಟಿತ್ತು.

ಅವರ ಗೈರ ಹಾಜರಿಯಲ್ಲಿ ತಾಲ್ಲೂಕು ಶಿರಸ್ತೇದಾರ ಯಂ. ನಾರಾಯಣರಾಯರು ತಾಲ್ಲೂಕು ಛಾರ್ಜಿನಲ್ಲಿದ್ದರು.

---

## Occasional Notes.

## ವಿವಿಧ ವೃತ್ತಾಂತಗಳು.

೧. ಇಂಡಿಯಾ ದೇಶದಿಂದ ಇತರ ದೇಶಗಳಿಗೆ ಕಳೆದ ಮೂರು ಸಾಲುಗಳಲ್ಲಿ ಈ ಕೆಳಗೆ ಕಂಡಮೇರಿಗೆ ಅಕ್ಕಿಯು ರಫ್ತಾಗಿರುವದಾಗಿ ತಿಳಿದು ಬರುತ್ತೆ.

| ಸಾಲು. | ಟನ್ ತೂಕದಲ್ಲಿ. | ಕಿಮ್ಮತು ರೂಪಾಯಿ. |
|---|---|---|
| 1905—06 | 21,11,000 | 184,106,000 |
| 1906—07 | 19,02,000 | 183,251,000 |
| 1907—08 | 18,85,000 | 201,500,000 |

ಇಂಡಿಯನ್ ಟ್ರೇಡ್ ಜರ್ನಲ್ ಪತ್ರಿಕೆ—೩—೯—೦೮.

---

೨. ಇಂಡಿಯಾ ದೇಶದಲ್ಲಿ ನಾನಾ ತರದ ಕೈಗಾರಿಗೆ ಕಸಬುಗಳಿಗೆ ಬೇಕಾಗುವ ಕಚ್ಚಾ ಸಾಮಾನುಗಳು ವಿಶೇಷವಾಗಿದ್ದಾಗ್ಯೂ ಕೂಡ ಜನರು ಅವನ್ನು ಯೋಗ್ಯರೀತಿ ಉಪಯೋಗಿಸದೆ ತಟಸ್ಥರಾಗಿರುವದ್ದರಿಂದ ಇಷ್ಟು ಪದಾರ್ಥಗಳು ಇದ್ದೂ ಸಾರ್ಥಕವಿಲ್ಲದಂತಾಗಿಧೆ.

ಈ ಕಾಲಗಳಲ್ಲಿ ಕೈಗಾರಿಕೆಗಳ ಅಭಿವೃದ್ಧಿಗೆ ಮುಖ್ಯವಾಗಿ ಜನರಲ್ಲಿ ಬಲವತ್ತರವಾದ ಒಗ್ಗಟ್ಟು ಇರಬೇಕು. ಈ ಒಗ್ಗಟ್ಟಿಗೆ ಈ ದೇಶದಲ್ಲಿರುವಷ್ಟು ಸೌಕರ್ಯಗಳು ಮತ್ತು ಅವಶ್ಯಕತೆ ಇನ್ಯಾವ ದೇಶದಲ್ಲಿಯೂ

ಇರುವದಿಲ್ಲ. ಮತ್ತು ಈ ಭಾಗದಲ್ಲಿರುವಷ್ಟು ಉದಾಶೀನವು ಅನ್ಯ ದೇಶಗಳಲ್ಲಿಲ್ಲ.—ಅಗ್ರಿಕಲ್ಚರಲ್ ಅಂಡ್ ಇಣ್ಡಸ್ಟ್ರಿಯಲ್ ಪ್ರೋಗ್ರೆಸ್.—ಅಕ್ಟೋಬರ್ ೧೯೦೮.

---

೭. ಬ್ರಿಟಿಷ್ ವೆಸ್ಟಿಂಡೀಸ್ ದ್ವೀಪಗಳಿಗೆ ಸೇರಿದ ಟ್ರಿನಿಡಾಡ್ (Trinidad) ದ್ವೀಪದಲ್ಲಿ ಕಬ್ಬಿನಿಂದ ಕಾಗದದ ಸರಿಯನ್ನು (Paper Pulp) ತಯಾರು ಮಾಡುವ ವಿಧಾನವನ್ನು ಕಂಡು ಹಿಡಿದಿರುತ್ತಾರೆ. ಜಲ್ಲೆಗಳಿಂದ ಹಾಲು ಹಿಂಡಿಕೊಂಡನಂತರ ಉಳಿಯುವ ಸಿಪ್ಪೆಯನ್ನು ಸಾಮಾನ್ಯವಾಗಿ ಒಲೆ ಉರಿಸುವದಕ್ಕೆ ಸೌದೆಯಾಗಿ ಉಪಯೋಗಿಸುವದುಂಟು. ಇದಕ್ಕೆ ಟನ್ ಒಂದಕ್ಕೆ ೫-೧೦-೦ ರೂಪಾಯಿ ಬೆಲೆ ದೊರಿಯುತ್ತೆ. ಆದರೆ ಈ ಸಿಪ್ಪೆಯಿಂದ ಕಾಗದದ ಸರಿಯನ್ನು ಮಾಡಿದರೆ, ಟನ್ ಒಂದಕ್ಕೆ ಕನಿಷ್ಟಪಕ್ಷ ೭೫ ರೂಪಾಯಿ ಬೆಲೆಯಾಗುತ್ತದೆ. ಕಬ್ಬು ಬೆಳೆಯುವವರು ಇನ್ನು ಮುಂದೆ ಕಬ್ಬಿನಿಂದ ಸಕ್ಕರೆ ತಯಾರುಮಾಡುವದೇ ಅಲ್ಲದೆ ಕಾಗದದ ಸರಿಯನ್ನೂ ತಯಾರು ಮಾಡಿ ಒಳ್ಳೆ ಲಾಭ ಸಂಪಾದಿಸಬಹುದು. ಇಣ್ಡಿಯನ್ ಅಗ್ರಿಕಲ್ಚರಿಸ್ಟ್.—೧—೫—೦೮.

---

V. B. Soobbiah & Sons, Printers, Bangalore.—1908.

THE MYSORE

# REVENUE & AGRICULTURAL GAZETTE.

ವಾಲ್ಯುಂ ೩.] ಭಾನುವಾರ, ೧೫ನೆ ನವಂಬರ್ ೧೯೦೮. [ನಂ. ೨.

## Contents.



## ಅನುಕ್ರಮಣಿಕೆ.

## Co-operative Society in Kuderu.

## ಕುದೇರು ಗ್ರಾಮದ ಅನ್ಯೋನ್ಯ ಸಹಾಯಕ ಸಂಘ.

ಚಾಮರಾಜನಗರದ ತಾಲ್ಲೂಕು ಕುದೇರು ಗ್ರಾಮದಲ್ಲಿರುವ ಅನ್ಯೋನ್ಯ ಸಹಾಯ ಸಂಘದಲ್ಲಿ ಕಳೆದ ಸೆಪ್ಟಂಬರ್ ತಿಂಗಳು ೯ನೆ ತಾರೀಖು ಬುಧವಾರ ಮೆಂಬರುಗಳ ಸಾಮಾನ್ಯ ಸಭೆಯು ನಡೆಯಿತು. ಅಮಲ್ದಾರರಾದ ಮೆ|| ವೆಂಕಟರಮಣ ಶಾಸ್ತ್ರಿ, ಬಿ. ಎ., ಯವರು ಈ ಸಭೆಗೆ ಅಗ್ರಾಸನಾಧಿಪತಿಗಳಾಗಿದ್ದರು. ಸಂಘದ ಸೆಕ್ರೆಟರಿಯವರಿಂದ ಒದಲ್ಪಟ್ಟ ರಿಪೋರ್ಟಿನಿಂದ ಕಳೆದ ಜೂನ್ ತಿಂಗಳ ಕೊನೆಯವರಿಗೆ ಸಂಘದ ಅಭಿವೃದ್ಧಿಯು ಗೊತ್ತಾಗುತ್ತೆ. ಅದನ್ನು ಸೂಕ್ಷ್ಮವಾಗಿ ಈ ಕೆಳಗೆ ವಿವರಿಸುವೆವು.

ಕೋ ಆಪರೆಟಿವ್ ಸೊಸೈಟಿಗಳ ರಿಜಿಸ್ಟ್ರಾರವರ ಅಪ್ಪಣೆ ಮೇರಿಗೆ ಅಲ್ಲಿಗೆ ಹೋಗಿದ್ದ ಮೆ|| ಎಲ್. ಕೃಷ್ಣಯ್ಯಂಗಾರ್ ಎಂಬುವರ ಬೋಧನಾ ಬಲಿಯದಿಂದ ಈ ಸಂಘವು ಏರ್ಪಟ್ಟು ೧೯೦೬ನೆ ಇಸವಿ ನವಂಬರು ತಿಂಗಳು ೫ರಲ್ಲಿ ರಿಜಿಸ್ಟರ್ ಮಾಡಲ್ಪಟ್ಟಿತು.

೨. ಈ ಸಂಘದ ಆಡಳಿತಗಳು ಚಾಮರಾಜನಗರದ ತಾಲ್ಲೂಕಿನಲ್ಲಿ ೫ ಗ್ರಾಮಗಳಿಗೂ, ನಂಜನಗೂಡು ತಾಲ್ಲೂಕಿನಲ್ಲಿ ೫ ಗ್ರಾಮಗಳಿಗೂ ಸಹ ವ್ಯಾಪಿಸಬೇಕೆಂದು ಆದಿಯಲ್ಲಿ ಏರ್ಪಾಡಾಯಿತು. ಈಚೆಗೆ ಸಮೀಪದಲ್ಲಿರುವ ಕೆಲವು ಗ್ರಾಮಸ್ಥರು ತಮ್ಮಗಳನ್ನು ಸೇರಿಸಿಕೊಳ್ಳಬೇಕೆಂದು ಅಪೇಕ್ಷಿಸುತ್ತಿರುವದರಿಂದ ಹೀಗೆ ಆಡಳಿತವನ್ನು ವಿಸ್ತರಿಸುವ ವಿಚಾರವು ಸಂಘದವರ ಆಲೋಚನೆಯಲ್ಲಿರುತ್ತೆ.

೩. ಷೇರು ಒಂದಕ್ಕೆ ೧೦ ರೂಪಾಯಿನಂತೆ ಈ ಸಂಘಕ್ಕೆ ೧,೦೦೦ ಷೇರುಗಳಿರಬೇಕೆಂದು ಗೊತ್ತಾಗಿರುತ್ತೆ. ಈ ಪೈಕಿ ೧೪೬ ಷೇರುಗಳನ್ನು ೩೯ ಜನ ಮೆಂಬರುಗಳು ಇದುವರೆಗೆ ಪಡೆದಿರುವದರಲ್ಲಿ ೭೮೫ ರೂಪಾಯಿಗಳು ಜಮಾ ಆಗಿರುತ್ತೆ.

೪. ಪ್ರಾರಂಭದಲ್ಲಿ ೨—೩ ತಿಂಗಳು ಕೆಲಸ ಕಾರ್ಯಗಳು ಸರಿಯಾ

ಗಿ ನಡೆದು ಅನಂತರ ಕಲರಾ ಉಪದ್ರದ ಗಲಾಟೆಯಿಂದ ಜನಗಳಿಗೆ ಉತ್ಸಾಹ ಕುಂದಿ ಹೋಗಿ ೩—೪ ತಿಂಗಳುಗಳವರೆಗೂ ಎಲ್ಲಾ ಕೆಲಸಗಳೂ ನಿಂತು ಹೋಗಿದ್ದುವು. ಈಚೆಗೆ ನಿಂತು ಹೋಗಿದ್ದ ಷೇರುಗಳೆಲ್ಲಾ ವಸೂಲಾಗುತ್ತಾ ಇರುತ್ತೆಂತಲೂ ಷೇರುಗಳನ್ನು ಪಡೆದಿರುವವರ ಪೈಕಿ ೮ ಜನ ತಮ್ಮ ಷೇರುಗಳನ್ನು ಭರ್ತಿ ಮಾಡಿರುತ್ತಾರೆಂತಲೂ, ಈರೀತಿ ಭರ್ತಿಯಾದ ಷೇರುಗಳು ಇದುವರಿವಿಗೆ ೪೮ ಆಗಿರುತ್ತೆಂತಲೂ ಸಹ ಸೆಕ್ರೆಟರಿಯವರು ತಿಳಿಸಿರುತ್ತಾರೆ.

೫. ಇದುವರೆಗೆ ಮೆಂಬರುಗಳಿಂದ ಸಂಘಕ್ಕೆ ಯಾವ ವಿಧವಾದ ಡಿಪಾಜಿಟ್ ಹಣವೂ ಬಂದಿರುವದಿಲ್ಲ. ಈ ವಿಷಯದಲ್ಲಿ ಸಂಘದವರು ಶೋಚಿಸುವದಲ್ಲದೆ ಸರ್ಕಾರದಿಂದ ೧,೦೦೦ ರೂಪಾಯಿ ಸಾಲವನ್ನು ಹೊಸದಾಗಿ ಏರ್ಪಟ್ಟಿರುವ ರೂಲ್ಸ್ ಮೇರಿಗೆ ಪಡೆಯಬಹುದಾದರೆ ಆ ಮೂಲಕ ಸಂಘವು ಜಾಗ್ರತೆಯಲ್ಲಿ ಅಭಿವೃದ್ಧಿಗೆ ಬರಲು ಸಂದೇಹವಿಲ್ಲವೆಂದು ರಿಪೋರ್ಟಿನಲ್ಲಿ ಸೂಚಿಸಿರುತ್ತೆ.

೬. ಈಗ ಜಮಾಯಿಸಿರುವ ಷೇರು ಮೊಬಲಗನ್ನು ವ್ಯಾಪಾರಸ್ಥರಿಗೆ ಮೂಬದಲಾ ಲೇವಾದೇವಿ ನಡೆಸುವದರಲ್ಲಿ ಉಪಯೋಗಿಸುತ್ತಿದ್ದಾರೆ. ಮತ್ತು ೩ ಇಂಗ್ಲೀಷ್ ನೇಗಿಲುಗಳನ್ನು ತರಿಸಿ ಮೆಂಬರುಗಳಿಗೆ ಬಾಡಿಗೆಗೆ ಕೊಡುತ್ತಲಿಧಾರೆ. ಇದು ವ್ಯವಸಾಯಗಾರರಿಗೆ ತುಂಬಾ ಅನುಕೂಲವಾಗಿರುವದಾಗಿ ತಿಳಿಯಬರುತ್ತೆ.

೭. ೧೯೦೮ನೆ ಮೇ ತಿಂಗಳಲ್ಲಿ ಸಂಘವನ್ನು ಕೋ ಆಪರೇಟಿವ್ ಸೊಸೈಟಿಗಳ ರಿಜಿಸ್ಟ್ರಾರವರು ತನಿಖೆ ಮಾಡಿದರು.

೮. ಈ ಸಂಘದಲ್ಲಿ ೧೯೦೭ನೆ ನವಂಬರ್ ತಿಂಗಳಿಂದ ೧೯೦೮ನೆ ಜೂನ್ ಕೊನೆಯವರೆಗೆ ಆಡಳಿತ ನಡೆದದ್ದರಲ್ಲಿ ನಿವಳ ನಫೆ ೬೧—೦—೨ ತೇಲಿರುತ್ತೆ. ಈ ಪೈಕಿ ೧೫—೪—೦ ರೂಪಾಯಿ ರಿಜರ್ವ್ ಫಂಡಿಗೆ ಕೊಡತಕ್ಕದ್ದು ಹೋಗಲಿಕ್ಕಾಗಿ ಬಾಕಿ ಉಳಿಯುವ ೪೫-೧೨-೨ ರೂಪಾಯಿ ಷೇರುದಾರರಿಗೆ ಹಂಚಬೇಕೆಂದು ತೀರ್ಮಾನಿಸಲ್ಪಟ್ಟಿದೆ.

## Red Cotton Bug. *

## ಹತ್ತಿ ಗಿಡಕ್ಕೆ ಹತ್ತುವ ಕೆಂಪು ಹೇನು.

ಸುಮಾತ್ರಾ ಎಂಬ ಪ್ರದೇಶದ ಹತ್ತಿರ ಹತ್ತಿ ಗಿಡಗಳಿಗೆ ಒಂದು ವಿಧವಾದ ಕೆಂಪು ಹೇನು ವಿಶೇಷವಾಗಿ ಹತ್ತಿರುವಂತೆ ತಿಳಿದು ಬರುತ್ತದೆ. ಈ ಹೇನನ್ನು ನಾಶಪಡಿಸುವದಕ್ಕೆ ಬಂಗಾಳಾ ವ್ಯವಸಾಯ ಶಾಖೆಯವರು ಕೇವಲ ಸುಲಭವಾಗಿರುವ ಉಪಾಯವನ್ನು ಒಂದು ಲೇಖನದಲ್ಲಿ ಸೂಚಿಸಿರುತ್ತಾರೆ. ಇದನ್ನು ಇಲ್ಲಿ ತಿಳಿಸುವೆವು.

ಈ ಹುಳಗಳನ್ನು ಕೈಯಿಂದ ಆರಿಸಿ ಚಿಮಣಿ ಎಣ್ಣೆಯಲ್ಲಿ ಹಾಕಿ ಕೊಂದುಬಿಡಬೇಕು. ಈ ವಿಚಾರದಲ್ಲಿ ಮೆ|| ಲೆಫ್ರಾಯ್‌ಯವರು ಒಂದು ವಿಧಾನವನ್ನು ಸೂಚಿಸುತ್ತಾರೆ. ಅದೇನಂದರೆ—ಪ್ರತಿಯೊಬ್ಬ ಕೂಲಿಯವನ ಹತ್ತಿರಲೂ ಒಂದು ಮೊರ ಮತ್ತು ಒಂದು ಚಿಮ್ಣಿ ಎಣ್ಣೆ ಡಬ್ಬದಲ್ಲಿ ಸ್ವಲ್ಪ ಚಿಮ್ಣಿ ಎಣ್ಣೆ ಇರಬೇಕು. ಗಿಡದ ಕೆಳಗೆ ಮೊರವನ್ನಿಟ್ಟು ಗಿಡವನ್ನಲ್ಲಾಡಿಸಿ ಮೊರದೊಳಕ್ಕೆ ಹುಳಗಳನ್ನು ಉದರಿಸಬೇಕು. ನಂತರ ಮೊರದಿಂದ ಹುಳಗಳನ್ನು ಡಬ್ಬದೊಳಗೆ ಸುಲಭವಾಗಿ ಹಾಕಬಹುದು. ಇದು ಎಲ್ಲರೂ ಮಾಡಬಹುದಾದ ಕೇವಲ ಸುಲಭವಾದ ಉಪಾಯ. ಮೊರದಿಂದ ಹುಳುಗಳು ತಪ್ಪಿಸಿಕೊಳ್ಳುವದಕ್ಕೆ ಸಾಧ್ಯವಿಲ್ಲ. ಡಬ್ಬದೊಳಗೆ ಬಿದ್ದಮೇಲೆ ಇವು ಬದುಕುವದಿಲ್ಲ. ಈರೀತಿ ಮಾಡುವದರಿಂದ ಹುಳವು ಹೆಚ್ಚಾಗಿ ಹರಡುವದಕ್ಕೆ ಆಸ್ಪದವಿರುವದಿಲ್ಲ. ಈ ಹೇನು ಹತ್ತಿರುವ ಹೊಲದಲ್ಲಿ ಬೆಳೆದ ಹತ್ತಿ ಬೀಜವನ್ನು ಬಿತ್ತನೆಗೆ ಉಪಯೋಗಿಸುವದಕ್ಕೆ, ಮೊದಲು ದನವಿನ ಸಗಣಿ, ಜೇಡಿಮಣ್ಣು ಮಿಶ್ರವಾದ ನೀರಿನಲ್ಲಿ ಬಿತ್ತವನ್ನು ಕಲಸಿ ನಂತರ ಇದನ್ನು ಒಳ್ಳೇ ನೀರಿನಲ್ಲಿ ಹಾಕಿದರೆ ಒಳ್ಳೇ ಬೀಜವು ಮುಳುಗುತ್ತದೆ. ಮತ್ತು ಕೆಟ್ಟ ಬೀಜವು ತೇಲುತ್ತದೆ.

---

* ಬಂಗಾಳಾ ವ್ಯವಸಾಯ ಇಲಾಖೆಯ ಲೀಫ್ಲೆಟ್ ನಂ. ೧೨, ೧೯೦೭.

## Cocoanut.*—*Concld.*

## ತೆಂಗು.

(ಹಿಂದಿನ ಸಂಚಿಕೆಯ ಶೇಷ.)

ಗಿಡವು ಹೊಂಬಾಳೆ ಬಿಡುವ ಕಾಲದಲ್ಲಿ ಗಿಡವು ಕೆಡದೆ ಒಳ್ಳೇ ಫಸಲು ಕೊಡುವ ರೀತಿ ಇದಕ್ಕೆ ತಕ್ಕ ಗೊಬ್ಬರವನ್ನು ಹಾಕಬೇಕು. ಇದು ಬಹಳ ಸೂಕ್ಷ್ಮವಾದ ವಿಚಾರವಾದ್ದರಿಂದ ಈ ವಿಷಯದಲ್ಲಿ ಬಹಳ ಹುಷಾರಾಗಿರಬೇಕು. ಕುರಿಗಳು ಕರುಗಳು ದನಗಳಿಗೆ ಸಿಕ್ಕದಷ್ಟು ಗಿಡಗಳು ಎತ್ತರವಾಗಿ ಬೆಳೆದಿದ್ದರೆ ಗಿಡ ಒಂದಕ್ಕೆ ಒಂದು ದನ ಅಥವಾ ಒಂದು ಎಮ್ಮೆಯನ್ನು ಕಟ್ಟಿ ಅದರ ಮಲ ಮೂತ್ರಗಳು ಗಿಡದ ಪಾತಿಯಲ್ಲೇ ಬಿದ್ದು ನೆಲದಲ್ಲಿ ಇಂಗುವಂತೆ ಮಾಡಿದರೆ ತೆಂಗಿಗೆ ಬಹಳ ಅನುಕೂಲ. ದನಗಳ ಸಗಣಿ ಮತ್ತು ಗಂಜಲವು ತೆಂಗಿಗೆ ಸರ್ವೋತ್ತಮವಾದ ಗೊಬ್ಬರ. ಸಾಮಾನ್ಯವಾಗಿ ಒಂದು ಎಮ್ಮೆ ಅಥವಾ ದನವನ್ನು ಒಂದು ಗಿಡಕ್ಕೆ ಹತ್ತು ದಿನಗಳು ಕಟ್ಟಿದರೆ ಇವು ಅತ್ತಾಡುವುದರಿಂದ ಗಿಡದ ಸುತ್ತಲ ಮಣ್ಣು ಕೆದರಿ ಗಂಜಲ ವಿಸರ್ಜನಾದಿಗಳು ನೆಲದಲ್ಲಿಳಿದು ಬೇರುಗಳು ಅತಿ ಜಾಗ್ರತೆಯಾಗಿ ವೃದ್ಧಿಯಾಗುವವು. ನೂರು ಎಕರೆ ತೋಟಕ್ಕೆ ೧೦೦ ದನಗಳಿದ್ದರೆ ಸಾಕು. ಮೇಲ್ಕಂಡಂತೆ ಅನುಸರಿಸಿದ್ದೇ ಆದರೆ ಎರಡು ವರ್ಷಗಳಲ್ಲಿ ೧೦೦ ಎಕರೆಯಲ್ಲಿಯ ಗಿಡಗಳಿಗೆ ಪೂರ್ತಿಯಾಗಿ ಗೊಬ್ಬರ ಹಾಕಿದಂತಾಗುತ್ತೆ.

ತೆಂಗಿಗೆ ಸೊಪ್ಪಿನ ಗೊಬ್ಬರವು ಅನುಕೂಲವಾದದ್ದು. ಒಂದು ಹಿಡಿ ಸೊಪ್ಪನ್ನು ಮತ್ತು ಸುಟ್ಟ ತೆಂಗಿನ ಸಿಪ್ಪೆಯ ಬೂದಿಯನ್ನು ಬೆರಸಿ ಗಿಡದ ಸುತ್ತಲೂ ಬುಡಕ್ಕೆ ೫—೬ ಅಡಿ ದೂರವಾಗಿಯೂ, ಅರ್ಧ ಅಡಿ ಆಳವಾಗಿಯೂ ನೆಲದಲ್ಲಿ ಹೂಳಬೇಕು.

ಕೆಲವರು ೩೦ ಅಡಿ ಚದರಕ್ಕೆ ಒಂದರಂತೆ ತೆಂಗಿನ ಗಿಡ ಹಾಕಬೇಕೆಂದು ಹೇಳುತ್ತಾರೆ. ಇದು ಕೇವಲ ಸಾರವತ್ತಾದ ಜಮೀನಾದರೆ ಅನುಕೂಲ. ಮರಳು ಗಟ್ಟಿ ಪ್ರದೇಶಗಳಲ್ಲಿ ೨೫ ಅಡಿ ಬಿಟ್ಟು ಗಿಡ ಹಾಕಿದರೆ ಒಳ್ಳೇದು.

---

* ಇಂಡಿಯನ್ ಅಗ್ರಿಕಲ್ಚರಿಸ್ಟ್.—೨—೩—೦೮.

ಈ ರೀತಿ ೨೮ ಅಡಿ ಚದರಕ್ಕೆ ಗಿಡಗಳನ್ನಿಟ್ಟರೆ ಎಕರೆ ಒಂದಕ್ಕೆ ೭೫ ಗಿಡಗಳನ್ನು ಹಾಕಬಹುದು. ಮತ್ತು ಮೇಲೆ ಹೇಳಿದ ರೀತಿ ಕ್ರಮವಾಗಿ ಸಾಗುವಳಿ ಮಾಡಿದರೆ ವರುಷಕ್ಕೆ ಆರಾವರ್ತಿ ಕಾಯಿ ಬಿಡಿಸಿದರೆ ಮರ ಒಂದಕ್ಕೆ ಸರಾಸರಿ ೩೦ ಕಾಯಿಗಳು ಬೀಳುತ್ತವೆ. ಮೇ ಜುಲೈ ತಿಂಗಳುಗಳ ಫಸಲೇ ಜಾಸ್ತಿ. ೧೦೦—೧೫೦ ಕಾಯಿಗಳು ಬಿಡುವ ಮರಗಳೂ ಉಂಟು. ಆದರೆ ಇವು ಬಹಳ ಅಪುರೂಪ. ಬೇಸಿಗೆಯಲ್ಲಿ ಇನ್ನೂ ಚೆನ್ನಾಗಿ ಬಲಿಯದಿರುವ ಗೊಂಚಲುಗಳಲ್ಲಿ ಎಳೇ ಕೊನೆಗಳು ಮುರಿದು ಹೋಗಿ ಎಳೆ ಕಾಯಿಗಳು ಉದರುವದರಿಂದ ಬಹಳ ನಷ್ಟವಾಗುವದುಂಟು. ಆದರೆ ಡಿಸೆಂಬರ್ ತಿಂಗಳಲ್ಲಿ ಗೊಂಚಲುಗಳಿಗೆ ನೇತಾಡದಂತೆ ಆಧಾರವಾಗಿ ಏನಾದರೂ ಕೊಟ್ಟು ಜನವರಿ, ಫೆಬ್ರವರಿ, ಮಾರ್ಚಿ ತಿಂಗಳವರೆಗೂ ಅಂದರೆ ಕಾಯಿಗಳು ಚೆನ್ನಾಗಿ ಬಲಿಯುವ ತನಕ ಕದಲಿಸದೆ ಬಿಟ್ಟಿದ್ದರೆ ಹೀಗೆ ನಷ್ಟವಾಗುವದು ತಪ್ಪುತ್ತೆ.

---

## Revenue Appeals.
## ರೆವಿನ್ಯೂ ಅಪೀಲ್‌ಗಳು.

### ಮೈಸೂರು ಶೀಮೆಯ ಶ್ರೀಮತ್ ಮಹಾರಾಜ ರಾಜಾ ಸಾಹೇಬ್ ಬಹದ್ದೂರರವರ ಸರ್ಕಾರದಲ್ಲಿ.

೧೯೦೮—೦೯ನೆ ಇಸವಿಯ ಅಪೀಲ್ ನಂಬರು ೧.

| ವಾದಿಗಳು. | | ಪ್ರತಿವಾದಿಗಳು. |
|---|---|---|
| ೧. ಚಿಕ್ಕಮ್ಮ.<br>೨. ನಂಜಮ್ಮ.<br>೩. ರಂಗೆಗೌಡ. | *vs.* | ಪಟೇಲ್ ಚಿಕ್ಕ ಚನ್ನೆಗೌಡ. |

ಮೊಕದ್ದಮೆಯ ಸಾರಾಂಶ.—ಸೋಮಲಾಪುರವೆಂಬುದು ಗುಬ್ಬಿ ತಾಲ್ಲೂಕಿನಲ್ಲಿ ಒಂದು ಬೇಚಿರಾಖ್ ಗ್ರಾಮ. ಇದು ಮೊದಲು ಅಸಲಿ ಗ್ರಾಮವಾಗಿದ್ದು ೧೮೮೨—೮೩ನೆ ಇಸವಿಯಲ್ಲಿ ನಡೆದ ರಿ ಸರ್ವೆ ಕಾಲದಲ್ಲಿ

ಬೇಲೂರು ಗ್ರಾಮಕ್ಕೆ ದಾಖಲೆಯಾಗಿ ಸೇರಿಸಲ್ಪಟ್ಟಿತು. ಈ ಗ್ರಾಮಕ್ಕೆ ಮರಿಗುಡ್ಡೆಗೌಡನೆಂಬುವನು ತನ್ನ ತಂದೆಯು ಫೌತಿಪಟ್ಟ ನಂತರ ೧೮೭೫-೭೬ರಲ್ಲಿ ರಿಜಿಸ್ಟರ್‌ದಾರ್ ಪಟೇಲನಾಗಿ ನೇಮಕ ಮಾಡಲ್ಪಟ್ಟನು. ೧೮೮೨—೮೩ನೆ ಇಸವಿಯಲ್ಲಿ ಸದರಿ ಮರಿಗುಡ್ಡೆಗೌಡನು ವೃದ್ಧಾಪ್ಯದೆಶೆಯಲ್ಲಿದ್ದನಾದಕಾರಣ ಇವನ ದೂರದ ನೆಂಟನಾದ ಅಸಲಿ ಬೇಲೂರು ಗ್ರಾಮದ ಪಟೇಲ್ ಚನ್ನೆಗೌಡನಿಂದ ಪಟೇಲಿ ಕೆಲಸ ಮಾಡಿಸುತ್ತಿದ್ದನು. ೧೮೮೬ನೆ ಇಸವಿಯಲ್ಲಿ ಮರಿಗುಡ್ಡೆಗೌಡನು ಫೌತಿಪಟ್ಟ ಮೇಲೂ ಕೂಡ ಚನ್ನೆಗೌಡನೇ ಕ್ರಮವಾಗಿ ಸರ್ಕಾರಿ ಹುಕುಂ ಪಡೆಯದೆ ಸೋಮಲಾಪುರದ ಪಟೇಲಿಯನ್ನೂ ನೋಡುತ್ತಾ ಬಂದನು. ಈ ಚನ್ನೆಗೌಡನು ೧೯೦೫ರಲ್ಲಿ ಫೌತಿಯಾದಕಾರಣ ಸೋಮಲಾಪುರದ ಪಟೇಲಿ ವಿಷಯದಲ್ಲಿ ರಿಜಿಸ್ಟರ್‌ದಾರ ಫೌತಿ ಮರಿಗುಡ್ಡೆಗೌಡನ ಹೆಂಡತಿ (೧) ಚಿಕ್ಕಮ್ಮ (೨) ಇವನ ತಮ್ಮನ ಹೆಂಡತಿ ನಂಜಮ್ಮ ಮತ್ತು (೩) ಇವನ ತಮ್ಮನ ಮೊಮ್ಮಗ ರಂಗೆಗೌಡ, (ಅಪೀಲ್ ವಾದಿಗಳು) ಈ ಮೂವರು ಪಟೇಲಿಗೆ ತಾವು ಹಕ್ಕುದಾರರಾದ ಕಾರಣ ೩ನೇ ಅಪೀಲ್ ವಾದಿಯ ಹೆಸರಿಗೆ ರಿಜಿಸ್ಟರಾಗಬೇಕೆಂತಲೂ, ಅಪೀಲ್ ಪ್ರತಿವಾದಿ ಚಿಕ್ಕ ಚನ್ನೆಗೌಡನು ತನ್ನ ತಂದೆ ಚನ್ನೆಗೌಡ ಸದರಿ ಗ್ರಾಮದ ಪಟೇಲಿ ಕೆಲಸವನ್ನು ೧೮೮೨—೮೩ನೆ ಇಸವಿ ಲಾಗಾಯಿತು ನೋಡುತ್ತಿದ್ದನಾದಕಾರಣ ತನ್ನ ಹೆಸರಿಗೆ ಪಟೇಲಿ ರಿಜಿಸ್ಟರಾಗಬೇಕೆಂತಲೂ ತಕರಾರು ಮಾಡಿದರು. ೧೮೮೨—೮೩ನೆ ಇಸವಿಯಲ್ಲಿ ಬೇಲೂರು ಗ್ರಾಮಕ್ಕೆ ಸೋಮಲಾಪುರವನ್ನು ದಾಖಲೆ ಗ್ರಾಮವಾಗಿ ಸೇರಿಸಿದ ನಂತರವೂ ಕೂಡ ೧೮೯೯-೧೯೦೦ನೆ ಇಸವಿ ವರಿವಿಗೂ ಈ ಅಸಲಿ ಮತ್ತು ದಾಖಲೆ ಗ್ರಾಮಗಳ ಬಾಬತು ಪ್ರೇಟಗಿ ಮೊಬಲಗುಗಳು ಪ್ರತ್ಯೇಕವಾಗಿ ಬಟವಾಡೆಯಾಗುತ್ತಿದ್ದುದಾಗಿಯೂ, ೧೮೯೯-೧೯೦೦ನೆ ಇಸವಿಯು ನಂತರ ಈ ಎರಡು ಗ್ರಾಮಗಳಿಗೂ ಒಂದೇ ಮೊಬಲಗಿನಂತೆ ಬಟವಾಡೆಯಾಗುತ್ತಿದ್ದುದಾಗಿಯೂ ರಿಕಾರ್ಡಿನಿಂದ ವ್ಯಕ್ತಪಡುತ್ತೆ. ೧೮೮೮-೮೯ನೆ ಇಸವಿಯ ಪಟೇಲಿ ರಿಜಿಸ್ಟರ್‌ನಲ್ಲಿ ಮರಿಗುಡ್ಡೆಗೌಡನು ಫೌತಿಯಾಗಿದ್ದಾಗ್ಯೂ ಕೂಡ ಸೋಮಲಾಪುರ ಗ್ರಾಮಕ್ಕೆ ರಿಜಿಸ್ಟರ್‌ದಾರ್ ಪಟೇಲ್ ಹೆಸ್ರನಲ್ಲಿ ಇವನ ಹೆಸರೇ ನಮೂದಿರುತ್ತೆ.

ಗೌರ್ನಮೆಂಟಿನವರ ತೀರ್ಮಾನ—೧೮೯೭ನೆ ಇಸವಿಯ ಆರ್. ೧೦೨೬೭-೭೪ ೧೦೪೪ನೆ ನಂ. ಗವರ್ನಮೆಂಟ್ ಆರ್ಡರಿನಲ್ಲಿ ಸಾದರಾಗಿರುವ ಹುಕ್ಕುಂ ಏನೆಂದರೆ, „ಒಂದು ಗ್ರಾಮವು ಸರ್ವೆಗೆ ಪೂರ್ವದಲ್ಲಿ ಅನೇಕ ಗ್ರಾಮ ಅಥವಾ ಮಜರೆಗಳಾಗಿದ್ದು ಇವುಗಳಿಗೆ ಪ್ರತ್ಯೇಕ ಪ್ರತ್ಯೇಕ ಪಟೇಲರುಗಳಿದ್ದರೆ ಈ ಗ್ರಾಮಗಳು ಸರ್ವೆ ಇಲಾಖೆಯವರಿಂದ ಒಟ್ಟುಗೂಡಿಸಲ್ಪಟ್ಟು ಒಂದೇ ಗ್ರಾಮವಾಗಿ ಮಾಡಲ್ಪಟ್ಟ ನಂತರವೂ ಸದರೀ ಪಟೇಲರುಗಳೇ ಆಯಾ ಗ್ರಾಮ ಅಥವಾ ಮಜರೆಗಳ ಪಟೇಲರಾಗಿರತಕ್ಕದ್ದು. ಮತ್ತು ಇವರ ವಾರಸುದಾರರನ್ನೆ ಪಟೇಲಿಗೂ ವಾರಸುದಾರರನ್ನಾಗಿ ಅಂಗೀಕರಿಸತಕ್ಕದ್ದು''. ಈ ಹುಕುಮಿನ ಪ್ರಕಾರ ಸೋಮಲಾಪುರ ಗ್ರಾಮದ ಪಟೇಲನು ಮತ್ತು ಇವನ ವಾರಸುದಾರರು ಸದರೀ ಗ್ರಾಮವು ಅಸಲಿ ಬೇಲೂರು ಗ್ರಾಮಕ್ಕೆ ದಾಖಲೆ ಗ್ರಾಮವಾಗಿ ಸೇರಿಸಲ್ಪಟ್ಟ ಮಾತ್ರಕ್ಕೇನೆ ತಮ್ಮ ಹಕ್ಕುಗಳನ್ನು ಕಳೆದುಕೊಂಡಂತೆ ಆಗುವದಿಲ್ಲ. ೧೯೦೪-೦೫ನೆ ಇಸವಿಯ ೫೬ ಮತ್ತು ೧೦೬ನೆ ನಂಬರು ಅಪೀಲ್ ಮೊಕದ್ದಮೆಗಳಲ್ಲಿ ಸರ್ಕಾರದವರು ದಾಖಲೆ ಗ್ರಾಮಗಳಿಗೆ ಪಟೇಲರ ಹಕ್ಕನ್ನು ಅಂಗೀಕರಿಸಿರುತ್ತಾರೆ. ಅಲ್ಲದೆ ಬರಾವರ್ದಾರ್ ಮರಿಗುಡ್ಡೆಗೌಡನ ಅನುಮತಿ ಪಡೆದು ಅವನ ಪರವಾಗಿ ಚನ್ನೆಗೌಡನು ಸೋಮಲಾಪುರದ ಪಟೇಲಿ ಗುಮಾಸ್ತೆ ಕೆಲಸವನ್ನು ನೋಡುತ್ತಿದ್ದದ್ದಾಗಿಯೂ ಮತ್ತು ಮರಿಗುಡ್ಡೆಗೌಡನು ಫೌತಿಯಾಗುವದಕ್ಕೆ ಮುಂಚೆಯೇ ಆಗಲಿ ನಂತರವಾಗಲಿ ಚನ್ನೆಗೌಡನು ಸದರೀ ದಾಖಲೆ ಗ್ರಾಮಕ್ಕೆ ರಿಜಿಸ್ಟರ್ ಹಕ್ಕುದಾರನೆಂದು ಎಂದೂ ಭಾವಿಸಲ್ಪಟ್ಟರಲಿಲ್ಲವಾಗಿಯೂ ರಿಕಾರ್ಡುಗಳಿಂದ ವ್ಯಕ್ತಪಡುತ್ತೆ. ಮತ್ತು ಚನ್ನೆಗೌಡನು ಮರಿಗುಡ್ಡೆಗೌಡ ಅಥವ ಇವನ ವಾರಸುದಾರರಿಗೆ ವಿರೋಧವಾಗಿ ಪಟೇಲಿ ವಿಚಾರದಲ್ಲಿ ಬಾಧ್ಯತೆ ಯಾವಾಗಲೂ ತರಲಿಲ್ಲವಾಗಿ ಗೊತ್ತಾಗುತ್ತೆ. ೩ನೆ ವಾದಿಯು ಬರಾವರ್ದಾರ ಪಟೇಲನ ಸಂತತಿಯವನಾಗಿದ್ದಾನೆ. ಅಪೀಲ್ ಪ್ರತಿವಾದಿಗೆ ಸೋಮಲಾಪುರದಲ್ಲಿ ಜಮೀನಿರುವದಿಲ್ಲ. ಇವನಿಗೆ ಅಲ್ಲಿ ಜಮೀನು ಇರುತ್ತೆ. ಅಕ್ಷರಸ್ಥನೂ ಆಗಿರುತ್ತಾನೆ. ಈ ದಾಖಲೆ ಗ್ರಾಮಕ್ಕೆ ಇಂಥಾವನನ್ನು ಪಟೇಲನನ್ನಾಗಿ ಮೊಕರರ್ ಮಾಡುವದು ಸರ್ಕಾರಿ ಕೆಲಸಗಳು ನಡೆಸುವದಕ್ಕೂ ಸಹ ಅನುಕೂಲವಾಗಿಯೇ

ಇರುತ್ತೆ. ಈ ಸಂದರ್ಭಗಳನ್ನು ಪರ್ಯಾಲೋಚಿಸಿ ಸೋಮಲಾಪುರ ಗ್ರಾಮದ ಪಟೇಲಿಯು ೩ನೆ ವಾದಿ ರಂಗೆಗೌಡನ ಹೆಸರಿನಲ್ಲಿ ರಿಜಿಸ್ಟರಾಗಬೇಕೆಂದು ಗೌರ್ನಮೆಂಟಿನವರು ಅಪ್ಪಣೆ ಮಾಡಿರುತ್ತಾರೆ.

---

## Manurial Experiments with Sugar-Cane. *

## ಕಬ್ಬಿಗೆ ಇಡತಕ್ಕ ಗೊಬ್ಬರಗಳು.

ಡಮ್ರೋನ್ ಎಕ್ಸ್‌ಪೆರಿಮೆಂಟಲ್ ಸ್ಟೇಷನ್‌ನಲ್ಲಿ (Dumroan Experimental Station) ಕಳೆದ ವರ್ಷ ಕಬ್ಬಿನ ಪೈರಿಟ್ಟು ಅನೇಕ ತರಹೆ ಗೊಬ್ಬರಗಳನ್ನು ಹಾಕಿ ಅಜಮಾಯಿಷಿ ಮಾಡಿ ನೋಡಿದ್ದರಲ್ಲಿ ತಿಳಿದು ಬಂದ ಮುಖ್ಯಾಂಶಗಳೇನಂದರೆ.—

೧. ಒಂದು ಎಕರೆಗೆ ೩೫೦ ಪೌಂಡು ನೈಟ್ರೋಜನ್ (Nitrogen) ಒದಗುವ ರೀತಿ ಬರೇ ಸಗಣಿ ಗೊಬ್ಬರವನ್ನಾಗಲಿ, ಅಥವಾ ಹರಳು ಹಿಂಡಿಯನ್ನಾಗಲಿ ಹಾಕಿದರೆ ಬೆಲ್ಲವೇನೊ ಎಕರೆಗೆ ೧೫೦ ಪೌಂಡು ನೈಟ್ರೋಜನ್ ಒದಗುವ ರೀತಿ ಸಗಣಿ ಗೊಬ್ಬರ, ಹರಳು ಹಿಂಡಿ ಅಥವಾ ಇತರ ವಿಧವಾದ ಗೊಬ್ಬರವನ್ನು ಹಾಕಿದ ಜಮೀನಿನಲ್ಲಿ ಆಗುವದಕ್ಕಿಂತಲೂ ಹೆಚ್ಚಾಗಿಯೇ ಆಗುತ್ತದೆ. ಆದರೆ ಹೆಚ್ಚು ಗೊಬ್ಬರ ಉಪಯೋಗಿಸಿದುದಕ್ಕೆ ತಕ್ಕಂತೆ ಬೆಲ್ಲದ ಉತ್ಪತ್ತಿಯು ಹೆಚ್ಚುವದಿಲ್ಲ.

೨. ಸಗಣಿ ಗೊಬ್ಬರವು ಅಗ್ಗವಾಗಿದ್ದರೆ ೩೫೦ ಪೌಂಡು ನೈಟ್ರೋಜನ್ ಒದಗುವ ರೀತಿ ಈ ಗೊಬ್ಬರವನ್ನುಪಯೋಗಿಸುವದೇ ಬಹಳ ಲಾಭಕರವೆಂದು ತಿಳಿದು ಬಂದಿದೆ. ಆದರೆ ಎಕರೆಯೊಂದಕ್ಕೆ ೭೧೫ ಬಂಗಾಳಾ ಮಣದ ಮೇರೆಗೆ ಈ ಗೊಬ್ಬರವನ್ನು ಒದಗಿಸುವದು ಸುಲಭವಲ್ಲ. ೩೫೦ ಪೌಂಡು ನೈಟ್ರೋಜನ್ ಒದಗುವಷ್ಟು ಹರಳು ಹಿಂಡಿಯನ್ನು ಉಪಯೋಗಿಸುವದು ಫಾಯಿದೆಕರವಲ್ಲ.

೩. ಆಚರಣೆಗೆ ಯೋಗ್ಯವಾಗಿರುವದು ಯಾವದಂದರೆ—೧೫೦ ಪೌಂಡು ನೈಟ್ರೋಜನ್ ಒದಗುವಷ್ಟು ಸಗಣಿ ಗೊಬ್ಬರ ಮತ್ತು ಹರಳು

* ಇಂಡಿಯನ್ ಟ್ರೇಡ್ ಜರ್ನಲ್.—೨೦—೨—೧೯೦೭.

ಹಿಂಡಿ, ಅಂದರೆ ೨೦೪ ಬಂಗಾಳೂ ಮಣ ಸಗಣಿ ಗೊಬ್ಬರ ಮತ್ತು ೮ ಬಂಗಾಳೂ ಮಣ ಹರಳು ಹಿಂಡಿ ಈ ಮೇರೆಗೆ ಎರಡನ್ನೂ ಉಪಯೋಗಿಸಿದರೆ ಖರ್ಚು ಕಡಿಮೆಯಾಗಿಯೂ ಉತ್ಪತ್ತಿ ಹೆಚ್ಚಾಗಿಯೂ ಆಗುತ್ತದೆ.

೪. ಪ್ರತಿ ಅಜಮಾಯಿಷಿಯಲ್ಲಿಯೂ ಗೊಬ್ಬರ ಹಾಕಿದ ತಾಕುಗಳಲ್ಲಿ ಉತ್ಪತ್ತಿಯು ಗೊಬ್ಬರ ಹಾಕದೆ ಇದ್ದ ತಾಕುಗಳಲ್ಲಿ ಆದ ಉತ್ಪತ್ತಿಗಿಂತ ಹೆಚ್ಚಾಗಿರುತ್ತದೆ.

೫. ಹಿಂಡಿ, ಎಲುಬು ಪುಡಿ ಮತ್ತು ಪೆಟ್ಲುಪ್ಪು ಇವುಗಳನ್ನು ವಿಶೇಷ ಹೆಚ್ಚಾಗಿ ಜಮೀನಿಗೆ ಉಪಯೋಗಿಸುವದು ಲಾಭಕರವಲ್ಲವೆಂದು ತಿಳಿದು ಬಂದಿರುತ್ತೆ.

---

## Government Proceedings.

## ಸರ್ಕಾರಿ ಹುಕುಂಗಳು.

ಆಲೂರು ಸಬ್ ತಾಲ್ಲೂಕು ಹೋಚಿನಹಳ್ಳಿಪುರ ಗ್ರಾಮದಲ್ಲಿ ವಸೂಲಿಕೆಲಸವು ಭಾರಿಯಾಗಿದ್ದ ಸಬಬು ಸದರಿ ಗ್ರಾಮಕ್ಕೆ ಒಬ್ಬ ಕುಲವಾಡಿಯು ನೇಮಕಪಟ್ಟನು. ಇವನಿಗೆ ಕುಲವಾಡಿ ನೌಕರಿಗಾಗಿ ಸ್ವಲ್ಪ ಜಮೀನನ್ನು ಪೂರಾ ಕಂದಾಯದಮೇಲೆ ಸರ್ಕಾರದವರು ಕೊಟ್ಟಿದ್ದರು. ಈಚೆಗೆ ಈ ಜಮೀನಿನ ಸ್ವಾಧೀನಾನುಭವವು ಸದರಿ ನೌಕರಿಗಾಗಿ ಕೊಟ್ಟಿರುತ್ತೆಂಬ ಅಂಶವು ಯಾವಾಗಲೂ ತಿಳಿದು ಬರುವ ರೀತಿ ಸದರಿ ಜಮೀನನ್ನು ಸ್ವಲ್ಪ ಜೋಡಿ ತೆಗದುಕೊಂಡು ನೌಕರಿ ಇನಾಮಾಗಿ ಸದರಿ ಕುಲವಾಡಿಗೆ ಕೊಡಬಹುದೆಂದು ರೆವಿನ್ಯು ಕಮೀಷನರವರು ಶಿಫಾರಸ್ ಮಾಡಿರಲು ಗೌರ್ನಮೆಂಟಿನವರು ಅದರಂತೆ ಮಂಜೂರ್ಮಾಡಿರುತ್ತಾರಲ್ಲದೆ ಮಿರಾಶಿ ರೂಲುಗಳನ್ನು ಸಖ್ತು ಜಾರಿಗೆ ತಂದು ರೈತರಿಂದ ಸಲ್ಲಬೇಕಾದ ಮಿರಾಶಿಯನ್ನು ವಸೂಲ್ ಮಾಡಿ ಕುಲವಾಡಿಗೆ ಕೊಡಬೇಕೆಂದು ಹುಕುಂ ಮಾಡಿರುತ್ತಾರೆ.—ಗೌ. ಪ್ರೊ. ನಂ. ಆರ್. ೧೬೨೪-೫—ಎಲ್. ಆರ್. ೩೭-೦೮-೬—ತಾರೀಖು ೮—೯—೦೮.

---

## Agricultural Uses of Salt. *

## ವ್ಯವಸಾಯಕ್ಕೆ ಉಪ್ಪಿನಿಂದ ಆಗುವ ಪ್ರಯೋಜನಗಳು.

ಪ್ರಾಣಿವರ್ಗದಲ್ಲಿರುವ ರೀತಿ ಸಸ್ಯವರ್ಗದಲ್ಲಿಯೂ ಕೂಡ ಆರೋಗ್ಯ ಸ್ಥಿತಿಯುಳ್ಳಿರುವದಕ್ಕೆ ಉಪ್ಪು ಬಹಳ ಅವಶ್ಯಕವಾದದ್ದು. ಇದು ಒಳ್ಳೆ ಪುಷ್ಟಿಕರವಾದ ಗೊಬ್ಬರವೆಂದು ಸಾವಿರಾರು ಬೇಸಾಯಗಾರರ ಅನುಭವದಲ್ಲಿ ತಿಳಿದು ಬಂದಿರುತ್ತೆ.

ಉಪ್ಪಿನ ಉಪಯೋಗದಿಂದ ಭೂಗುಣದಲ್ಲಿ ಯಾವರೀತಿ ವೆತ್ಯಾಸಗಳುಂಟಾಗುತ್ತವೆ ಎಂಬ ವಿಚಾರದಲ್ಲಿ ಸಂಪೂರ್ಣವಾಗಿ ಇನ್ನು ತಿಳುವಳಿಕೆಗೆ ಬಂದಿರುವದಿಲ್ಲ. ಅಜಮಾಯಿಷಿಗಳಿಂದ ಗೊತ್ತಾಗಿರುವದೇನಂದರೆ, ಸಾಮಾನ್ಯವಾಗಿ ಮಳೆ ನೀರಿಗಿಂತಲೂ ಕರಗಿದ ಉಪ್ಪಿನ ಬಲದಿಂದ ಇಪ್ಪತ್ತರಷ್ಟು ಹೆಚ್ಚಾಗಿ ಭೂಮಿಯು ಸಡಲಿ ಇದರಲ್ಲಿರತಕ್ಕ ಪದಾರ್ಥಗಳು ಸಸ್ಯಾಹಾರವಾಗಿ ಒದಗುತ್ತವೆ. ಉಪ್ಪಿನ ಉಪಯೋಗದಿಂದ ಜಮೀನನ್ನು ಹಸನು ಮಾಡುವದು ಸುಲಭವಾಗುತ್ತದಲ್ಲದೆ ಹಿಮಗಾಲದಲ್ಲಿಯೂ ಕೂಡ ಭೂಮಿಯು ಮೃದುವಾಗಿಯೇ ಇರುತ್ತದೆ.

ಉಪ್ಪು ಅಂತರಿಕ್ಷದಲ್ಲಿರುವ ತನುವನ್ನು ಹೀರಿ ಭೂಮಿಯಲ್ಲಿ ನಿಲ್ಲುವ ರೀತಿ ಮಾಡುತ್ತದೆ. ಇದರಿಂದ ಮಳೆ ಕಡಿಮೆಯಾದರೂ ತಡೆಯುತ್ತದೆ.

ಭೂಮಿಯಲ್ಲಿ ತಕ್ಕಷ್ಟು ಉಪ್ಪಿದ್ದರೆ, ಇದು ಅಂತರಿಕ್ಷದಲ್ಲಿರುವ ಅಮೊನಿಯಾವನ್ನು (Ammonia) ಹೀರುವದರಿಂದ ಇದರಲ್ಲಿ ಸಸ್ಯಾಹಾರಭೂತವಾದ ನೈಟ್ರೊಜೆನ್ ಪದಾರ್ಥವು ವೃದ್ಧಿಯಾಗುವದೆಂದು ತಿಳಿದು ಬರುತ್ತೆ.

ಜಮೀನಿಗೆ ಹೆಚ್ಚಾಗಿ ಉಪ್ಪನ್ನು ಕೊಡುವದರಿಂದ ಕಳೆಗಳನ್ನು ಮತ್ತು ಹುಳಗಳನ್ನು ನಾಶಪಡಿಸಬಹುದು. ಸಾಮಾನ್ಯವಾಗಿ ಉಪ್ಪು ಉಪಯೋಗಿಸಿದ ಜಮೀನಿನಲ್ಲಿ ಕಾಳು ಉತ್ತಮವಾಗಿಯೂ ಬಣ್ಣದಲ್ಲಿ ಒಂದೇ ಸಮನಾಗಿಯೂ ದಪ್ಪನಾಗಿಯೂ ಇರುತ್ತದೆ. ಹುಲ್ಲೂ ಧಾನ್ಯವೂ

---

* ಅಗ್ರಿಕಲ್ಚರಲ್ ಮತ್ತು ಇಂಡಸ್ಟ್ರಿಯಲ್ ಪ್ರೋಗ್ರೆಸ್—ಡಿಸೆಂಬರ್ ೧೯೦೭.

ನಹ ಸ್ವಲ್ಪ ಬಳಿತರಲಾಗುತ್ತದೆ. ಸಾಮಾನ್ಯವಾಗಿ ಎಲ್ಲಾ ಪೈರಿಗೂ ಉಪ್ಪು ಪ್ರಯೋಜನಕಾರಿ ಎಂದು ಅನುಭವದಿಂದ ತಿಳಿದು ಬಂದಿರುತ್ತೆ.

ಉಪ್ಪನ್ನು ಸುಮಾರಾಗಿ ಉಪಯೋಗಿಸುವದರಿಂದ ಗೊಬ್ಬರದಲ್ಲಿರುವ ಕಸ ಕಡ್ಡಿಗಳು ಕೊಳೆಯುವದಕ್ಕೆ ಅನುಕೂಲವಾಗಿರುತ್ತೆ. ಆದರೆ ಕಸ ಕಡ್ಡಿಗಳು ಅತಿ ಜಾಗ್ರತೆಯಾಗಿ ಕೊಳೆಯುವವನ್ನು ಇದು ತಪ್ಪಿಸುತ್ತದಲ್ಲದೆ ಅಮೋನಿಯಾ ಪದಾರ್ಥವು ಹಾರಿಹೋಗದ ರೀತಿ ತಡೆಯುತ್ತದೆ. ಮತ್ತು ಇದರಿಂದ ಗೊಬ್ಬರದಲ್ಲಿ ವೃದ್ಧಿಯಾಗುವ ಅಸಂಖ್ಯಾತವಾದ ಹುಳಗಳು ನಾಶ ಹೊಂದುತ್ತವೆ.

ಒಂದೇಸಲ ಉಪ್ಪನ್ನು ಹೆಚ್ಚಾಗಿ ಉಪಯೋಗಿಸುವದಕ್ಕಿಂತಲೂ ಆಗಾಗ್ಯೆ ಸುಮಾರಾಗಿ ಉಪಯೋಗಿಸುವದು ಒಳ್ಳೇದು. ಅನುಭವಸ್ಥರಾದ ಬೇಸಾಯಗಾರರು ಒಂದು ಎಕರೆಗೆ ಸುಮಾರು ೨೩ ಮಣದಂತೆ (ಇಲ್ಲಿನ) ಉಪ್ಪನ್ನು ವಸಂತ ಋತುವಿನಲ್ಲಿ ಒಂದು ಸಲವೂ ಹಿಮಗಾಲದಲ್ಲಿ ಒಂದು ಸಲವೂ ಉಪಯೋಗಿಸುತ್ತಾರೆ. ನೆನೆದಿರುವ ಜೇಡಿ ಭೂಮಿಗೆ ಉತ್ತಮೇಲೆ ಬಿತ್ತನೆ ಜೊತೆಯಲ್ಲಿ ಉಪ್ಪನ್ನು ಹಾಕಬಾರದು. ಒಂದು ಗಜ ಚದರಕ್ಕೆ ಒಂದು ಹಿಡಿ ಉಪ್ಪು ಉಪಯೋಗಿಸಿದರೆ ಸಾಕು.

---

## Cattle Show at Ghati Subramanya.

## ಘಾಟಿ ಸುಬ್ರಹ್ಮಣ್ಯದಲ್ಲಿ ದನಗಳ ಪ್ರದರ್ಶನ.

ದೊಡ್ಡಬಳ್ಳಾಪುರ ತಾಲ್ಲೂಕು ಘಾಟಿ ಸುಬ್ರಹ್ಮಣ್ಯಸ್ವಾಮಿ ದೇವಸ್ಥಾನದ ಹತ್ತಿರ ಅಲ್ಲಿ ನಡೆಯುವ ಜಾತ್ರೆ ಕಾಲದಲ್ಲಿ ಇದೇ ವರ್ಷ ಡಿಸೆಂಬರು ೨೭ನೆ ತಾರೀಖು ಲಾಗಾಯಿತು ಒಂದು ದನಗಳ ಪ್ರದರ್ಶನವು ಜರಗುತ್ತದೆ. ಈ ಪ್ರದರ್ಶನದಲ್ಲಿ ಒಳ್ಳೆ ಜಾತಿ ಹೋರಿಗಳು, ಆಕಳುಗಳು, ಉಳೊ ಎತ್ತುಗಳು, ಕರುಗಳು, ಕುರಿ, ಮೇಕೆ, ಎಮ್ಮೆ, ಕೋಣ, ಇವುಗಳಿಗೆ ೧೦ ರೂಪಾಯಿ ಲಾಗಾಯಿತು ೨೦ ರೂಪಾಯಿವರಿವಿಗೆ ಒಟ್ಟು ೩೦೫ ರೂಪಾಯಿನ ೨೪ ನಗದು ಇನಾಮುಗಳು ದೊರೆಯುವವು.

ಪ್ರದರ್ಶನಕ್ಕೆ ದಾಖಲಾಗುವ ಪ್ರತಿರಾಸಿನ ಮೇಲೂ ಒಂದಾಣೆ ರುಸುಂ ವಸೂಲುಮಾಡಲ್ಪಡುತ್ತೆ. ಬಹುಮಾನವನ್ನು ಪಡೆದ ರಾಸಿನ ಮಾ

ಲೀಕರಿಗೆ ನಗದು ಇನಾಂ ಜೊತೆಗೆ ಬಹುಮಾನ ಪತ್ರಿಕೆಯೂ ಸಹ ಕೊಡಲ್ಪಡುತ್ತದೆ. ಹೋದ ವರ್ಷ ಬಹುಮಾನವನ್ನು ಪಡೆದ ರಾಸುಗಳಿಗೆ ಈ ವರ್ಷ ಇನಾಮು ದೊರೆಯಲಾರದು. ಪ್ರದರ್ಶನಕ್ಕೆ ಬರುವ ರಾಸುಗಳ ಮಾಲೀಕರು ಮೇವಿಗೆ ತಮ್ಮ ಸ್ವಂತ ಏರ್ಪಾಟು ಇಟ್ಟುಕೊಳ್ಳಬೇಕು.

ಈ ಜಾತ್ರೆಗೆ ಅನೇಕ ಜನ ಸೇರುತ್ತಾರಾದ್ದರಿಂದ ರಾಸುಗಳು ಒಳ್ಳೇ ಬೆಲೆಗೆ ವಿಕರಿಯಾಗಲು ಅವಕಾಶವಿರುತ್ತೆ. ಈ ಪ್ರದರ್ಶನ ವಿಷಯವಾಗಿ ಹೆಚ್ಚು ಸಂಗತಿಗಳನ್ನು ತಿಳಿಯಲಪೇಕ್ಷಿಸುವವರು ದೊಡ್ಡಬಳ್ಳಾಪುರದ ತಾಲ್ಲೂಕು ಅಮಲ್ದಾರ್ರವರಿಗೆಯಾಗಲಿ ಅಥವಾ ಅವರಿಂದ ನೇಮಿಸಲ್ಪಟ್ಟ ಇತರ ಆಫೀಸರಿಗೆ ಆಗಲಿ ಪ್ರದರ್ಶನವು ಷುರುವಾಗುವದಕ್ಕೆ ಎರಡು ದಿನಗಳು ಮುಂಚಿತವಾಗಿ ಬರೆದು ತಿಳಿದುಕೊಳ್ಳಬಹುದು.

---

## Notifications.

## ಇಸ್ತಿಹಾರ್‌ನಾಮೆಗಳು.

ನಂ. ೪೫೮೪. ತಾರೀಖು ೩೦-೧೦-೦೮.

ಮೈಸೂರು ಸರ್ವಿಸ್ ರೆಗ್ಯುಲೇಷನ್ಸ್ ೧೭೭ನೆ ಪ್ರಕರಣ ಅನುಸರಿಸಿ ಬೆಂಗಳೂರು ತಾಲ್ಲೂಕು ಅಮಲ್ದಾರ್ ಮೆ॥ ಎ. ಹೇಸ್ ಯವರಿಗೆ ೧೯೦೮ನೆ ನವಂಬರ್ ೬ನೆ ತಾರೀಖು ಲಾಗಾಯಿತು ೧೪ ದಿನಗಳ ಪ್ರಿವಿಲೇಜ್ ರಜಾ ಕೊಟ್ಟಿರುತ್ತೆ.

೨. ಅವರ ಗೈರ್ ಹಾಜರಿಯಲ್ಲಿ ರೆವಿನ್ಯೂ ಪ್ರೊಬೇಷನರ್ ಟಿ. ಹನುಮಂತರಾಯರು ತಾಲ್ಲೂಕು ಛಾರ್ಜಿನಲ್ಲಿರತಕ್ಕದ್ದು.

---

ನಂ. ೪೫೮೮. ತಾರೀಖು ೩೦-೧೦-೦೮.

ಮೈಸೂರು ಸರ್ವಿಸ್ ರೆಗ್ಯುಲೇಷನ್ಸ್ ೧೯೯ನೆ (ಬಿ) ಪ್ರಕರಣದ ಮೇರೆ ಸಾಗರದ ತಾಲ್ಲೂಕು ಆಕ್ಟಿಂಗ್ ಅಮಲ್ದಾರ್ ಮೆ॥ ಬಿ. ಕೃಷ್ಣರಾಯರಿಗೆ ಬೆಂಗಳೂರಿನಲ್ಲಿ ನಡೆಯುವ ಲೋಕಲ್ ಸರ್ವಿಸ್ ಪರೀಕ್ಷೆಗೆ ಹಾಜರಾಗಿ ಹೋಗಿ ಬರಲು ಆಗುವಷ್ಟು ದಿನಗಳು ಮಾತ್ರ ರಜಾ ಮಂಜೂರ್ಮಾಡಿರುತ್ತೆ.

೨. ಅವರ ಗೈರ್‌ಹಾಜರಿಯಲ್ಲಿ ಪೋಲೀಸ್ ಇನ್ಸ್‌ಪೆಕ್ಟರು ತಾಲ್ಲೂಕು ಛಾರ್ಜಿನಲ್ಲಿರತಕ್ಕದ್ದು.

---

ನಂ. ೪೮೬೮—ಎಸ್ಟ್. ೩. ತಾರೀಖು ೧೧—೧೧—೦೮.

ಈ ಕೆಳಗಿನ ತಾಲ್ಲೂಕು ಶಿರಸ್ತೇದಾರರುಗಳ ವರ್ಗಾ ವರ್ಗಿಗಳನ್ನು ಹುಕುಂ ಮಾಡಿರುತ್ತೆ.

೧. ಡಿ. ಲಕ್ಷ್ಮಣರಾಯರನ್ನ ಶಿಕಾರಿಪುರದಿಂದ ನಗರ ತಾಲ್ಲೂಕಿಗೆ.

೨. ಎಂ. ನಾರಾಯಣರಾವ್, ಬಿ. ಎ., ಯವರನ್ನ ನಗರದಿಂದ ಶಿಕಾರಿಪುರಕ್ಕೆ.

---

## Occasional Notes.

## ವಿವಿಧ ವೃತ್ತಾಂತಗಳು.

ಕಾಶ್ಮೀರ್ ದೇಶದಲ್ಲಿ ರೇಷ್ಮೆ ಕೈಗಾರಿಕೆಯು ಬಹಳ ಲಾಭಕರವಾಗಿರುವದಂತೆ. ೧೯೦೬ನೆ ಇಸವಿಯಲ್ಲಿ ಈ ದೇಶದ ಕಚ್ಚಾ ರೇಷ್ಮೆಯಿಂದಲೇ ಬಂಡವಾಳದ ಮೇಲೆ ಶೇಕಡಾ ೫೮½ ನಿವಳ ಆದಾಯ ತೋರಿರುವದಾಗಿ ತಿಳಿದು ಬರುತ್ತದೆ. ೧೯೦೭ನೆ ಇಸವಿಯಲ್ಲಿ ಇದಕ್ಕಿಂತಲೂ ಹೆಚ್ಚಾದಾಯ ಬಂದಿರಬಹುದಾಗಿ ಊಹಿಸುತ್ತಾರೆ. ಈ ಕಸಬಿನಲ್ಲಿ ೭೦,೦೦೦ ಜನ ಕೆಲಸ ಮಾಡುತ್ತಿದ್ದುದಾಗಿಯೂ ಅಲ್ಲಿ ಆದ ರೇಷ್ಮೆ ಗೂಡುಗಳು ಬಹಳ ತೃಪ್ತಿಕರವಾಗಿದ್ದವೆಂತಲೂ ತಿಳಿದು ಬರುತ್ತದೆ.—ಇಂಡಸ್ಟ್ರಿಯಲ್ ಇಂಡಿಯಾ, ಜುಲೈ ೧೯೦೮.

---

ಸೇಬು ಗಿಡಗಳನ್ನು ಸಾದಾ ಹುಲ್ಲು ಬೆಳೆದಿರುವ ಜಮೀನಿನಲ್ಲಿ ಹಸನು ಮಾಡದೆ ಬೆಳೆಯುವದಕ್ಕೂ ಮತ್ತು ಉಕ್ಕೆ ಮಾಡಿ ಕಳೆ ವಗೈರೆ ಕಿತ್ತು ಹಸನು ಮಾಡಿದ ಜಮೀನಿನಲ್ಲಿ ಬೆಳೆಯುವದಕ್ಕೂ ಇರುವ ತಾರತಮ್ಯವನ್ನು ಕಂಡು ಹಿಡಿಯಲು ಅಜಮಾಯಿಷಿಗಳು ನಡೆದವು. ಎರಡು ತರಹೆ ಜಮೀನುಗಳಿಗೆ ಒಂದೇ ಸಮನಾಗಿ ಗೊಬ್ಬರ ಹಾಕಿತ್ತು. ಹಸನು ಭೂಮಿಯಲ್ಲಿ ಹಾಕಿದ್ದ ಗಿಡಗಳು ಹುಲ್ಲು ಬೆಳೆದ ಜಮೀನಿನ ಗಿಡಗಳಿಗಿಂತ

ಲೂ ಅತಿ ಜಾಗ್ರತೆಯಾಗಿಯೂ ಹುಲುಸಾಗಿಯೂ ಬೆಳೆಯುತ್ತವೆ. ಇಂಡಿಯನ್ ಅಗ್ರಿಕಲ್ಚರಿಸ್ಟ್.—೧—೩—೦೮.

---

ಅಮೇರಿಕಾ ದೇಶದಲ್ಲಿ ಹತ್ತಿಯನ್ನು ಉತ್ತಮ ಪಡಿಸುವ ಉದ್ಭಿಜ್ಯ ಬೀಜವನ್ನು ಚುನಾಯಿಸುವದಕ್ಕೆ ಸುಲಭ ವಿಧಾನಗಳನ್ನು ಕಂಡು ಹಿಡಿದಿರುತ್ತಾರೆ. ಈ ವಿಧಾನಗಳಿಂದ ಹಗುರವಾದ ಕೆರಪು ರಖಂ ಬೀಜವನ್ನು ಪ್ರತ್ಯೇಕಿಸುವದಕ್ಕೆ ಸಾಧ್ಯವಾಗುತ್ತದೆ. ಈ ಪದ್ಧತಿಯನ್ನು ಅನುಸರಿಸಿದ್ದರಲ್ಲಿ ಹತ್ತಿಯ ಉತ್ಪತ್ತಿಯು ಶೇಕಡಾ ೧೦-೧೫ರಷ್ಟು ಹೆಚ್ಚಾಗಿರುತ್ತದೆಂದು ತಿಳಿದು ಬರುತ್ತದೆ. ಯಂತ್ರ ಸಹಾಯದಿಂದ ಭಾರವಾದ ಮತ್ತು ಹಗುರವಾದ ಬೀಜಗಳನ್ನು ಈ ರೀತಿ ಪ್ರತ್ಯೇಕಿಸುವದರಲ್ಲಿ ಹೆಚ್ಚು ಲಾಗವಡೇನೂ ತಗಲುವದಿಲ್ಲವಂತೆ.—ಇಂಡಿಯನ್ ಟ್ರೇಡ್ ಜರ್ನಲ್—೨೦—೨—೧೯೦೮.

---

ಬೊಂಬಾಯಿ ಪಟ್ಟಣದಲ್ಲಿ ದೇಶೀಯ ಬಂಡವಾಳಸ್ಥರೇ ಸೇರಿ ಇಂಡಿಯಾ ದೇಶದ ಉಣ್ಣೆಯಿಂದಲೇ ತಯಾರಾದ ಫೆಲ್ಟ್ (Felt) ಎಂಬ ಪದಾರ್ಥದಿಂದ ಟೋಪಿಗಳನ್ನು ತಯಾರು ಮಾಡುವ ಒಂದು ನೂತನ ಕೈಗಾರಿಕೆಯನ್ನು ಸ್ಥಾಪಿಸುವವರಾಗಿಧಾರೆಂದು ಗೊತ್ತಾಗುತ್ತೆ. ಕಚ್ಚಾ ಸಾಮಾನಿನ ಪರಿಶೋಧನೆ ಮೊದಲುಗೊಂಡು ಟೋಪಿ ತಯಾರಿವರೆಗೂ ಸಕಲ ಕೆಲಸಗಳೂ ಸ್ಥಳದಲ್ಲಿ ದೇಶೀಯರ ಮೇಲ್ವಿಚಾರಣೆಗೆ ಒಳಪಟ್ಟು ನಡೆಸಲ್ಪಡುತ್ತವಂತೆ. ಒರಟು ಟೋಪಿಗಳು ಆದಿಯಾಗಿ ಕೇವಲ ನಾಜೋಕು ಪದಾರ್ಥಗಳವರೆಗೂ ನಾನಾ ರಖಂ ಟೋಪಿಗಳನ್ನು ತಯಾರ್ ಮಾಡುತ್ತಾರೆ. ತಿಂಗಳು ಒಂದಕ್ಕೆ ಸುಮಾರು ೫೦ ಸಾವಿರ ಟೋಪಿಗಳು ತಯಾರ್ ಮಾಡಬಹುದಂತೆ.—ಇಂಡಿಯನ್ ಟ್ರೇಡ್ ಜರ್ನಲ್.—೮—೧೦—೦೮.

---

ದನಗಳಿಗೆ ಹೊಟ್ಟೆಯುಬ್ಬರ ಬಂದರೆ ಅವುಗಳ ಬಾಯಿ ಒಂದು ಅಂಗುಲ ತೆರೆಯುವಷ್ಟು ಉದ್ದವಾಗಿರುವ ದುಂಡಾದ ಕೋಲಿಗೆ ಎರಡು ಕೊನೆಗಳಿಗೂ ಹುರಿಯನ್ನು ಕಟ್ಟಿ ಬಲವಾಗಿ ಕೊಂಬುಗಳಿಗೆ ಬಿಗಿಯಬೇಕು. ನಂತರ ಈ ಕೋಲನ್ನು ಅಡ್ಡವಾಗಿ ದವಡೆ ತನಕ ಹೋಗುವಂತೆ ಒಳಗೆ

ಹಿಂದಕ್ಕೆ ತಳ್ಳಬೇಕು. ದನವು ಈ ಕೋಲನ್ನು ಹೊರಗೆ ಹೊರಡಿಸುವದ ಕ್ಕಾಗಿ ದವಡೆಗಳನ್ನೂ ನಾಲಿಗೆಯನ್ನೂ ಆಡಿಸಲಾರಂಭಿಸುತ್ತದೆ. ಇದರಿಂದ ತೇಗುವದಕ್ಕೆ ಷುರುವಾಗಿ ಒಳಗಿನ ವಾಯುವು ಹೊರಬಿದ್ದು ದನಕ್ಕೆ ಬಾಧೆಯು ಕಮ್ಮಿಯಾಗುತ್ತೆ. ಉಬ್ಬರ ಕಮ್ಮಿಯಾದ ನಂತರ ಕೋಲನ್ನು ತೆಗೆಯಬಹುದು. ಈ ಸುಲಭೋಪಾಯವನ್ನು ಪಾಶ್ಚಾತ್ಯರಲ್ಲನೇಕರು ಪರೀಕ್ಷೆಮಾಡಿ ನೋಡಿ ಪ್ರಯೋಜನವನ್ನು ಹೊಂದಿರುತ್ತಾರೆ. ಸೆಂಟ್ರಲ್ ಪ್ರಾವಿನ್ಸಸ್ ಅಗ್ರಿಕಲ್ಚರಲ್ ಗಜೆಟ್.—ಅಕ್ಟೋಬರ್ ೧೯೦೮.

---

ಕೈ ಮಗ್ಗಗಳನ್ನು ಉತ್ತಮಪಡಿಸುವ ವಿಚಾರದಲ್ಲಿ ಹೊಸ ತರಹೆ ಮಗ್ಗಗಳನ್ನು ರಚಿಸುವವರು ಹಾಲಿ ಉಪಯೋಗದಲ್ಲಿರುವ ಅತಿ ಸಾಮಾನ್ಯವಾದ ರಚನೆಯುಳ್ಳ ಯಂತ್ರಕ್ಕೆ ಹೊಸ ಭಾಗಗಳನ್ನು ಸೇರಿಸಿದ ಹಾಗೆಲ್ಲಾ ಯಂತ್ರವು ಹೆಚ್ಚು ತೊಡಕಾಗಿಯೂ, ಮಗ್ಗದ ಭಾಗಗಳು ವಿಶೇಷ ಭಾರವಾಗಿಯೂ ಆಗುವದ್ದರಿಂದ ನೇಗೆಯುವನು ಸಾಧಾರಣವಾಗಿ ಕೈಗಳಿಂದಲೂ ಕಾಲುಗಳಿಂದಲೂ ಕೆಲಸ ಮಾಡುವದಕ್ಕೆ ಬಹಳ ಪ್ರಯಾಸಪಡಬೇಕಾಗುತ್ತೆಂಬ ಅಂಶವನ್ನು ಮರೆತುಬಿಡುವದುಂಟು. ಆದ್ದರಿಂದ ಅತಿ ಸಾಮಾನ್ಯವಾಗಿಯೂ ಹಗುರವಾಗಿಯೂ ಇರುವ ಮಗ್ಗಗಳನ್ನೇ ರಚಿಸಲು ಪ್ರಯತ್ನಪಡಬೇಕು. ನೂಲುವದು, ಹಾಸು ತಯಾರುಮಾಡುವದು ಮತ್ತು ಗಂಜಿ ಕೊಡುವದು, ಈ ಕ್ರಮಗಳನ್ನು ತಿದ್ದುಪಾಟು ಮಾಡುವದು ಕೇವಲ ಅವಶ್ಯಕವಾಗಿರುತ್ತದೆ. ಪ್ರಕೃತ ಈ ಕೆಲಸಗಳಲ್ಲಿ ಬಹಳ ಕಾಲವೂ ಶ್ರಮವೂ ವ್ಯರ್ಥವಾಗುತ್ತಿದೆ.—ಇಂಡಿಯನ್ ಟ್ರೇಡ್ ಜರ್ನಲ್.—೬—೨—೦೮.

---

ಈ ಪತ್ರಿಕೆಯ ಹಿಂದಿನ ಸಂಚಿಕೆಯಲ್ಲಿ ಕೆಲವು ತಪ್ಪುಗಳು ಬಿದ್ದಿರುತ್ತವೆ. ಅವುಗಳನ್ನು ಈ ಕೆಳಗೆ ಕಂಡಂತೆ ತಿದ್ದಿಕೊಳ್ಳತಕ್ಕದ್ದು.

| ವಾಲ್ಯೂಂ. | ಸಂಚಿಕೆ ನಂ. | ಪುಟ. | ಪಙ್ತಿ. | ಅಶುದ್ಧ. | ಶುದ್ಧ. |
|---|---|---|---|---|---|
| III | 1 | 15 | 1 | 1908ನೆ ಆಗಸ್ಟ್ 15ನೆ ತಾರೀಖು. | 1908ನೆ ಜೂನ್ 15ನೆ ತಾರೀಖು. |

V. B. Soobbiah & Sons, Printers, Bangalore—1908.

THE MYSORE

# REVENUE & AGRICULTURAL GAZETTE.

ವಾಲ್ಯೂಂ ೩.] ಮಂಗಳವಾರ, ೧ನೆ ಡಿಶಂಬರ್ ೧೯೦೮. [ನಂ. ೩.

## Contents. / ಅನುಕ್ರಮಣಿಕೆ.



## Ourselves.

## ಸ್ವವಿಷಯ.

ನಾವು ರೆವಿನ್ಯು ಮತ್ತು ವ್ಯವಸಾಯಕ ಗೆಜೆಟ್ಟನ್ನು ಪ್ರಕಟಿಸು

ವದಕ್ಕೆ ಆರಂಭಿಸಿ ಈಗ ಎರಡು ವರುಷಗಳಾದವು. ಈ ಪತ್ರಿಕೆಯನ್ನು ಫಾಯಿಷ್ ಮಾಡುವದರ ಉದ್ದೇಶವನ್ನು ಕುರಿತು ೧೯೦೬ನೆ ನವಂಬರು ೧ನೆ ತಾರೀಖಿನ ೧ನೆ ವಾಲ್ಯೂಂ ಪ್ರಥಮ ಸಂಚಿಕೆಯಲ್ಲಿಯೇ ವಿಶದವಾಗಿ ತಿಳಿಸಿರುತ್ತೇವೆಯಷ್ಟೆ. ಈಗ ಈ ಉದ್ದೇಶವು ಎಷ್ಟರ ಮಟ್ಟಿಗೆ ನೆರವೇರಿರುತ್ತದೆ, ಈ ಗೆಜೆಟ್ಟನ್ನು ಗ್ರಾಮಾಧಿಕಾರಿಗಳು ರೈತಾಬಿ ಜನರು ಮತ್ತು ಇತರರು ಸಹ ತಮಗೆ ಉಪಯೋಗಕರವಾಗಿದೆ ಎಂದು ಭಾವಿಸಿ ಖಾಯಿಷ್ ಮಾಡುತ್ತಾರೆಯೆ, ಮತ್ತು ಈ ಪತ್ರಿಕೆಯನ್ನು ಮುಂದಕ್ಕೂ ನಡೆಸುವದು ಅಪೇಕ್ಷಣೀಯವೆ ಎಂಬೀ ಮುಂತಾದ ವಿಷಯಗಳನ್ನು ನಮ್ಮ ವಾಚಕರಿಗೂ ಚಂದಾದಾರರಿಗೂ ಸಹ ತಿಳಿಸುವದು ನಮ್ಮ ಕರ್ತವ್ಯವಾಗಿಧೆ.

ಈ ಗೆಜೆಟನ್ನು ಫಾಯಿಷ್ ಮಾಡಲುಪಕ್ರಮಿಸಿದಾರಭ್ಯ ಪ್ರತಿ ಸಂಚಿಕೆಯ ೫೫೦ ಪ್ರತಿಗಳನ್ನು ಇಲಾಖಾಧ್ಯಕ್ಷರು, ಡೆಪ್ಯುಟಿ ಕಮಿಷನರವರುಗಳು, ಅಮಲ್ದಾರರು, ಶೇಕದಾರರು ಇವರುಗಳಿಗೆ ಮುಫತ್ತಾಗಿ ಕಳುಹಿಸುತ್ತಿರುತ್ತೇವೆ. ಇದೂ ಅಲ್ಲದೆ ಪಟೇಲ್ ಶ್ಯಾನುಭೋಗರುಗಳಿಗೆ ಸುಲಭಸಾಧ್ಯವಾಗಿರುವ ರೀತಿ ವರ್ಷಕ್ಕೆ ೮ ಆಣೆ ಚಂದಾವಿನಂತೆ ರಿಯಾಯಿತಿ ದರವಿಟ್ಟು ಗೆಜೆಟ್ಟನ್ನು ಕಳುಹಿಸುತ್ತಿರುವದು ನಮ್ಮ ವಾಚಕರಿಗೆ ತಿಳಿದೇ ಇರುತ್ತೆ. ಗ್ರಾಮಾಧಿಕಾರಿಗಳಲ್ಲದೆ ಇತರರೂ ಸಹ ಇದನ್ನು ಮುದ್ರಿಸುತ್ತಿರುವ ಬೆಂಗಳೂರು ಮೆ|| ವಿ. ಬಿ. ಸುಬ್ಬಯ್ಯ ಅಂಡ್ ಸನ್ಸ್‌ಯವರುಗಳಿಂದಲೆ ಪತ್ರಿಕೆಯನ್ನು ವಾರ್ಷಿಕ ಚಂದಾ ರೂ. ೧—೮—೦ ಮೇರೆ ತರಿಸಿಕೊಳ್ಳುತ್ತಿರುತ್ತಾರೆ. ಈ ಪತ್ರಿಕೆಯು ಫಾಯಿಷ್ ಆದ ಲಾಗಾಯಿತು ಈ ಎರಡು ವರುಷಗಳಲ್ಲಿ ಎಷ್ಟು ಪ್ರಚಾರಕ್ಕೆ ಬಂದಿರುತ್ತೆಂಬುವದನ್ನು ಇದರಡಿ ತೋರಿಸುತ್ತೇವೆ.

| ತಾರೀಖು. | ಮುಫತ್ತಾಗಿ ಕಳುಹಿಸುತ್ತಿರುವ ಪ್ರತಿಗಳ ಸಂಖ್ಯೆ. | ರಿಯಾಯಿತಿ ಪಡೆದ ಚಂದಾದಾರರ ಸಂಖ್ಯೆ. | ಇತರ ಚಂದಾದಾರರ ಸಂಖ್ಯೆ. | ಜುಮ್ಲಾ. |
|---|---|---|---|---|
| 1-11-07 | 550 | 643 | 59 | 1252 |
| 1-11-08 | 550 | 769 | 65 | 1384 |

ಈ ಎರಡು ಮಾಸಗಳಿಂದಲೂ ಈ ಪತ್ರಿಕೆಯಲ್ಲಿ ವಿಶೇಷವಾಗಿ ವ್ಯವಸಾಯಗಾರರಿಗೂ ಮತ್ತು ಇತರರಿಗೂ ಉಪಯುಕ್ತವಾದ ವ್ಯವಸಾಯ ಕ್ರಮಗಳು, ಈ ಕ್ರಮಗಳಲ್ಲಿ ಉಪಯೋಗಿಸಲ್ಪಡುವ ಯಂತ್ರಗಳು ಮತ್ತು ಮುಟ್ಟುಗಳು, ಕೈಗಾರಿಕೆ, ಪರಸ್ಪರ ಸಹಾಯಕ ಸಂಘಗಳು, ದನಕರುಗಳ ಜಾಡ್ಯ ಮತ್ತು ಇವುಗಳಿಗೆ ಚಿಕಿತ್ಸೆ, ರೆವಿನ್ಯೂ ಇಲಾಖೆಯ ಹುಕುಂಗಳು ಮುಂತಾದ ಅನೇಕ ವಿಷಯಗಳನ್ನು ಆಗಾಗ್ಯೆ ತಿಳಿಸುತ್ತಿರುವೆವು. ಚಂದಾದಾರರುಗಳು ಮತ್ತು ಇತರರೂ ಸಹ ವ್ಯವಸಾಯ ಮುಂತಾದ ವಿಷಯಗಳಲ್ಲಿ ಬರೆಯುತ್ತಿರುವ ಲೇಖನಗಳನ್ನು ಈ ಗೆಜೆಟಿನಲ್ಲಿ ಫಾಯಿಷ್ ಮಾಡುತ್ತಿರುತ್ತೇವೆ. ಇದರಿಂದ ಪತ್ರಿಕೆಯು ಹೆಚ್ಚು ಪ್ರಚಾರಕ್ಕೆ ಬರುತ್ತಿರುವದೆಂದು ಊಹಿಸಬಹುದಾಗಿರುತ್ತದೆ.

ಈ ಗೆಜೆಟಿನೊಂದಿಗೆ ಸಪ್ಲಿಮೆಂಟಾಗಿ ಇದುವರೆಗೆ ಇದರ ಅಡಿ ತೋರಿಸಿದ ವ್ಯವಸಾಯ ಮುಂತಾದ ವಿಷಯಗಳಡಗಿರುವ ಸಣ್ಣ ಪುಸ್ತಕಗಳನ್ನು ಫಾಯಿಷ್ ಮಾಡಿ ಹಂಚಿರುತ್ತೇವೆ.

(೧) ಶಿವಗ್ಗಫಟ್ಟದಲ್ಲಿ ಅರಸಿನ ಸಾಗುವಳಿ.
(೨) ದನಕರುಗಳ ಜಾಡ್ಯಗಳು.
(೩) ಸಣಬು.
(೪) ತೆಂಗಿನ ವ್ಯವಸಾಯ.
(೫) ಸಸ್ಯಾದಿಗಳಿಂದ ಬಣ್ಣ ಹಾಕುವಿಕೆ.
(೬) ಕೈಮಗ್ಗದಿಂದ ನೇಯುವಿಕೆ.
(೭) ಅರಗಿನ ವ್ಯವಸಾಯ.
(೮) ಪರಸ್ಪರ ಸಹಾಯಕ ಸಂಘಗಳಿಂದ ವ್ಯವಸಾಯಕ್ಕೂ ಮತ್ತು ಕೈಗಾರಿಕೆಗೂ ಆಗುವ ಪ್ರಯೋಜನಗಳು.
(೯) ಬಿತ್ತನೆ ಬೀಜವನ್ನು ಆರಿಸುವದು ಮತ್ತು ಕಾಪಾಡುವದು.
(೧೦) ನೆಲಗಡಲೆಕಾಯಿ.
(೧೧) ಜೇನುತುಪ್ಪ ಮತ್ತು ಮೇಣ.
(೧೨) ಗೋರೀಬಿದನೂರಿನಲ್ಲಿ ಕಬ್ಬು ಸಾಗುವಳಿ ಆಗತಕ್ಕ ವಿಧಾನ.

(೧೩) ಕೋಲಾರ ಡಿಸ್ಟ್ರಿಕ್ಟಿನಲ್ಲಿ ಬೆಳೆಯುವ ಬತ್ತದ ರಕಂಗಳು.
(೧೪) ಮೈಸೂರು ದೇಶದ ವ್ಯವಸಾಯ.

ಗೌರ್ನಮೆಂಟಿನವರು ಈ ಪತ್ರಿಕೆಯನ್ನು ಅಜಮಾಯಿಷಿ ತರೀಖ್ ಎರಡು ವರುಷಕಾಲ ನಡಿಸಬಹುದೆಂದು ೧೯೦೬ನೆ ಅಕ್ಟೋಬರಿನಲ್ಲಿ ಮಂಜೂರ್ಮಾಡಿದರು. ಈ ಅವಧಿಯು ಪೂರೈಸಿದ ಅನಂತರವೂ ಈ ಪತ್ರಿಕೆಯನ್ನು ನಡೆಯಿಸುವ ವಿಚಾರದಲ್ಲಿ ಕೆಲವು ಡೆಪ್ಯುಟಿ ಕಮಿಷನರವರುಗಳು ಅಭಿಪ್ರಾಯಪಟ್ಟದ್ದನ್ನು ಇಲ್ಲಿ ಸಂಕ್ಷೇಪವಾಗಿ ತಿಳಿಸುವೆವು.

ಮೈಸೂರು ಡಿಸ್ಟ್ರಿಕ್ಟು ಡೆಪ್ಯುಟಿ ಕಮಿಷನರವರು.—“ ಈ ಪತ್ರಿಕೆಯು ವ್ಯವಸಾಯಕ ವಿಚಾರಗಳಲ್ಲಿ ಜನ ಸಾಮಾನ್ಯದ ತಿಳುವಳಿಕೆಯನ್ನು ಹೆಚ್ಚಿಸತಕ್ಕದ್ದಾಗಿರುತ್ತದೆ.”

ಕಡೂರು ಡಿಸ್ಟ್ರಿಕ್ಟು ಡೆಪ್ಯುಟಿ ಕಮಿಷನರವರು.—“ ಈ ಪತ್ರಿಕೆಯ ಉಪಯೋಗದ ವಿಚಾರದಲ್ಲಿ ಭಿನ್ನಾಭಿಪ್ರಾಯಗಳು ಉಂಟಾಗಲು ಕಾರಣವಿಲ್ಲ.”

ಚಿತ್ರದುರ್ಗದ ಡೆಪ್ಯುಟಿ ಕಮಿಷನರವರು.—“ ಈ ಪತ್ರಿಕೆಯು ರೈತಾಬಿ ಜನರಿಗೂ ಮತ್ತು ಇತರ ನೌಕರರಿಗೂ ಸಹ ಬಹಳ ಉಪಯೋಗಕರವಾಗಿಯೂ ಅನೇಕ ಸಂಗತಿಗಳನ್ನು ತಿಳುಹಿಸತಕ್ಕದ್ದಾಗಿಯೂ ಇರುತ್ತದೆ. ಇದು ವ್ಯವಸಾಯಾಭಿವೃದ್ಧಿ ಮತ್ತು ಕೈಗಾರಿಕೆ ವಿಷಯವಾಗಿ ಜನಸಾಮಾನ್ಯಕ್ಕೆ ತಿಳುವಳಿಕೆ ಕೊಡುವದಕ್ಕೂ ಈ ವಿಚಾರದಲ್ಲಿ ಆಸಕ್ತಿ ಹುಟ್ಟಿಸುವದಕ್ಕೂ ವಿಶೇಷ ಅನುಕೂಲವಾಗಿರುತ್ತೆ.”

ಈಪತ್ರಿಕೆಯು ಇದುವರೆಗೂ ನಾವು ನಿರೀಕ್ಷಿಸಿದಮೇರೆ ಉಪಯೋಗಕರವಾಗಿಯೇ ಇಧೆಯೆಂದು ಹೇಳಬಹುದು. ಈಚೆಗೆ ರೆವಿನ್ಯು ಕಮಿಷನರ್ ಸಾಹೇಬರವರು ಶಿಫಾರಸ್ ಮಾಡಿದ್ದರಮೇಲೆ ಗೌರ್ನಮೆಂಟಿನವರು ಇನ್ನು ಮೂರು ವರುಷಗಳು ಈ ಗೆಜೆಟನ್ನು ಪ್ರಾಯಿಷ್ ಮಾಡುವದಕ್ಕೆ ಅಪ್ಪಣೆ ಕೊಟ್ಟಿರುತ್ತಾರೆ.

ಹಿಂದಿನಂತೆಯೇ ಡೆಪ್ಯುಟಿ ಕಮಿಷನರವರುಗಳು, ಅಸಿಸ್ಟೆಂಟ್ ಕಮಿಷನರವರುಗಳು, ಅಮಲ್ದಾರರೂ ಮತ್ತು ಇತರ ಮಹನೀಯರೂ ಸಹ

ಈ ಪತ್ರಿಕೆಯನ್ನು ಪ್ರಚಾರಪಡಿಸುವದರಲ್ಲಿ ಆಸಕ್ತಿ ತೆಗೆದುಕೊಳ್ಳುವರೆಂದು ನಾವು ದೃಢವಾಗಿ ನಂಬುತ್ತೇವೆ. ವ್ಯವಸಾಯಕ ವಿಷಯಗಳಲ್ಲಿ ಅನುಭವವುಳ್ಳವರು ಈ ವಿಚಾರವಾಗಿ ತಮ್ಮ ಅನುಭವದಲ್ಲಿ ಕಂಡುಬಂದ ಅಂಶಗಳನ್ನು ಲೇಖನರೂಪವಾಗಿ ನಮ್ಮಲ್ಲಿಗೆ ಕಳುಹಿಸಿದರೆ ಅವುಗಳನ್ನು ಪಾಯಿಷ್ ಮಾಡಲು ಸಂತೋಷವುಳ್ಳವರಾಗಿರುತ್ತೇವೆ.

---

## Co-operation against Insect Pests. *

## ಪೈರಿಗೆ ಬೀಳುವ ಹುಳಗಳು ಮತ್ತು ಐಕಮತ್ಯ.

ಯಾವದೊಂದು ಕೆಲಸವನ್ನೆ ಆಗಲಿ ನಾಲ್ಕು ಜನ ಕೂಡಿ ನಿರ್ವಹಿಸುವರೀತಿ ಒಬ್ಬನಿಂದ ಆಗುವದಿಲ್ಲವೆಂಬುವದು ರೈತಾಬಿ ಜನರಿಗೆ ಗೊತ್ತೇ ಇದೆ. ವ್ಯವಸಾಯದಲ್ಲಾದರೋ ಪೈರುಗಳಿಗೆ ಹುಳಗಳ ಕಾಟವನ್ನು ತಪ್ಪಿಸಲು ಬೇಕಾಗುವಷ್ಟು ಐಕಮತ್ಯವು ಮತ್ಯಾವಭಾಗದಲ್ಲೂ ಅವಶ್ಯಕವಿರುವದಿಲ್ಲ. ಹೇಗಂದರೆ, ಅಜುಬಾಜು ಜಮೀನುದಾರು ತಟಸ್ಥರಾಗಿದ್ದು ಒಬ್ಬನುಮಾತ್ರ ತನ್ನ ಹೊಲದಲ್ಲಿ ಹುಳುಗಳನ್ನು ತಪ್ಪಿಸಿದರೆ ಹುಳುಗಳು ಪುನಃ ಇವನ ಹೊಲಕ್ಕೂ ಹರಡಿಕೊಳ್ಳುವವು. ಆದ್ದರಿಂದ ಈ ತೊಂದರೆಗಳನ್ನು ನಿಶ್ಶೇಷವಾಗಿ ಕಳೆಯಬೇಕಾದರೆ ಗ್ರಾಮಸ್ತರೆಲ್ಲರೂ ಸೇರಿ ಕೆಲಸ ಮಾಡಬೇಕು. ಬದನೆಕಾಯಿಗೆ ಬೀಳುವ ಹುಳುಗಳ ವಿಚಾರವನ್ನು ಒಂದು ಉದಾಹರಣೆಯಾಗಿ ತೆಗೆದುಕೊಳ್ಳೋಣ. ಈ ಹುಳವು ಸ್ವಲ್ಪ ಬಿಳುಪಾಗಿರುತ್ತೆ; ಮತ್ತು ಗಿಡದ ದಂಟಿನಲ್ಲಿದ್ದರೆ ಗಿಡವು ಬಾಡಿ ಒಣಗಿ ಹೋಗುತ್ತದೆ. ಇಂಥಾ ಗಿಡಗಳನ್ನೆಲ್ಲಾ ಕಿತ್ತುಹಾಕಿ ಸುಟ್ಟುಬಿಡಬೇಕು. ಅಂದರೆ ಒಳಗಿನ ಹುಳುವು ನಾಶವಾಗುವ ರೀತಿ ಮಾಡಬೇಕು.

ಕೋಸು, ನೌಲುಕೋಲು ಮುಂತಾದ ಗಡ್ಡೆಗಳಿಗೆ ಬಹಳವಾಗಿ ಒಂದು ತರಹೆ ಹೇನು ಪದೇಪದೇ ಬೀಳುವದು ಸಾಮಾನ್ಯವಾಗಿ ರೈತರಿಗೆಲ್ಲಾ ಗೊತ್ತೇ ಇದೆ. ಹೆಚ್ಚು ಲಾಗವಡು ಇಲ್ಲದೆ ಈ ಹೇನನ್ನು ನಾಶಪಡಿಸುವದಕ್ಕೆ ಪರಿಹಾರಗಳಿವೆ. ಚಿಮ್ಣಿ ಎಣ್ಣೆಯಲ್ಲಿ ಸ್ವಲ್ಪ ಸಾಬೂನ

---

* ಬೊಂಬಾಯಿ ವ್ಯವಸಾಯ ಇಲಾಖೆಯ ಲೀಫ್ಲೆಟ್ ನಂ. ೬, ೧೯೦೮.

ನ್ನು ಬೆರಸಿ ಇದನ್ನು ಪೈರುಗಳಮೇಲೆ ಚಿಮುಕಿಸಿದರೆ ಹೇನುಗಳು ಸತ್ತುಹೋಗುತ್ತವೆ. ಬಾಗಾಯಿತುದಾರರೆಲ್ಲಾ ಒಟ್ಟುಗೂಡಿ ಇಂಥಾ ಚಿಮುಕಿಸುವ ಚೀಕೋರ್ನಳವಿಯನ್ನು ತರಿಸಿಕೊಂಡು ತಮ್ಮತಮ್ಮ ಬೆಳೆಗಳಿಗೆ ಹೇನು ಬಿದ್ದಾಗೆಲ್ಲಾ ಇದನ್ನು ಉಪಯೋಗಮಾಡಿದರೆ ಬಹಳ ಅನುಕೂಲ.

---

## Indian Cottons.*

## ಇಂಡಿಯಾ ದೇಶದ ಹತ್ತಿ.

ಇಂಡಿಯಾ ದೇಶದ ಹತ್ತಿಯನ್ನು ಯೂರೋಪಿಯನ್ ರಾಜ್ಯಗಳಲ್ಲಿ ಅಷ್ಟು ಪಸಂದು ಮಾಡದೇ ಇರುವದಕ್ಕೆ ಅನೇಕ ಕಾರಣಗಳುಂಟು. ಅಮೇರಿಕಾ ದೇಶದ ಹತ್ತಿಯಲ್ಲಿ ಬರುವ ಎಳೆಯು ಇಲ್ಲಿನ ಹತ್ತಿಗಿಂತಲೂ ಹೆಚ್ಚು ಉದ್ದವಾಗಿರುತ್ತೆ. ಈ ದೇಶೀಯರು ಅಜಾಗರೂಕತೆಯಿಂದ ಹತ್ತಿ ಬಿಡಿಸುತ್ತಾರೆ. ಇಲ್ಲಿನ ಹತ್ತಿಗಳ ರಬು ಕೆಡುವದಕ್ಕೆ ಇದೇ ಮುಖ್ಯ ಕಾರಣ. ಇದರಿಂದ ಶೇಕಡ ೭೪ ಇಂದ ಸುಮಾರು ೨೦ರಷ್ಟು ನಷ್ಟ ಉಂಟಾಗುತ್ತೆ. ಅಮೇರಿಕಾ ದೇಶದಲ್ಲಾದರೋ ಈ ಕಾರಣದಿಂದ ಶೇಕಡಾ ೭ಕ್ಕಿಂತ ಕಮ್ಮಿಯೇ ನಷ್ಟವಾಗುತ್ತದೆ. ಹತ್ತಿ ಬಿಡಿಸುವ ಕಾಲದಲ್ಲಿ ಹವಾದಲ್ಲಿ ತನುವು ಕಡಿಮೆಯಾಗಿರುವ ಕಾರಣ ಇಲ್ಲಿನ ಹತ್ತಿ ಎಲೆಗಳು ಪುಡಿಪುಡಿಯಾಗುತ್ತವೆ. ಆದ್ದರಿಂದ ಎಷ್ಟು ಹುಷಾರಿ ತೆಗೆದುಕೊಂಡಾಗ್ಯೂ ಕೂಡ ಕಸವಿಲ್ಲದೆ ಶುದ್ಧವಾದ ಹತ್ತಿಯನ್ನೆ ಆರಿಸುವದು ಪ್ರಯಾಸ. ದೇಶೀಯ ಹತ್ತಿಗಳಲ್ಲಿ ಅರಳೆಯು ಬೀಜಕ್ಕೆ ಬಿಗಿಯಾಗಿ ಅಂಟಿಕೊಂಡಿರುತ್ತದೆಯಾದ್ದರಿಂದ ರಾಟೆಯಾಡುವದರಲ್ಲಿ ಅಮೇರಿಕಾ ಮತ್ತು ಈಜಿಪ್ಟ ದೇಶದ ಹತ್ತಿಗಳಿಗಿಂತಲೂ ಇವಕ್ಕೆ ಹೆಚ್ಚು ತೊಂದರೆ. ಇದರಿಂದ ಹತ್ತಿಯು ಎರಡು ವಿಧವಾಗಿ ಕೆಡುತ್ತದೆ. ಹೇಗಂದರೆ, ಎಳೆಯು ತುಂಡು ತುಂಡಾಗಿ ಹರದುಹೋಗುವ ಸಂಭವವುಂಟು, ಮತ್ತು ಬೀಜವು ಒಡೆದು ಒಳಗಿನ ಎಣ್ಣೆಯು ಇಳಿದು ಅರಳೆಗೆ ತಗಲಿ ಡಾಗಾಗುತ್ತದೆ. ಅಲ್ಲದೆ ಅರಳೆಯನ್ನು ವಿಶೇಷ ಅಮುಕಿ ಬೇಲುಗಳಲ್ಲಿ ಮೂಟೆ ಕಟ್ಟುವದರಿಂದಲೂ ಎಳೆಯ ಗುಣವು ಕಡಮೆಯಾಗುತ್ತದಂತೆ.

---

* ಸೆಂಟ್ರಲ್ ಪ್ರಾವಿನ್ಸಸ್ ಅಗ್ರಿಕಲ್ಚರಲ್ ಗಜೆಟ್.—ಅಕ್ಟೋಬರ್, ೧೯೦೮.

ಇಂಡಿಯಾ ದೇಶದ ಹತ್ತಿಗಳಲ್ಲಿ ಎಳೆಯಲ್ಲಿಯೂ ಮತ್ತು ಉತ್ಪತ್ತಿಯಲ್ಲಿಯೂ ಸಹ ನ್ಯೂನತೆಗಳಿರುತ್ತವೆ. ಇವುಗಳನ್ನು ಉತ್ತಮಪಡಿಸುವದಕ್ಕೆ ಅನೇಕ ಅಜಮಾಯಿಷಿಗಳು ನಡೆದಿರುತ್ತವೆ. ಅಮೆರಿಕಾ ಅಥವಾ ಈಜಿಪ್ಟ ದೇಶದ ಉತ್ತಮ ರಖಂ ಹತ್ತಿಯನ್ನು ಈ ದೇಶದಲ್ಲಿ ಬೆಳೆದು ನೋಡಿದ್ದರಲ್ಲಿ ಕೇವಲ ಅನುಕೂಲವಾದ ಕೆಲವು ಪ್ರದೇಶಗಳಲ್ಲಿ ವಿನಹ ಇನ್ನೆಲ್ಲಿಯೂ ಇದರಿಂದ ಸ್ವಲ್ಪವೂ ಪ್ರಯೋಜನ ಕಂಡುಬರಲಿಲ್ಲವೆಂದು ಅನುಭವದಿಂದ ತಿಳಿದುಬಂದಿರುತ್ತೆ. ಈಚೆಗೆ ಅಜಮಾಯಿಷಿಗಳು ನಡೆದದ್ದರಲ್ಲಿ ಬೀಜಗಳನ್ನು ಚುನಾಯಿಸಿ ಉಪಯೋಗಿಸುವದರಿಂದ ಕ್ರಮೇಣ ಬಹಳಕಾಲದನಂತರ ಅನುಕೂಲವಾದ ಫಲಿತಾಂಶಗಳು ಕೈಗೂಡಬಹುದೆಂದು ತಿಳಿದುಬರುತ್ತೆ. ಈರೀತಿ ಉತ್ತಮ ರಖಂ ಬೀಜವನ್ನು ಒದಗಿಸಲು ಫಾರಂಗಳನ್ನು ಸ್ಥಾಪಿಸುವದರಲ್ಲಿ ತೊಂದರೆಗಳೇನೂ ಕಂಡುಬರುವದಿಲ್ಲ. ಆದರೆ ಭಾರಿ ವಿಸ್ತೀರ್ಣಗಳಲ್ಲಿ ಹತ್ತಿ ಬೆಳೆ ಇಟ್ಟಾಗ ಈ ರಖಂ ಬೀಜಗಳು ವ್ಯತ್ಯಾಸವಾಗದರೀತಿ ನೋಡಿಕೊಳ್ಳುವ ವಿಚಾರದಲ್ಲಿ ಆಲೋಚಿಸತಕ್ಕದ್ದಾಗಿರುತ್ತದೆ. ಬೆಳೆಯುವವರೂ ವರ್ತಕರೂ ಅನೇಕ ವರ್ಷಗಳ ಕಾಲ ಈ ವಿಚಾರದಲ್ಲಿ ಏಕೀಭವಿಸಿ ನಡೆಯುವದು ಬಹಳ ಅವಶ್ಯಕ.

ಬೀಜವನ್ನು ಚುನಾಯಿಸಿ ಉಪಯೋಗಿಸುವದು ಒಳ್ಳೇದೆಂದು ರೈತರಿಗೂ ತಿಳಿದೇ ಇರುತ್ತದೆ. ಅನೇಕರು ಮುಂದಿನ ಫಸಲಿಗೆ ಬೇಕಾದ ಬೀಜವನ್ನು ಕೈಯಿಂದ ಬಿಡಿಸಿಡುತ್ತಾರೆ. ಧಾರವಾಡ ಡಿಸ್ಟ್ರಿಕ್ಟಿನಲ್ಲಿ ಕೆಲವರು ಬ್ರೋಚ್‌ನಿಂದ ಉತ್ತಮ ರಖಂ ಬೀಜವನ್ನು ತರಿಸಿ ಬೆಳೆ ಮಾಡುವದು ತಮಗೆ ಅನುಕೂಲವೆಂಬುದನ್ನು ಆಗಲೇ ತಿಳಿದುಕೊಂಡಿರುತ್ತಾರೆ. ಖಾಂಡೆಷ್‌ನಲ್ಲಿ ಮರಟು ರಖಂ ಹತ್ತಿಬೀಜವನ್ನು ಉಪಯೋಗಿಸುತ್ತಾರೆ. ಏಕೆಂದರೆ, ಇದರಿಂದ ಪೈರು ಘಟ್ಟಿಯಾಗಿಯೂ ಹುಲುಸಾಗಿಯೂ ಆಗುತ್ತದಲ್ಲದೆ ಅರಳೆ ಉತ್ಪತ್ತಿಯು ಹೆಚ್ಚುತ್ತದೆ. ಈದೇಶದ ರೈತನಿಗೆ ಬಂಡವಾಳವಿಲ್ಲದ್ದರಿಂದಲೂ ಇವನ ಜಮೀನು ಸ್ವಲ್ಪವಾಗಿರುವದರಿಂದಲೂ ವಿಶೇಷ ಖರ್ಚಿಟ್ಟು ಗೊಬ್ಬರ ಹಾಕಿ ಸಾಗುವಳಿ ಮಾಡುವದು ಸಾಧ್ಯವಲ್ಲ. ಹತ್ತಿ ಬೆಳೆಯುವದರಲ್ಲಿ ಅನುಭವಸ್ಥರಾದವರ ಅಭಿಪ್ರಾಯವೇನೆಂದರೆ,—ಹಾಲಿ ರೂ

ಧಿಯಲ್ಲಿರುವ ನೇಟೀವ್ ಕ್ರಮಗಳನ್ನು ಬದಲಾಯಿಸುವದರಿಂದ ಯಾವದೊಂದು ಗುಣವೂ ಕಾಣಬರುವದಾಗಿಲ್ಲ. ಏಕೆಂದರೆ, ಈಗ ಉಪಯೋಗದಲ್ಲಿರುವ ಮುಟ್ಟುಗಳು ಈ ಕೆಲಸಕ್ಕೆ ಲಾಯಖಾಗಿರುತ್ತವೆ. ಹತ್ತಿ ಬಿಡಿಸುವ ಕಾಲದಲ್ಲೂ ಮತ್ತು ನಂತರವೂ ಅನುಸರಿಸುವ ಕ್ರಮಗಳಲ್ಲಿ ಮೇಲೆ ಸೂಚಿಸಿದಂತೆ ಲೋಪಗಳಿರುತ್ತವೆ.

ಹೊರಗಿನ ಹತ್ತಿಗಳನ್ನು ತಂದು ಇಲ್ಲಿನ ಹವಾಕ್ಕೆ ಒಗ್ಗಿಸಿ ಬೆಳೆಯುವದರಲ್ಲಿ ಅನುಕೂಲವೇನು ಕಂಡುಬಂದಿಲ್ಲ.

ಇಂಡಿಯಾದಲ್ಲಿ ಹತ್ತಿ ಬೆಳೆಗೆ ಕಪ್ಪು ಭೂಮಿಯು ಸರ್ವೋತ್ತಮವಾದದ್ದು. ಕೆಂಪು ಭೂಮಿಯಲ್ಲಿ ಈ ಬೆಳೆಯನ್ನಿಡುವದು ಬಹಳ ಅಪರೂಪ. ಕಪ್ಪು ಭೂಮಿಯು ಬಹಳ ಆಳವಾಗಿಯೂ ಜಿಗಟಾಗಿಯೂ ಇದ್ದು ತೇವವನ್ನು ಬಹಳ ಕಾಲದವರೆಗೂ ಇಟ್ಟುಕೊಂಡಿರತಕ್ಕದ್ದಾದ್ದರಿಂದ ಇದಕ್ಕೆ ಅಷ್ಟು ಶ್ರೇಷ್ಠತೆ ಬಂದಿರುವಂತೆ ಕಾಣುತ್ತೆ.

ಗುಜರಾತ್, ಖಾಂಡಿಷ್, ದಕ್ಷಿಣಮಹಾರಾಷ್ಟ್ರ ಮತ್ತು ಬಿರಾರು ಪ್ರಾಂತ್ಯಗಳಲ್ಲಿ ಸ್ವಲ್ಪ ಹೆಚ್ಚು ಕಡಿಮೆ ಅಮೆರಿಕಾ ದೇಶದ ಕ್ರಮವೇ ನೆಲಗೊಂಡಿದೆ. ಅಲ್ಲಿ ಕೂರಿಗೆಗಳಲ್ಲಿ ಬೀಜ ಬಿತ್ತುತ್ತಾರೆ. ಮದರಾಸು ಪ್ರಾಂತ್ಯದಲ್ಲಾದರೋ ಬೀಜವನ್ನು ಚೆಲ್ಲುವ ಪದ್ಧತಿಯುಂಟು. ಕೂರಿಗೆಗಳಲ್ಲಿ ಬಿತ್ತುವದು ಉತ್ತಮ. ಹೇಗಂದರೆ, ನೇಗಿಲು ಅಥವಾ ಹಲುಬೆಯಿಂದ ಪೈರಿನಲ್ಲಿ ಕಳೆ ಹುಲ್ಲು ಇಲ್ಲದರೀತಿ ಮಾಡಬಹುದು. ಮತ್ತು ಗಿಡಗಳ ಸುತ್ತಲೂ ಆಗಾಗ್ಯೆ ಮಣ್ಣನ್ನು ಚನ್ನಾಗಿ ಕೆದಕಿದಂತಾಗುತ್ತದೆ. ಇದಕ್ಕೆ ವಿಶೇಷ ಖರ್ಚೂ ತಗಲುವದಿಲ್ಲ ಮತ್ತು ಗಿಡಗಳು ಚನ್ನಾಗಿ ಬೆಳೆಯುತ್ತವೆ. ಫಸಲು ಕೈಗೆ ಬರುವಕಾಲದಲ್ಲಿ ನೀರು ಕಟ್ಟುವದರಿಂದ ಪೈರು ಕೆಟ್ಟು ಎಳೆಯೂ ಬಲದಲ್ಲಿ ಕಡಿಮೆಯಾಗುವದೆಂದು ಅಜಮಾಯಿಷಿಗಳಿಂದ ಗೊತ್ತಾಗಿರುತ್ತೆ.

ಮುಖ್ಯವಾಗಿ ಈಗ ಏನು ಹೇಳಬಹುದಂದರೆ,—ಅನ್ಯದೇಶದ ಹತ್ತಿಗಳನ್ನು ಇಂಡಿಯಾ ದೇಶದ ಕೆಲವು ಅನುಕೂಲ ಪ್ರದೇಶಗಳಲ್ಲಿ ಮಾತ್ರ ಬೆಳೆಯಬಹುದು. ಮರಹತ್ತಿ ಸಾಗುವಳಿಯಲ್ಲಿ (Tree Cotton) ಪ್ರವ

ತ್ರಿನಸುವದೇನೂ ಅವಶ್ಯಕವಿಲ್ಲ. ಹತ್ತಿ ರಖಂಗಳನ್ನು ಚುನಾವಣೆ ಮತ್ತು ಸಂಯೋಗ (Crossing) ಈ ಕ್ರಮಗಳಿಂದ ಆಯಾಯ ಸ್ಥಳಗಳಲ್ಲಿ ಉತ್ತಮಪಡಿಸಬಹುದು. ರೈತರು ಮತ್ತು ವ್ಯಾಪಾರಸ್ತರು ಏಕೀಭವಿಸಿ ಹುಷಾರಿ ತೆಗದುಕೊಂಡರೆ ಈ ರಖಂಗಳು ಬೆರಿಕೆಯಾಗದೆ ಶುದ್ಧವಾಗಿಯೇ ಇರಲು ಸಾಧ್ಯ.

## Cassava. *

## ಮರಗೆಣಸು.

ಈ ಪತ್ರಿಕೆಯು ಕಳೆದ ಜುಲೈ ಮಾಹೆ ೧ನೆ ತಾರೀಖಿನ ೧೭ನೆ ನಂಬರು ಸಂಚಿಕೆಯಲ್ಲಿ ಕಣಗಿಲು ಗಿಡದ ಸಾಗುವಳಿ ವಿಚಾರವಾಗಿ ಪ್ರಸ್ತಾಪಿಸಿರುವದು ಸರಿಯಷ್ಟೆ. ಇದನ್ನು ರೂಢಿಯಲ್ಲಿ ವಿಶೇಷವಾಗಿ ಮರಗೆಣಸು ಎಂತಲೂ ಕರಿಯುತ್ತಾರೆ. ಇದನ್ನು ಸುಲಭವಾಗಿ ಬೆಳೆಯಬಹುದಲ್ಲದೆ ಇದರ ಗಡ್ಡೆಯು ಪುಷ್ಟಿಕರವಾದ ಆಹಾರ ಪದಾರ್ಥವಾಗಿರುತ್ತದೆ. ಅಕ್ಕಿ ರಾಗಿ ಮುಂತಾದ ಮುಖ್ಯಾಹಾರ ಜಿನಸಿಗಳ ಧಾರಣೆಯು ಏರಿರುವ ಕಾಲಗಳಲ್ಲಿ ಈ ಗೆಡ್ಡೆಯು ಬಹಳ ಉಪಯೋಗಪಡುತ್ತದೆ. ಈ ಗಡ್ಡೆಯನ್ನು ಅನಂತಶಯನದಲ್ಲಿ (Travancore) ವಿಶೇಷವಾಗಿ ಬೆಳೆಯುತ್ತಾರೆ. ಅಲ್ಲಿ ಹಳ್ಳಿಗಾಡುಗಳಲ್ಲಿ ಒಂದೊಂದು ಮನೆ ಹಿತ್ತಲಲ್ಲೂ ಹಾಕಿರುತ್ತಾರೆ. ಅಲ್ಲಿಯೂ ಜಿನಸಿಗಳ ದಾರಣೆವಾಸಿಯು ಹೆಚ್ಚಿದ್ದರೂ ಕೂಡ ಜನರು ನೆಮ್ಮದಿಯಾಗಿರುವದಕ್ಕೆ ಇದೇ ಕಾರಣವಂತೆ. ಎಕರೆಯೊಂದಕ್ಕೆ ೪ರಿಂದ ೨೦ ಟನ್ ಗಡ್ಡೆಯಾಗುತ್ತದೆ. ಅಂದರೆ ಸ್ವಲ್ಪ ಜಮೀನಿದ್ದರೆ ಒಂದು ಕುಟುಂಬಕ್ಕೆ ಸಾಕಾಗುವಷ್ಟು ಆಹಾರವು ವದಗುತ್ತದೆ. ಮಳೆ ಬಾರದಿರಬಹುದು ಅಕ್ಕಿ ಬಹಳ ತುಟ್ಟಿಯಾಗಬಹುದು, ನೀರು ಕೇವಲ ಕಡಮೆಯಾದರೂ ಕೂಡ ಗಡ್ಡೆಯು ಚನ್ನಾಗಿ ಆಗಿ ಸಮೃದ್ಧಿಯಾಗಿ ಸಿಕ್ಕುವ ಕಾರಣ ಇದನ್ನು ಧಾರಾಳವಾಗಿ ತಿಂದು ಜೀವಿಸಬಹುದು. ಗಡ್ಡೆಗಳನ್ನು ಬೇಯಿಸಿ, ಹೋಳುಗಳು ಮಾಡಿ, ಒಣಗಿಸಿ ಕೂಡಿಡಬಹುದು.

* ಸೆಂಟ್ರಲ್ ಪ್ರಾವಿನ್ಸಸ್ ಅಗ್ರಿಕಲ್ಚರಲ್ ಗಜೆಟ್.— ನವಂಬರು ೧೯೦೮.

ಇವನ್ನು ಕುಟ್ಟಿ ಅಥವಾ ಬೀಸಿ ಹಿಟ್ಟನ್ನು ಇತರ ಹಿಟ್ಟುಗಳೊಂದಿಗೆ ಬೆರೆಸಿ ತಿನ್ನಬಹುದು. ಈ ಹಿಟ್ಟು ಬಹಳ ರುಚಿಯಾಗಿಯೂ ಆರೋಗ್ಯಕರವಾಗಿಯೂ ಇರುತ್ತದೆ. ಈಗಿನ ಕಾಲಸ್ಥಿತಿಯಲ್ಲಿ ಇದರ ಉಪಯೋಗವನ್ನು ಅಷ್ಟುಷ್ಟೆಂದು ಹೇಳಲು ಆಗುವದಿಲ್ಲ.

ಇದು ಇಂಡಿಯಾ ದೇಶದ ಎಲ್ಲಾ ಪ್ರದೇಶಗಳಲ್ಲೂ ಮತ್ತು ದನಾಗಳಲ್ಲೂ ಬೆಳೆಯುತ್ತದೆ.

ಗಡ್ಡೆಗಳು ನೀರಿಲ್ಲದಿದ್ದರೂ ಒಣಗುವದಿಲ್ಲ. ಬಲಿತನಂತರ ಬಹಳ ಕಾಲದವರೆಗೂ ಭೂಮಿಯಲ್ಲೇ ಬಿಟ್ಟಿರಬಹುದು. ಇದಕ್ಕೆ ಗೆದ್ದಲು ತಗಲುವದಿಲ್ಲ.

ಮೇಲೆ ಹೇಳಿದ ರೀತಿ ಒಣಗಿಸಿದ ಗಡ್ಡೆಗಳನ್ನು ಒಂದು ವರುಷಕಾಲ ಇಟ್ಟಿರಬಹುದು.

ಇದರ ವ್ಯವಸಾಯ ಬಹಳ ಸುಲಭ ಮತ್ತು ಇದು ಆದಾಯಕರವಾದ ಫಸಲು.

ಇದು ವಿಶೇಷ ಪ್ರಚಾರದಲ್ಲಿರುವ ದೇಶಗಳಲ್ಲಿ ಕ್ಷಾಮ ಬಂದರೂ ಕೂಡ ಈ ಗಡ್ಡೆ ಒದಗುವದ್ದರಿಂದ ಜನಗಳು ಸಾಯುವದು ಬಹಳ ಕಡಿಮೆ.

---

## The Bengal Seeds, Manure and Implements Store. *

## ಬೀಜ, ಗೊಬ್ಬರ ಮತ್ತು ಮುಟ್ಟುಗಳ ಕೋಠಿ.

ಬಂಗಾಳಾ ಸರ್ಕಾರಿ ವ್ಯವಸಾಯ ಇಲಾಖೆಯವರು ಬಿತ್ತನೆ ಬೀಜಕ್ಕಾಗಿ ರೈತರು ಶ್ರಮಪಡುತ್ತಿದ್ದದ್ದನ್ನು ನೋಡಿ ಕಲ್ಕತ್ತಾ ಪಟ್ಟಣದಲ್ಲಿ ಮಧ್ಯ ರಾಷ್ಟ್ರವಾಗಿರುವ ಒಂದು ಸ್ಥಳದಲ್ಲಿ ಬಿತ್ತನೆ ಬೀಜಗಳು, ಗೊಬ್ಬರ ಮತ್ತು ವ್ಯವಸಾಯ ಮುಟ್ಟುಗಳ ಕೋಠಿಯೊಂದನ್ನು ಸ್ಥಾಪಿಸಿರುತ್ತಾರೆ. ಇದುವರಿವಿಗೂ ಸಾಮಾನ್ಯವಾಗಿ ವರ್ತಕರು ಪ್ರತಿ ಸಾಲ್ನಲ್ಲಿಯೂ ದವನು

---

* ಇಂಡಸ್ಟ್ರಿಯಲ್ ಇಂಡಿಯಾ.—ಸೆಪ್ಟಂಬರ್ ೧೯೦೪.

ಬೀಜಗಳನ್ನು ಆರಿಸಿ ತಿನ್ನುವದಕ್ಕಾಗಿ ಇತರ ಪ್ರದೇಶಗಳಿಗೆ ರಫ್ತುಮಾಡಿ, ಉಳಿದ ಕೀಳು ರಕಂ ಬೀಜಗಳನ್ನು ರೈತರಿಗೆ ವ್ಯವಸಾಯ ಕಾರ್ಯಕ್ಕಾಗಿ ಮಾರುತ್ತಿದ್ದರೇ ವಿನಹ ಆಹಾರ ಜಿನಸಿ ಮತ್ತು ಬಾಗಾಯಿತು ಪೈರುಗಳಿಗೆ ಉಪಯೋಗಪಡುವ ಒಳ್ಳೆ ಶುದ್ಧವಾದ ಹೊಸ ಬೀಜಗಳನ್ನು ಖಾತರಿಯಾಗಿ ಸರಬರಾಯಿ ಮಾಡುವದಕ್ಕೆ ಅನುಕೂಲತೆಗಳಿರಲಿಲ್ಲ. ಪ್ರಾಯಶಃ ಸಾಮಾನ್ಯವಾಗಿ ದೊರೆಯುವ ಬೀಜಗಳು ಬೆರಿಕೆಯಾಗಿಯೂ ಹಳೇದು ಮತ್ತು ಮುಗ್ಗಿದ್ದಾಗಿಯೂ ಇರುವದಲ್ಲದೆ ಜಾಗ್ರತೆ ಮೊಳೆಯುವದು ಸಹ ಕಮ್ಮಿ. ಇಂಥಾ ಬೀಜಗಳಿಂದ ಕೀಳು ಫಸಲೇ ಬರುತ್ತದೆ. ಹಾಲಿ ಸ್ಥಾಪಿತವಾಗಿರುವ ಸರ್ಕಾರಿ ಕೋಠಿಯಲ್ಲಿ ಗೌರ್ನ್ಮೆಂಟು ಫಾರಂ ಅಥವಾ ಇಲಾಖಾ ಮೇಲ್ವಿಚಾರಣೆಗೆ ಒಳಪಟ್ಟ ಇತರ ಪ್ರದೇಶಗಳಲ್ಲಿ ಬೆಳೆದ ಬೀಜಗಳೇ ರೈತರಿಗೆ ಸರಬರಾಯಿ ಮಾಡಲ್ಪಡುತ್ತವೆ. ಈ ಬೀಜಗಳನ್ನು ಮೊದಲು ಕಲ್ಕತ್ತಾಪಟ್ಟಣಕ್ಕೆ ರವಾನಿಸಿ ಅಲ್ಲಿ ಚನ್ನಾಗಿ ಶುದ್ಧಮಾಡಿ ಅಜಮಾಯಿಷಿ ಮಾಡಿ ಇಲಿ ಕೀಟ ನದ ರೀತಿ ಕಟ್ಟಿರುವ ಕಣಜಗಳಲ್ಲಿ ತುಂಬಿಟ್ಟನಂತರ ಹಂಚುತ್ತಾರೆ. ಬೀಜಗಳನ್ನು ಸ್ಥಳದ ಧಾರಣೆಗೇನೇ ಮಾರುತ್ತಾರೆ. ಒಳ್ಳೆ ಬೀಜಕ್ಕೆ ಬೇಕಾದಷ್ಟು ಗಿರಾಕಿ ಇದೆ ಎಂಬುವದನ್ನು ನಿದರ್ಶಿಸುವದೇ ಈ ಕೋಠಿಯ ಮುಖ್ಯೋದ್ದೇಶವಾಗಿರುತ್ತದೆ. ಈ ಉದ್ದೇಶವು ನೆರವೇರಿದನಂತರ ಈ ಭಾಗದಲ್ಲಿ ಜನರೇ ಉತ್ಸಾಹ ಶೀಲರಾಗಿ ಕೆಲಸ ಮಾಡಿ ಭಾರಿಯಾಗಿ ಕಾರ್ಯ ನಿರ್ವಹಿಸಬೇಕು. ಸರ್ಕಾರದವರೇನೋ ಬೀಜವನ್ನು ಉತ್ತಮಪಡಿಸಿ ಇಂಥಾ ಬೀಜಗಳನ್ನು ನಿದರ್ಶನ ಶಾಲೆಗಳಿಗೆ ಅಜಮಾಯಿಷಿಗಾಗಿ ಸರಬರಾಯಿ ಮಾಡುವ ಉದ್ದೇಶದಲ್ಲೇ ಇರುತ್ತಾರೆ. ಪರಂತು ಜನರೇ ಖಾಸಗಿಯಾಗಿ ಈ ಕೆಲಸದಲ್ಲಿ ಪ್ರವರ್ತಿಸಲು ಇದು ತಕ್ಕ ಸಮಯವಾಗಿರುತ್ತೆ. ಇತರ ದೇಶಗಳಲ್ಲಿ ಜಾತಿವಾರ್ ಬೀಜಗಳನ್ನು ಶುದ್ಧವಾಗಿಯೂ ನಂಬಿಕೆಯಾಗಿಯೂ ಸರಬರಾಯಿ ಮಾಡುವ ವ್ಯಾಪಾರಸ್ತರು ಇರುತ್ತಾರೆ. ಇವರು ಸದಾ ಕಾಲದಲ್ಲೂ ಚುನಾವಣೆ ಕ್ರಮಗಳಿಂದ ಬೀಜಗಳನ್ನು ಉತ್ತಮ ಪಡಿಸುವ ಕೆಲಸದಲ್ಲೇ ಇರುತ್ತಾರೆ, ಮತ್ತು ಇದಕ್ಕಾಗಿ ರಖಂವಾರ ವಿಂಗಡಿಸಿ ಶುದ್ಧಪಡಿಸುವ ಒಳ್ಳೆ ಎಂತ್ರಗಳನ್ನು ಉಪಯೋಗಿಸುವದಲ್ಲದೆ ಈ ಭಾಗದಲ್ಲಿ ಪೈಪೋಟಿಯಿಂದ ವ್ಯಾಪಾರ ಮಾಡುವದು ಉಂಟು. ಪಾಶ್ಚಾತ್ಯರಾ

ಜ್ಯಗಳಲ್ಲಿ ಶಾಸ್ತ್ರ ರೀತ್ಯಾ ಕೆಲಸ ಮಾಡಿ ಬೀಜಗಳನ್ನು ಉತ್ತಮಪಡಿಸು ತ್ತಾರೆ. ಮತ್ತು ಶಾಸ್ತ್ರ ಸಹಾಯದಿಂದಲೆ ವ್ಯವಸಾಯ ಕಾರ್ಯಗಳನ್ನು ನಿರ್ವಹಿಸುತ್ತಿರುವದ್ದರಿಂದ ಅಲ್ಲಿ ಈ ಉದ್ಯೋಗವು ದಿನೆ ದಿನೆ ಅಭಿವೃದ್ಧಿ ಗೆ ಬರುತ್ತಿದೆ.

ಇಲ್ಲಿನ ರೈತರು ವ್ಯವಸಾಯ ವಿಚಾರಗಳಲ್ಲಿ ನೂತನ ಕ್ರಮಗಳನ್ನು ಅನುಸರಿಸುವದರಲ್ಲಿ ಹಿಂಜರಿಯುತ್ತಾರೆ. ಆದರೆ ಈಚೆಗೆ ಈ ವಿಷಯದ ಲ್ಲಿ ಇವರಿಗೆ ಸ್ವಲ್ಪ ತಿಳುವಳಿಕೆ ಹೆಚ್ಚುತ್ತಿರುವದು. ಬಂಗಾಳಾ ಕೋಠಿ ಯಿಂದ ೮೯,೩೪೪ ಪೌಂಡು ಬಿತ್ತನೆ ಬೀಜಗಳು ೧೯೦೭ನೆ ಇಸವಿಯಲ್ಲಿ ಸ ರಬರಾಯಿ ಆಗಿರುತ್ತದೆಯಂತೆ. ಈ ಬಿತ್ತನೆ ಬೀಜಗಳ ಪೈಕಿ ಸೆಂಟ್ರಲ್ ಪ್ರಾವಿನ್ಸಸ್ ವ ಆಸ್ ಬಿತ್ತ (Aus) ಆಮನ್ ಬಿತ್ತ ಮುಂತಾದವುಗಳು ಒ ಳ್ಳೆ ರಕಂ ಬಿತ್ತಗಳೆಂದು ಅಜಮಾಯಿಷಿಗಳಲ್ಲಿ ತಿಳಿದುಬಂದಿರುತ್ತವೆ.

---

## Correspondence.—Water Lift.

## ಕರೆಸ್ಪಾನ್ಡೆನ್ಸ್.—ನೀರು ಎತ್ತುವ ಯಂತ್ರ.

ಮೈಸೂರು ಡಿಸ್ಟ್ರಿಕ್ಟ್ ನಾಗಮಂಗಲ ತಾಲ್ಲೂಕು ಬೆಳ್ಳೂರು ಗ್ರಾ ಮದಲ್ಲಿರುವ ದರ್ಜಿ ಶಿವಾಜಿ ಮಗ ಕಾಳೋಜಿ ಎಂಬುವರು ಒಂದು ಕಪಿಲೆ ಭಾವಿಯನ್ನು ತೆಗಸಿ ತರಿ ಸಾಗುವಳಿ ಮಾಡುವದಕ್ಕೆ ೨೦-೨೫ ಅಡಿ ಮೇ ಲಕ್ಕೆ ನೀರು ಎತ್ತಲು ಅನುಕೂಲವಾದ ಯಂತ್ರವನ್ನು ಅಗ್ರಿಕಲ್ಚರಲ್ ಇ ಲಾಖಾ ಮೂಲಕ ತರಿಸಿಕೊಡಬೇಕೆಂತಲೂ ಅದರ ಕ್ರಯ ಎಷ್ಟಾಗಬಹು ದೆಂತಲೂ ರೆವಿನ್ಯು ಕಮಿಷನರವರಿಗೆ ಕೇಳಿಕೊಂಡಿರುತ್ತಾರೆ.

ಈ ಭಾಗದಲ್ಲಿ ಕ್ರಯ ವಗೈರೆ ಅವಶ್ಯಕವಾದ ಸಂಗತಿಗಳನ್ನು ಇ ದೇ ಬೆಂಗಳೂರು ಶಿದ್ದಿಕಟ್ಟೆಯಲ್ಲಿರುವ ಮೆಕ್ಯಾನಿಕಲ್ ಇಂಜಿನಿಯರ್ಸ್ ಮೆ॥ ನರಸಿಂಹನ್ ಬ್ರದರ್ಸ್‌ಯವರಿಗೆ ಸೀದಾ ಬರೆದು ತಿಳಿದುಕೊಳ್ಳಬಹುದಾ ಗಿರುತ್ತೆ.

---

## The Soy Bean. *
## ಸೋಯಾ ಅವರೆ.

ಇದು ಸಾಲ್ ಫಸಲು. ಇದರ ಗಿಡ ಉದ್ದವಾಗಿ ಬೆಳೆಯುತ್ತದೆ, ಮತ್ತು ಗುಂಪಾಗಿ ಸಣ್ಣ ದಂಟಿನ ರೆಂಬೆಗಳನ್ನು ಬಿಡುತ್ತದೆ. ಇದರ ಎಲೆಗಳು ಬಹಳ ನೌರಾಗಿ ತ್ರಿದಳವಾಗಿದ್ದು ಹುವ್ವು ಸ್ವಲ್ಪ ಕಪ್ಪು ಅಥವಾ ಊದಾ ಛಾಯೆಯಾಗಿರುತ್ತದೆ. ಇದರ ಕಾಯಿಯಲ್ಲಿ ೨ರಿಂದ ೫ರ ವರೆಗೆ ಕಾಳು ಇರುತ್ತವೆ. ಮತ್ತು ಇದರ ಸಿಪ್ಪೆಯಮೇಲೆ ಕೂದಲಿನಹಾಗೆ ನೌರಾದ ಕೆಂಪು ಎಳೆಗಳಿರುತ್ತವೆ. ಕಾಳುಗಳು ಬಣ್ಣದಲ್ಲಿ ವೆತ್ಯಾಸಗಳಿರುತ್ತವೆ. ಕಾಲವು ಅನುಕೂಲವಾಗಿದ್ದರೆ ಗಿಡವು ನಾಲ್ಕು ಅಡಿಗಿಂತಲೂ ಹೆಚ್ಚಾಗಿ ಬೆಳೆಯುತ್ತದೆ. ಗಿಡವು ಹುಲುಸಾಗಿ ಬೆಳೆದು ಬಲಿಯುವದಕ್ಕೆ ತಕ್ಕ ಅನುಕೂಲ ಪ್ರದೇಶವಿದ್ದರೆ ಸಾಕು. ಒಳ್ಳೇ ಫಸಲು ಬರುವದರಲ್ಲಿ ಸಂಶಯವಿಲ್ಲ. ಇದರಲ್ಲಿ ಅನೇಕ ರಖಂಗಳುಂಟು. ಇದನ್ನು ಹಸರು ಗೊಬ್ಬರವಾಗಿ ಉಪಯೋಗಿಸಬೇಕಾದರೆ ,,ಮಿಡಿಯಂ ಲೇಟ್ ಬ್ಲ್ಯಾಕ್'' (Medium Late Black) ಎಂಬ ರಖಂ ಸರ್ವೋತ್ತಮ. ಈ ಬೆಳೆಯು ನೀರು ಕಡಿಮೆಯಾದರೂ ತಡಿಯುತ್ತದೆ ಮತ್ತು ನೀರು ಹೆಚ್ಚಾದರೂ ಕೆಡುವದಿಲ್ಲವಾಗಿ ತಿಳಿದುಬರುತ್ತೆ. ಬೇರು ಧಾರಾಳವಾಗಿ ಊರುವರೀತಿ ಜಮೀನನ್ನು ಹೆಂಟೆಗಳೊಡೆದು ಸಮಪಡಿಸಿಕೊಂಡು ಹಸನು ಮಾಡಿಕೊಳ್ಳಬೇಕು. ಬೀಜವನ್ನು ಕೂರಿಗೆಗಳಲ್ಲಿ ೨—೩ ಅಡಿ ಬಿಟ್ಟು ಬಿತ್ತಿದರೆ ಉತ್ತಮ. ಎಕರೆಗೆ ಒಂದು ಬುಷಲು ಬೀಜ ಸಾಕಾಗುತ್ತದೆ.

ಎಕರೆಯೊಂದಕ್ಕೆ ೨೫ ರಿಂದ ೪೦ ಬುಷಲು ಕಾಳು ಸರಾಸರಿ ಹುಟ್ಟುವಳಿಯಾಗುತ್ತೆ. ಕಾಲಸ್ಥಿತಿ ಅನುಕೂಲವಾಗಿದ್ದರೆ ಎಕರೆಯೊಂದಕ್ಕೆ ೧೦೦ ಬುಷಲು ಉತ್ಪತ್ತಿಯಾಗಬಹುದು. ಮಳೆ ಹೋಗಿ ಜಮೀನು ಸುಮಾರಾಗಿದ್ದಲ್ಲಿ ಎಕರೆಯೊಂದಕ್ಕೆ ಉತ್ಪತ್ತಿಯು ೧೫ ಬುಷಲ್ಲಿಗೂ ಕಮ್ಮಿ ಬೀಳಬಹುದು.

---

* ಅಗ್ರಿಕಲ್ಚರಲ್ ಅಂಡ್ ಇಂಡಸ್ಟ್ರಿಯಾಲ್ ಪ್ರೊಗ್ರೆಸ್-ನವಂಬರು ೧೯೦೭.

ಈ ಪೈರನ್ನು ಹಸರು ಗೊಬ್ಬರಕ್ಕಾಗಿ ಬೆಳೆದು ಉತ್ತನಂತರ ಜಮೀನಿಗೆ ತಕ್ಕಷ್ಟು ಸುಣ್ಣ ಹಾಕಬೇಕು. ಈ ಕಾಳು ಪುಷ್ಟಿಕರವಾದ ಆಹಾರ ಪದಾರ್ಥ.

---

## Government Proceedings.
## ಸರ್ಕಾರಿ ಹುಕುಂಗಳು.

### I

ಕಳೆದ ಜೂನ್ ತಿಂಗಳಲ್ಲಿ ಕೋಲಾರ ಡಿಸ್ಟ್ರಿಕ್ಟು ಚಿಂತಾಮಣಿ ಕಸಬಾದಲ್ಲಿ ನಡೆದ ವ್ಯವಸಾಯಕ, ಕೈಗಾರಿಕೆ ಮತ್ತು ದನಗಳ ಪ್ರದರ್ಶನದ ವಿಷಯದಲ್ಲಿ ಗೌರ್ನಮೆಂಟಿನವರು ಹುಕುಂ ಮಾಡಿರುವದೇನೆಂದರೆ,—ಇದು ಕೋಲಾರ ಡಿಸ್ಟ್ರಿಕ್ಟಿನಲ್ಲಿಯೇ ಮೊದಲನೇ ಪ್ರದರ್ಶನವಾಗಿರುತ್ತದೆ. ಡಿಸ್ಟ್ರಿಕ್ಟ್ ಬೋರ್ಡಿನಿಂದ ಕೊಡಲ್ಪಟ್ಟ ೨೫೦ ರೂಪಾಯಿಗಳು ವಿನಾಯಿಸಿ ಪ್ರದರ್ಶನ ಖರ್ಚಿಗೆ ಬೇಕಾದ ಬಾಕಿ ಮೊಬಲಗನ್ನೆಲ್ಲಾ ಬಹಳವಾಗಿ ಸ್ಥಳದ ಜನರೇ ಸೇರಿ ಚಂದಾ ಎತ್ತಿ ಒದಗಿಸಿದ್ದಲ್ಲದೆ ಪ್ರದರ್ಶನವನ್ನು ಭಾರಿಯಾಗಿ ಏರ್ಪಡಿಸಿದ್ದಂತೆ ಡೆಪ್ಯುಟಿ ಕಮಿಷನರವರ ರಿಪೋರ್ಟಿನಿಂದ ವ್ಯಕ್ತಪಡುತ್ತೆ. ಪ್ರದರ್ಶನವನ್ನು ನೋಡಲಿಕ್ಕೆ ಸುಮಾರು ೧೯,೦೦೦ ಜನರು ನೆರೆದಿದ್ದರು. ಮತ್ತು ೪೫೯ ಜನ ಪ್ರದರ್ಶಕರು ಬಂದಿದ್ದರು. ೧೨,೫೦೦ ರೂಪಾಯಿ ಬೆಲೆ ಬಾಳುವ ೧,೨೪೪ ನಾನಾತರದ ಸಾಮಾನುಗಳು ಪ್ರದರ್ಶಿಸಲ್ಪಟ್ಟಿದ್ದವು.

ಈ ಪ್ರದರ್ಶನದಲ್ಲಿ ಒಂದು ವಿಶೇಷವೇನೆಂದರೆ, ಒಂದು ಗ್ರಾಮದಿಂದ ಪ್ರದರ್ಶನ ವಸ್ತುಗಳನ್ನು ಎಗ್ಜಿಬಿಷನಿಗೆ ಕಳುಹಿಸುವದಕ್ಕೆ ಮೊದಲು ಇವುಗಳನ್ನು ಆಯಾಯ ಗ್ರಾಮಗಳಲ್ಲಿ ಸ್ಥಳದವರಿಗೆಲ್ಲಾ ಗೋಚರಕ್ಕೆ ಬರುವ ರೀತಿ ಕೆಲವು ಕಾಲ ಇಟ್ಟಿತ್ತು. ಇದರಿಂದ ಗ್ರಾಮಸ್ತರಿಗೆ ದಿಗರು ಗ್ರಾಮಗಳ ಪದಾರ್ಥಗಳನ್ನು ತಮ್ಮ ಪದಾರ್ಥಗಳೊಂದಿಗೆ ಹೋಲಿಸಿ ನೋಡಿ ತಾರತಮ್ಯಗಳನ್ನು ತಿಳಿದುಕೊಳ್ಳುವದಕ್ಕೆ ಅನುಕೂಲವಾಯಿತು. ಪ್ರದರ್ಶನವನ್ನು ಸಂಪೂರ್ಣವಾಗಿ ಸ್ಥಳದ ಪ್ರಮುಖ ವರ್ತಕ ಮತ್ತು ರೈತಾಪಿ ಜನರ ಐಕಮತ್ಯ ಮತ್ತು ಉತ್ಸಾಹದಿಂದ ನಡೆಸುವ ಏರ್ಪಾಟಿಟ್ಟದ್ದು ಬಹಳ ಶ್ಲಾಘನೀಯವಾಗಿರುತ್ತೆ ಮತ್ತು ಪ್ರದರ್ಶನ ಕಾರ್ಯ

ದಲ್ಲಿ ವಿಶೇಷ ಮುತವರ್ಜಿ ವಹಿಸಿದ ಕಮಿಟಿ ಪ್ರೆಸಿಡೆಂಟರು ಮತ್ತು ಮೆಂಬರುಗಳಿಗೂ ಮತ್ತು ಪ್ರದರ್ಶನವನ್ನು ನಿರ್ವಹಿಸುವದರಲ್ಲಿ ಸಹಾಯಮಾಡಿದ ಇತರರಿಗೂ ಸಹ ಸರ್ಕಾರದವರು ತಮ್ಮ ಸಂತೋಷವನ್ನು ತಿಳಿಸಬೇಕೆಂದು ಅಪೇಕ್ಷಿಸುತ್ತಾರೆ.—ಗೌ. ಪ್ರೊ. ನಂ. ಆರ್. ೯೨—೩—ಅಗ್ರಿ. ೧೦೭—೦೭—೪, ತಾ|| ೧೩—೧೧—೦೮.

---

## II

ಚನ್ನಪಟ್ಣ ತಾಲ್ಲೂಕು ತಗಚಿಕೆರೆ ಗ್ರಾಮದಲ್ಲಿ ಏಪ್ರೈಲ್ ಮಾಹೆ ಆಖೈರಿನಲ್ಲಿ ನಡೆಯುವ ಮಹದೇಶ್ವರ ಜಾತ್ರೆ ಕಾಲದಲ್ಲಿ ಒಂದು ದನಗಳ ಪ್ರದರ್ಶನವನ್ನು ನಡೆಸಬೇಕೆಂಬ ಏರ್ಪಾಟನ್ನು ಗೌರ್ನಮೆಂಟಿನವರು ಇದೇ ನವಂಬರು ೨೭ನೆ ತಾರೀಖಿನ ೪೯೮—೯ ಎಲ್. ಬಿ. ೪೭೦-೦೬-೪ನೆ ನಂಬರ್ ಪ್ರೊಸೀಡಿಂಗ್ಸಿನಲ್ಲಿ ಮಂಜೂರು ಮಾಡಿರುತ್ತಾರೆ.

---

## Occasional Notes.
## ವಿವಿಧ ವೃತ್ತಾಂತಗಳು.

೧. ಮುಸುಕಿನ ಜೋಳದ ತೆನೆಗಳಲ್ಲಿನ ಕಾಳುಗಳನ್ನು ಸುಲಿದುಕೊಂಡ ನಂತರ ಉಳಿಯುವ ದಿಂಡಿಗೆ ಈಚೆಗೆ ಗಿರಾಕಿ ಒದಗಿರುತ್ತದೆಯಂತೆ. ಈ ದಿಂಡನ್ನು ಸೌದೆಯಂತೆ ಒಲೆಗೆ ಮಾತ್ರ ಉಪಯೋಗಿಸುತ್ತಿಧಾರೆ. ಇದನ್ನು ತಕ್ಕ ಯಂತ್ರ ಸಹಾಯದಿಂದ ಪುಡಿಮಾಡಿ ಕಾಕಂಬಿಯೊಂದಿಗೆ ಬೆರಿಸಿ ದನಗಳಿಗೆ ಒಳ್ಳೆ ಮೇವಾಗುವಂತೆ ತಯಾರಿಸಲು ಸಾಧ್ಯವಾಗಿರುತ್ತೆ. ಮದರಾಸು ಮೇಲ್ ಪತ್ರಿಕೆ.—೨೪—೧೧—೦೮.

---

೨. ಕ್ಯಾಟಲ್ ಡಿಸೀಸಸ್ ಇನ್ಸ್ಪೆಕ್ಟರಾದ ಮೆ|| ಎನ್. ನರಸಿಂಹಯ್ಯಂಗಾರ್ರವರು ದನಕರುಗಳಿಗೆ ಸಾಮಾನ್ಯವಾಗಿ ಬರುವ ರೋಗಗಳು ಮತ್ತು ಅವುಗಳಿಗೆ ಚಿಕಿತ್ಸೆಯನ್ನು ಕುರಿತು "ಪಶು ವೈದ್ಯಸಂಗ್ರಹ" ವೆಂಬ ಒಂದು ಪುಸ್ತಕವನ್ನು ಬರೆದಿರುತ್ತಾರೆ. ಇದು ರೈತಾಬಿ ಜನರಿಗೂ ಮತ್ತು ಇತರರಿಗೂ ಸಹ ಬಹಳ ಉಪಯುಕ್ತವಾದದ್ದು. ಇದರ ಕ್ರಯ ೮ ಆಣೆ. ಈ ಪುಸ್ತಕವನ್ನು ತರಿಸಲಪೇಕ್ಷಿಸುವವರು ಬೆಂಗಳೂರಿನಲ್ಲಿರುವ ಗೌರ್ನಮೆಂಟು ಬುಕ್‌ಡಿಪೋ ಕ್ಯೂರೇಟರವರಿಗೆ ಸೀದಾ ಬರೆದು ತರಿಸಿಕೊಳ್ಳಬಹುದು.

---

೩. ಬಾಳೇನಾರು ಬಹಳ ಬಲವಾದದ್ದು. ಇದರಿಂದ ಮಾಡಿದ ಹಗ್ಗವು ಕತ್ತಾಳೆ ಅಥವ 'ಮಣಿಲಾ' ಸೆಣಬಿನ ಹಗ್ಗದಷ್ಟು ದಡವತ್ತಿಯಾಗಿರುತ್ತದೆ. ಇದಕ್ಕೆ ಬಗೆಬಗೆಯ ಬಣ್ಣವನ್ನು ಕೊಟ್ಟರೆ ಗಟ್ಟಿತರದ ಹೊಸೆದ ಹಗ್ಗಗಳು, ಜಮಖಾನೆಗಳು, ತಡಿಗಳು ಮತ್ತು ಕಿಟಕಿಗಳಿಗೆ ಹಾಕುವ ಮರೆಗಳನ್ನು ತಯಾರುಮಾಡಲು ಅನುಕೂಲಪಡುತ್ತದೆ ಮತ್ತು 'ರ್ಹ್ಯಾಮಿ' ಸೆಣಬಷ್ಟು ಉಪಯೋಗಕರವಾಗಬಹುದು. ಇಷ್ಟರಲ್ಲೇ ಬಾಳೆನಾರಿನಿಂದ ಬಟ್ಟೆ ಬರೆಗಳನ್ನು ತಯಾರುಮಾಡಲಿಕ್ಕೂ ಸಾಧ್ಯವಾಗದಿರಲಾರದು. ಅಗ್ರಿಕಲ್ಚರಲ್ ಮತ್ತು ಇಂಡಸ್ಟ್ರಿಯಲ್ ಪ್ರೋಗ್ರೆಸ್.—ನವಂಬರ್ ೧೯೦೪.

---

೪. ಇಂಡಿಯಾ ದೇಶದಲ್ಲಿ ಸಾಮಾನ್ಯವಾಗಿ ಕೆಂಪು ಗೆಣಸು ಮತ್ತು ಬಿಳಿಗೆಣಸು ಈರೀತಿ ಎರಡು ರಖಂ ಗೆಣಸುಗಳುಂಟು. ಗೆಣಸನ್ನು ಊಟದಲ್ಲಿ ಎಲ್ಲಾ ಜಾತಿಯವರು ಉಪಯೋಗಿಸುತ್ತಾರೆ. ಗೆಣಸಿನ ಬಳ್ಳಿಗಳು ಸೊಪ್ಪು ದನಕರುಗಳಿಗೆ ಒಳ್ಳೆ ಮೇವಾಗುತ್ತವೆ. ಸೊಪ್ಪು ಎಳೇದಾಗಿರುವಾಗ ತರಕಾರಿಯಾಗಿ ಉಪಯೋಗಪಡುತ್ತದೆ. ಬಂಗಾಳಾ ಪ್ರಾಂತ್ಯದಲ್ಲಿ ಎಕರೆಯೊಂದಕ್ಕೆ ಸುಮಾರು ೬೦ರಿಂದ ೯೦ ಮಣ ($82\frac{2}{7}$ ಪೌಂಡು ತೂಕದ ಮಣ) ಗಡ್ಡೆ ಉತ್ಪತ್ತಿಯಾಗುತ್ತೆ. ಗೆಣಸು ತಕ್ಕಮಟ್ಟಿಗೆ ಫಲವತ್ತಾದ ಮರಳು ಮಿಶ್ರವಾದ ಒಂಡು ಭೂಮಿಯಲ್ಲಿ ಬೆಳೆಯುತ್ತದೆ. ಅಡಿ ನೆಲವು ಹಳದಿ ಜೇಡಿಯಾಗಿದ್ದಲ್ಲಿ ಫಕ್ತ ಮರಳು ಭೂಮಿಯಲ್ಲಿಯೂ ಸಹ ಅನೇಕವಾಗಿ ಬೆಳೆಯುತ್ತಾರೆ. ಪರಂತು ಜಮೀನು ಮಾತ್ರ ನೀರು ನಿಲ್ಲದೆ ಚನ್ನಾಗಿ ಬಸಿದು ಹೋಗುವಂತೆ ಇರಬೇಕು. ಭೂಮಿಯಲ್ಲಿ ೬-೮ ಅಂಗುಲದಷ್ಟು ಮೇಲ್ಮಣ್ಣು ಇರಬೇಕು. ಅಡಿನೆಲವು ಹಾಕಿದ ಗೊಬ್ಬರವು ಹಲಾಕಾಗದೆ ಭೂಮಿ ಮೇಲೆ ಬಿದ್ದ ಹೆಚ್ಚು ನೀರೆಲ್ಲಾ ಬಸದು ಹೋಗುವ ರೀತಿ ಇರಬೇಕು. ಬಹಳ ಆಳ ಪುಡಿಪುಡಿ ಮಣ್ಣು ಇದ್ದರೂ ಒಳ್ಳೇದಲ್ಲ. ಏಕೆಂದರೆ, ಗಡ್ಡೆಗಳು ಉದ್ದವಾಗಿಯೂ ಡೊಂಕಾಗಿಯೂ ಬೆಳೆದು ವ್ಯಾಪಾರಕ್ಕೆ ಅಷ್ಟು ಲಾಯಖಾಗಿರುವದಿಲ್ಲ.—ಇಂಡಿಯನ್ ಟ್ರೇಡ್ ಜರ್ನಲ್, ೩—೯—೧೯೦೪.

V. B. Soobbiah & Sons, Printers, Bangalore—1905.

THE MYSORE

# REVENUE & AGRICULTURAL GAZETTE.

ವಾಲ್ಯುಂ ೩.] ಮಂಗಳವಾರ, ೧೫ನೆ ಡಿಶಂಬರ್ ೧೯೦೮. [ನಂ. ೪.

## *Contents.* ಅನುಕ್ರಮಣಿಕೆ.



## The King's Proclamation.

## ಶ್ರೀಮದಿಂಡಿಯಾ ಚಕ್ರವರ್ತಿಯವರ ಇಸ್ತಿಹಾರುನಾಮೆ.

ಇಂಡಿಯಾದೇಶದ ರಾಜ್ಯಭಾರವನ್ನು ಬ್ರಿಟಿಷ್ ಸರ್ಕಾರದವರು ವಹಿಸಿಕೊಂಡ ಲಾಗಾಯಿತು ಐವತ್ತು ವರ್ಷಗಳು ಸಂದ ಮಹೋತ್ಸವ ಕಾಲದ

ಲ್ಲಿ ಘನವನ್ನು ಹೊಂದಿದ ಇಂಡಿಯಾ ಚಕ್ರವರ್ತಿಯವರು ಇಂಡಿಯಾದೇಶದ ರಾಜರುಗಳಿಗೂ ಪ್ರಜೆಗಳಿಗೂ ದಯಪಾಲಿಸಿದ ಇದರಡಿ ಕಂಡ ನಿರೂಪವನ್ನು ಈ ಮೂಲಕ ಸಮಸ್ತರ ತಿಳಿವಳಿಕೆಯ ಬಗ್ಗೆ ಪ್ರಕಟಿಸಿ ಇದೆ.

## ಘನವನ್ನು ಹೊಂದಿದ ಶ್ರೀಮದಿಂಡಿಯಾ ಚಕ್ರವರ್ತಿಯವರು ಇಂಡಿಯಾದೇಶದ ರಾಜರುಗಳಿಗೂ ಪ್ರಜೆಗಳಿಗೂ ಕಳುಹಿಸಿಕೊಟ್ಟ ಇಸ್ತಿಹಾರುನಾಮೆ.

೧. ನಮ್ಮ ಪ್ರಿಯ ಮಾತೃಶ್ರೀಯವರಾದ ಮತ್ತು ನಮಗೆ ಮುಂಚೆ ಈ ರಾಜ್ಯದ ಸಿಂಹಾಸನಾರೂಢರಾಗಿ ಇದ್ದ ಪರಮಪೂಜ್ಯರಾದ ವಿಕ್ಟೋರಿಯಾ ಮಹಾರಾಜ್ಞಿಯವರು ಮೊದಲು ಈಸ್ಟ್ ಇಂಡಿಯಾ ಕಂಪೆನಿಯವರ ಆಡಳಿತೆಕ್ಕೆ ಒಳಪಟ್ಟಿದ್ದ ಪ್ರದೇಶಗಳ ರಾಜ್ಯಭಾರವನ್ನು ಪಾರ್ಲಿಮೆಂಟ್ ಮಹಾಸಭೆಯವರ ಸಲಹೆಯಿಂದಲೂ ಅನುಮತಿಯಿಂದಲೂ ವಿಶೇಷವಾದ ಅನೇಕ ಕಾರಣಗಳಮೇಲೆ ವಹಿಸಿಕೊಂಡು ಇಂದಿಗೆ ಐವತ್ತು ವರ್ಷಗಳಾದವು. ಆಗ ವಿಧಿಪೂರ್ವಕವಾಗಿ ವಹಿಸಿಕೊಂಡ ಈ ಮಹತ್ಕಾರ್ಯದ ಸ್ಮರಣಾರ್ಥವಾಗಿ ಇಂಡಿಯಾದೇಶದ ರಾಜರುಗಳಿಗೂ ಪ್ರಜೆಗಳಿಗೂ ವಂದನಾಪೂರ್ವಕವಾಗಿ ಈ ಸಂದೇಶವನ್ನು ಕಳುಹಿಸಲು ಈ ವಾರ್ಷಿಕೋತ್ಸವಕಾಲವು ಸಕಾಲವಾಗಿರುತ್ತದೆಂದು ನಾವು ಭಾವಿಸುತ್ತೇವೆ. ಪುರಾತನದಿಂದ ಬಂದಿರುವ ನಿಮ್ಮ ಇತಿಹಾಸದಲ್ಲಿ ಅರ್ಧಶತಮಾನವೆಂಬುವುದು ಅತ್ಯಲ್ಪಕಾಲವೇ ಸರಿ ; ಆದರೂ ಈ ದಿನಕ್ಕೆ ಆಖೈರಾಗುವ ಅರ್ಧಶತಮಾನವು ಚರಿತ್ರಾರ್ಹವಾದ ಅನೇಕಾನೇಕ ಶಕಗಳೆಂಬ ಸಾಗರದೊಳಗೆ ಅತ್ಯಂತ ತೇಜೋಮಯವಾದ ಒಂದು ಸೀಮೆಯ ಗುರುತಿನಂತೆ ಶೋಭಿಸುವುದು. ಇಂಡಿಯಾದೇಶದ ಪ್ರಭುತ್ವವನ್ನು ಇಂಗ್ಲೆಂಡಿನ ರಾಜರೇ ಸಾಕ್ಷಾತ್ತಾಗಿ ವಹಿಸಿಕೊಂಡ ಬಗ್ಗೆ ಇಸ್ತಿಹಾರ್ನಾಮೆಯನ್ನು ಪ್ರಕಟಿಸಿದಲಾಗಾಯಿತು ಇಂಡಿಯಾದೇಶವು ಬ್ರಿಟಿಷ್‌ನವರ ಏಕಚ್ಛತ್ರಾಧಿಪತ್ಯಕ್ಕೆ ಒಳಪಟ್ಟಂತಾಗಿ ಒಂದು ಹೊಸ ಶಕೆಯೇ ಆರಂಭವಾದಂತಾಯಿತು. ರಾಜ್ಯಭಾರನಿರ್ವಹಣಕಾರ್ಯವು ಕಷ್ಟಸಾಧ್ಯವಾಯಿತು ; ಮತ್ತು ಅಭಿವೃದ್ಧಿಯ ಕಾರ್ಯಗಳು ನಿದಾನವಾಗಿ ನಡೆಯುತ್ತಿದ್ದುದಾಗಿ ಕೆಲವುಸಾರಿ ತೋರಬಂದಿರಬಹುದು ; ಆದರೆ ನಾನಾಬಗೆಯ ಜನಾಂಗಗಳಿಂದ ಕೂಡಿದ ಸುಮಾರು

ಮೂವತ್ತು ಕೋಟಿ ಪ್ರಜೆಗಳನ್ನು ಬ್ರಿಟಿಷ್ ಜನರ ತಹಬಂದಿಗೆ ಒಳಪಡಿಸಿಕೊಳ್ಳುವ ಕಾರ್ಯವು ದೃಢವಾಗಿಯೂ ಅವಿಚ್ಛಿನ್ನವಾಗಿಯೂ ನಡೆದುಬಂದಿದೆ. ಕಳೆದ ೫೦ ವರುಷಗಳಲ್ಲಿ ನಡೆಸಿರುವ ಸಾಹಸಕಾರ್ಯಗಳನ್ನು ಸ್ಮರಣೆಮಾಡಿಕೊಂಡಲ್ಲಿ ಎಲ್ಲವೂ ನಿರ್ದುಷ್ಟವಾಗಿಯೂ ನ್ಯಾಯಪರಾಯಣವಾಗಿಯೂ ನಡೆದಿವೆ ಎಂಬುವುದರಲ್ಲಿ ಸಂದೇಹವಿಲ್ಲ.

೨. ಮನುಷ್ಯಮಾತ್ರದವರ ರಾಜ್ಯಭಾರದಲ್ಲಿ ಸರ್ವಕಾಲದಲ್ಲಿಯೂ ಸರ್ವದೇಶಗಳಲ್ಲಿಯೂ ಯಾವ ಯಾವ ಕಷ್ಟಗಳು ಪ್ರಾಪ್ತವಾಗಬಹುದೋ ಅಂಥಾ ಕಷ್ಟಗಳು ನಮ್ಮ ಆಡಳಿತದಲ್ಲಿಯೂ ಆಗಿಂದಾಗ್ಯೆ ಪ್ರಾಪ್ತವಾಗಿಯೇ ಇವೆ. ಅವುಗಳನ್ನು ಬ್ರಿಟಿಷ್‌ರಾಜ್ಯದ ಅಧಿಕಾರಿಗಳು ವಿಶೇಷ ಶ್ರಮದಿಂದಲೂ, ಧೈರ್ಯದಿಂದಲೂ, ತಾಳ್ಮೆಯಿಂದಲೂ, ದೀರ್ಘಾಲೋಚನೆಯಿಂದಲೂ, ದೃಢಸಂಕಲ್ಪದಿಂದಲೂ ತುಂಬಾ ಸಾಹಸಪಟ್ಟು ಪರಿಹಾರ ಮಾಡಲು ಯತ್ನಿಸಿರುತ್ತಾರೆ. ಅಲ್ಲಲ್ಲಿ ತಪ್ಪುಗಳೇನಾದರೂ ಸಂಭವಿಸಿದ್ದಪಕ್ಷ ಅವುಗಳನ್ನು ನಮ್ಮ ಸರ್ಕಾರದ ಮುಖ್ಯಾಧಿಕಾರಿಗಳು ಸಾಧ್ಯವಾದಷ್ಟು ಶ್ರಮಪಟ್ಟು ತಮ್ಮ ಕಷ್ಟನಷ್ಟಗಳನ್ನು ಲಕ್ಷ್ಯೀಕರಿಸದೆ ಕ್ರಮಪಡಿಸಿರುತ್ತಾರೆ. ಅಕೃತ್ಯಗಳು ನಡೆದಿವೆ ಎಂದು ದೃಢಪಟ್ಟ ಸಂದರ್ಭಗಳಲ್ಲೆಲ್ಲಾ ಸರ್ಕಾರದ ಅಧಿಕಾರಿಗಳು ತುಂಬಾ ಸಾಹಸದಿಂದ ತಕ್ಕ ಪರಿಹಾರಗಳನ್ನು ಮಾಡಿರುತ್ತಾರೆ.

೩. ದುರ್ಭಿಕ್ಷದ ಮತ್ತು ಪ್ಲೇಗಿನ ಹಾವಳಿಗಳನ್ನು ತಪ್ಪಿಸುವದು ಯಾವ ರಾಜತಂತ್ರದಿಂದಲೂ ಸಾಧ್ಯವಾಗಲಾರದು ; ಆದರೂ ಸ್ವಭಾವಸಿದ್ಧವಾಗಿ ಪ್ರಾಪ್ತವಾಗುವ ಈ ಭಯಂಕರವಾದ ವಿಪತ್ತುಗಳನ್ನು ಉಪಶಮನ ಮಾಡುವ ಭಾಗದಲ್ಲಿ ಅನುಭವಶಾಲಿಗಳಾದ ಅಧಿಕಾರಿಗಳು ತಮ್ಮ ಬುದ್ಧಿಕುಶಲತೆಯನ್ನೂ ಆಸಕ್ತಿಯನ್ನೂ ಸಾಧ್ಯವಾದಮಟ್ಟಿಗೂ ವಿನಿಯೋಗಿಸಿರುತ್ತಾರೆ. ನಿಮ್ಮ ಪೂರ್ವಚರಿತ್ರೆಯನ್ನೆಲ್ಲಾ ನೋಡಿದರೆ ಇಷ್ಟು ದೀರ್ಘಕಾಲ ನಿಮ್ಮ ದೇಶದೊಳಗೆ ನೀವು ಹಿಂದೆ ಯಾವಾಗಲೂ ಯುದ್ಧದಿಂದುಂಟಾಗುವ ಕಷ್ಟನಷ್ಟಗಳನ್ನೂ ಅನಾಹುತಗಳನ್ನೂ ತಪ್ಪಿಸಿಕೊಂಡಿರಲಿಲ್ಲ. ನಿಮ್ಮ ದೇಶದೊಳಗೆ ಅವಿಚ್ಛಿನ್ನವಾದ ನೆಮ್ಮದಿಯು ನೆಲೆಗೊಂಡಿರುತ್ತದೆ.

೪. ಶ್ರೀ ವಿಕ್ಟೋರಿಯಾ ಮಹಾರಾಜ್ಞಿಯವರು ೧೮೫೮ನೆ ವರ್ಷದಲ್ಲಿ ನಿಮಗೆ ದಯಪಾಲಿಸಿದ ಶಾಸನದಲ್ಲಿ (Charter) ಇಂಡಿಯಾದೇಶದ ವ್ಯವಸಾಯ ಮೊದಲಾದ ಕೆಲಸಗಳು ನಿರಾತಂಕವಾಗಿ ನಡೆಯುವಂತೆ ಪ್ರೋತ್ಸಾಹ ಕೊಡಬೇಕೆಂತಲೂ, ಜನಸಾಮಾನ್ಯಕ್ಕೆ ಪ್ರಯೋಜನಕರವಾದ ಮತ್ತು ಅವರ ಏಳಿಗೆಗೆ ಆಕರವಾದ ಕಾರ್ಯಗಳನ್ನು ಅಭಿವೃದ್ಧಿಪಡಿಸಬೇಕೆಂತಲೂ, ಅಲ್ಲಿನ ನಮ್ಮ ಪ್ರಜೆಗಳಿಗೆಲ್ಲಾ ಪ್ರಯೋಜನವಾಗುವಂತೆ ರಾಜ್ಯಭಾರ ಮಾಡಬೇಕೆಂತಲೂ ತಮ್ಮ ಮನಃಪೂರ್ವಕವಾದ ಕೋರಿಕೆಯಾಗಿರುವುದೆಂದು ಬಹು ಉದಾರವಾಗಿ ಅಭಯವನ್ನು ಕೊಟ್ಟರು. ನಿಮ್ಮ ಸುಖಸಂಪತ್ತುಗಳನ್ನೂ ಶ್ರೇಯೋಭಿವೃದ್ಧಿಯನ್ನೂ ಹೆಚ್ಚಿಸುವುದಕ್ಕೋಸ್ಕರ ತುಂಬಾ ಬುದ್ಧಿಕುಶಲತೆಯಿಂದಲೂ ಸಾಹಸದಿಂದಲೂ ಕಲ್ಪಿಸಿರುವ ಅದ್ಭುತವಾದ ಏರ್ಪಾಡುಗಳು ಮೇಲ್ಕಂಡ ದಯಾಪೂರಿತವಾದ ವಾಗ್ದಾನವನ್ನು ಎಷ್ಟು ಉತ್ಸಾಹದೊಡನೆ ನೆರವೇರಿಸಿರುತ್ತೇವೆಂಬುದಕ್ಕೆ ಪ್ರಪಂಚಕ್ಕೆಲ್ಲಾ ಸಾಕ್ಷೀಭೂತವಾಗಿವೆ.

೫. ಸಾಮಂತರಾಜರುಗಳ ಮತ್ತು ರಾಜ್ಯಭಾರ ನಡೆಸುವ ಪ್ರಭುಗಳ ಹಕ್ಕು ಬಾಧ್ಯತೆಗಳನ್ನೂ ಸ್ವಾತಂತ್ರ್ಯಗಳನ್ನೂ ಗೌರವಿಸಿ ಕಾಪಾಡಿಕೊಂಡು ಬಂದಿರುತ್ತದೆ. ಅವರುಗಳಲ್ಲಿರುವ ರಾಜಭಕ್ತಿಯು ಯಾವಾಗಲೂ ನಿಶ್ಚಲವಾಗಿರುತ್ತದೆ. ನಮ್ಮ ಪ್ರಜಾವರ್ಗಕ್ಕೆ ಸೇರಿದ ಯಾವನೊಬ್ಬನಿಗೂ ಆತನ ಮತಭಕ್ತಿಯ ಅಥವಾ ಆಚಾರದ ವಿಷಯದಲ್ಲಿ ಪಕ್ಷಪಾತವನ್ನಾಗಲಿ ಉಪದ್ರವವನ್ನಾಗಲೀ ಮನೋವ್ಯಥೆಯನ್ನಾಗಲಿ ಉಂಟುಮಾಡಿರುವುದಿಲ್ಲ. ಸಮಸ್ತ ಜನರಿಗೂ ನ್ಯಾಯವಿಧಿಗನುಸಾರವಾದ ಸಂರಕ್ಷಣೆಯು ಸಮವಾಗಿ ದೊರಕಿರುತ್ತದೆ. ಆ ನ್ಯಾಯವಿಧಿಗಳನ್ನು ಜಾತಿ ಅಥವಾ ಮತದ ಕಟ್ಟಳೆಗಳಿಗಾಗಲೀ ನಿಮ್ಮ ನಾಗರಿಕತೆಯಲ್ಲಿ ನೆಲೆಗೊಂಡಿರುವ ಅರ್ಷೇಯವಾದ ಆಚಾರ ವ್ಯವಹಾರಗಳಿಗಾಗಲೀ ಯಾವುದೊಂದು ಅವಮರ್ಯಾದೆಯೂ ಆಗದಂತೆ ಜಾರಿಯಲ್ಲಿ ತಂದಿರುತ್ತದೆ. ಅವುಗಳನ್ನು ಸುಲಭವಾಗಿ ಆಚರಣೆಗೆ ತರುವಂತೆ ಮಾಡಿರುವುದಲ್ಲದೆ ಅವುಗಳ ಉದ್ದೇಶವನ್ನು ನೆರವೇರಿಸುವುದಕ್ಕೆ ಬೇಕಾದ ವಿಧಾನಗಳನ್ನು ಪುರಾತನ ಜನಾಂಗದವರಾಗಿಯೂ ಯುಕ್ತಿಗೆ ನವೀನ ಮಾರ್ಗಗಳನ್ನು ಸ್ವಲ್ಪಸ್ವಲ್ಪ ಅವಲಂ

ಬಿಸುವವರಾಗಿಯೂ ಇರುವ ನಿಮ್ಮಗಳಿಗೆ ಅನುಕೂಲವಾಗಿರುವಂತೆ ಅವುಗಳನ್ನು ಏರ್ಪಡಿಸಿದೆ.

೬. ಅಸಂಖ್ಯಾತವಾದ ಪ್ರಜಾಸಮುದಾಯವು ಈಗಲೂ ಇನ್ನು ಮುಂದೆ ಬಹುಕಾಲದವರೆಗೂ ಅಭಿವೃದ್ಧಿಗೆ ಬರುವಂತೆ ಪರಿಪಾಲನೆ ಮಾಡುವ ಭಾರವು ನಮ್ಮ ಸರಕಾರಕ್ಕೆ ಸೇರಿರುವುದರಿಂದ ನ್ಯಾಯವಾದ ಕಾರಣವಾಗಲೀ ಘನತರವಾದ ಉದ್ದೇಶವಾಗಲೀ ಇಲ್ಲದೆ ಫಿತೂರಿ ನಡೆಸುವ ತಕ್ಸೀರ್‌ದಾರರನ್ನು ಕಠಿಣವಾಗಿ ಶಿಕ್ಷಿಸಿ ಅಡಗಿಸಬೇಕಾದುದು ನಮ್ಮ ಮುಖ್ಯ ಕರ್ತವ್ಯವಾಗಿರುವುದು. ರಾಜಭಕ್ತಿ ವಿಶ್ವಾಸಯುಕ್ತರಾದ ನಮ್ಮ ಇಂಡಿಯಾದೇಶದ ಪ್ರಜಾವರ್ಗಕ್ಕೆ ಈ ಫಿತೂರಿಗಳು ಹೇಯವಾಗಿರುವುದೆಂದು ನಾವು ಬಲ್ಲೆವು. ಮತ್ತು ಪ್ರಜೆಗಳಲ್ಲಿ ಕ್ಷೇಮವೂ ನೆಮ್ಮದಿಯೂ ಶಾಶ್ವತವಾಗಿ ನೆಲೆಗೊಳ್ಳುವಂತೆ ಮಾಡಬೇಕಾದುದು ನಮ್ಮ ಕರ್ತವ್ಯವಾಗಿರುವುದರಿಂದ ಈ ಫಿತೂರಿಗಳು ನಡೆದ ಮಾತ್ರಕ್ಕೇ ನಾವು ಆ ಕರ್ತವ್ಯವನ್ನು ನಡೆಸದೆ ಬಿಡಲಾರೆವು.

೭. ಚರಿತ್ರಾರ್ಹವಾದ ಈ ವಾರ್ಷಿಕೋತ್ಸವ ಕಾಲದಲ್ಲಿ ನಾವು ರಾಜಯೋಗ್ಯವಾದ ಕ್ಷಮಾಪಣೆಯನ್ನು ತೋರಿಸದೆ ಹೋಗಬಾರದೆಂಬ ಅಭಿಪ್ರಾಯದಿಂದ ಹಿಂದೆ ೧೯೦೩ನೇ ಇಸವಿಯಲ್ಲಿ ನಡೆದ ನಮ್ಮ ಪಟ್ಟಾಭಿಷೇಕಸಂಬಂಧವಾದ ದರ್ಬಾರ್ ಕಾಲದಲ್ಲಿ ಅಪ್ಪಣೆ ಕೊಟ್ಟ ಪ್ರಕಾರವೇ ಕಾನೂನಿಗೆ ವಿರೋಧವಾಗಿ ತಕ್ಸೀರ್ ನಡೆಸಿದ ಬಗ್ಗೆ ನಮ್ಮ ಕೋರ್ಟುಗಳವರಿಂದ ಶಿಕ್ಷೆ ವಿಧಿಸಲ್ಪಟ್ಟವರ ಪೈಕಿ ಕೆಲವರ ಶಿಕ್ಷೆಯನ್ನು ಮಾಫ್‌ಮಾಡುವಂತೆಯೂ ಕೆಲವರ ಶಿಕ್ಷೆಯನ್ನು ಯಥೋಚಿತವಾಗಿ ಕಮ್ಮಿ ಮಾಡುವಂತೆಯೂ ಹುಕುಂ ಕೊಟ್ಟಿರುತ್ತೇವೆ; ಅಂಥಾ ತಕ್ಸೀರುದಾರರು ಈ ಕ್ಷಮಾಪಣೆಯನ್ನು ಸ್ಮರಣೆಯಲ್ಲಿಟ್ಟುಕೊಂಡು ಇನ್ನು ಮುಂದೆ ಅಪರಾಧಗಳನ್ನು ಮಾಡದೆ ಸಚ್ಚರಿತರಾಗಿರಬೇಕೆಂದು ಅಪೇಕ್ಷಿಸುತ್ತೇವೆ.

೮. ದೊಡ್ಡ ದೊಡ್ಡ ಸರ್ಕಾರಿ ಹುದ್ದೆಗಳಿಗೆ ಇಂಥಿಂಥಾ ಜನಾಂಗಕ್ಕೆ ಸೇರಿದವರನ್ನು ಮಾತ್ರವೇ ನೇಮಕ ಮಾಡಬೇಕೆಂಬ ಭೇದವನ್ನು ಸಂಪೂರ್ಣವಾಗಿ ತಪ್ಪಿಸುವ ಬಗ್ಗೆ ಆಗಿಂದಾಗ್ಗೆ ಪ್ರಯತ್ನ ನಡೆಸುತ್ತಿದ್ದೇವೆ. ಬುದ್ಧಿವಂತರೂ ಸಮರ್ಥರೂ ಆದ ನಮ್ಮ ಇಂಡಿಯಾದೇಶದ ಪ್ರಜೆಗಳಲ್ಲಿ

ವಿದ್ಯಾಭ್ಯಾಸವು ಇನ್ನೂ ಅಧಿಕವಾಗಿ ಪ್ರಚಾರಕ್ಕೆ ಬಂದು, ಅವರಿಗೆ ಇನ್ನೂ ಹೆಚ್ಚು ಅನುಭವವುಂಟಾಗಿ, ಅವರ ಜವಾಬ್ದಾರಿಯನ್ನು ಅವರು ಇನ್ನೂ ಚೆನ್ನಾಗಿ ತಿಳಿದುಕೊಳ್ಳುತ್ತಾ ಬಂದಹಾಗೆಲ್ಲಾ ಮೇಲ್ಕಂಡ ಭೇದವನ್ನು ಇನ್ನುಮುಂದೆ ಸುತರಾಂ ತಪ್ಪಿಸಬೇಕೆಂದು ನಾವು ಉದ್ದೇಶಿಸಿರುತ್ತೇವೆ ಯಲ್ಲದೆ ಅದೇ ಮೇರೆಗೆ ತಪ್ಪಿಸಬಹುದೀತೆಂದು ದೃಢವಾಗಿ ನಂಬುತ್ತೇವೆ.

೯. ಪ್ರಜಾಪ್ರತಿನಿಧಿಗಳ ಮೂಲಕ ಕಾರ್ಯಭಾರ ನಡೆಸುವ ಪದ್ಧತಿ ಯನ್ನು ಇಂಡಿಯಾ ದೇಶದಲ್ಲಿ ಮೊದಲಿನಿಂದಲೂ ಕ್ರಮವಾಗಿ ಜಾರಿಗೆ ತಂ ದಿರುತ್ತದೆ. ಈಗ ಆ ಪದ್ಧತಿಯನ್ನು ಇನ್ನೂ ವಿಸ್ತಾರವಾಗಿ ಪ್ರಚಾರ ಕ್ಕೆ ತರುವುದು ಯುಕ್ತವೆಂಬದಾಗಿ ನಮ್ಮ ವೈಸರಾಯಿ ಮತ್ತು ಗವರ್ನರ್ ಜನರಲ್‌ರವರೂ ಇತರ ಮಂತ್ರಾಲೋಚನಾಸಭಿಕರೂ ಅಭಿಪ್ರಾಯ ಪಡು ತ್ತಾರೆ. ಇಂಡಿಯಾ ದೇಶದ ಪ್ರಜೆಗಳಾದ ನಿಮ್ಮ ಪೈಕಿ ಮುಖ್ಯ ಮುಖ್ಯ ವಾದ ಗುಂಪುಗಳವರು ಬ್ರಿಟಿಷ್ ಆಳ್ವಿಕೆಯಲ್ಲಿ ಅಭಿವೃದ್ಧಿಗೆ ಬಂದು ಪ್ರೋ ತ್ಸಾಹಗೊಂಡ ಅನೇಕ ಅಭಿಪ್ರಾಯಗಳುಳ್ಳವರಾಗಿ ಎಲ್ಲಾ ಪ್ರಜೆಗಳಿಗೂ ಒಂದೇ ಸಮನಾಗಿ ಹಕ್ಕು ಬಾಧ್ಯತೆಗಳನ್ನು ಕೊಡಬೇಕೆಂತಲೂ, ಕಾಯಿ ದೆ ಕಾನೂನುಗಳನ್ನು ಏರ್ಪಡಿಸುವುದರಲ್ಲಿಯೂ ಸರ್ಕಾರಿ ಆಡಳಿತಗಳನ್ನು ನಡೆಸುವದರಲ್ಲಿಯೂ ತಮಗೆ ಜಾಸ್ತಿ ಅಧಿಕಾರವನ್ನು ಕೊಡಬೇಕೆಂತಲೂ ಅಪೇಕ್ಷಿಸುತ್ತಾರೆ. ಇಂಥಾ ಅಪೇಕ್ಷೆಯನ್ನು ಯುಕ್ತವಾದ ರೀತಿಯಲ್ಲಿ ನೆರವೇರಿಸಿಕೊಟ್ಟರೆ ಅದರಿಂದ ಈಗ ನಮಗಿರುವ ಅಧಿಕಾರವು ಇನ್ನೂ ದೃಢಪಡುತ್ತದೆಯೇ ಹೊರತು ಎಂದಿಗೂ ಕುಂದಿಹೋಗಲಾರದು. ಆಡಳಿ ತವನ್ನು ನಡೆಸುವ ಅಧಿಕಾರಿಗಳು ಪ್ರಜೆಗಳೊಡನೆಯೂ, ಸದರೀ ಆಡಳಿತ ದ ವಿಚಾರವಾಗಿ ಪ್ರಜೆಗಳಲ್ಲಿ ಉಂಟಾಗತಕ್ಕ ಅಭಿಪ್ರಾಯಕ್ಕೆ ಕಾರಣಭೂ ತರಾಗಿಯೂ ಮತ್ತು ಅವರ ಇಂಗಿತಗಳನ್ನು ತಿಳಿಸತಕ್ಕವರಾಗಿಯೂ ಇ ರುವ ಪ್ರತಿನಿಧಿಗಳೊಡನೆಯೂ ಇನ್ನೂ ಅಧಿಕವಾಗಿ ಕಲೆತು ಬಳಕೆಯಾಗ ಲು ಅವಕಾಶ ವುಂಟಾದರೆ, ಸದರೀ ಆಡಳಿತವು ಇನ್ನೂ ವಿಚಕ್ಷಣೆಯಿಂದ ನಡೆದೀತೆಂಬ ಭಾಗದಲ್ಲಿ ಸಂಶಯವಿಲ್ಲ. ಈ ಉದ್ದೇಶಗಳು ನೆರವೇರುವು ದಕ್ಕೋಸ್ಕರ ಈಗ ಬಹು ಜಾಗರೂಕತೆಯಿಂದ ನಡೆಸುತ್ತಿರುವ ಏರ್ಪಾ ಟುಗಳನ್ನು ಕುರಿತು ಇಲ್ಲಿ ಪ್ರಸ್ತಾಪಿಸಬೇಕಾದುದಿಲ್ಲ. ಅವುಗಳನ್ನು ಕ್ಷ

ಪ್ರವಲ್ಲಿಯೇ ಪ್ರಕಟಿಸಲಾಗುತ್ತದೆ ; ಅಲ್ಲದೆ ನಿಮ್ಮ ಪುರೋವೃದ್ಧಿಗೆ ಅವುಗಳಿಂದ ಬಹುಮಟ್ಟಿಗೆ ಸಹಾಯವಾದೀತೆಂದು ದೃಢವಾಗಿ ನಂಬುತ್ತೇವೆ.

೧೦. ನಮ್ಮ ಇಂಡಿಯಾ ದೇಶೀಯ ಸೈನಿಕರ ಶೌರ್ಯವನ್ನೂ ರಾಜಭಕ್ತಿಯನ್ನೂ ನಾವು ತಿಳಿದಿರುತ್ತೇವೆ ; ಮತ್ತು ರಣರಂಗದಲ್ಲಿ ಶೌರ್ಯ ತೋರಿಸಲು ಅವರಿಗಿರುವ ಸ್ವಾಭಾವಿಕ ಕುತೂಹಲವನ್ನೂ, ಶಿಕ್ಷಾತಿಶಯವನ್ನೂ, ಸ್ವಾಮಿಕಾರ್ಯೋತ್ಸಾಹವನ್ನೂ ನಾವು ಬಹಳವಾಗಿ ಶ್ಲಾಘಿಸಿರುತ್ತೇವೆಂದು ಪ್ರಕಾಶಪಡಿಸುವುದಕ್ಕಾಗಿ ಬರುವ ವರುಷದ ಪ್ರಾರಂಭದಲ್ಲಿ ಆವರುಗಳಿಗೆ ಸರಿಯಾದ ಪ್ರತಿಫಲವನ್ನು ಕೊಡಿಸಬೇಕೆಂದು ನಾವು ಆಜ್ಞಾಪಿಸಿದ್ದೇವೆ.

೧೧. ಇಂಡಿಯಾದೇಶದ ಶ್ರೇಯೋಭಿವೃದ್ಧಿಯು ವಿಕ್ಟೋರಿಯಾ ಮಹಾರಾಜ್ಞಿಯವರಿಗೆ ಅತ್ಯಂತ ಪ್ರೀತ್ಯಾಸ್ಪದವಾಗಿತ್ತು. ೧೮೭೫ನೆ ಇಸವಿಯಲ್ಲಿ ನಾವು ಇಂಡಿಯಾ ದೇಶವನ್ನು ನೋಡಿದಾರಭ್ಯ ಆ ದೇಶದ ವಿಷಯದಲ್ಲಿಯೂ ಅಲ್ಲಿನ ರಾಜರುಗಳ ವಿಷಯದಲ್ಲಿಯೂ, ಅಲ್ಲಿನ ಪ್ರಜೆಗಳ ವಿಷಯದಲ್ಲಿಯೂ ನಾವು ತುಂಬಾ ಪ್ರೀತಿಯುತರಾಗಿದ್ದೇವೆ. ಈ ನಮ್ಮ ಪ್ರೀತಿಯು ಎಷ್ಟುಕಾಲ ಗತಿಸಿದರೂ ಲೇಶಮಾತ್ರವೂ ಕುಂದಲಾರದು. ನಮ್ಮ ಪ್ರಿಯಪುತ್ರರಾದ ಪ್ರಿನ್ಸ್ ಆಫ್ ವೇಲ್ಸ್‌ರವರೂ ಅವರ ಪತ್ನಿಯವರೂ ನಿಮ್ಮ ದೇಶಕ್ಕೆ ಪ್ರಯಾಣಮಾಡಿ ಬಂದ ಬಳಿಕ ಅದರ ವಿಷಯವಾಗಿ ತುಂಬಾ ಅನುರಾಗಯುಕ್ತರಾಗಿಯೂ ಮತ್ತು ನಿಮ್ಮ ಕ್ಷೇಮಸಂತುಷ್ಟಿಗಳ ವಿಷಯದಲ್ಲಿ ತುಂಬಾ ಪ್ರೇಮಯುತರಾಗಿಯೂ ಇರುತ್ತಾರೆ. ಇಂಡಿಯಾ ದೇಶದ ವಿಷಯದಲ್ಲಿ ನಮ್ಮ ರಾಜಕುಟುಂಬದವರಿಗೂ ನಮ್ಮ ರಾಜವಂಶೀಕರಿಗೂ ಉಂಟಾಗಿರುವ ಮನಃಪೂರ್ವಕವಾದ ಅಭಿಮಾನವೂ ಕೋರಿಕೆಯೂ ಈ ರಾಜ್ಯದಲ್ಲಿರುವ ಜನರ ದೃಢಸಂಕಲ್ಪವನ್ನೂ ಗಂಭೀರೋದ್ದೇಶವನ್ನೂ ಯಥಾರ್ಥವಾಗಿ ಪ್ರಕಾಶಪಡಿಸುತ್ತವೆ.

೧೨. ಹಿಂದೆ ಯಾವ ದೌಲತ್ತಿನಲ್ಲಿಯೂ ಯಾವ ರಾಜ್ಯದ ಯಾಥತಾಧಿಪತ್ಯದ ಪ್ರಭುಗಳಿಗೂ ಲಭಿಸದಂಥ ಕೀರ್ತಿಪ್ರದವಾದ ಈ ಕಾರ್ಯವನ್ನು ನೆರವೇರಿಸುವುದರಲ್ಲಿ ಅವಶ್ಯಕವಾದ ವಿವೇಕವನ್ನೂ ಪರಸ್ಪರ ಪ್ರೀತಿಯನ್ನೂ ಭಗವಂತನು ಬಲಪಡಿಸಿ ಸಂರಕ್ಷಿಸಲಿ ಎಂದು ಪ್ರಾರ್ಥಿಸುತ್ತೇವೆ.

## The Mysore Dasara Agricultural and Industrial Exhibition, 1908.

## ಮೈಸೂರು ದಸರಾ ಮತ್ತು ಕೈಗಾರಿಕೆ ಪ್ರದರ್ಶನ, ೧೯೦೮.

ಇದೇ ಅಕ್ಟೋಬರ್ ೧೧ನೆ ತಾರೀಖಿನಲ್ಲಿ ಶ್ರೀಮತ್ ಮಹಾರಾಜರವರು ಪ್ರದರ್ಶನ ಶಾಲೆಗೆ ದಯಮಾಡಿಸಿದ ಕಾಲದಲ್ಲಿ ಪ್ರದರ್ಶನ ಕಮಿಟಿ ಪ್ರೆಸಿಡೆಂಟರವರು ಈ ವರ್ಷದ ಪ್ರದರ್ಶನವನ್ನು ಕುರಿತು ಶ್ರೀಮತ್ ಮಹಾರಾಜರವರಲ್ಲಿ ವಿಜ್ಞಾಪಿಸಿಕೊಂಡದ್ದರಮೇಲೆ ಶ್ರೀಮತ್ ಮಹಾರಾಜರವರು ದಯಪಾಲಿಸಿದ ಉತ್ತರವನ್ನು ಸಂಕ್ಷೇಪವಾಗಿ ಅಕ್ಟೋಬರ್ ೧೫ನೆ ತಾರೀಖಿನ ಸಂಚಿಕೆಯಲ್ಲಿ ಸೂಚಿಸಿತ್ತಷ್ಟೆ. ಕಮಿಟಿ ಪ್ರೆಸಿಡೆಂಟ್‌ರವರು ಆ ಕಾಲದಲ್ಲಿ ಓದಿದ ರಿಪೋರ್ಟಿನಲ್ಲಡಗಿರುವ ಮುಖ್ಯಾಂಶಗಳನ್ನು ಮುಂದಿನ ಸಂಚಿಕೆಗಳಲ್ಲಿಆಗಾಗ್ಯೆ ತಿಳುಹಿಸುತ್ತಾ ಬರುವೆವು. ಪ್ರಕೃತ ಶ್ರೀಮತ್ ಮಹಾರಾಜರವರು ಅಪ್ಪಣೆ ಕೊಡಿಸಿದ ಉತ್ತರವನ್ನು ನಮ್ಮ ವಾಚಕರ ತಿಳುವಳಿಕೆಗೆ ಈಗ ವಿಶದವಾಗಿ ತರುವೆವು.

ಮಹನೀಯರೆ—

ಪ್ರದರ್ಶನ ಸಂಘದ ಅಧ್ಯಕ್ಷರು ಅರಿಕೆ ಮಾಡಿದ ವಿಷಯಗಳು ತೃಪ್ತಿಕರವಾಗಿರುತ್ತವಲ್ಲದೆ ಎರಡನೆ ವರ್ಷದಲ್ಲಿಯೇ ಪ್ರದರ್ಶನವು ಎಲ್ಲಾ ಭಾಗಗಳಲ್ಲೂ ಅಭಿವೃದ್ಧಿಹೊಂದಿರುವದು ವ್ಯಕ್ತಪಡುತ್ತದೆ. ಕಳೆದ ವರ್ಷದ ಅನುಭವದಿಂದ ಈ ವರ್ಷ ಪ್ರದರ್ಶನವು ರಚನೆಯಲ್ಲಿ ಉತ್ತಮವಾಗ ಬಹುದೆಂದು ನಿರೀಕ್ಷಿಸಿತ್ತೇ ಹೊರತು ಪ್ರದರ್ಶಿಸಲ್ಪಟ್ಟ ವಸ್ತುಗಳ ಸಂಖ್ಯೆ ಮತ್ತು ಲಕ್ಷಣ, ಇವುಗಳ ಉಪಯೋಗ ಮತ್ತು ಇವುಗಳಲ್ಲಿ ಜನರಿಗೆ ಅಭಿರುಚಿ, ಈ ಅಂಶಗಳಲ್ಲಿ ಅಭಿವೃದ್ಧಿಯಾಗುವುದೆಂದು ಧೈರ್ಯವಾಗಿ ಹೇಳಲು ಸಾಧ್ಯವಾಗುತ್ತಿರಲಿಲ್ಲ. ಆದರೆ ಈ ಭಾಗಗಳಲ್ಲೆಲ್ಲಾ ಹೆಚ್ಚಾಗಿ ಅಭಿವೃದ್ಧಿ ತೋರಿಬರುವದು ತೃಪ್ತಿಕರವಾಗಿದೆ. ಈ ಪ್ರದರ್ಶನವನ್ನು ಪ್ರತಿ ವರ್ಷವೂ ನಡೆಸುವದು ಅವಶ್ಯಕವೆಂಬ ವಿಚಾರದಲ್ಲಿ ಪ್ರದರ್ಶನ ಸಂಘದ ಪ್ರೆಸಿಡೆಂಟರು ಅರಿಕೆಮಾಡಿರುವ ಕಾರಣಗಳು ಸಮ್ಮತವಾಗಿವೆ. ಪ್ರದರ್ಶನವನ್ನು ನಡೆಸುವದಕ್ಕೆ ದ್ರವ್ಯವ್ಯಯವಾಗುತ್ತೆಂಬುವದು ಒಂದು

ದೊಡ್ಡದಾದ ವಿಷಯವಲ್ಲ. ಹೇಗಂದರೆ, ಇದರಿಂದ ಉಂಟಾಗುವ ಪ್ರಯೋಜನಗಳು ಈ ವ್ಯಯವನ್ನು ಸಾರ್ಥಕಪಡಿಸುತ್ತವೆ. ಇದಕ್ಕೆ ಸಂಬಂಧಪಟ್ಟ ಅಧಿಕಾರಿಗಳಿಗೇನೋ ಇದರಿಂದ ಕೆಲಸ ಹೆಚ್ಚಿ ಅವರ ಸಾಮಾನ್ಯ ಕೆಲಸಗಳಿಗೆ ಅಡ್ಡಿ ಆಗಬಹುದು. ಪರಂತು ಕಾಲಕ್ರಮೇಣ ರಚನಾ ಸೌಲಭ್ಯದಿಂದ ಈ ಕಷ್ಟವು ಕಡಮೆ ಆಗುವದೆಂದು ನಂಬುತ್ತೇವೆ. ಈ ಸಂದರ್ಭದಲ್ಲಿ ಅಧಿಕಾರಿಗಳು ಮತ್ತು ಇತರ ದೊಡ್ಡ ಮನುಷ್ಯರು ವಿಶೇಷ ಆಸಕ್ತಿಯಿಂದ ಕೆಲಸ ಮಾಡಿದುದಕ್ಕಾಗಿ ನಾವೂ ಮತ್ತು ನಮ್ಮ ಸರ್ಕಾರದವರೂ ಸಹಾ ಸಂತುಷ್ಟರಾಗಿರುತ್ತೇವೆ.

ಈ ಪ್ರದರ್ಶನವನ್ನು ಪ್ರತಿವರ್ಷವೂ ನಡೆಸುವದು ಸುಲಭಸಾಧ್ಯವಾಗುವದೆಂದೂ, ಇದರಿಂದ ಜನಗಳಿಗೆ ಪ್ರಯೋಜನವೂ, ಸೌಕರ್ಯವೂ ಮತ್ತು ತಿಳುವಳಿಕೆಯೂ ಹೆಚ್ಚುವದೆಂದೂ ನಾವು ಮನಃಪೂರ್ವಕವಾಗಿ ಕೋರುತ್ತೇವೆ.

ಪ್ರದರ್ಶನದ ಸಂಘದವರಿಗೂ ಮುಖ್ಯವಾಗಿ ಪ್ರದರ್ಶನವು ಸಫಲವಾಗುವ ರೀತಿ ಧೃಢಪ್ರಯತ್ನಗಳನ್ನು ಮಾಡಿದುದಕ್ಕಾಗಿ ಅಧ್ಯಕ್ಷರಾದ ಮಿಸ್ಟರ್ ರಂಗಸ್ವಾಮಿ ಅಯ್ಯಂಗಾರ್ರವರಿಗೂ ಸೆಕ್ರೆಟರಿಯವರಾದ ಮಿಸ್ಟರ್ ಸುಬ್ಬರಾಯರವರಿಗೂ ನಮ್ಮ ಸಂತೋಷವನ್ನು ಸೂಚಿಸುತ್ತೇವೆ.

---

## Artificial Fertilizers for Cotton. *

## ಹತ್ತಿ ಬೆಳೆ ಮತ್ತು ತಯಾರಿಸಿದ ಗೊಬ್ಬರ.

ಸೆಂಟ್ರಲ್ ಪ್ರಾವಿನ್ಸಸ್ ಮತ್ತು ಬಿರಾರ ಪ್ರದೇಶಗಳ ಕಪ್ಪು ಭೂಮಿಯಲ್ಲಿ ನೈಟ್ರೋಜನ್ ವಾಯುವನ್ನು ಒದಗಿಸುವ ಸಾರವು ಕಮ್ಮಿಯಾಗಿರುತ್ತದೆ. ಈ ನ್ಯೂನತೆಯನ್ನು ಸರಿಪಡಿಸಲು ಈ ಪ್ರದೇಶದಲ್ಲಿ ಸಾಕಾದಷ್ಟು ಸಗಣಿ ಗೊಬ್ಬರ ಸಿಕ್ಕುವದಿಲ್ಲ. ಸಮಶೀತೋಷ್ಣ ಪ್ರದೇಶಗಳಿಗಿಂತಲೂ ಇಲ್ಲಿ ಭೂಮಿಯಲ್ಲಿಯ ಧಾತು ಪದಾರ್ಥಗಳು ಕೊಳೆಯುವದು ಜಾಗ್ರತೆ. ಅಲ್ಲದೆ ನೆಲವು ಬಿರಕು ಬಿಡುವದರಿಂದ ಗಾಳಿಯು ವಿಶೇಷವಾಗಿ ಆಡಿ

---

* ಸೆಂಟ್ರಲ್ ಪ್ರಾವಿನ್ಸಸ್ ಅಗ್ರಿಕಲ್ಚರಲ್ ಗೆಜೆಟ್.—ಅಕ್ಟೋಬರು ೧೯೦೮.

ಈ ರೀತಿಯಾಗಿ ಕೊಳೆಯುವದನ್ನು ಇನ್ನೂ ಹೆಚ್ಚಿಸುತ್ತದೆ. ಮತ್ತು ಗೆದ್ದಲು ಹುಳುಗಳು ಜಮೀನಿನಲ್ಲಿನ ಸಸ್ಯಪದಾರ್ಥಗಳನ್ನು ತಿನ್ನುತ್ತವೆ. ಹಾಲಿ ರೂಢಿಯಲ್ಲಿರುವ ಫಸಲು ಇಡುವ ಕ್ರಮಗಳಿಂದ ಜಮೀನಿನ ಸಾರವು ಕ್ಷೀಣವಾಗುತ್ತಿದೆಯೇ ಶಿವಾಯಿ ಪ್ರತಿಯಾಗಿ ಜಮೀನಿಗೆ ಸಾರಪದಾರ್ಥವು ಒದಗುವದಿಲ್ಲ. ಹತ್ತಿ ಬೆಳೆಯುವ ಪ್ರದೇಶಗಳಲ್ಲಿ ವಿಶೇಷವಾಗಿ ರೂಢಿಯಲ್ಲಿರುವ ವ್ಯವಸಾಯ ಮತ್ತು ಪರಿವರ್ತನೆ ಕ್ರಮಗಳೂ ಭೂಮಿಯನ್ನು ನಿಸ್ಸಾರ ಮಾಡತಕ್ಕವುಗಳಾಗಿರುತ್ತವೆ. ಸಾಧಾರಣವಾಗಿ ಹತ್ತಿ, ಹುರಳಿ, ಗೋಧಿ ಮುಂತಾದ ಪೈರುಗಳನ್ನು ಬೇರು ಸಹಿತ ಕೀಳುವದುಂಟು. ಇದರಿಂದ ಜಮೀನಿನಲ್ಲಿ ಫಸಲಿನ ಕಚರಾ ಸ್ವಲ್ಪವೂ ಉಳಿಯುವದಿಲ್ಲ. ಇದೂ ಅಲ್ಲದೆ ಈ ಪ್ರಾಂತ್ಯಗಳಲ್ಲಿ ಬರೀ ಹತ್ತಿಯನ್ನೇ ಅಥವಾ ಪರಿವರ್ತನೆಯಿಂದ ಹತ್ತಿ ಮತ್ತು ಜೋಳವನ್ನೇ ಒಂದೇ ಜಮೀನಿನಲ್ಲಿ ವರ್ಷ ವರ್ಷ ಬೆಳೆಯುತ್ತಾರೆ. ಇತರ ಪ್ರದೇಶಗಳಲ್ಲಾಚರಿಸುವಂತೆ ಭೂಮಿಯನ್ನು ಸಾರವತ್ತಾಗಿ ಮಾಡುವ ದ್ವಿದಳ ಧಾನ್ಯಗಳ ಬೆಳೆ ಮಾಡುವ ಪದ್ಧತಿಯನ್ನು ಇಲ್ಲಿ ಅನುಸರಿಸುವದಿಲ್ಲ. ಹತ್ತಿಯ ಧಾರಣೆ ಈಗಿನಂತೆಯೇ ಚಡಾವಾಗಿರುವವರೆಗೂ ರೈತನು ಇದರಂತೆಯೇ ಒಳ್ಳೆ ಬೆಲೆಯಾಗುವ ಇನ್ನ್ಯಾವದಾದರೂ ಫಸಲು ದೊರಕದ ವಿನಹ ಪರಿವರ್ತನೆಯಿಂದ ಬೆಳೆಯುವ ವಿಚಾರದಲ್ಲಿ ಗಮನಿಸುವಂತೆ ಕಾಣುವದಿಲ್ಲ. ಸ್ವಾಭಾವಿಕವಾಗಿ ರೈತನು ತತ್ಕಾಲ ಪ್ರಯೋಜನವನ್ನು ಲಕ್ಷಿಸುತ್ತಾನೆಯೇ ವಿನಹ ಜಮೀನು ನಿಸ್ಸಾರವಾಗಿ ೨೦ ವರ್ಷದ ನಂತರ ನಷ್ಟವುಂಟಾಗುವ ಸಂಭವವನ್ನು ಆಲೋಚಿಸುವದಿಲ್ಲ.

ಈ ಸಂದರ್ಭದಲ್ಲಿ ಜಮೀನು ಸಾರವತ್ತಾಗುವದಕ್ಕೆ ಗೊಬ್ಬರಗಳ ಉಪಯೋಗವನ್ನು ಹೆಚ್ಚಿಸಬೇಕು. ತಯಾರಿಸಿದ ಗೊಬ್ಬರಗಳ ಪೈಕಿ ‚ನೈಟ್ರೇಟ್ ಆಫ್ ಸೋಡಾ' (Nitrate of Soda) ಅಥವಾ ‚ಸಲ್ಫೇಟ್ ಆಫ್ ಅಮೋನಿಯಾ' (Sulphate of Amonia) ಎಂಬುವುಗಳ ಉಪಯೋಗದಿಂದ ಅನುಕೂಲ ಕಂಡುಬಂದಿರುತ್ತದೆ. ಈಚೆಗೆ ನಾಗಪುರದಲ್ಲಿ ನಡೆಸಿರುವ ಅನೇಕ ಅಜಮಾಯಿಷಿಗಳಿಂದಲೂ ಈ ಸಂಗತಿ ಹೊರಪಟ್ಟಿದೆ.

ಅಜಮಾಯಿಷಿಯ ಫಲಿತಾಂಶವನ್ನು ಈಡಡಿ ನಮೂದಿಸಿರುತ್ತೇವೆ.

| ತಾಕು. | ಉಪಯೋಗಿಸಿದ ಗೊಬ್ಬರ | ಜಾಸ್ತಿ ಅಥವಾ ಕಮ್ಮಿ ಹುಟ್ಟುವಳಿ, ಪೌಂಡು ತೂಕದಲ್ಲಿ. | ಜಾಸ್ತಿ ಅಥವಾ ಕಮ್ಮಿ ಹುಟ್ಟುವಳಿಯ ಬೆಲೆ. | ಗೊಬ್ಬರದ ಖರ್ಚು. | ನಿವಳ ಆದಾಯ ಅಥವ ನಷ್ಟ. |
|---|---|---|---|---|---|
| | | | ರೂ. ಆ. ಪೈ | ರೂ. ಆ. ಪೈ | ರೂ. ಆ. ಪೈ. |
| 1 | ನೈಟ್ರೇಟ್ ಆಫ್ ಸೋಡಾ, ಸೂಪರ್ ಫಾಸ್ಫೇಟ್ ಮತ್ತು ಪೊಟಾಷ್ (ಮರಡು ಪು). | 390 | 43—14—0 | 30—7—0 | + 13—7—0 |
| 2 | ನೈಟ್ರೇಟ್ ಮತ್ತು ಸೂಪರ್ … | 320 | 36—0—0 | 25—5—0 | + 10-11—0 |
| 3 | ನೈಟ್ರೇಟ್ ಮತ್ತು ಪೊಟಾಷ್ … | 356 | 40—1—3 | 20—3—0 | + 19-14—3 |
| 4 | ನೈಟ್ರೇಟ್ … | 301 | 33—14—3 | 15—1—0 | + 18-13—3 |
| 5 | ಪೊಟಾಷ್ ಮತ್ತು ಸೂಪರ್ … | 32 | 3—10—6 | 15—6—0 | —11-11—6 |
| 6 | ಸೂಪರ್ … | —104 | —11-10—9 | 10—4—0 | —21-14—9 |
| 7 | ಪೊಟಾಷ್ … | — 24 | —2—10—9 | 5—2—0 | — 7-12—9 |
| 8 | ಗೊಬ್ಬರ ಹಾಕದೇ ಇದ್ದದ್ದು … | … | … | … | … |

## Correspondence — Cattle and Fodder.

## ಕರೆಸ್ಪಾಂಡೆನ್ಸ್. — ದನಗಳ ಮೇವು.

ಮೈಸೂರು ಶೀಮೆಯ ಕೆಲವು ತಾಲ್ಲೂಕುಗಳಲ್ಲಿ ಈ ವರುಷ ಸಾಕಾದಷ್ಟು ಮಳೆಯಾಗದೆ ಹೋದ್ದರಿಂದ ಈ ಪ್ರದೇಶಗಳಲ್ಲಿ ದನಗಳಿಗೆ ಮೇವೂ ನೀರೂ ಇಲ್ಲದೆ ಕಷ್ಟವುಂಟಾಗಿರುವದು ಎಲ್ಲರಿಗೂ ತಿಳಿದೇ ಇದು

ತ್ತದೆ. ಮೈಸೂರು ಡಿಸ್ಟ್ರಿಕ್ಟ್ ಹೆಗ್ಗಡದೇವನಕೋಟೆ ತಾಲ್ಲೂಕು, ಕಡೂರು ಮತ್ತು ಶಿವಮೊಗ್ಗಾ ಡಿಸ್ಟ್ರಿಕ್ಟ್ ಸರ್ಕಾರಿ ಜಂಗಲುಗಳಲ್ಲಿ ಸಾಕಾದಷ್ಟು ಹುಲ್ಲೂ ನೀರೂ ಸಿಕ್ಕುತ್ತದೆ. ಇಂಥಾ ಕಷ್ಟಕ್ಕೆ ಗುರಿಯಾಗಿರುವ ದನಗಳ ಮಾಲೀಕರ ಆಲೋಚನೆ ಬಗ್ಗೆ ಈ ವಿಚಾರದಲ್ಲಿ ನನಗೆ ತೋರಿದ ಕೆಲವು ಸಂಗತಿಗಳನ್ನು ತಿಳಿಸಲು ಅಪೇಕ್ಷಿಸುತ್ತೇನೆ.

೧. ಯಾವ ಗ್ರಾಮಗಳಲ್ಲಿ ರೈತರು ತಮ್ಮ ದನಗಳಿಗೆ ಹುಲ್ಲೂ ನೀರೂ ಸಿಕ್ಕದೆ ತೊಂದರೆಪಡುತ್ತಾ ಇದ್ದರೂ ದನಗಳನ್ನು ಅನುಕೂಲವಾಗಿರುವ ಮೇಲ್ಕಂಡ ಸರ್ಕಾರಿ ಜಂಗಲುಗಳಿಗೆ ಹೊಡದುಕೊಂಡು ಹೋಗಲು ಇಷ್ಟಪಡದೆ ಇದ್ದರೆ ಅಂಥಾ ಗ್ರಾಮದ ರೈತರು ತಮ್ಮಲ್ಲಿ ಎಷ್ಟು ಜಾನ್ವಾರುಗಳು ಇರುತ್ತೆ, ಅವುಗಳಿಗೆ ಎಷ್ಟು ಮೇವು ಬೇಕಾಗಬಹುದು, ಎಲ್ಲಿಂದ ಮೇವನ್ನು ತರಿಸಿಕೊಡಬೇಕು ಮತ್ತು ಈ ಬಗ್ಗೆ ಖರೀದಿ ಎಷ್ಟರವರಿಗೆ ಕೊಡಲು ಇಷ್ಟವುಳ್ಳವರಾಗಿರುತ್ತಾರೆ, ಎಂಬೀ ವಿಷಯಗಳನ್ನೆಲ್ಲಾ ನಮೂದಿಸಿ ಗ್ರಾಮವಾರು ಒಂದು ಪಟ್ಟಿಯನ್ನು ತಯಾರ್ಮಾಡಿ ಕೂಡ್ಲೆ ಆಯಾಯ ತಾಲ್ಲೂಕು ಅಮಲ್ದಾರರಲ್ಲಿ ಹಾಜರ್ಮಾಡಿ ಹೇಳಿಕೊಂಡರೆ ಸರ್ಕಾರದವರು ಈ ವಿಚಾರದಲ್ಲಿ ಅನುಕೂಲವಾದ ತಕ್ಕ ಏರ್ಪಾಟು ಮಾಡಿಕೊಡದೇ ಇರಲಾರರು.

೨. ಹಾಗೆ ಮೇವು ತರಿಸಲು ಆಗುವದು ಹೆಚ್ಚಾಗಿ ಅನುಕೂಲವಿಲ್ಲದೆ ರೈತರು ತಮ್ಮ ದನಗಳನ್ನು ಮಲನಾಡು ಪ್ರಾಂತ್ಯ ಸರ್ಕಾರಿ ಜಂಗಲಿಗೆ ತೆಗದುಕೊಂಡು ಹೋಗಲು ಇಷ್ಟಪಟ್ಟಲ್ಲಿ ಅಂಥಾ ಗ್ರಾಮ ಅಥವಾ ಆಸ್ಪಾಸಿನಲ್ಲಿರುವ ಗ್ರಾಮಗಳ ರೈತರು ಒಟ್ಟಾಗಿ ಎಷ್ಟು ದನಗಳನ್ನು ತೆಗದುಕೊಂಡುಹೋಗಲು ಸಿದ್ಧರಾಗಿರುತ್ತಾರೆ, ಮಾಲೀಕರೆ ಸ್ವಂತವಾಗಿ ಹೊಡದುಕೊಂಡು ಹೋಗುತ್ತಾರೆಯೊ, ಅಥವಾ ನಂಬಿಕೆಯಾದ ಆಳುಗಳ ಸಂಗಡ ಕಳುಹಿಸುತ್ತಾರೆಯೊ, ಹೊಡದುಕೊಂಡುಹೋಗುವವರ ಹೆಸರು ಮುಂತಾದ ಈ ವಿಷಯಗಳನ್ನೆಲ್ಲಾ ನಮೂದಿಸಿ ಆಯಾಯ ತಾಲ್ಲೂಕು ಅಮಲ್ದಾರರಲ್ಲಿ ಹಾಜರ್ಮಾಡಿದರೆ ಸರ್ಕಾರದವರು ಅದಕ್ಕೂ ತಕ್ಕ ಅನುಕೂಲವನ್ನು ಮಾಡಿಕೊಡಬಹುದು; ಮತ್ತು ೪೦—೫೦ ದನಗಳ ಗುಂಪಿನ ಸಂಗಡ ಹೋಗತಕ್ಕ ೨—೩ ಜನಗಳಿಗೆ ಅವರ ತಿಂಡಿಗೆ ಅನುಕೂಲವಾಗು

ವ ವಷ್ಟಿಗೆ ಗ್ರಾಮವು ಬಿಟ್ಟು ಲಾಗಾಯಿತು ಪುನಹ ಗ್ರಾಮಕ್ಕೆ ವಾಪಸು ಬರುವವರೆಗಾದರೂ ದ್ರವ್ಯರೂಪವಾಗಿಯಾಗಲಿ ಧಾನ್ಯರೂಪವಾಗಿಯಾಗಲಿ ದಯಾಳುಗಳಾದ ಸರ್ಕಾರದವರ ಸಹಾಯವನ್ನು ಅಪೇಕ್ಷಿಸಬಹುದು.

೩. ಕೆಲವು ರೈತರಿಗೆ ತಮ್ಮ ದನಗಳನ್ನು ಮೇಲೆ ಹೇಳಿದಂತೆ ತಾವೇ ಮೇಯಿಸುವದಕ್ಕೂ ಅಥವಾ ಮಲನಾಡು ಪ್ರಾಂತ್ಯ ಹೊಡದುಕೊಂಡು ಹೋಗುವದಕ್ಕೂ ಅಥವಾ ಸ್ಥಳದಲ್ಲಿಯೇ ಸಾಕುವದಕ್ಕೂ ಅನುಕೂಲವಿಲ್ಲದೇ ಇರಬಹುದು. ಇಂಥಾ ಸಂದರ್ಭಗಳಲ್ಲಿ ಇವರು ತಮ್ಮ ಗರಪಿಗೋಸ್ಕರ ರಾಸುಗಳನ್ನು ಸಂತೆ ಮುಂತಾದ ಕಡೆಗಳಲ್ಲಿ ಹೀನಖರೀದಿಗೆ ಮಾರುವದಕ್ಕೆ ಅವಕಾಶ ಕೊಡುವದು ಗ್ರಾಮಸ್ಥರಿಗೆ ಸರಿಯಾದ್ದಲ್ಲ. ಇದಕ್ಕೆ ಒಂದು ಉಪಾಯವನ್ನು ಮಾಡಬಹುದು. ಗ್ರಾಮಸ್ಥರ ಪೈಕಿ ಗೋಸಂರಕ್ಷಣೆಯಲ್ಲಿ ಹಿತೈಷಿಗಳಾದ ಪ್ರಮುಖರಾದ ಮಹನೀಯರಾಗಲಿ ಅಥವಾ ಗ್ರಾಮಸ್ಥರೆಲ್ಲರೂ ಒಟ್ಟುಗೂಡಿ ಪರಸ್ಪರ ಸಹಾಯವನ್ನು ಒದಗಿಸಿಕೊಳ್ಳುವ ಬಗ್ಗೆ ಒಂದು ಸಂಘವನ್ನು ಏರ್ಪಡಿಸಿಕೊಂಡು ಸದರಿ ಸಂಘದ ಮೂಲಕವೇ ಆಗಲಿ ರೈತರು ಎಷ್ಟು ದನಗಳನ್ನು ಈ ರೀತಿ ಮಾರಲಿಚ್ಛೈಸುತ್ತಾರೆ, ಎಷ್ಟು ಖರೀದಿಗೆ ಕೊಡಬೇಕೆಂದಿರುವರು ಎಂಬ ವಿಷಯಗಳನ್ನು ಗ್ರಾಮವಾರು ಪಟ್ಟಿ ಮಾಡಿ ರಾಸುಗಳನ್ನು ಈಗ ಹುಟ್ಟಬಹುದಾದ ಖರೀದಿಗೆ ತೆಗದುಕೊಂಡು ಮೇಲೆ ಹೇಳಿದಂತೆ ಮಲನಾಡು ಜಂಗಲುಗಳಲ್ಲಿ ಮೇಯಿಸಿ ಮುಂದೆ ಮಳೆ ಬಂದನಂತರ ಖರೀದಿ ಮತ್ತು ಪೋಷಣೆಗೆ ತಗಲಿದ ದುವಸಾಷಾಯ ಖರ್ಚನ್ನು ತೆಗದುಕೊಂಡು ಪುನಹ ಮಾಲೀಕರಿಗೆ ವಾಪಸ್ ಮಾಡುವ ಏರ್ಪಾಟಿಟ್ಟರೆ ಒಳ್ಳೇದು. ಈ ವಿಚಾರದಲ್ಲಿ ಸರ್ಕಾರದವರೂ ಸಹ ದ್ರವ್ಯ ಮತ್ತು ಇತರ ಸಹಾಯ ಮಾಡಿದರೆ ಅನುಕೂಲ.

ಹಿತಚಿಂತಕ.

---

## Agriculture in Malabar. *

## ಮಲಯಾಳದಲ್ಲಿನ ವ್ಯವಸಾಯ ಸ್ಥಿತಿ.

ಈ ವಿಚಾರವಾಗಿ ಮೆ|| ಟಿ. ಕುನ್ಹಿ ಕ್ರಿಷ್ಣನಾಯರವರು (Mr. T. Kunhi Krishna Nayar) ಬರೆದಿರುವ ಲೇಖನದ ಕೆಲವು ಮುಖ್ಯಾಂ

---

* ಹಿಂದೂ ಪತ್ರಿಕೆ.—೨೧-೧೧-೨೪.

ತ್ಯೇಕವಾಗಿ ಹದ ಕೊಡಬೇಕು. ಹಸಿ ಶೊಂಠಿ ಮೇಲಿನ ಸಿಪ್ಪೆಯನ್ನು ಹೆಂಗಸರು ಹುಡುಗರು ಚಾಕುಗಳಿಂದ ಕೆರದು ನಂತರ ಅದನ್ನು ಬಿಸಿಲಿನಲ್ಲಿ ಒಣಗಿಸಬೇಕು. ಸಿಪ್ಪೆಯನ್ನು ಸುಲಿಯುವದಕ್ಕೆ ಮಾತ್ರ ಸುಲಭೋಪಾಯವನ್ನು ಕಂಡುಹಿಡಿದರೆ ಇದಕ್ಕಾಗಿ ಹಾಲಿ ತಗಲುವ ಖರ್ಚು ಮತ್ತು ಶ್ರಮ ಬಹಳಮಟ್ಟಿಗೆ ಕಮ್ಮಿಯಾಗುವದು.

(ಸಂಕ್ಷೇಪ)

---

## Government Proceedings.
## ಸರ್ಕಾರಿ ಹುಕುಂಗಳು.

### I

ನಂ. ಆರ್. ೨೪೪೧—೪೧—ಅಗ್ರಿ. ೬೯-೦೮-೨, ತಾ|| ೩೧-೧೦-೦೮.

ಸಂಸ್ಥಾನದ ಕೆಲವುಕಡೆ ಮಳೆ ಸರಿಯಾಗಿ ನಡೆಯದೆ ಕಾಲಸ್ಥಿತಿಯು ಸ್ವಲ್ಪಮಟ್ಟಿಗೆ ನಾಜೋಕಾಗಿ ಬಂದಿರುವದರಿಂದ ರೆವಿನ್ಯೂ ಕಮಿಷನರವರು ಶಿಫಾರಸು ಮಾಡಿದ್ದರಮೇಲೆ ಸೀನೀರು ಭಾವಿ ತೋಡಿಸುವದು, ಮ್ಯುನಿಸಿಪಾಲಿಟಿಗಳು ಮತ್ತು ಯೂನಿಯನ್‌ಗಳಲ್ಲಿ ಪಾಕೀಜ ಸಂಬಂಧವಾದ ಕಾಂಗಾರಿಗಳೇ ಮೊದಲಾದ ಡಿಸ್ಟ್ರಿಕ್ಟು ಫಂಡು ಕಾಮಗಾರಿಗಳಿಗಾಗಿ ೨೦,೦೦೦ ರೂಪಾಯಿಗಳು, ಮೈನರ್ ಟ್ಯಾಂಕ್ ರೆಸ್ಟೊರೇಷನ್ ಸ್ಕೀಮನ್ನನುಸರಿಸಿ ಕೆರೆಗಳ ರಿಪೇರಿಗಾಗಿ ಚಾಲ್ತಿ ಸಾಲಿಗೆ ಹಾಲಿ ಮಂಜೂರಾಗಿರತಕ್ಕ ಒಂದು ಲಕ್ಷದ ಜೊತೆಗೆ ಮಟ್ಟಿ ಕಾಂಗಾರಿಗಾಗಿ ರೈತರುಗಳಿಗೆ ಅಡ್ವಾನ್ಸು ಕೊಡುವ ಬಗ್ಗೆ ಮತ್ತೊಂದು ಲಕ್ಷ ರೂಪಾಯಿಗಳು ಈಮೇರೆ ಗಾರ್ನಮೆಂಟಿನವರು ಮಂಜೂರ್ಮಾಡಿರುತ್ತಾರೆ. ಜಮೀನು ಆಬಾದು ಮಾಡಿಕೊಳ್ಳುವದಕ್ಕೂ, ಸಾಗುವಳಿ ಭಾವಿಗಳನ್ನು ತೆಗೆಸುವದಕ್ಕೂ, ತಕಾವಿ ಅಡ್ವಾನ್ಸುಗಳನ್ನು ಕೊಡುವದಕ್ಕೂ ಈ ಮುಂಚೆಯೇ ೯೦,೭೫೦ ರೂಪಾಯಿಗಳು ಮಂಜೂರಾಗಿರುತ್ತೆ.

### II

ಬೆಂಗಳೂರು, ಕೋಲಾರ, ತುಮಕೂರು, ಶಿವಮೊಗ್ಗ ಮತ್ತು ಕಡೂರು ಡಿಸ್ಟ್ರಿಕ್ಟುಗಳಲ್ಲಿ ಜನಗಳ ಮುಖ್ಯಾಹಾರ ಪದಾರ್ಥವಾದ ರಾಗಿಯ ಧಾರಣೆಯು ಕೇವಲ ಚಡಾವಾಗಿದ್ದು ರೂ|| ೧ಕ್ಕೆ ೧-೨ ಸೇರಿಗೂ ಕ

ವಿಸ್ಮಯವಾಗಿ ಮಾರುತ್ತಿರುವದರಿಂದ ಆ ಡಿಸ್ಟ್ರಿಕ್ಟುಗಳಲ್ಲಿ ಅಲ್ಪ ಸಂಬಳ ಬರತಕ್ಕ ನೌಕರವರ್ಗದವರಿಗೆ ಅವರ ಸಂಬಳದ ಜೊತೆಗೆ ಸ್ವಲ್ಪ ಅಲೌನ್ಸನ್ನು ಕೊಡಬೇಕೆಂದು ರೆವಿನ್ಯೂ ಕಮಿಷನರವರು ಗೌರ್ನ್ಮೆಂಟಿಗೆ ಶಿಫಾರಸು ಮಾಡಿದ್ದರಮೇಲೆ, ಗೌರ್ನ್ಮೆಂಟಿನವರು ಮಾಹೆಯಾನ ೨೦ ರೂಪಾಯಿಗಿಂತ ಹೆಚ್ಚಾಗಿ ಸಂಬಳವಿಲ್ಲದ ನೌಕರರಿಗೆ ಈ ಕೆಳಗೆ ಕಂಡಂತೆ ಅಲೌನ್ಸನ್ನು ಶಿವಮೊಗ್ಗ ಡಿಸ್ಟ್ರಿಕ್ಟಿನಲ್ಲಿ ನವಂಬರು ೧ನೇ ಲಾಗಾಯಿತು ಮತ್ತು ಇತರ ಡಿಸ್ಟ್ರಿಕ್ಟುಗಳಲ್ಲಿ ಅಕ್ಟೋಬರು ೧ನೇ ಲಾಗಾಯಿತು ಹಂಗಾಮಿಯಾಗಿ ಮೂರು ತಿಂಗಳು ಮಾತ್ರ ಮಂಜೂರು ಮಾಡಿರುತ್ತಾರೆ.

(೧) ಮಾಹೆಯಾನ ೧೬ ರೂಪಾಯಿಗೆ ಮೇಲ್ಪಟ್ಟು ೨೦ ರೂಪಾಯಿಗೆ ಮೇಲ್ಪಡದ ಸಂಬಳವುಳ್ಳ ನೌಕರರಿಗೆ, ಮಾಹೆಯಾನ ೨ ರೂಪಾಯಿ

(೨) ೧೬ ರೂಪಾಯಿಗೆ ಮೇಲ್ಪಡದ ಸಂಬಳ ಉಳ್ಳವರಿಗೆ, ಮಾಹೆಯಾನ ೧ ರೂಪಾಯಿ.

(೩) ೫ ರೂಪಾಯಿಗಿಂತ ಕಮ್ಮಿ ಸಂಬಳದವರಿಗೆ, ಸಂಬಳ ಮತ್ತು ಅಲೌನ್ಸ್ ಕೂಡಿ ೬ ರೂಪಾಯಿಗೆ ಕಮ್ಮಿ ಬೀಳದಷ್ಟು ಅಲೌನ್ಸ್ ಕೊಡಬಹುದು.

ಈ ಮೇರೆ ಅಲೌನ್ಸು ಬದಲಿ ನೋಡತಕ್ಕವರಿಗೂ ಮತ್ತು ಹಂಗಾಮಿಯಾಗಿರತಕ್ಕವರಿಗೂ ಸಹ ಸಲ್ಲುತ್ತೆ.

---

## Occasional Notes.

## ವಿವಿಧ ವೃತ್ತಾಂತಗಳು.

೧. "ಮೈಸೂರು ಸೀಮೆಯಲ್ಲಿ ಕ್ಷಾಮನಿವಾರಣೆಯು ಏರ್ಪಾಡಿನ ಸಂಗ್ರಹ" ವೆಂಬ ಪುಸ್ತಕವನ್ನು ನಮ್ಮ ಚಂದಾದಾರರ ತಿಳಿವಳಿಕೆ ಬಗ್ಯೆ ಈ ಸಂಚಿಕೆಯೊಂದಿಗೆ ಸಪ್ಲಿಮೆಂಟಾಗಿ ರವಾನಿಸಿರುತ್ತೇವೆ. ಇವರು ಈ ಪುಸ್ತಕವನ್ನು ಓದಿ ತಿಳಿದುಕೊಳ್ಳಬೇಕಲ್ಲದೆ ಈ ವಿಚಾರದಲ್ಲಿ ಇತರರಿಗೂ ಸಹ ತಿಳಿವಳಿಕೆ ಕೊಟ್ಟು ಪ್ರಚುರಪಡಿಸುವರೆಂದು ಕೋರುತ್ತೇವೆ.

---

V. B. Soobbiah & Sons, Printers, Bangalore—1908.

THE MYSORE

# REVENUE & AGRICULTURAL GAZETTE.

ವಾಲ್ಯೂಂ ೩.] ಭಾನುವಾರ, ೩ನೆ ಜನವರಿ ೧೯೦೯. [ನಂ. ೫.

## Contents.



## ಅನುಕ್ರಮಣಿಕೆ.

## The Mysore Exhibition, 1908.

## ಮೈಸೂರು ದಸರಾ ವ್ಯವಸಾಯುಕ ಮತ್ತು ಕೈಗಾರಿಕೆ ಪ್ರದರ್ಶನ, ೧೯೦೮.

ಹಿಂದಿನ ಸಂಚಿಕೆಯಲ್ಲಿ ಸೂಚಿಸಿದ ಮೇರೆಗೆ ಪ್ರದರ್ಶನ ಕಾಲದಲ್ಲಿ ಪ್ರದರ್ಶನ ಕಮಿಟಿ ಪ್ರೆಸಿಡೆಂಟರವರು ಶ್ರೀಮನ್ ಮಹಾರಾಜರವರ ಸಮಕ್ಷಮ ಅರಿಕೆಮಾಡಿದ ರಿಪೋರ್ಟಿನ ಕೆಲವು ಭಾಗಗಳನ್ನು ಇಲ್ಲಿ ತಿಳಿಸುತ್ತೇವೆ.

ಮಹಾಸ್ವಾಮಿ.—

ಈ ಪ್ರದರ್ಶನ ಸಂಘದ ಪರವಾಗಿ ಮಹಾಸ್ವಾಮಿಯವರನ್ನು ಇಲ್ಲಿ ನಡೆದ ವಿನೋದಗಳಲ್ಲಿ ಗೆದ್ದವರಿಗೂ ಮತ್ತು ಕೆಲವು ಪ್ರದರ್ಶಕರಿಗೂ ಬಹುಮಾನಗಳನ್ನು ದಯಪಾಲಿಸುವದಕ್ಕಾಗಿ ಪ್ರಾರ್ಥಿಸುವದಕ್ಕೆ, ಮೊದಲು ಈ ಪ್ರದರ್ಶನ ವಿಷಯಗಳನ್ನು ಸಂಕ್ಷೇಪವಾಗಿ ವಿಜ್ಞಾಪಿಸುವದಕ್ಕೆ ಅಪ್ಪಣೆ ಬೇಡುತ್ತೇನೆ. ಪ್ರದರ್ಶನವು ಮುಗಿದು ಲೆಖ್ಖಗಳು ಪೈಸಲಾದ ಕೆಲವು ಕಾಲದ ನಂತರ ಪೂರಾ ಮೂಲ್ ಮೇರೆ ತಪ್ಸೀಲು ತೋರಿಸುವ ರಿಪೋರ್ಟನ್ನು ತಯಾರ್‌ಮಾಡಲು ಸಾಧ್ಯವಾಗುತ್ತದೆ. ಆದರೆ ಕಾಲವಿಳಂಬದಿಂದ ಪ್ರದರ್ಶನ ವಿಷಯವಾಗಿ ಮನಸ್ಸಿನಲ್ಲಿ ನಾಟಿದ ಅಭಿಪ್ರಾಯವು ಅಷ್ಟರಲ್ಲಿ ಮರೆಯುವ ಕಾರಣ ತನ್ಮೂಲಕ ತೋರಿಬರುವ ಮತ್ತು ಕಲಿಯಬಹುದಾದ ಅಂಶಗಳಲ್ಲಿ ಆಸಕ್ತಿಯು ವಿಶೇಷವಾಗಿ ಕುಂದಿಹೋಗುತ್ತದೆ. ಆದ್ದರಿಂದ ಈ ಸಾಲಿನ ಪ್ರದರ್ಶನದ ಮುಖ್ಯಾಂಶಗಳನ್ನು ಮಹಾಸ್ವಾಮಿಯವರ ಘನವಾದ ಪರಾಮರಿಕೆಗೂ ಮತ್ತು ಪ್ರಜೆಗಳ ತಿಳುವಳಿಕೆಗೂ ಸಂಕ್ಷೇಪವಾಗಿ ತರಬೇಕೆಂದಿರುತ್ತೇನೆ.

೨. ಕಳೆದ ವರ್ಷ ಈ ಪ್ರದರ್ಶನವನ್ನು ಪ್ರಾರಂಭಿಸಿದಾಗ ಮಹಾಸ್ವಾಮಿಯವರು ಅಪ್ಪಣೆಕೊಡಿಸಿದ್ದೇನಂದರೆ.—„ಈ ತರಹೆಯ ಪ್ರದರ್ಶನಗಳು ಎಲ್ಲಾ ಬಗೆಯ ಜನಗಳಿಗೂ ತಮ್ಮ ನೆರೆಯವರು ಏನುಮಾಡಬಲ್ಲರು ಎಂಬ ವಿಷಯವನ್ನು ತಿಳಿದುಕೊಳ್ಳಲು ಅವಕಾಶವುಂಟುಮಾಡುತ್ತವೆ. ಕೈಗಾರಿಕೆಯವರಿಗೆ ಇವುಗಳಿಂದ ಬಹಳ ಅನುಕೂಲ. ಹೇಗಂದರೆ,

ಇವರು ತಮ್ಮ ಕೌಶಲವನ್ನು ವಿಶೇಷ ಪ್ರಯೋಜನಕರವಾಗಿ ಉಪಯೋಗಿಸುವ ಮಾರ್ಗಗಳನ್ನು ತೋರಿಸಿಕೊಡುತ್ತವೆ. ವ್ಯಾಪಾರಿಗಳೂ ಸಹ ಪದಾರ್ಥಗಳಿಗೆ ಗಿರಾಕಿಯಿರತಕ್ಕ ಸ್ಥಳಗಳನ್ನು ಹೊಸದಾಗಿ ಈ ಮೂಲಕ ತಿಳಿದುಕೊಳ್ಳಬಹುದಲ್ಲದೆ ಪದಾರ್ಥಗಳು ದೊರೆಯುವ ಸ್ಥಳವನ್ನು ಸಹ ಹೊಸದಾಗಿ ತಿಳಿದುಕೊಳ್ಳಬಹುದು. ಒಂದುವೇಳೆ ಈ ವಿಚಾರದಲ್ಲಿ ನಮ್ಮ ಕೋರಿಕೆಗಳು ಸಫಲವಾಗದಿರಬಹುದಾದಾಗ್ಯೂ ಕೂಡ ಇಂಥಾ ಪ್ರದರ್ಶನಗಳು ಜನರಿಗೆ ತಿಳುವಳಿಕೆ ಹೆಚ್ಚಿಸುವದರಲ್ಲಿಯೂ ದೇಶವನ್ನು ಅಭಿವೃದ್ಧಿಸ್ಥಿತಿಗೆ ತರುವದರಲ್ಲಿಯೂ ವಿಶೇಷ ಸಹಕಾರಿಗಳಾಗಿರುವ ವಿಷಯದಲ್ಲಿ ನಮಗೆ ಲೇಶವೂ ಸಂದೇಹವಿಲ್ಲ." ಈಪ್ರಕಾರವಾದ ಮಹಾಸ್ವಾಮಿಯವರ ನಿರೀಕ್ಷಣೆಯು ತಕ್ಕಮಟ್ಟಿಗೆ ನಿದರ್ಶನಕ್ಕೆ ಬಂದಿರುವದೆಂಬ ವಿಷಯವನ್ನೂ ಮತ್ತು ಕಳೆದ ವರ್ಷ ಪ್ರದರ್ಶನದಲ್ಲಿ ನ್ಯೂನತೆಗಳಿದ್ದಾಗ್ಯೂ ಮೈಸೂರು ಮತ್ತು ಇತರ ದೇಶಗಳ ಸರ್ಕಾರಿ ಇಲಾಖೆಗಳು ಮತ್ತು ಇತರರೂ ಸಹ ನಾವು ನಿರೀಕ್ಷಿಸಿದುದಕ್ಕಿಂತ ಹೆಚ್ಚಾಗಿ ಆದರದಿಂದ ನಮ್ಮ ಪ್ರದರ್ಶನಕ್ಕೆ ಬಹಳ ಸಹಾಯಮಾಡಿರುತ್ತಾರೆಂಬ ವಿಷಯವನ್ನು ಸಹ ವಿಜ್ಞಾಪಿಸಲು ಹರ್ಷವುಳ್ಳವನಾಗಿರುತ್ತೇನೆ.

೩. ಹಾಲಿ ಮಳೆ ಬೆಳೆಗಳು ಕಾಲೋಚಿತವಾಗಿ ನಡಿಸದೆ ಆಹಾರ ಪದಾರ್ಥಗಳ ಧಾರಣೆಮಾಸಿಯು ತಗ್ಗಾಗಿದ್ದರೂ ಸಿಲೋನ್, ಬರ್ಮಾ, ಮತ್ತು ಹಿಂದೂಸ್ಥಾನದ ಎಲ್ಲಾ ಪ್ರಾಂತ್ಯಗಳಿಂದಲೂ ಮತ್ತು ಮೈಸೂರು ದೇಶದ ಎಲ್ಲಾ ಡಿಸ್ಟ್ರಿಕ್ಟುಗಳಿಂದಲೂ ಸಹ ಕಳೆದ ವರ್ಷದಂತೆ ಉತ್ಕೃಷ್ಟವಾದ ಪದಾರ್ಥಗಳು ಹೆಚ್ಚಾಗಿಯೇ ಬಂದಿರುತ್ತವೆ.

೪. ಪ್ರದರ್ಶನವು ಪ್ರಾರಂಭವಾದ ಲಾಗಾಯಿತು ಈ ಹತ್ತು ದಿವಸಗಳಲ್ಲಿ ೧೬,೦೦೦ ಜನಗಳು ರುಸುಂಕೊಟ್ಟು ಪ್ರದರ್ಶನವನ್ನು ನೋಡಿರುತ್ತಾರೆ ಮತ್ತು ರುಸುಂಇಲ್ಲದೆ ಬಿಡಲ್ಪಟ್ಟ ಈ ಕೆಲಸದಮೇಲೆ ಹಾಜರಿದ್ದವರು ಬಡರೈತರು, ಪಟೇಲರು, ಶಾನುಭೋಗರು, ಶೇಕದಾರರು, ಸ್ಯಾನಿಟರಿ ಇನ್ಸ್ಪೆಕ್ಟರು ಮತ್ತು ದನಗಳ ಮಾಲೀಕರು ಇವರ ಒಟ್ಟು ಸಂಖ್ಯೆ ಸುಮಾರು ೫,೦೦೦ ಮತ್ತು ಮಹಾಸ್ವಾಮಿಯವರ ಪ್ರಸಿದ್ಧರಾದ ಅತಿಥಿಗಳು ಘನಪೊಂದಿದ ಬ್ರಿಟಿಷ್ ರೆಸಿಡೆಂಟರವರೂ ಮತ್ತು ಅವರ ಪತ್ನಿಯವ

ರೂ ಮಿಸ್. ಕ್ಲಾರ್ಕಯವರು ಮತ್ತು ಕೊಯಮುತ್ತೂರು ವ್ಯವಸಾಯಾಧ್ಯಕ್ಷರೂ ಮದರಾಸ್ ಅಧಿಪತ್ಯದ ವ್ಯವಸಾಯ ಇಲಾಖೆಯ ಅಧ್ಯಕ್ಷರೂ ಮುಂತಾದ ಮಹನೀಯರೂ ಈ ಪ್ರದರ್ಶನವನ್ನು ಪರೀಕ್ಷಿಸಿ ನೋಡಿ ತೃಪ್ತಿಪಟ್ಟರು.

---o---

## The Potato Worm.*

## ಬಟಾಟೆ ಹುಳ.

ಉರಲಗಡ್ಡೆಗೆ ಒಂದು ತರಹೆ ಸಣ್ಣ ಬೂದು ಬಣ್ಣದ ಹುಳ ಬೀಳುವ ಸಂಗತಿಯು ಸಾಮಾನ್ಯವಾಗಿ ಉರಲುಗಡ್ಡೆ ಬೆಳೆಯತಕ್ಕವರಿಗೆ ಗೊತ್ತೇ ಇದೆ. ತತ್ರಾಪಿ ಗಡ್ಡೆಗಳನ್ನು ಕೋಣೆಗಳಲ್ಲಿ ತುಂಬಿಟ್ಟಿರುವಾಗ ಈ ಹುಳು ಬೀಳುವದು ವಿಶೇಷ. ಈ ಹುಳುಗಳ ಕಾಟದಿಂದಲೇ ಬೀಜಕ್ಕೆ ಬೇಕಾಗುವ ಗಡ್ಡೆಗಳನ್ನು ಫಸಲು ತೆಗೆದುಕೊಂಡನಂತರ ಪುನಃ ಬಿತ್ತನೆ ಕಾಲದ ತನಕ ಶೇಖರಿಸಿಡುವದು ಬಹಳ ಪ್ರಯಾಸವಾದಕಾರಣ ವರ್ಷ ವರ್ಷ ಇಟಲಿ ದೇಶದಿಂದ ಬೊಂಬಾಯಿಗೆ ಬೀಜದ ಗಡ್ಡೆಯನ್ನು ಬಹಳವಾಗಿ ತರಿಸುತ್ತಾರೆ. ಹೊಲಗಳಲ್ಲಿ ಪೈರು ಇನ್ನೂ ಹಸರಾಗಿರುವಾಗಲೆ ಈ ಹುಳುಗಳು ಮೊದಲು ಎಲೆಗಳಮೇಲೆ ಕಾಣಿಸಿಕೊಳ್ಳುತ್ತವೆ. ಅನಂತರ ಮಣ್ಣಿನಿಂದ ಮುಚ್ಚಲ್ಪಡದೆ ಆಕಸ್ಮಾತ್ ಹೊರಗೆ ಕಾಣಿಸಿಕೊಳ್ಳುವ ಹಸಿ ಗಡ್ಡೆಗಳಿಗೂ ಕ್ರಮೇಣ ಬೀಳುತ್ತವೆ. ಪರಂತು ಪೂರಾ ಮಣ್ಣಿನೊಳಗೆ ಇರುವ ಗಡ್ಡೆಗಳಿಗೆ ಎಂದಿಗೂ ಬೀಳುವದಿಲ್ಲ. ಏಕಂದರೆ, ಕೋಳಿ ಮರಿಗಳು ಮೊಟ್ಟೆಗಳೊಡೆದು ಬರುವ ರೀತಿ ಈ ಹುಳುಗಳು ಸಣ್ಣ ಚಿಟ್ಟೆಯ ಮೊಟ್ಟೆಗಳಿಂದ ಹೊರಗೆ ಬರುತ್ತವೆ. ಮತ್ತು ಚಿಟ್ಟೆಗಳು ಭೂಮಿಯಲ್ಲಿ ಕೊರೆದುಕೊಂಡು ಹೋಗುವದಿಲ್ಲವಾದ ಕಾರಣ ಇವುಗಳು ಮಣ್ಣಿನೊಳಗಿರುವ ಗಡ್ಡೆಗಳಮೇಲೆ ಮೊಟ್ಟೆಯಿಡಲು ಸಾಧ್ಯವಿಲ್ಲ. ರೈತರು ಗಡ್ಡೆಗಳನ್ನು ಅಗೆದು ಕೂಡಿಡುವ ಕಾಲದಲ್ಲಿ ಎಲ್ಲಾ ಗಡ್ಡೆಗಳನ್ನು ಬೆರೆಸಿಬಿಡುತ್ತಾರಾದ್ದರಿಂದ ಹಸರು ಗಡ್ಡೆಗಳಿಂದ ಇ

---

* ಬೊಂಬಾಯಿ ವ್ಯವಸಾಯ ಇಲಾಖೆಯ ಲೀಫ್ಲೆಟ್ ನಂ. ೫, ೧೯೦೮.

ತರ ಗಡ್ಡೆಗಳಿಗೂ ಹುಳುಗಳು ಹರಡುತ್ತವೆ. ಪೈರಿಗೆ ವಿಶೇಷವಾಗಿ ಹುಳ ಬಿದ್ದರೆ ಉತ್ಪತ್ತಿಯಲ್ಲಿ ಸುಮಾರು ನಾಲ್ಕರಲ್ಲಿ ಒಂದು ಭಾಗಕ್ಕಿಂತ ಹೆಚ್ಚಾಗಿಯೇ ಕೆಟ್ಟುಹೋಗುತ್ತದೆ. ಬೆಳೆ ಚನ್ನಾಗಿ ಆದರೆ ಎಕರೆಯೊಂದಕ್ಕೆ ೨೫ ಪೌಂಡು ತೂಕದ ೪೦೦ ಮಣ ಗಡ್ಡೆಯಾಗುತ್ತೆ. ಇದರ ಬೆಲೆ ಮಣ ಒಂದಕ್ಕೆ ೧೨ ಆಣೆಯಂತೆ ಸುಮಾರು ೩೦೦ ರೂಪಾಯಿ ಆಗುತ್ತೆ. ಅಂದರೆ ಎಕರೆಯೊಂದಕ್ಕೆ ಹುಳುವಿನ ಕಾಟದಿಂದ ೭೫ ರೂಪಾಯಿ ನಷ್ಟವಾಗುತ್ತೆಂದು ಹೇಳಬಹುದು.

ಈ ಹುಳುಗಳು ಉರಲುಗಡ್ಡೆಯನ್ನು ನಷ್ಟಪಡಿಸುವದು ತಪ್ಪಿಸಲು ರೈತರು ಈ ಕೆಳಗೆ ಕಂಡ ಕ್ರಮಗಳನ್ನು ಅನುಸರಿಸುವದು ಒಳ್ಳೇದು.

(೧) ಬೀಜದ ಗಡ್ಡೆಯನ್ನು ಆಳವಾಗಿ ನೆಡಬೇಕು.

(೨) ಕಳೆ ತೆಗೆಯುವ ಕಾಲದಲ್ಲಿ ಹೊರಗೆ ಕಾಣುವ ಗಡ್ಡೆಗಳನ್ನು ಚೆನ್ನಾಗಿ ಮಣ್ಣಿನಿಂದ ಮುಚ್ಚಬೇಕು.

(೩) ಗಿಡಗಳ ಸಾಲುಗಳಿಗೆ ಎರಡು ಪಕ್ಕಗಳಲ್ಲಿಯೂ ನೀರು ಹಾಕಬೇಕು.

(೪) ಗಡ್ಡೆಗಳನ್ನು ಅಗೆಯುತ್ತಲೆ ಸ್ವಲ್ಪವೂ ತಡಮಾಡದೆ ಹೊಲದಿಂದ ಕೂಡಲೆ ಸಾಗಿಸಬೇಕು.

(೫) ಗಡ್ಡೆಯನ್ನು ಗೋಣೀ ಚೀಲದಲ್ಲಿ ಭರ್ತಿಮಾಡಿ ಚೆನ್ನಾಗಿ ಗಾಳಿಯಾಡುವ ಕೊಠಡಿಗಳಲ್ಲಿ ಇಡಬೇಕು. ಮತ್ತು ತಿಂಗಳಿಗೊಂದಾವರ್ತಿಯಾದರೂ ಇವುಗಳನ್ನು ಚೀಲದಿಂದ ತೆಗದು ತಿರಿವಿಹಾಕಿ ಕೆಟ್ಟುಹೋದವುಗಳನ್ನು ಬಿಸಾಟು ಒಳ್ಳೆ ಗಡ್ಡೆಗಳನ್ನು ಮಾತ್ರ ಪುನಃ ಚೀಲಗಳಲ್ಲಿ ತುಂಬಿ ತತ್‌ಕ್ಷಣವೇ ಬಾಯಿ ಕಟ್ಟಿಡಬೇಕು. ಹುಳುಗಳು ಒಂದು ಚೀಲದಿಂದ ಇನ್ನೊಂದು ಚೀಲಕ್ಕೆ ಹೋಗದರೀತಿ ನೋಡಿಕೊಳ್ಳಬೇಕು. ಗೋಣಿ ಚೀಲಗಳ ಖರೀದಿ ದುಬಾರೆ ಬೀಳುವದಿಲ್ಲವಾದ್ದರಿಂದ ಒಂದುಸಲ ಸ್ವಲ್ಪ ಹಣ ಖರ್ಚುಮಾಡಿ ಕೊಂಡುಕೊಂಡರೆ ಅವು ಅನೇಕ ವರ್ಷ ಬಾಳಿಕೆ ಬರುತ್ತವೆ.

(೬) ಇನ್ನೂ ಹಸರಾಗಿರುವ ಗಡ್ಡೆಗಳನ್ನೆ ಆಗಲಿ ಅಥವಾ ಹೊಲಗಳಲ್ಲಿ ಬಿದ್ದಿರುವ ಗಡ್ಡೆಗಳನ್ನೆ ಆಗಲಿ ಒಳ್ಳೆ ಗಡ್ಡೆಗಳ ಜೊತೆಗೆ ಬೆರಸಬಾರದು. ಹಾಗೆ ಬೆರಿಸಿದರೆ ಹುಳುಗಳು ಹಸಿ ಗಡ್ಡೆಗಳಿಂದ ಒಳ್ಳೇ ಗಡ್ಡೆಗಳಿಗೂ ಹತ್ತುತ್ತವೆ.

---

## Central Co-operative Bank, Bangalore.

## ಬೆಂಗಳೂರು ಸೆಂಟ್ರಲ್ ಕೋಆಪರೇಟೀವ್ ಬ್ಯಾಂಕ್.

ಕಳೆದ ಅಕ್ಟೋಬರ್ ತಿಂಗಳ ಆದಿಭಾಗದಲ್ಲಿ ಸಿಮ್ಲಾದಲ್ಲಿ ನಡೆದ ಕೋ ಆಪರೇಟೀವ್ ಸೊಸೈಟಿಗಳ ರಿಜಸ್ಟ್ರಾರುಗಳ ಸಭೆಯಲ್ಲಿ ಚರ್ಚಿಸಲ್ಪಟ್ಟ ಅನೇಕ ವಿಷಯಗಳಲ್ಲಿ ಗ್ರಾಮಾಂತರಗಳಲ್ಲಿನ ಸೊಸೈಟಿಗಳಿಗೆ ಬಂಡವಾಳವು ಯಾವರೀತಿಯಲ್ಲಿ ಒದಗಿಸಬೇಕೆಂಬುದು ಒಂದು ವಿಷಯವಾಗಿತ್ತೆಂದು ಹಿಂದಿನ ೧—೧೧—೦೯ನೆ ತಾರೀಖಿನ ಸಂಚಿಕೆಯಲ್ಲಿ ತಿಳಿಸಿದ್ದೆವಷ್ಟೆ. ಸರ್ಕಾರದವರೇ ಇಂಥಾ ಸೊಸೈಟಿಗಳಿಗೆ ಮುಂಗಡವಾಗಿ ಹಣ ಕೊಟ್ಟು ಪ್ರೋತ್ಸಾಹಿಸುವದಕ್ಕಿಂತಲೂ ಅಲ್ಲಲ್ಲಿ ಬುದ್ಧಿವಂತರೂ, ಧನಿಕರೂ ಮತ್ತು ಅನುಭವಶಾಲಿಗಳೂ ಸೇರಿ ಸೆಂಟ್ರಲ್ ಸೊಸೈಟಿಗಳನ್ನು ಏರ್ಪಡಿಸಿಕೊಂಡು ಗ್ರಾಮಾಂತರ ಸೊಸೈಟಿಗಳಿಗೆ ಆಗಾಗ್ಯೆ ಬೇಕಾಗುವ ಹಣವನ್ನು ಕಮ್ಮಿ ರೇಟು ಬಡ್ಡಿಗೆ ತಕ್ಕ ಖಾತರಿ ಮೇಲೆ ಒದಗಿಸಿಕೊಡುವದು ಅತ್ಯುತ್ತಮವೆಂದು ಸಿಮ್ಲಾದಲ್ಲಿ ನಡೆದ ಸಭೆಯು ತೀರ್ಮಾನದಂತೆ ಮೈಸೂರುಶೀಮೆಯಲ್ಲೂ "ಬೆಂಗಳೂರು ಸೆಂಟ್ರಲ್ ಕೋ ಆಪರೇಟೀವ್ ಬ್ಯಾಂಕ್" ಎಂಬ ಒಂದು ಸೆಂಟ್ರಲ್ ಸೊಸೈಟಿಯು ಹೊಸದಾಗಿ ಸ್ಥಾಪಿಸಲ್ಪಟ್ಟಿರುತ್ತೆ. ಇದರಿಂದ ಕೋ ಆಪರೇಟೀವ್ ಕಾನೂನಿನ ಪ್ರಕಾರ ರಿಜಸ್ಟರಾಗಿರುವ ಇತರ ಸೊಸೈಟಿಗಳಿಗೆ ಮಾತ್ರ ಸಾಲ ಕೊಡಲ್ಪಡುವದು. ಅನೇಕ ದೊಡ್ಡಮನುಷ್ಯರುಗಳು ಈ ಸೆಂಟ್ರಲ್ ಬ್ಯಾಂಕಿಗೆ ಮೆಂಬರುಗಳಾಗಿ ಸೇರಿರುವರು. ಈ ಬ್ಯಾಂಕಿಗೆ ಈಕೆಳಗೆ ಹೇಳಿರುವ ದೊಡ್ಡಮನುಷ್ಯರು ಡೈರೆಕ್ಟರುಗಳಾಗಿರಲು ಒಪ್ಪಿರುತ್ತಾರೆ.

೧. ಮ|| ರಾ|| ರಾಜಮಂತ್ರಪ್ರವೀಣ ಸಿ. ಶ್ರೀನಿವಾಸಯ್ಯಂಗಾರ್ಯರು, ರಿಟೈರ್ಡ್ ಕೌನ್ಸಿಲರ್. (ಪ್ರೆಸಿಡೆಂಟರು).

೨. ಮ|| ರಾ|| ಎಂ. ಎಸ್. ನಾರಾಯಣರಾಯರು, ರಿಟೈರ್ಡ್ ಡೆಪ್ಯುಟಿ ಕಮಿಷನರ್. (ವೈಸ್ ಪ್ರೆಸಿಡೆಂಟರು)

೩. ಮ|| ರಾ|| ಸಿ. ಬಿ. ಶೇಷಗಿರಿರಾಯರು, ರಿಟೈರ್ಡ್ ಸಬ್‌ಜಡ್ಜ್. (ಸೆಕ್ರೆಟರಿಯವರು)

೪. ಮ|| ರಾ|| ಡಿ. ಅಪ್ಪೂರಾಯರು, ರಿಟೈರ್ಡ್ ಸರ್ವೆ ಡೆಪ್ಯುಟಿ ಸೂಪರಿಂಟೆಂಡೆಂಟ್. (ಮೆಂಬರು)

೫. ಮ|| ರಾ|| ಎ. ಅರುಣಾಚಲಮೊದಲಿಯಾರ್, ರಿಟೈರ್ಡ್ ಎಗ್ಸಿಕ್ಯೂಟೀವ್ ಇಂಜನೀರು. (ಮೆಂಬರು)

೨. ಇದರಂತೆ ಮದರಾಸ್ ಮೊದಲಾದ ಇತರ ಷಹರುಗಳಲ್ಲಿ ಇಂಡಿಯಾದಲ್ಲೆಲ್ಲಾ ಅನೇಕ ಸೆಂಟ್ರಲ್ ಸೊಸೈಟಿಗಳು ಏರ್ಪಟ್ಟು ಅವುಗಳು ಬಹಳ ಏಳಿಗೆಯಲ್ಲಿರುವವಲ್ಲದೆ ಅವುಗಳಿಂದ ಇತರ ಚಿಕ್ಕ ಸೊಸೈಟಿಗಳಿಗೂ ಸಹ ಬಹಳ ಉಪಯೋಗ ಉಂಟಾಗಿರುತ್ತೆ.

## Government Proceedings.

## ಸರ್ಕಾರಿ ಹುಕುಂಗಳು.

### I

ಗವರ್ನ್ಮೆಂಟಿನವರು ಪ್ರಕೃತ ಕಾಲಸ್ಥಿತಿಯನ್ನು ಆಲೋಚನೆಗೆ ತೆಗದುಕೊಂಡು ತೊಂದರೆಯಾಗಿರುವ ಪ್ರದೇಶಗಳಲ್ಲಿ ಪಟೇಲ ಶಾನುಭೋಗರುಗಳಿಗೆ ಸೆಪ್ಟಂಬರ್ ೩೦ನೆ ತಾರೀಖಿಗೆ ಆಖೈರಾಗುವ ೩ ತಿಂಗಳಿನ ಪ್ರೋಟಗಿಯನ್ನು ೧೯೦೯ನೆ ಜನವರಿ ೧೫ನೇ ತಾರೀಖು ಕಳೆದನಂತರವೂ ಮತ್ತು ಮುಂದಿನ ೩ ತಿಂಗಳಿನ ಪ್ರೋಟಗಿಯನ್ನು ೧೯೦೯ನೆ ಮಾರ್ಚಿ ೧೫ನೇ ತಾರೀಖಾದನಂತರವೂ ಈಮೇರೆ ಡೆಪ್ಯುಟಿ ಕಮಿಷನರವರುಗಳು ಇಷ್ಟಪಟ್ಟಲ್ಲಿ ಮುಂಗಡವಾಗಿ ಬಟವಾಡೆ ಮಾಡಬಹುದೆಂದು ೧೯೦೮ನೆ ಡಿಸೆಂಬರು ೧೨ನೇ ತಾರೀಖಿನ ಆರ್. ೩೭೪೭—೫೬ ಅರ್. ಎಂ. ೭೧-೦೮-೩ನೆ ನಂಬರು ಪ್ರೊಸೀಡಿಂಗ್ಸಿನಲ್ಲಿ ಹುಕುಂ ಮಾಡಿರುತ್ತಾರೆ.

II

ಪ್ರಕೃತ ಕಾಲಸ್ಥಿತಿಯು ಅನುಕೂಲವಾಗಿಲ್ಲದಿರುವ ಕಾರಣ ಚಿತ್ರದುರ್ಗ ಡಿಸ್ಟ್ರಿಕ್ಟಿನಲ್ಲಿ ಮೈನರು ಕೆರೆಗಳಿಗೆ ರೈತರಿಂದ ಆಗಬೇಕಾದ ಮಟ್ಟಿ ಕಾಂಗಾರಿ ಬಗ್ಗೆ ಇವರಿಗೆ ಸರ್ಕಾರದಿಂದ ಹಣವನ್ನು ಅಡ್ವಾನ್ಸು ಮಾಡಿ ನಂತರ ಕಂತುಗಳಮೇರೆ ವಸೂಲ್ಮಾಡಿಕೊಳ್ಳುವ ಬಗ್ಗೆ ಸರ್ಕಾರದವರು ಮಂಜೂರ್ಮಾಡಿರುವ ಮೊಬಲಗಿನ ಪೈಕಿ ಕೆಲವು ಮೊಬಲಗನ್ನು ರೆಸ್ಟೋರಾಗಿರುವ ಮೇಜರ್ ಕೆರೆಗಳ ಮಟ್ಟಿ ಕಾಂಗಾರಿ ಬಗ್ಗೆ ಸಹ ರೈತರಿಗೆ ಅದೇ ಮೇರಿಗೆ ಅಡ್ವಾನ್ಸು ಮಾಡಬಹುದೆಂದು ರೆವಿನ್ಯೂಕಮಿಷನರವರು ಶಿಫಾರಸು ಮಾಡಿದ್ದರಮೇಲೆ ಗವರ್ನಮೆಂಟಿನವರು ಹುಕುಂ ಮಾಡಿರುವದೇನಂದರೆ:—ಗವರ್ನಮೆಂಟಿನವರು ರೆಸ್ಟೋರಾದ ಮೇಜರ್ ಕೆರೆಗಳಿಗೆ ರೈತರಿಂದ ಆಗಬೇಕಾದ ಸಾಲಾಬಾದ್ ಕಾಂಗಾರಿಯನ್ನು ರೈತರು ಬೇಕಾಗಿ ಮಾಡದೆ ಬಿಟ್ಟಿರುವ ಸಂದರ್ಭಗಳಲ್ಲಿ ಯಾವ ರಿಯಾಯತಿ ತೋರಿಸಲು ಇಷ್ಟಪಡುವದಿಲ್ಲ. ಮರಂತು ಕಾಲಸ್ಥಿತಿ ಅಥವಾ ಇತರ ನಿರ್ವಾಹವಿಲ್ಲದ ಅನಿವಾರ್ಯಗಳಿಂದ ರೈತರಿಗೆ ಸದರಿ ಕಾಂಗಾರಿಯನ್ನು ಮಾಡಲು ಚೈತನ್ಯವಿಲ್ಲದೇ ಇರುವ ಸಂದರ್ಭಗಳಲ್ಲಿಯೂ ಮತ್ತು ತೊಂದರೆಯಾಗಿರುವ ಪ್ರದೇಶಗಳಲ್ಲಿ ಹೂಣಾ ತೆಗೆಯುವದು ಮತ್ತು ಮಟ್ಟಿ ಕಾಂಗಾರಿಯು ಜನರಿಗೆ ಸಹಾಯಕವಾಗಿ ಪರಿಣಮಿಸುವ ಸಂದರ್ಭದಲ್ಲಿಯೂ ಸಹ ಸದರಿ ಮಟ್ಟಿ ಕಾಂಗಾರಿಗೆ ತಗಲುವ ಲಾಗವಡನ್ನು ರೈತರಿಗೆ ಈ ಸಾಲಿನಲ್ಲಿ ಸರ್ಕಾರದಿಂದ ಅಡ್ವಾನ್ಸು ಮಾಡಿ ನಂತರ ೨—೩ ಕಂತುಗಳಲ್ಲಿ ವಸೂಲ್ಮಾಡಬಹುದು. ಸಂಬಂಧಪಟ್ಟ ರೈತರು ಅಡ್ವಾನ್ಸು ಮೊಬಲಗನ್ನು ವಾಪಸು ಪಾವತಿ ಮಾಡಲು ತಪ್ಪಿದರೆ ಇದನ್ನು ಜಮೀನು ಕಂದಾಯದಂತೆ ವಸೂಲ್ಮಾಡುವದಕ್ಕೆ ಅನುಕೂಲಿಸುವ ರೀತಿ ಅವರಿಂದ ಒಂದು ಮುಚ್ಚಳಿಕೆಯನ್ನು ತೆಗೆಯತಕ್ಕದ್ದು.—ಗೌ. ಪ್ರೊ. ನಂ. ಆರ್. ೩೭೪೭-೩ ಅಗ್ರಿ. ೮೧-೦೮-೨, ತಾ॥ ೧೨.೧೨.೦೮.

## Agriculture in Malabar. *—*Concld.*

## ಮಲಯಾಳದಲ್ಲಿನ ವ್ಯವಸಾಯ ಸ್ಥಿತಿ.

(ಹಿಂದಿನ ಸಂಚಿಕೆಯ ಶೇಷ.)

ಅರಸಿನ.—ಇದನ್ನು ಕೊಯಮತ್ತೂರು ಮತ್ತು ಸೇಲಂ ಡಿಸ್ಟ್ರಿಕ್ಟುಗಳಲ್ಲಿ ವಿಶೇಷವಾಗಿ ಬೆಳೆಯುತ್ತಾರೆ. ಮಲಯಾಳದಲ್ಲಿ ಪ್ರತಿಯೊಂದು ಮನೆ ಹಿತ್ತಲಿನಲ್ಲೂ ಸಾಂಭಾರ ಪದಾರ್ಥಕ್ಕಾಗಿ ಸ್ವಲ್ಪಮಟ್ಟಿಗೆ ಬೆಳೆಯುವದುಂಟು. ಇದು ಖುಷ್ಕಿ ಜಮೀನಿನಲ್ಲಿ ಹುಲುಸಾಗಿ ಬೆಳೆಯುವದು ಮತ್ತು ಹುಟ್ಟುವಳಿಯನ್ನು ನೋಡಿದರೆ ಈ ಪ್ರಾಂತ್ಯದಲ್ಲಿ ಇದರ ಸಾಗುವಳಿಯನ್ನು ಬಹಳವಾಗಿ ಹೆಚ್ಚಿಸಿ ವಿಶೇಷ ಪ್ರಯೋಜನ ಹೊಂದಬಹುದಾಗಿರುತ್ತೆ. ಮಲಯಾಳದಲ್ಲೇನೋ ಸ್ಥಳದ ಅರಸಿನವು ಧಾರಾಳವಾಗಿ ಬಿಕರಿಯಾಗುತ್ತಿದ್ದರೂ ಕೂಡ ಶಾಲ್ಯದ ಅರಸಿನಕ್ಕೆ ದೊರೆಯುವ ಬೆಲೆಯು ಇದಕ್ಕೆ ಸಿಕ್ಕುವದಿಲ್ಲ. ಮಲಯಾಳದಲ್ಲಿ ಅರಸಿನಕ್ಕೆ ಸರಿಯಾಗಿ ಹದ ಕೊಡದೇ ಇರುವದೇ ಸ್ಥಳದ ದಿನಸಿಗೆ ಕಮ್ಮಿ ಬೆಲೆ ದೊರೆಯುವದಕ್ಕೆ ಕಾರಣ. ಶಾಲ್ಯದಲ್ಲಿ ಹದ ಕೊಡುವದು ಬಹಳ ವಿಲಕ್ಷಣವಾಗಿರುತ್ತೆ. ಮತ್ತು ಆ ಅರಸಿನವನ್ನು ಕೊಳ್ಳುವವರು ಬಹಳವಾಗಿ ಮೋಹಿಸುವದರಿಂದ ಅದಕ್ಕೆ ಒಳ್ಳೇಬೆಲೆ ದೊರೆಯುತ್ತೆ. ಆ ಕ್ರಮವನ್ನೇ ಮಲಯಾಳದಲ್ಲೂ ಅನುಸರಿಸಿದರೆ ಅನುಕೂಲ.

ಮರಗೆಣಸು.—ಇದು ದುರ್ಭಿಕ್ಷ ಕಾಲಗಳಲ್ಲಿ ಬಡಬಗ್ಗರಿಗೆ ಆಹಾರವೆಂದು ಹೇಳಬಹುದು. ಇದರ ವ್ಯವಸಾಯಕ್ರಮ ಅತಿ ಸಾಮಾನ್ಯ. ಒಂದಡಿ ಉದ್ದವಿರುವ ಸಣ್ಣ ಸಣ್ಣ ಕೊನೆಗಳನ್ನು ಚನ್ನಾಗಿ ಉಳುಮೆ ಮಾಡಿದ ಖುಷ್ಕಿ ಜಮೀನಿನಲ್ಲಿ ವರುಷದಲ್ಲಿ ಯಾವಾಗ ಬೇಕಾದರೂ ನೆಡಬಹುದು. ಬೇಸಿಗೆಯಲ್ಲಿ ನೆಟ್ಟರೆ ಆಗಾಗ್ಯೆ ನೀರು ಹಾಕುತ್ತಿರಬೇಕು. ಇದು ಸಾಲ್ ಫಸಲು ಮತ್ತು ಬೆಳೆಯಿಟ್ಟ ಒಂದು ವರುಷದ ನಂತರ ಫಸಲಿಟ್ಟ ತಿಂಗಳಲ್ಲಿ ಗಡ್ಡೆಗಳನ್ನು ಅಗೆದುಕೊಳ್ಳಬಹುದು. ಕೊನೆ ನೆಡುವಕಾಲದಲ್ಲಿ ಸ್ವಲ್ಪ ಮರದ ಬೂದಿಯನ್ನು ಗೊಬ್ಬರವಾಗಿ ಹಾಕುವುದುಂಟು.

---

* ಹಿಂದು ಪತ್ರಿಕೆ.—೨೧-೧೨-೦೮.

ಗಡ್ಡೆಯು ೩೪ ಪೌಂಡಿಗೆ ೬-೮ ಆಣೆ ಬೆಲೆಯಾಗುತ್ತೆ. ಇದು ಬಹಳ ಸಿಧಾನವಾಗಿ ಜೀರ್ಣಿಸುವದರಿಂದ ವೈದ್ಯರು ಕೆಲಸಮಾಡುವವರು ಇತರ ಪದಾರ್ಥಗಳಿಗಿಂತ ಇದನ್ನು ಹೆಚ್ಚಾಗಿ ಮೋಹಿಸುತ್ತಾರೆ. ಇದರಲ್ಲಿ ವಿಶೇಷ ಶರ್ಕರ ಪದಾರ್ಥವಿರುತ್ತೆ. ಗಡ್ಡೆಗಳು ಬಹಳ ತೂಕವಾಗಿರುತ್ತವೆ. ಈಬೆಳೆಗೆ ಮುಳ್ಳಹಂದಿ ಕಾಟ ಬಹಳ. ಇದು ಗಡ್ಡೆಗಳನ್ನು ನೆಲದಿಂದ ಅಗೆದು ತಿನ್ನುತ್ತದೆಯಾಗಿ ಹೊಲದ ಸುತ್ತಲೂ ಭದ್ರವಾದ ಬೇಲಿ ಇರಬೇಕು. ಈಪೈರು ಭೂಮಿಯಲ್ಲಿನ ಸಾರವನ್ನು ಹೀರುವದಾದ್ದರಿಂದ ಜಮೀನಿಗೆ ವಿಶೇಷವಾಗಿ ಗೊಬ್ಬರ ಹಾಕಬೇಕಲ್ಲದೆ ಸ್ಥಳ ಬದಲಾಯಿಸಿ ಬೆಳೆಯಬೇಕು.

ಬನಾನಾ ಬಾಳೆಹಿಟ್ಟು.—ಮಲಯಾಳದಲ್ಲಿ ಬಾಳೆಹಣ್ಣಿನ ವ್ಯವಸಾಯು ವಿಶೇಷ ಮತ್ತು ಬೆಳೆದದ್ದನ್ನೆಲ್ಲಾ ಅಲ್ಲಿಯೇ ಉಪಯೋಗಿಸುತ್ತಾರೆ. ಮಲಯಾಳದ ದಕ್ಷಿಣ ಪ್ರಾಂತ್ಯದಲ್ಲಿ ಆಗಸ್ಟು ಮತ್ತು ಸೆಪ್ಟಂಬರು ತಿಂಗಳಲ್ಲಿ ವರುಷಕ್ಕೊಂದಾವರ್ತಿ ಫಸಲು ತೆಗೆಯುತ್ತಾರೆ. ಇದು ಸಾಲ್ ಫಸಲು. ಬಾಳೆಹಿಟ್ಟು ಅಶಕ್ತರಿಗೂ ಮಕ್ಕಳಿಗೂ ಬಹಳ ಒಳ್ಳೆ ಆಹಾರವೆಂದು ಹೇಳುತ್ತಾರೆ. ಹಿಟ್ಟು ಮಾಡಬೇಕಾದರೆ ಹಣ್ಣಿನ ಸಿಪ್ಪೆಯನ್ನು ಸುಲಿದು ಬಿಲ್ಲೆ ಬಿಲ್ಲೆಯಾಗಿ ಕತ್ತರಿಸಿ ಚೆನ್ನಾಗಿ ಒಣಗಿಸಿ ಪುಡಿಮಾಡಬೇಕು. ಹಣ್ಣಿನ ತೂಕದ ೫ರಲ್ಲಿ ೧ ಭಾಗ ಹಿಟ್ಟು ಒದಗುತ್ತದೆ. ಒಂದು ಟನ್ ಹಿಟ್ಟಿಗೆ ಸುಮಾರು ೩೮೦ ರೂಪಾಯಿ ಲಾಗವತು ಆಗುತ್ತದೆಯಂತೆ. ಬಂಗಾಳದಲ್ಲಿ ಚಿಲ್ಲರೆ ವ್ಯಾಪಾರಿಗಳು ಪೌಂಡು ಒಂದಕ್ಕೆ ಒಂದು ರೂಪಾಯಿನಂತೆ ಮಾರುತ್ತಾರೆ. ಅಂದರೆ ಒಂದು ಟನ್ನಿಗೆ ಸುಮಾರು ೧,೭೬೦ ರೂಪಾಯಿ ನಫೆ ತೇಲುತ್ತೆ. ಈ ಧಾರಣೆ ಒಂದೇ ಸಮನಾಗಿದ್ದರೆ ಇದನ್ನು ಬೆಳೆಯತಕ್ಕವರಿಗೆ ಬಹಳ ಅನುಕೂಲ. ಹಿಟ್ಟನ್ನು ಸಾಮಾನ್ಯವಾದ ಯಾವದಾದರೂ ಒಂದು ಕೈಯಂತ್ರದಿಂದ ಹೆಚ್ಚು ಸುಲಭವಾಗಿಯೂ ಮತ್ತು ಉತ್ತಮವಾಗಿಯೂ ಮಾಡಬಹುದೆ, ತಯಾರಿಸುವ ಕಾಲದಲ್ಲೊ ಅಥವಾ ನಂತರವೊ ವಿರೋಧವಾಗದೇ ಇರುವ ಯಾವ ಪದಾರ್ಥವನ್ನು ಇದಕ್ಕೆ ಬೆರೆಸಿದರೆ ಹಿಟ್ಟು ಹೆಚ್ಚುಕಾಲ ಕೆಡದೇ ಇರುತ್ತದೆ ಎಂಬೀ ಅಂಶಗಳನ್ನು ತಿಳಿದುಕೊಳ್ಳುವದು ಅವಶ್ಯಕ.

## Figs in Southern India. *

## ದಕ್ಷಿಣ ಇಂಡಿಯಾದಲ್ಲಿ ಅಂಜೂರು ಬೆಳೆ.

ಮದರಾಸು ಸರ್ಕಾರಿ ಸಸ್ಯ ಶಾಸ್ತ್ರಜ್ಞರಾಗಿದ್ದ ಮ|| ಸಿ. ಕೆ. ಸುಬ್ಬರಾಯರವರು ಮೇಲ್ಕಂಡ ವಿಷಯವಾಗಿ ಬರೆದಿರುವ ಲೇಖನದ ಮುಖ್ಯ ತಾತ್ಪರ್ಯವೇನಂದರೆ.—ಈ ಹಣ್ಣು ಇಂಡಿಯಾದೇಶದಲ್ಲಿ ಆರ್ಷೇಯುದಿಂದಲೂ ಬಂದಿರತಕ್ಕದ್ದು. ಬೆಂಗಳೂರು ಮತ್ತು ಬಳ್ಳಾರಿ ಕಡೆಗಳಲ್ಲಿ ಎರಡು ತರಹೆ ಹಣ್ಣು ಉಂಟು. ಮದರಾಸಿಗೆ ಬರುವ ಪುಣೆ ಪ್ರಾಂತ್ಯದ ಹಣ್ಣು ಮತ್ತು ಬೆಂಗಳೂರಿನಲ್ಲಿ ಬೆಳೆಯುವ ಹಣ್ಣು ಅಚ್ಚುಧೂಮ್ರ (Purple) ಬಣ್ಣವಾಗಿರುತ್ತೆ. ಬಳ್ಳಾರಿ ಕಡೇದು ಸ್ವಲ್ಪ ಧೂಮ್ರಛಾಯೆಯಿಂದ ಕೂಡಿದ ಎಳೆ ಹಸರು ಬಣ್ಣವಾಗಿರುತ್ತದೆ. ಅಚ್ಚುಧೂಮ್ರ ಜಾತಿಯು ಮತ್ತೊಂದಕ್ಕಿಂತ ಶ್ರೇಷ್ಠವಾದದ್ದು. ಪುಣೆ ಹಣ್ಣು ಗಾತ್ರದಲ್ಲಿ ಬೆಂಗಳೂರು ಹಣ್ಣಿಗಿಂತಲೂ ಎರಡಷ್ಟು ದೊಡ್ಡದಾಗಿಯೂ ಮತ್ತು ಸುಮಾರು ಮೂರರಷ್ಟು ಹೆಚ್ಚು ಬೆಲೆಬಾಳತಕ್ಕದ್ದಾಗಿಯೂ ಇರುತ್ತದೆ. ಅಂಜೂರದ ಗಿಡವು ಕೀಟಗಳ ಮೂಲಕ ಫಲವತ್ತಾಗುತ್ತದೆ. ಈ ಕೀಟಗಳಿಲ್ಲದೇ ಇರುವ ಸಂದರ್ಭದಲ್ಲಿ ಅಂಜೂರು ಫಸಲು ಆಗುವದಿಲ್ಲ. ಶಾಸ್ತ್ರೀಯವಾಗಿ ಅಂಜೂರು ಬೆಳೆಯತಕ್ಕವರು ಕೀಟಗಳಿಲ್ಲದಿದ್ದರೂ ಗಿಡವು ಫಲವತ್ತಾಗುವದಕ್ಕೆ ಒಂದು ಸುಲಭೋಪಾಯವನ್ನು ಅನುಸರಿಸುತ್ತಿದ್ದಾರೆ. ಇದು ಇಲ್ಲಿನವರಿಗೆ ಗೊತ್ತೇಇಲ್ಲ. ಬೆಂಗಳೂರು ಮತ್ತು ಶ್ರೀರಂಗಪಟ್ಟಣದಲ್ಲಿ ಅಂಜೂರನ್ನು ವಿಶೇಷವಾಗಿ ಬೆಳೆಯುತ್ತಾರೆ, ಮತ್ತು ಬೆಂಗಳೂರಿನಿಂದ ಮದರಾಸಿಗೆ ತಾಜಾ ಹಣ್ಣು ಬಹಳವಾಗಿ ಸಾಗಿಹೋಗುತ್ತೆ. ಬಳ್ಳಾರಿಯ ಕೆಲವು ತೋಟದ ಹಣ್ಣುಗಳು ಬಹಳ ಉತ್ಕೃಷ್ಟವಾದವೆಂದು ಈಗ ೫೦ ವರುಷಗಳಿಂದಲೂ ಹೆಸರುಗೊಂಡಿವೆ. ಈ ಬೆಳೆಗೆ ೩ ಅಡಿ ಆಳದಲ್ಲಿ ಸುಣ್ಣ ಬೆರತ ಅಡಿಮಣ್ಣುಳ್ಳ ಕೆಂಪು ಒಡು ಭೂಮಿ ಸರ್ವೋತ್ತಮ.

ಸಾಮಾನ್ಯವಾಗಿ ಇದಕ್ಕೆ ಬೆರಿಕೆ ಗೊಬ್ಬರ ಹಾಕುತ್ತಾರೆ. ಕುರಿ

* ಇಂಡಿಯನ್ ಟ್ರೇಡ್ ಜರ್ನಲ್.—೧೫—೧೧—೦೮.

ಗೊಬ್ಬರ ಹಾಕಿದರೆ ಹಣ್ಣಿನ ಸಿಪ್ಪೆ ಬಹಳ ತೆಳುವಾಗಿ ಆಗುತ್ತದೆ. ದನವಿನ ಗೊಬ್ಬರದಿಂದ ರೋಗ ತಗಲುವದು. ಯಾವ ಗೊಬ್ಬರ ಹಾಕಿದರೂ ಕೆಮ್ಮಣ್ಣು ಮತ್ತು ಮಗಳು ಬೆರಿಸಬೇಕು. ಬೆಂಗಳೂರು ಕಡೆ ಗ್ರಾಮಸಾರವನ್ನು ಹಾಕುವದುಂಟು. ಗಿಡಕ್ಕೆ ಬಚ್ಚಲು ನೀರಿನಿಂದ ಬಹಳ ಅನುಕೂಲವುಂಟೆಂದು ಕೆಲವುಕಡೆ ಅನುಭವದಿಂದ ಗೊತ್ತಾಗುತ್ತೆ. ಸತ್ತ ನಾಯಿ ಮುಂತಾದ ಬೀಳುಗಳನ್ನು ಗಿಡದ ಸವಿಾಪದಲ್ಲಿ ಹೂಳಿದರೆ ಗಿಡವು ಬಹಳ ಚೆನ್ನಾಗಿ ಫಲಿಸುತ್ತದಂತೆ. ಮಳೆ ಇಲ್ಲದೆ ಇರುವಾಗ ಈ ಬೆಳೆಗೆ ನಾಲ್ಕು ದಿನಕ್ಕೊಂದಾವರ್ತಿ ನೀರು ಕಟ್ಟಬೇಕು. ತಥಾಪಿ ಗಿಡಗಳಿಗೆ ಗೊಬ್ಬರ ಹಾಕಿದ ನಂತರ ಹೆಚ್ಚಾಗಿ ನೀರುಕಟ್ಟುವದು ಅವಶ್ಯಕ. ಹಣ್ಣಾಗುವ ಕಾಲದಲ್ಲಿ ಗಿಡಕ್ಕೆ ನೀರು ಕಟ್ಟುವದು ಕೇವಲ ಮುಖ್ಯವಾಗಿರುತ್ತದೆ. ಆದರೆ ನೀರು ಹೆಚ್ಚಾದರೆ ಹಣ್ಣು ಸಪ್ಪೆಯಾಗಿ ಗಿಡವು ಕೆಟ್ಟುಹೋಗುತ್ತೆ. ಕಮ್ಮಿಯಾದರೆ ಹಣ್ಣು ಸಣ್ಣದಾಗಿ ಗಟ್ಟಿಯಾಗಿ ಆಗುತ್ತದೆ. ಮಳೆಗಾಲದಲ್ಲಿ ನೀರು ಬಸೆದುಹೋಗುವರೀತಿ ಕಡಗುಗಳನ್ನು ತೆಗೆಯಬೇಕು. ಅಂಜೂರು ಹಣ್ಣಿಗೆ ಪಕ್ಷಿಗಳು, ಅಳಿಲು, ಕಾಡುಬೆಕ್ಕು ಪುನಗಿನಬೆಕ್ಕು, ಮುಂಗಸಿ ಮತ್ತು ಇಲಿ ವೊದಲಾದವುಗಳ ಕಾಟ ಬಹಳ. ಆದ್ದರಿಂದ ಹಣ್ಣುಗಳನ್ನು ಯಾವದಾದರೂ ತರದಿಂದ ಮುಚ್ಚಬೇಕು. ಹೀಚುಗಳನ್ನು ಕಾಗದ ಅಥವಾ ಬಟ್ಟೆ ಚೀಲಗಳಿಂದ ಮುಚ್ಚುವದುಂಟು. ಈ ಫಸಲಿಗೆ ಒಂದು ತರದ ಹುಳು ಬೀಳುತ್ತದೆ. ಮತ್ತು ಬೂದು ರೋಗವೂ ತಗಲುವದುಂಟು. ಬೆಂಗಳೂರಿನಲ್ಲಿ ಹುಳು ಬಿದ್ದ ಕಡೆಯುಲ್ಲಿ, ಬೇವಿನಎಣ್ಣೆ, ಕರ್ಪೂರ, ವೈಲುತ್ತ ಮತ್ತು ಹಿಂಗನ್ನು ಬೆರಿಸಿ ಪಿಚಕಾರಿಗಳಿಂದ ರೋಗ ತಗಲಿದ ಗಿಡಗಳಿಗೆ ಎರಚುತ್ತಾರೆ. ಹೊಸ ಗಿಡಗಳು ಸರಿಯಾಗಿ ಸಾಗುವಳಿಯಾದರೆ ಗಿಡ ಒಂದಕ್ಕೆ ಸುಮಾರು ೩೦೦ ಹಣ್ಣು ಬಿಡುತ್ತವೆ. ೧೦ ವರ್ಷದ ಹಳೆ ಗಿಡಗಳು ಹಣ್ಣು ಬಿಡುವದು ಕಡಮೆ.

## Notifications.

## ಇಸ್ತಿಹಾರನಾಮೆಗಳು.

ನಂ. ೬೪೦೪ ತಾ|| ೧೯—೧೨—೦೮.

ಮೈಸೂರು ಸರ್ವಿಸ್ ರೆಗ್ಯುಲೇಷನ್ಸ್ ೧೭೭ನೆ ಪ್ರಕರಣದ ಮೇರೆ ಪ್ರೆಂಚ್‌ರಾಕ್ಸ್ ಸಬ್ ತಾ|| ಡೆಪ್ಯುಟಿ ಅಮಲ್‌ದಾರ್ ಸಿ. ಕಾಶೀನಾಥರಾಯರಿಗೆ ೧೯೦೮ನೆ ಆಗಸ್ಟು ೨೪ನೆ ತಾ|| ಲಾಗಾಯಿತು ೧೯ ದಿನಗಳ ಪ್ರಿವಿಲೇಜ್ ರಜಾ ಮಂಜೂರ್ಮಾಡಿರುತ್ತೆ.

---

## Occasional Notes.

## ವಿವಿಧ ವೃತ್ತಾಂತಗಳು.

೧. ರೇಷ್ಮೆ ವ್ಯವಸಾಯ ವಿಷಯಕವಾದ ಒಂದು ಪುಸ್ತಕವನ್ನು ಈ ಸಂಚಿಕೆಯೊಂದಿಗೆ ಸಪ್ಲಿಮೆಂಟಾಗಿ ರವಾನಿಸಿರುತ್ತೇವೆ.

---

೨. ಮೈಸೂರು ರೆವಿನ್ಯೂ ಮತ್ತು ವ್ಯವಸಾಯಕ ಗೆಜೆಟ್ ಪತ್ರಿಕೆಗಾಗಿ ದರಖಾಸ್ತು ಮಾಡುವವರು ತಮ್ಮ ಅರ್ಜಿಯನ್ನು ಹಜರತ್ ರೆವಿನ್ಯೂಕಮಿಷನರವರ ವಿಳಾಸಕ್ಕೇನೆ ಕಳುಹಿಸುತ್ತಾರೆ. ಇನ್ನು ಮುಂದೆ ಇಂಥಾ ಅರ್ಜಿಗಳನ್ನು ರೆವಿನ್ಯೂಕಮಿಷನರವರ ಫಸ್ಟ್ ಅಸಿಸ್ಟೇಟರವರ ಅಡ್ರೆಸ್ಸಿಗೆ ಬರೆದುಕೊಳ್ಳತಕ್ಕದ್ದು.

---

೩. ಪ್ರಪಂಚದಲ್ಲಿ ೧೯೦೪, ೧೯೦೫, ೧೯೦೬ ಮತ್ತು ೧೯೦೭, ಈ ನಾಲ್ಕು ವರುಷಗಳಲ್ಲಿ ಒಟ್ಟು ೧೮,೮೦೩,೦೦೦, ೧೫,೭೪೭,೦೦೦, ೧೯,೯೪೨,೦೦೦, ಮತ್ತು ೧೬,೫೧೨,೧೮೫ ಬೇಲುಗಳಂತೆ (ಬೇಲು ಒಂದಕ್ಕೆ ೫೦೦ ಪೌಂಡುಗಳು) ಹತ್ತಿಯು ಮಿಲ್ಲುಗಳಲ್ಲಿ (Mill) ಬಟ್ಟೆಗಳನ್ನು ತಯಾರಿಸುವದಕ್ಕೆ ಉಪಯೋಗಿಸಲ್ಪಟ್ಟಿರುವದಾಗಿ ತಿಳಿದುಬರುತ್ತೆ. ೧೯೦೭ನೆ ವರುಷದ ತಖ್ತೀಲನ್ನು ಇದರಡಿ ಕೊಟ್ಟಿರುತ್ತೆ.

೧. ವಿ॥ ಸಾಹುಕಾರ್ ಯಾಕೂಫ್‌ಖಾನ್ ಸಾಹೇಬರು ೭೫-೦-೦, ೨. ಮ॥ ಪಟ್ಣಶೆಟ್ಟಿ ಪುಟ್ಟಣ್ಣನವರು ೫೦-೦-೦, ೩. ಮ॥ ಪುಟ್ಟಮಾಸ್ತಿಗೌಡರು ೭೫-೦-೦, ೪. ಮ॥ ವೆಂಕಟೇಗೌಡರು ೭೫-೦-೦, ೫. ಮ॥ ರಾಗಿಮಂಡಿ ತಿರುಮಲಶೆಟ್ರು ೫೦-೦-೦, ೬. ಮ॥ ದೊಡ್ಡಮಾಸ್ತಿಗೌಡರು ೫೦-೦-೦, ೭. ಮ॥ ರಾಮೇಗೌಡರು ೫೦-೦-೦, ೮. ಮ॥ ಲಿಂಗೇಗೌಡರು ೫೦ ೦-೦, ೯. ಮ॥ ಸಂಜೀವೆಗೌಡರು ೫೦-೦-೦, ೧೦. ಮ॥ ಹೊನ್ನಾಯಕನಹಳ್ಳಿ ಚನ್ನೆಗೌಡರು ೫೦-೦-೦, ೧೧. ಮ॥ ಮಾಕಲಿ ಜವರಾಯಿಗೌಡರು ೫೦-೦-೦, ೧೨. ಮ॥ ತಗಚಿಗೆರೆ ಜವರಾಯಿಗೌಡರು ೫೦-೦-೦, ೧೩. ಮ॥ ಅಕ್ಕೂರು ಗುಂಡಪ್ಪನವರು ೫೦-೦-೦, ೧೪. ಮ॥ ಶ್ರೀನಿವಾಸಯ್ಯಂಗಾರ್ರು ೫೦-೦-೦, ೧೫. ಮ॥ ಕರಿನಿಂಗೇಗೌಡರು ೨೫-೦-೦, ೧೬. ಮ॥ ಪುಟ್ಟೆಗೌಡರು ೧೦-೦-೦, ೧೭. ಮ॥ ಶೆಟ್ಟಿಹಳ್ಳಿ ಮರಿಗೌಡರು ೨೫-೦-೦, ೧೮. ಮ॥ ನರಸೇಗೌಡರು ೨೦-೦-೦, ೧೯. ಮ॥ ಹೊಂಗನೂರು ವೆಂಕಟಗಿರಿಗೌಡರು ೧೦-೦-೦, ೨೦. ಮ॥ ಸಂತೆಮೋಗನಹಳ್ಳಿ ಈರೇಗೌಡರು ೨೦-೦-೦, ೨೧. ಮ॥ ಸಣಬನಹಳ್ಳಿ ಬೋರೆಗೌಡರು ೧೦-೦-೦ ೨೨. ಮ॥ ಲಿಂಗೆಗೌಡರು ೨೦-೦-೦, ೨೩. ಮ॥ ಚನ್ನೆಗೌಡರು ೧೦-೦-೦, ೨೪. ಮ॥ ಕೆಂಚೆಗೌಡರು ೧೦-೦-೦, ೨೫. ಮ॥ ಕಾಳೆಗೌಡರು ೨೦-೦-೦, ೨೬. ಮ॥ ಲಿಂಗೆಗೌಡರು ೧೦-೦-೦, ೨೭. ಮ॥ ಕಾಡೆಗೌಡರು ೨೦ ೦-೦, ೨೮. ಮ॥ ತಿಮ್ಮೆಗೌಡರು ೨೦-೦-೦, ೨೯. ಮ॥ ಕೆಂಚೆಗೌಡರು ೨೦-೦-೦, ೩೦. ಮ॥ ಶ್ಯಾ॥ ಗುಂಡಪ್ಪನವರು ೧೦-೦-೦, ೩೧. ಮ॥ ಯಜಮಾನ್ ಬಸಲಿಂಗಪ್ಪನವರು ೧೦-೦-೦, ೩೨. ವಿ॥ ಹುಸ್ಸೇನ್‌ಮಿಯಾಸಾಬರು ೨೫-೦-೦, ೩೩. ಮ॥ ಶ್ಯಾ॥ ಗುಂಡಯ್ಯನವರು ೧೫-೦-೦, ೩೪. ಮ॥ ಅಪ್ಪಾಜಯ್ಯನವರು ೧೦-೦-೦, ೩೫. ಮ॥ ಸಿದ್ದಲಿಂಗೆಗೌಡರು ೧೦-೦-೦, ೩೬. ಮ॥ ರಾಮಸಂಜೀವಯ್ಯನವರು ೭೫-೦-೦, ೩೭. ವಿ॥ ಆಲಂಮಿಯಾಸಾಬರು ೧೦-೦-೦, ೩೮. ಮ॥ ಸಿ. ಆರ್. ನಂಜುಂಡೈಯ್ಯನವರು ೨೦-೦-೦, ೩೯. ಮ॥ ಸಿದ್ದಪ್ಪನವರು ೨೦-೦-೦, ೪೦. ಮ॥ ಚಲುವೆಗೌಡರು ೨೦-೦-೦, ಜುಮ್ಲಾ ೧,೨೦೦-೦-೦.

---

V. B. Soobbiah & Sons, Printers, Bangalore— 1909.

THE MYSORE

# REVENUE & AGRICULTURAL GAZETTE.

ವಾಲ್ಯೂಂ ೩.] ಶುಕ್ರವಾರ, ೧೫ನೆ ಜನವರಿ ೧೯೦೯. [ನಂ. ೬.

| Contents. | ಅನುಕ್ರಮಣಿಕೆ. |
|---|---|
| 1. Co-operative Societies in Bombay Presidency. | ೧. ಬೊಂಬಾಯಿ ಆಧಿಪತ್ಯದ ಪರಸ್ಪರ ಸಹಾಯಕ ಸಂಘಗಳು. |
| 2. The Mysore Exhibition, 1908. | ೨. ಮೈಸೂರು ದಸರಾ ವ್ಯವಸಾಯಕ ಮತ್ತು ಕೈಗಾರಿಕೆಯ ಪ್ರದರ್ಶನ, ೧೯೦೮. |
| 3. Plantain Meal. | ೩. ಬಾಳೆ ಹಿಟ್ಟು. |
| 4. 'Gootee' Method of Propagation. | ೪. 'ಗೂಟಿ' ವಿಧಾನದಿಂದ ಸಸಿಗಳನ್ನು ತಯಾರುಮಾಡುವಿಕೆ. |
| 5. The Central Provinces & Berar Exhibition, 1908. | ೫. ಸೆಂಟ್ರಲ್ ಪ್ರಾವಿನ್ಸಸ್ ಮತ್ತು ಬಿರಾರ್ ಎಗ್ಜಿಬಿಷನ್, ೧೯೦೮. |
| 6. Correspondence—Insect Pests. | ೬. ಕರೆಸ್ಪಾಂಡೆನ್ಸ್.—ಪೈರುಗಳಿಗೆ ಬೀಳುವ ಹುಳುಗಳು. |
| 7. Cattle Shows.— | ೭. ದನಗಳ ಪ್ರದರ್ಶನಗಳು.— |
| (i) At Ghati Subramhanya. | (i) ಘಾಟಿ ಸುಬ್ರಹ್ಮಣ್ಯದಲ್ಲಿ. |
| (ii) At Kudli. | (ii) ಕೂಡ್ಲಿಯಲ್ಲಿ. |
| 8. Occasional Notes. | ೮. ವಿವಿಧ ವೃತ್ತಾಂತಗಳು. |
| (i) Paper Mills. (ii) Mulching. | (i) ಕಾಗದದ ಕಾರಖಾನೆಗಳು. (ii) ಸಾಗುವಳಿ ಜಮೀನಿನಮೇಲೆ ಕೊಳೆತ ಸೊಪ್ಪು ಸದೆ ಹರಡುವಿಕೆ. |

## Co-operative Societies in Bombay Presidency.

## ಬೊಂಬಾಯಿರಾಧಿಪತ್ಯದ ಪರಸ್ಪರ ಸಹಾಯಕ ಸಂಘಗಳು.

ಬೊಂಬಾಯಿ ಪಟ್ಟಣದಲ್ಲಿ ಕಳೆದ ಡಿಸಂಬರು ತಿಂಗಳಲ್ಲಿ ಆ ಆಧಿಪತ್ಯಕ್ಕೆ ಸೇರಿದ ಕೋಆಪರೇಟಿವ್ ಸೊಸೈಟಿಗಳ ವಿಷಯಕವಾದ ಅನೇಕ ಸಂಗತಿಗಳನ್ನು ಚರ್ಚಿಸುವ ಉದ್ದೇಶದಿಂದ ಒಂದು ಸಭೆ ನಡೆಯಿತು. ಆ ಸಭೆಯು ವಿಷಯಗಳನ್ನು ಚರ್ಚಿಸುವದಕ್ಕೆ ಪೂರ್ವ ಬೊಂಬಾಯಿ ಗೌವರ್ನರವರು ಅತ್ಯುತ್ಕೃಷ್ಟವಾದ ಒಂದು ಉಪನ್ಯಾಸವನ್ನು ಮಾಡಿದರು. ಅದರ ಸಾರಾಂಶವೇನಂದರೆ.—

ಈ ಅನ್ಯೋನ್ಯ ಸಹಾಯ ಸಂಘಗಳ ವಿಷಯವಾಗಿ ಅನೇಕ ವಿಷಯಗಳನ್ನು ಕುರಿತು ಚರ್ಚಿಸಲು ಈ ಕಾರ್ಯದಲ್ಲಿ ಉದ್ಯುಕ್ತರಾಗಿರುವ ಮತ್ತು ಅಭಿರುಚಿಯುಳ್ಳ ದೊಡ್ಡಮನುಷ್ಯರುಗಳು ಪದೆ ಪದೆ ಸಭೆ ನಡಿಸುವುದು ಉತ್ತಮವೆಂದು ಗೌರ್ನರವರು ಅಭಿಪ್ರಾಯಪಟ್ಟರು. ಕಳೆದ ಜೂನ್ ತಿಂಗಳ ಕೊನೆಯಲ್ಲಿ ಬೊಂಬಾಯಿ ಆಧಿಪತ್ಯದಲ್ಲಿ ೧೮೫ ಸೊಸೈಟಿಗಳು ಮತ್ತು ಇವುಗಳಿಂದ ಒಟ್ಟು ೮,೪೭೭ ಮೆಂಬರುಗಳು, ೩,೬೯,೮೮೦ ರೂಪಾಯಿನ ಬಂಡವಾಳವೂ ಇದ್ದವು. ಎಲ್ಲಾ ಸೊಸೈಟಿಗಳಿಂದಲೂ ನಿವ್ವಳ ೧೫,೩೦೭ ರೂಪಾಯಿ ಅಥವ ಶೇಕಡ ೪೻ ಯಂತೆ ನಫೆ ತೇಲಿದ್ದಲ್ಲದೆ ಸರ್ಪ್ಲಸ್ ಹಣವು ೧೪,೮೩೬ ರೂಪಾಯಿವರಿಗೂ ಸೇರಿತ್ತು. ಈ ಸರ್ಪ್ಲಸಿನ ಪೈಕಿ ೭,೯೩೬ ರೂಪಾಯಿ ಜಖೀರಿ ಫಂಡಾಗಿ (Reserve Fund) ಇಡಲ್ಪಟ್ಟಿತು. ಈ ಅನ್ಯೋನ್ಯ ಸಹಾಯ ಸಂಘಗಳ ವಿಷಯಕವಾದ ಏರ್ಪಾಡು ಕೇವಲ ಬಾಲ್ಯಾವಸ್ಥೆಯಲ್ಲಿದ್ದರೂ ಮೇಲಿನ ಅಭಿವೃದ್ಧಿಯನ್ನು ಪರ್ಯಾಲೋಚಿಸಿ ನೋಡಿದರೆ ಈ ವಿಧವಾದ ಸಂಘಗಳ ಪ್ರಯೋಜನಾಂಶವು ಜನಗಳ ಹೃದಯದಲ್ಲಿ ನಾಟುತ್ತಾ ಬಂದಿರುತ್ತೆಂತಲೂ ಊಹಿಸಬಹುದಾಗಿರುತ್ತೆ. ಇದೇ ಪ್ರಯೋಜನಗಳನ್ನು ಅನೇಕ ವಿಷಯಗಳಲ್ಲಿ ಪಡೆಯಬಹುದಾಗಿರುತ್ತೆಂತಲೂ, ಅವುಗಳಲ್ಲಿ ಈ ದೇಶಕ್ಕೆ ಮುಖ್ಯ ಕೃಷಿಯಾದ ವ್ಯವಸಾಯದಲ್ಲಿ ಉದ್ಯುಕ್ತರಾಗಿರುವ ಅನೇಕ ಬಡ ಜನಗಳ ಉಪಯೋಗಕ್ಕೋಸ್ಕರ ಬಂಡವಾಳ ಒದಗುವಂತೆ ಮಾಡುವದು

ಮುಖ್ಯವಾದ ಕರ್ತವ್ಯವೆಂಬದಾಗಿ ಗವರ್ನರವರು ಸೂಚಿಸಿದರು. ಕೃಷಿ
ಯಲ್ಲಿ ಪ್ರವೃತ್ತರಾಗಿರುವ ಕೋಟ್ಯಾಂತರ ಜನರುಗಳ ರಿಕ್ತದೆಶೆಯನ್ನು
ಪರಿಹರಿಸೋಣವು ಅನೇಕ ಫಲಕಾರಿಯಾದ ಕಾರ್ಯವೆಂತಲೂ, ಈ ಕಾ
ರ್ಯದಲ್ಲಿ ಬುದ್ಧಿ ಕೌಶಲ್ಯವುಳ್ಳ ಮಹನೀಯರು ಮನಸ್ಸಿಟ್ಟು ಅಪರಿಮಿತವಾ
ದ ಫಲವನ್ನು ಪಡೆಯಬೇಕೆಂತಲೂ, ಈಗ ಹೊಸದಾಗಿ ಏರ್ಪಡುತ್ತಲಿರು
ವ ಕೋಆಪರೇಟಿವ್ ಸೊಸೈಟಿಗಳ ಮೂಲಕ ಬಡ ರೈತರುಗಳ ಭಾ
ಗ್ಯೋದಯವು ಕಾಣುತ್ತಲಿರುತ್ತೆಂತಲೂ, ಆದ್ದರಿಂದ ನೈಜವಾದ ದೇಶಾಭಿ
ಮಾನವುಳ್ಳ ಪ್ರಜೆಗಳು ಉದಾರ ಹೃದಯರಾಗಿ ಬಡ ರೈತರನ್ನು ಉದ್ಧಾ
ರಮಾಡುವ ಕೆಲಸದಲ್ಲಿ ಗಮನ ಕೊಟ್ಟು ಶಾಶ್ವತವಾದ ಪ್ರತಿ ಫಲವನ್ನು ಅ
ನುಭವಿಸಬೇಕೆಂದೂ, ಗವರ್ನರವರು ಉಪನ್ಯಾಸದ ಕೊನೆಯಲ್ಲಿ ಸಭಿಕರಿ
ಗೆಲ್ಲಾ ಮನಸ್ಸಿಗೆ ತಾಗುವಂತೆ ಹೇಳಿದರು.

## The Mysore Exhibition, 1908.

## ಮೈಸೂರು ದಸರಾ ಕೈಗಾರಿಕೆ ಮತ್ತು ವ್ಯವಸಾಯಕ ಪ್ರದರ್ಶನ, ೧೯೦೮.

ಹಿಂದಿನ ಸಂಚಿಕೆಯಲ್ಲಿ ಮೈಸೂರ್ ಪ್ರದರ್ಶನ ಕಾಲದಲ್ಲಿ ಪ್ರದರ್ಶ
ನ ಕಮಿಟಿ ಪ್ರಸಿಡೆಂಟರು ಓದಿದ ರಿಪೋರ್ಟಿನ ಕೆಲವು ಅಂಶಗಳನ್ನು ತಿ
ಳುಹಿಸಿದವಷ್ಟೆ. ಪ್ರದರ್ಶನವನ್ನು ಪ್ರತಿವರ್ಷವೂ ನಡೆಸುವದು ಒಳ್ಳೇ
ದೆಂಬ ವಿಚಾರದಲ್ಲಿ ಪ್ರಸಿಡೆಂಟರವರು ಅಪ್ಪಣೆ ಕೊಟ್ಟ ಕೆಲವು ಸಂಗತಿಗ
ಳನ್ನು ಇಲ್ಲಿ ತಿಳಿಸುವೆವು.

ಈ ಮುಖ್ಯವಾದ ವಿಷಯದಲ್ಲಿ ಭಿನ್ನಾಭಿಪ್ರಾಯಗಳಿವೆ. ಇದ
ಕ್ಕೆ ಮುಖ್ಯ ಕಾರಣವೇನಂದರೆ, ಪ್ರತಿ ವಾರ್ಷಿಕ ಪ್ರದರ್ಶನಕ್ಕೆ ಬಹ
ಳ ದ್ರವ್ಯವೂ, ಕಾಲವೂ ಮತ್ತು ಪ್ರಯತ್ನವೂ ಬೇಕಾಗುವದೆಂಬು
ವದೇ. ಈ ಸಂಘದ ಪ್ರಯತ್ನದಿಂದ ಇದುವರೆಗೆ ಉಂಟಾಗಿರುವ ಫ
ಲಿತಾಂಶವೇ ಈ ಆಕ್ಷೇಪಣೆಗಳಿಗೆ ತಕ್ಕ ಉತ್ತರವಾಗಿರುತ್ತದೆ. ಅ
ಲ್ಲದೆ ಮತ್ತೊಂದು ವಿಷಯವನ್ನರಿಕೆಮಾಡಿಕೊಳ್ಳುತ್ತೇನೆ. ಅನೇಕ

ವರ್ಷಗಳಿಗೆ ಒಂದಾವರ್ತಿ ಪ್ರದರ್ಶನ ನಡೆಸುವದರಲ್ಲಿ ರಚನಾಭಾಗವು ಹೆಚ್ಚು ಪ್ರಯಾಸಕರವಾಗಿರುವದಲ್ಲದೆ ಇದರಿಂದ ಮನಸ್ಸಿನಲ್ಲಿ ನಾಟಿದ ಅಭಿಪ್ರಾಯಗಳು ಚಿರಸ್ಥಾಯಿಯಾಗಿರುವದಿಲ್ಲ. ಮತ್ತು ನಮ್ಮ ರೈತರು, ಶಿಲ್ಪಿಗಳು ಉಪಯೋಗಕರವಾದ ಸಂಗತಿಗಳನ್ನು ತಿಳಿದುಕೊಳ್ಳುವದಕ್ಕೆ ಸೌಲಭ್ಯತೆಯನ್ನು ಉಂಟುಮಾಡುವದಿಲ್ಲ. ಇವರುಗಳು ವಿಶೇಷವಾಗಿ ಹೀನಸ್ಥಿತಿಯಲ್ಲಿರುತ್ತಾರೆ. ಓದು ಬರಹ ಬಾರದವರಾದ್ದರಿಂದ ವರ್ತಮಾನ ಪತ್ರಿಕೆ ಮತ್ತು ಪ್ರಕಟನ ಪತ್ರಿಕೆಗಳಿಂದ ಹೊಸ ವಿಷಯಗಳನ್ನು ತಿಳಿದುಕೊಳ್ಳಲಾರರು. ಇವರಿಗೆ ಬಾರಿಬಾರಿಗೂ ನಿದರ್ಶನಮಾಡಿ ತೋರಿಸುವದರಿಂದಲೂ ಮತ್ತು ಅವರೇ ಖುದ್ದು ವಿಚಾರಮಾಡಿ ತಿಳಿದುಕೊಳ್ಳುವದರಿಂದಲೂ ಹೊರ್ತು ಬೇರೆ ರೀತಿಯಲ್ಲಿ ಹೊಸ ಸಂಗತಿಗಳನ್ನು ಮಂದಟ್ಟು ಮಾಡಿಸುವದು ಸಾಧ್ಯವಲ್ಲ.

ಈ ಪ್ರದರ್ಶನವನ್ನು ನಿರ್ವಹಿಸುವ ಅಧಿಕಾರಿಗಳೂ, ಪ್ರೋಟಾ ಪ್ರೋಟಿಗಳನ್ನು ಏರ್ಪಾಟು ಮಾಡತಕ್ಕವರೂ ಮತ್ತು ಪ್ರದರ್ಶಿಸಲ್ಪಟ್ಟ ಪದಾರ್ಥಗಳ ಪರೀಕ್ಷಕರೂ ಸಹ ಅನುಭವದಿಂದ ಕಲಿಯಬೇಕಾದ ಅಂಶಗಳು ಅನೇಕ ಇರುತ್ತವೆಯಾದ್ದರಿಂದ, ಉತ್ತಮ ವಿಧಾನಗಳನ್ನು ಕ್ರಮೇಣ ರೂಢಿಗೆ ತರುವದಕ್ಕೆ ಪ್ರತಿ ವರ್ಷದಲ್ಲಿಯೂ ಪ್ರದರ್ಶನವನ್ನು ನಡೆಸುವದರಿಂದ ಸಾಧ್ಯವೇ ಹೊರ್ತು ಅನ್ಯಥಾ ಸಾಧ್ಯವಲ್ಲ.

ಈ ವಿಷಯವು ಮುಖ್ಯವಾದುದರಿಂದ ಈ ವರ್ಷದ ಪ್ರದರ್ಶನದಲ್ಲಿ ತಿಳಿದುಬಂದ ಒಂದೆರಡು ಮುಖ್ಯ ಸಂಗತಿಗಳು ನಾನು ವಿಜ್ಞಾಪಿಸಿಕೊಂಡಿರುವ ಸಂಗತಿಗಳನ್ನು ಬಲಪಡಿಸುವವಾದಕಾರಣ ಇವುಗಳನ್ನು ಅರಿಕೆ ಮಾಡುತ್ತೇನೆ.

ರೈತರೂ ಮತ್ತು ಶಿಲ್ಪಿಗಳೂ ಅನೇಕಕಡೆಗಳಿಂದ ಬಂದಿರುವ ಪದಾರ್ಥಗಳನ್ನು ಹೋಲಿಸಿ ಅವುಗಳ ಗುಣ ತಾರತಮ್ಯಗಳನ್ನು ತಿಳಿಯಲು ಈಗೀಗ ಆರಂಭಿಸಿರುತ್ತಾರೆ. ಅಲ್ಲದೆ ತಿಳುವಳಿಕೆಯನ್ನು ಹೆಚ್ಚಿಸುವ ವಿಷಯದಲ್ಲಿ ಇವರಿಗೂ ಮತ್ತು ನಮ್ಮ ಹೆಂಗಸರು ಮಕ್ಕಳಿಗೂ ಸಹ ಈ ಪ್ರದರ್ಶನವು ಬೋಧೆಯನ್ನು ಕೊಡತಕ್ಕದ್ದಾಗಿಯೂ ಸಂಗತಿಗಳ

ನ್ನು ತಿಳಿದುಕೊಳ್ಳಬೇಕೆಂಬ ಆಸಕ್ತಿಯನ್ನುಂಟುಮಾಡತಕ್ಕದ್ದಾಗಿಯೂ ಇರುತ್ತೆ. ಈ ಪ್ರದರ್ಶನದಲ್ಲಿಟ್ಟಿರುವ ಅನೇಕ ತರಹೆ ಬೀಜದ ಧಾನ್ಯಗಳು, ಗೊಬ್ಬರಗಳು, ಮುಟ್ಟುಗಳು ಇವುಗಳನ್ನು ವ್ಯವಸಾಯಕ್ಕೆ ಉಪಯೋಗಪಡಿಸಲು ನಮ್ಮ ರೈತರುಗಳಿಗೆ ಉತ್ಸಾಹ ಹೆಚ್ಚುತ್ತಲಿದೆ ಎಂಬುವದು ಗೋಚರವಾಗುತ್ತಿದೆ.

ಹೋದ ಸಾಲಿನ ಅನುಭವದಿಂದ ಈ ಸಂವತ್ಸರ ನೇಯಿಗೆ ಮತ್ತು ಉಳುವ ಪ್ರೋಟೂಪ್ರೋಟಿಯನ್ನೂ ಮತ್ತು ಯಂತ್ರ ವಗೈರೆ ಸಾಧನಗಳನ್ನೂ, ಬಟ್ಟೆಗಳನ್ನೂ ಸಹ ನಿದರ್ಶಿಸುವದರಲ್ಲಿ ಹೆಚ್ಚು ಅನುಕೂಲವಾಯಿತು. ಮತ್ತು ಪ್ರದರ್ಶಕರು ಸಹ ಹೋದಸಾಲಿಗಿಂತಲೂ ಈ ಸಂವತ್ಸರ ಉತ್ತಮವಾದ ಪದಾರ್ಥಗಳನ್ನು ಕಳುಹಿಸಿರುತ್ತಾರಲ್ಲದೆ ರೂಲಿಗೆ ಅನುಸಾರವಾಗಿಯೂ ನಡೆದಿರುತ್ತಾರೆ. ರಂಗೂರ್ ಪಟ್ಣದ ಡೆಪ್ಯುಟಿ ಕಮಿಷನರವರು ವಿಶ್ವಾಸವಿಟ್ಟು ಒಬ್ಬ ಅಗಸಾಲೆಯಿಂದ ಭಾರಿ ಎರಡು ಪದಾರ್ಥಗಳನ್ನು ತಮ್ಮ ಸ್ವಾಧೀನಕ್ಕೆ ತೆಗದುಕೊಂಡು ಅವನ ಹೆಸರಿನಲ್ಲಿ ಪ್ರದರ್ಶಿಸುವದಕ್ಕೆ ಇಲ್ಲಿಗೆ ಕಳುಹಿಸಿರುವದೇ ಮೇಲೆ ಹೇಳಿದುದಕ್ಕೆ ದೃಷ್ಟಾಂತವಾಗಿರುತ್ತೆ.

ಜಾತ್ರೆ ವಗೈರೆ ಕಾಲಗಳಲ್ಲಿ ಸಾಮಾನುಗಳನ್ನೂ ಮತ್ತು ದನಕರುಗಳನ್ನೂ ಕೂಡಿಸಿ ವರ್ತಕರು ಮತ್ತು ಜನಗಳಿಗೆ ಸಹ ಸೌಲಭ್ಯವನ್ನುಂಟುಮಾಡುವದು ವಾಡಿಕೆಯಾಗಿರುತ್ತಾ ಆರ್ಷೇಯವಾಗಿ ನಡೆಯುತ್ತಿರುವ ದಸರಾ ಮಹೋತ್ಸವದ ಕಾಲದಲ್ಲಿ ಇಂಥ ಪ್ರದರ್ಶನವನ್ನು ಏರ್ಪಡಿಸಿರುವದು ಉಚಿತವಾಗಿಯೇ ಇರುತ್ತೆ. ಸರ್ಕಾರದವರು ಮತ್ತು ಇತರರೂ ಕೆಲವುಕಾಲ ಮತ್ತು ಮೆಹನತ್ತು ಸಹ ಇದಕ್ಕಾಗಿ ಉಪಯೋಗಿಸಬೇಕಾಗಿದ್ದರೂ ಪ್ರತಿವರ್ಷವೂ ಪ್ರದರ್ಶನವನ್ನು ಏರ್ಪಡಿಸುವದು ಜನಗಳಿಗೆ ತಿಳುವಳಿಕೆಯನ್ನು ಉಂಟುಮಾಡುವದಕ್ಕೂ ಮತ್ತು ಸಂಸ್ಥಾನದ ವ್ಯವಸಾಯ ಮತ್ತು ಕೈಗಾರಿಕೆಯನ್ನು ಅಭಿವೃದ್ಧಿ ಪಡಿಸುವದಕ್ಕೆ ಮುಖ್ಯಾಧಾರವಾದದ್ದೆಂದು ನಂಬಿ ಅರಿಕೆ ಮಾಡುತ್ತೇನೆ.

ಈ ವರುಷ ಪ್ರದರ್ಶನಕ್ಕೆ ಸರ್ಕಾರಿ ಉದ್ಯೋಗಸ್ಥರಲ್ಲದ ಸಂಖ್ಯೆ

ದ ಮೊಬಲಗಳಾದ ಅನೇಕ ದೊಡ್ಡಮನುಷ್ಯರೂ ಮತ್ತು ವ ರ್ತಕರೂ ಸಹ ಪದಾರ್ಥಗಳನ್ನು ಕ್ರಮ ಪಡಿಸುವದರಲ್ಲಿ ಮತ್ತು ಅವುಗಳ ಯೋಗ್ಯತಾಪಕ್ಷವನ್ನು ವಹಿಸುವದರಲ್ಲಿಯೂ ಸ ಹಾಯ ಮಾಡಿದ್ದು ಒಂದು ಮುಖ್ಯಾಂಶವಾಗಿದೆ. ಈ ಪ್ರಕಾರ ಕೆಲವ ರ್ಷಗಳು ಕ್ರಮವಾಗಿ ನಡೆದನಂತರ ಶ್ರೀ ಕೃಷ್ಣರಾಜ ವ್ಯವಸಾಯ ಮತ್ತು ಕೈಗಾರಿಕೆ ಸಂಘ, ಇಲ್ಲಿನ ಕೊ ಆಪರೇಟಿವ್ ಸಂಘ ಮೊದಲಾದ ಸ ಹಕಾರಿ ಸಂಘಗಳಿಗೇನೆ ಪ್ರದರ್ಶನವನ್ನು ನಿರ್ವಹಿಸಲು ಧೈರ್ಯವಾಗಿ ಒಪ್ಪಿಸ ಬಹುದು.

ಪ್ರತಿ ಸಂವತ್ಸರವೂ ಇನ್ನೂ ಕೆಲವು ವರ್ಷಗಳು ಪ್ರದರ್ಶನವ ನ್ನು ಏರ್ಪಡಿಸುವದು ಅವಶ್ಯವೆಂಬುವದನ್ನು ನಿದರ್ಶಿಸಲು ಇನ್ನೂ ಕೆ ಲವು ಅಂಶಗಳನ್ನು ಸಂಕ್ಷೇಪವಾಗಿ ಅರಿಕೆಮಾಡುತ್ತೇನೆ. ಪ್ರದರ್ಶನವ ನ್ನು ನೋಡುವದಕ್ಕೆ ಅನೇಕ ಜನಗಳು ಬರುವ ಕಾರಣ ಹಾಲಿ ಇರುವ ಕ ಟ್ಟಡವು ಸಾಲದೆಂದು ದೃಢವಾಗಿ ಹೇಳಬಹುದು. ಜನಗಳಿಗೆ ಈಗ ಈ ವಿಚಾರಗಳಲ್ಲಿ ಅಭಿರುಚಿ ಹುಟ್ಟಿರುವದರಿಂದ ಅವರನ್ನು ತೃಪ್ತಿಗೊಳಿಸಲು ಸತತ ಪ್ರಯತ್ನದಿಂದಲ್ಲದೆ ಅನ್ಯಥಾ ಸುಲಭಸಾಧ್ಯವಾಗಲಾರದು. ಸ್ಪರ್ಧೆ ಪೋಟಿಯು ಹೆಚ್ಚಿದಹಾಗೆಲ್ಲಾ ತಪ್ಪಿಲ್ಲದಾಗಿಯೂ ವಿಮರ್ಶೆಯಿಂದಲೂ ಪ ರೀಕ್ಷೆಯನ್ನು ನಡೆಸಬೇಕಾಗಿ ಬರುವ ಕಾರಣ ಪರೀಕ್ಷಕರಲ್ಲಿ ಕಲಾ ಕುಶಲ ಜ್ಞಾನವು ಅವಶ್ಯಕವಾಗುತ್ತದೆ.

---

## Plantain Meal. *

## ಬಾಳೆ ಹಿಟ್ಟು.

ಈ ಹಿಟ್ಟನ್ನು ತಯಾರು ಮಾಡಬೇಕಾದರೆ ಹಣ್ಣನ್ನು ಸಿಪ್ಪೆ ಸು ಲಿದು ಬಿಸಿಲಿನಲ್ಲಿ ಒಣಗಿಸಿ ಪುಡಿ ಮಾಡುವದು ಸರ್ವೋತ್ತಮವಾದ ವಿಧಾನ ವೆಂದೂ ಮತ್ತು ಇದಕ್ಕೆ ಖರ್ಚು ಬಹಳ ತಗಲುವದಿಲ್ಲವೆಂದೂ ಆಫ್ರಿಕಾ ಖಂಡದ ಫ್ರೆಂಚ್ ಗಿನಿ ರಾಜ್ಯದಲ್ಲಿ ನಡೆದಿರುವ ಅನೇಕ ಅಜಮಾಯಿಷಿಗಳಿಂ

* ಇಂಡಿಯನ್ ಟ್ರೇಡ್ ಜರ್ನಲ್.—೩—೮—೦೮.

ದ ಗೊತ್ತು ಮಾಡಲ್ಪಟ್ಟದೆ. ಹೀಗೆ ತಯಾರಾದ ಹಿಟ್ಟು ವ್ಯಾಪಾರಕ್ಕೆ ಕೇವಲ ಲಾಯಖಾಗಿರುವದಂತೆ. ಪರಂತು ಈ ವಿಧಾನವು ಕೇವಲ ಉಷ್ಣರಾಜ್ಯಗಳಲ್ಲಿ ಮಾತ್ರ ಸಾಧ್ಯವಾಗುತ್ತದೆ. ಹಿಟ್ಟಿನ ವ್ಯಾಪಾರವನ್ನು ಭಾರಿಯಾಗಿ ನಡೆಸಬೇಕಾದರೆ ಹಣ್ಣನ್ನು ಯಾವಕಾಲದಲ್ಲಿಯಾದರೂ ಜಾಗ್ರತೆಯಾಗಿ ಒಣಗಿಸಲು ಅನುಕೂಲಪಡುವಂತೆ ಒಂದು ಉಪಕರಣವನ್ನು ಒದಗಿಸಿಕೊಳ್ಳಬೇಕಾಗುತ್ತದೆ. ಈ ಕೆಲಸಕ್ಕೆ ಬೇಕಾಗುವ ಅಗ್ಗಿಷ್ಟಿಕೆಗಳನ್ನು ರಚಿಸುವದರಲ್ಲಿನ ಮುಖ್ಯೋದ್ದೇಶವನ್ನು ಎಲ್ಲರೂ ಅತಿ ಸುಲಭವಾಗಿ ತಿಳಿದುಕೊಳ್ಳಬಹುದಾಗಿರುತ್ತದೆ ಹೇಗಂದರೆ, ಒಣಗಿಸಬೇಕೆಂಬಿರುವ ಹಣ್ಣಿನ ಸುತ್ತಲೂ ಬಿಸಿ ಘಾಳಿಯನ್ನು ಆಡಿಸುವ ಏರ್ಪಾಟಡುವದೇ ಮುಖ್ಯವಾದ ವಿಷಯು. ಈ ಯಂತ್ರಗಳ ಖರೀದಿಯು ೩೦ ರೂಪಾಯಿನಿಂದ ೭೫೦ ರೂಪಾಯಿವರೆಗೂ ಆಗುತ್ತದೆ. ಸುಮಾರು ೧೮೩ ಪೌಂಡು ಸಿಪ್ಪೆ ಸುಲಿದ ಹಣ್ಣಿನಿಂದ ಸುಮಾರು ೪೦ ಪೌಂಡು ತೂಕದ ಹಿಟ್ಟು ಬರುತ್ತೆ. ಹಣ್ಣು ಒಣಗಿಸುವ ಕ್ರಮವನ್ನನುಸರಿಸಿ ಹಿಟ್ಟಿನ ಉತ್ಪತ್ತಿಯು ಹೆಚ್ಚು ಕಡಿಮೆಯಾಗುತ್ತೆ. ಹಿಟ್ಟಿಗೆ ವ್ಯಾಪಾರಕ್ಕೆ ಲಾಯಖಾದ ಛಂಗಾರದ ಛಾಯೆ ಬರುವಂತೆ ಹಣ್ಣನ್ನು ನಿಧಾನವಾಗಿ ಒಣಗಿಸಿದರೆ ಹಿಟ್ಟಿನ ಉತ್ಪತ್ತಿಯು ೩೧ ಪೌಂಡಿಗೆ ಇಳಿಯುತ್ತದೆ. ಒಣಗುವದನ್ನ ತ್ವರೆಪಡಿಸಿದರೆ ಹಣ್ಣು ಸೀದುಹೋಗಿ ಬೆಲೆ ಸರಿಯಾಗಿ ದೊರೆಯುವದಿಲ್ಲ. ಹಸುರು ಕಾಯಿ ಮತ್ತು ದೋರಹಣ್ಣಿನಿಂದಲೂ ಹಿಟ್ಟು ಮಾಡಬಹುದಾಗಿದ್ದರೂ ಕೂಡ ಚನ್ನಾಗಿ ಮಾಗಿದ ಹಣ್ಣಿನಲ್ಲಿ ಸಕ್ಕರೆ ಪದಾರ್ಥವು ಬಹಳವಾಗಿರುತ್ತದಾದ್ದರಿಂದ ಇದರಿಂದ ಸರ್ವೋತ್ಕೃಷ್ಟವಾದ ಹಿಟ್ಟು ತಯಾರಾಗುತ್ತದೆ. ಮಲಯಾಳದ ತೀರಪ್ರದೇಶದಲ್ಲಿ ಬಾಳೆ ಹಿಟ್ಟನ್ನು ತಯಾರು ಮಾಡುತ್ತಾರೆ. ಮೇಲ್ಕಂಡ ಅಜಮಾಯಿಷಿಗಳು ನಡೆದ ಫ್ರೆಂಚ್ ಗಿನಿಯ ಹವಾ ಮಲಯಾಳದ ಹವಾ ಎರಡೂ ಸ್ವಲ್ಪ ಹೆಚ್ಚು ಕಡಿಮೆ ಒಂದೇ ಆಗಿರುತ್ತದೆ.

## ‘Gootee’ Method of Propagation.*

## ‘ಗೂತಿ’ ವಿಧಾನದಿಂದ ಸಸಿಗಳನ್ನು ತಯಾರು ಮಾಡುವಿಕೆ.

ಮೇಲ್ಕಂಡ ವಿಧಾನದಿಂದ ಗಿಡಗಳನ್ನು ತಯಾರು ಮಾಡುವದು ಇಂಡಿಯಾದೇಶದಲ್ಲಿ ಪೂರ್ವದಿಂದಲೂ ರೂಢಿಯಲ್ಲಿರುತ್ತೆ. ಕೆಲವು ಜಾತಿ ಗಿಡಗಳಲ್ಲಿ ಕೊಂಬೆಯನ್ನು ಬಗ್ಗಿಸಿ ಸಸಿಗಳನ್ನು ತಯಾರು ಮಾಡುವದಕ್ಕಾಗುವದಿಲ್ಲ. ಮತ್ತೆ ಕೆಲವು ಬೀಜ ಬಿಡುವದೇ ಇಲ್ಲ. ಇಂಥಾ ಸಂದರ್ಭಗಳಲ್ಲೂ ಮತ್ತು ಸಸಿಗಳನ್ನು ತಯಾರು ಮಾಡುವ ಇತರ ವಿಧಾನಗಳು ಖಿಲಿಯಾಗುವ ಸಂದರ್ಭಗಳಲ್ಲೂ ‘ಗೂತಿ’ (Gootee) ವಿಧಾನವನ್ನು ಅನುಸರಿಸಿದರೆ ಬಹಳ ಅನುಕೂಲ. ಒಂದು ಗಿಡದಲ್ಲಿ ವೈತ್ಯಾಸವನ್ನು ಹೊಂದಿರುವ ರೆಂಬೆಯು ಕವಲು ಒಡೆಯುವದುಂಟಷ್ಟೆ. ಈ ಭೇದವನ್ನು ಚೆನ್ನಾಗಿ ತೋರ್ಪಡಿಸುವದಕ್ಕಾಗಿ ಇಂಥಾ ವೈತ್ಯಾಸಗಳನ್ನೂ ಮತ್ತು ಅಪರೂಪವಾದ ಗಿಡಗಳನ್ನೂ ವೃದ್ಧಿಪಡಿಸುವದಕ್ಕೋಸ್ಕರ ‘ಗೂತಿ’ ವಿಧಾನವನ್ನು ಪ್ರಯೋಗಮಾಡುವದೂ ಉಂಟು. ತತ್ರಾಪಿ ಹಣ್ಣು ಗಿಡಗಳನ್ನು ವೃದ್ಧಿಪಡಿಸಬೇಕಾದರೆ ಈ ವಿಧಾನವು ಬಹಳ ಉಪಯೋಗಪಡುತ್ತದೆ. ಹೇಗೆಂದರೆ, ತಯಾರಾದ ಗಿಡಗಳು ತಾಯಿ ಗಿಡದ ಗುಣಗಳನ್ನು ಪೂರ್ತಿಯಾಗಿ ಹೊಂದಿರುವದಲ್ಲದೆ ಬೀಜಗಳಿಂದ ತಯಾರಾದ ಗಿಡಗಳಿಗಿಂತಲೂ ಬಹಳ ಜಾಗ್ರತೆಯಾಗಿ ಫಲ ಬಿಡುತ್ತವೆ. ಇದೇರೀತಿ ಹೂ ಗಿಡಗಳು, ಬಳ್ಳಿಗಳೂ ಸಹಾ ಮೇಲ್ಕಂಡಂತೆ ಗುಣ ಭೇದವನ್ನು ಹೊಂದದೆ ಜಾಗ್ರತೆಯಾಗಿ ಹೂ ಬಿಡುತ್ತವೆ. ಈ ವಿಧದಿಂದ ಸಸಿಗಳನ್ನು ತಯಾರು ಮಾಡಬೇಕಾದರೆ ಒಂದು ಗಿಡದ ಚೆನ್ನಾಗಿ ಬಲಿತು ಆರೋಗ್ಯವಾಗಿರುವ ರೆಂಬೆಯನ್ನು ಆರಿಸಿಕೊಂಡು ಚಿಗುರು ಬಿಡುವ ಒಂದು ಗೆಣ್ಣಿನ ಸಮೀಪದಲ್ಲೋ ಅಥವಾ ಕೊಂಬೆ ಹೊರಟಿರುವ ಜಾಗದಲ್ಲೋ ಸುಮಾರು ಒಂದಂಗುಲದಷ್ಟು ತೊಗಟೆಯನ್ನು ಗುಂಡಾಗಿ ಸುಲಿದು ಈ ಭಾಗಕ್ಕೆ ಕಲಸಿದ ಜಿಗಟಾದ ಮಣ್ಣನ್ನು ಕೊಂಚ ಮೆತ್ತಿ ತೆಂಗಿನ ನಾರಿನಿಂದ ಕೊಂಬೆಯ ಸುತ್ತಲೂ ಭದ್ರವಾಗಿ ಸುತ್ತಬೇಕು. ಇದರ ಮೇಲ್ಗಡೆ ಒಂದು ಸಣ್ಣ ಮಡಿಕೆಯನ್ನು

* ಸೆಂಟ್ರಲ್ ಪ್ರಾವಿನ್ಸಸ್ ಅಗ್ರಿಕಲ್ಚರಲ್ ಗೆಜೆಟ್.—ನವಂಬರು ೧೯೦೮.

ನೇತು ಕಟ್ಟಿ ಮಡಿಕೆಯ ತಳದಲ್ಲಿ ಒಂದು ತೂತು ಹೊಡೆದು ರಂಧ್ರದಿಂದ ಒಂದು ಹಗ್ಗವನ್ನು ಇಳಿಬಿಟ್ಟು ಗೂಟಿಯ ಸುತ್ತಲೂ ಈ ಹಗ್ಗವನ್ನು ಬೇರು ಕಟ್ಟಬೇಕು. ನಂತರ ಮಡಿಕೆಯಲ್ಲಿ ನೀರು ಭರ್ತಿ ಮಾಡಿದರೆ ನೀರು ಹಗ್ಗದ ಮೂಲಕ ಜಿನಗಿ ತನುವು ಗೂಟಿಯ ಸುತ್ತಲೂ ವ್ಯಾಪಿಸುವದು. ಈರೀತಿ ಮೂರು ನಾಲ್ಕು ತಿಂಗಳಲ್ಲಿ ಗೂಟಿಯಿಂದ ಎಳೇ ಬೇರುಗಳು ಹೊರಡುತ್ತವೆ. ಆಗ ಕೊಂಬೆಯನ್ನು ತಾಯಿ ಗಿಡದಿಂದ ಪ್ರತ್ಯೇಕಿಸಿ ಇಷ್ಟವುಳ್ಳ ಪ್ರದೇಶದಲ್ಲಿ ನಾಟಬಹುದು. ಬೇರು ಬಿಟ್ಟಿರುವ ರೆಂಬೆಯನ್ನು ಮಳೆಗಾಲದಲ್ಲಿ ಗಿಡಗಳ ಬೆಳವಳಿಕೆಗೆ ಅನುಕೂಲವಾದ ಸಮಯನೋಡಿ ಕತ್ತರಿಸಿ ಭೂಮಿಯಲ್ಲಿ ಇಟ್ಟರೆ ಒಳ್ಳೇದು.

---

## The Central Provinces & Berar Exhibition 1908.*

## ಸೆಂಟ್ರಲ್ ಪ್ರಾವಿನ್ಸಸ್ ಮತ್ತು ಬಿರಾರ್ ಎಗ್ಜಿಬಿಷನ್, ೦೮.

ಸೆಂಟ್ರಲ್ ಪ್ರಾವಿನ್ಸಸ್ ಮತ್ತು ಬಿರಾರ್ ಪ್ರಾಂತ್ಯಗಳಲ್ಲಿರುವ ಜನಗಳಿಗೆ ತಮ್ಮ ದೇಶದಲ್ಲಿ ಯಾವ ಯಾವ ಪದಾರ್ಥಗಳು ಉತ್ಪತ್ತಿಯಾಗುತ್ತವೆಂಬುದನ್ನು ತೋರಿಸುವದಕ್ಕೂ ಮತ್ತು ಇಂಡಿಯಾ ದೇಶದ ಇತರ ಕಡೆಯವರಿಗೆ ಈ ಪದಾರ್ಥಗಳನ್ನು ನೋಡಲು ಅವಕಾಶ ಕೊಡುವದಕ್ಕೂ ಮೇಲ್ಕಂಡ ಪ್ರದರ್ಶನವು ನಾಗಪುರದಲ್ಲಿ ಏರ್ಪಡಿಸಲ್ಪಟ್ಟಿತು. ಅಲ್ಲದೆ ಈ ಪ್ರಾಂತ್ಯಗಳ ಹೊರಗಡೆ ತಯಾರಾಗುವ ಪದಾರ್ಥಗಳನ್ನು ಇಲ್ಲಿನವರು ಆಯಾಯ ಪ್ರದೇಶಗಳಿಗೆ ಹೋದಲ್ಲದೆ ನೋಡಲು ಸಾಧ್ಯವಲ್ಲವಾದಕಾರಣ ಇವರ ತಿಳುವಳಿಕೆಯನ್ನು ಹೆಚ್ಚಿಸುವ ಉದ್ದೇಶ್ಯ ಆ ಪದಾರ್ಥಗಳನ್ನು ಒಂದೇಕಡೆ ಒಟ್ಟುಗೂಡಿಸಿ ಈ ಪ್ರದರ್ಶನದಲ್ಲಿಟ್ಟಿರುತ್ತಾರೆ.

ಪ್ರದರ್ಶನ ಕಟ್ಟಡದ ಒಂದುಕಡೆಯಲ್ಲಿ ಎಲ್ಲಾತರದ ಹೊಸತರಹೆ ಮಗ್ಗಗಳು ಪ್ರದರ್ಶಿಸಲ್ಪಟ್ಟಿರುತ್ತವೆ. ನೇಗೇಯವರು ಈ ಮಗ್ಗಗಳ ಕೆಲಸಕ್ಕೂ ಮತ್ತು ಹಳೇ ಮಗ್ಗಗಳ ಕೆಲಸಕ್ಕೂ ಇರುವ ತಾರತಮ್ಯವನ್ನು ಅವಶ್ಯಕವಾಗಿ ನೋಡಿ ತಿಳಿದುಕೊಳ್ಳಬೇಕು. ಬರ್ಹಾನ್‌ಪುರ, ನಾಗ

---

* ಸೆಂಟ್ರಲ್ ಪ್ರಾವಿನ್ಸಸ್ ಅಗ್ರಿಕಲ್ಚರಲ್ ಗಜೆಟ್.—ಡಿಸಂಬರ್ ೧೯೦೮.

ಪುರ, ಬನಾರಸ ಮತ್ತು ಮದರಾಸು ಕಡೆಗಳಿಂದ ಬಹಳ ಸೊಗಸಾದ ಮತ್ತು ಬೆಲೆ ಬಾಳತಕ್ಕ ಸೀರೆಗಳು ಮತ್ತು ಕಿಂಕಾಬುಗಳು ಸಹ ಬಂದಿರುತ್ತವೆ. ಮತ್ತೊಂದು ಕಡೆಯಲ್ಲಿ ಮರದ ಸಾಮಾನುಗಳೂ ಮತ್ತು ಲೋಹ ಪದಾರ್ಥಗಳೂ ಬಂದಿರುವದನ್ನು ನೋಡಬಹುದು. ಮರದ ಸಾಮಾನುಗಳಲ್ಲಿ ಕೆತ್ತನೆ ಕೆಲಸ, ಕುರ್ಚಿ, ಮೇಜು, ಮೊದಲಾದವೂ ಮತ್ತು ಲೋಹ ಪದಾರ್ಥಗಳಲ್ಲಿ ಹಿತ್ತಾಳೆ ಮತ್ತು ಕಬ್ಬಿಣ ಸಾಮಾನುಗಳು ಇರುತ್ತವೆ. ಇವು ಅಲ್ಲದೆ ಒಂದು ಕಡೆಯಲ್ಲಿ ಅಲ್ಲಿನ ಮಿಲ್ಲುಗಳಲ್ಲಿ ತಯಾರಾಗುವ ಬಟ್ಟೆ ಬರೆಗಳು ಮತ್ತು ನೂಲುಗಳು ಮತ್ತೊಂದು ಕಡೆಯಲ್ಲಿ ಇಂಡಿಯಾದೇಶದ ಪಾಠಶಾಲೆಗಳಲ್ಲಿ ಅನೇಕವಾಗಿ ಉಪಯೋಗದಲ್ಲಿರುವ ಗೋಳಗಳು (Globes), ಭೂಪಟಗಳು (Maps), ತರಹೆವಾರಿ ಬರವಣಿಗೆಗಳು (Specimens of Writings), ವಿದ್ಯಾರ್ಥಿಗಳು ಬರೆದಿರುವ ನಕಾಶೆಗಳು (Drawings), ಪ್ರದರ್ಶಿಸಲ್ಪಟ್ಟವೆ. ಸಿಂಗರ್ ಕಂಪೆನಿಯವರು ತರಹೇವಾರಿ ಹೊಲಿಯುವ ಯಂತ್ರಗಳನ್ನು (Sewing Machines) ಪ್ರದರ್ಶಿಸಿರುತ್ತಾರೆ. ಭಾರಿ ಬೆಲೆಯುಳ್ಳ ಆಭರಣಗಳು ಮತ್ತು ಇತರ ಪದಾರ್ಥಗಳು ಸಹ ಬಂದಿರುತ್ತವೆ; ಮತ್ತು ಷರಬತ್ತುಗಳು, ಔಷಧಿ ಜಿನಸಿಗಳು, ಗಾಜು ಮತ್ತು ಮಣ್ಣಿನ ಸಾಮಾನು, ಕಾಗದ ತಯಾರು ಮಾಡುವ ಮತ್ತು ಅಚ್ಚುಹಾಕುವ ಉಪಕರಣಗಳು, ಸಾಬೂನು, ಅತ್ತರು, ಬಣ್ಣಗಳು, ದೀಪದ ಕಡ್ಡಿ, ಇವೇ ಮೊದಲಾದ ಇಂಡಿಯಾದೇಶದಲ್ಲಿ ಹಾಲಿ ತಯಾರಾಗುವ ಪದಾರ್ಥಗಳನ್ನೆಲ್ಲಾ ನೋಡಬಹುದಲ್ಲದೆ ಇವು ತಯಾರಾಗುವ ಸ್ಥಳ ಮುಂತಾದ ತಪ್ಸೀಲುಗಳನ್ನು ತಿಳಿದುಕೊಳ್ಳಬಹುದು.

ಪ್ರದರ್ಶನದಲ್ಲಿ ಮುಖ್ಯವಾಗಿ ರೈತರಿಗೆ ವಿಶೇಷ ಪ್ರಯೋಜನಕರವಾದದ್ದು ವ್ಯವಸಾಯ ಭಾಗವಾಗಿರುತ್ತದೆ. ಸೆಂಟ್ರಲ್ ಪ್ರಾವಿನ್ಸಸ್ಸಿನ ನಾನಾ ಬೆಳೆಗಳು ಮತ್ತು ಬಗೆಬಗೆಯ ಜಮೀನು ಮಣ್ಣುಗಳನ್ನು ಮತ್ತು ಇಂಡಿಯಾದ ಇತರ ಪ್ರದೇಶಗಳಲ್ಲಿನ ಜಮೀನು ಮಣ್ಣುಗಳನ್ನು ಇಟ್ಟಿರುತ್ತಾರೆ. ಬಾಜೂ ಹೊಲದಲ್ಲಿ ನೇಗಿಲು, ಫಸಲು ಕಟಾವು ಮಾಡುವ ಯಂತ್ರ, ತುಳಿಸುವ ಯಂತ್ರ, ತೂರುವ ಯಂತ್ರ, ಬೀಸುವ ಯಂತ್ರ, ಮೇವು ಕತ್ತರಿಸುವ ಯಂತ್ರ, ಇವೇ ಮೊದಲಾದ ನಾನಾತರಹೆ ವ್ಯವಸಾಯ ಮು

ಟ್ಟುಗಳು ಕೆಲಸ ಮಾಡುತ್ತಿರುವದನ್ನು ನೋಡಬಹುದು. ಇದರಾಚೆ ಅನೇಕ ಭಾವಿಗಳಲ್ಲಿ ತರಹೇವಾರಿ ನೀರು ಎತ್ತುವ ಪಂಪುಗಳು ನೀರು ಎತ್ತುವದನ್ನು ಸಹ ನೋಡಬಹುದು. ಕಲ್ಕತ್ತಾ ಪಟ್ಟಣದಲ್ಲಿರುವ ಮೆ|| ಬರ್ನ್ ಅಂಡ್ ಕಂಪೆನಿಯವರು ವ್ಯವಸಾಯ ಮತ್ತು ಇತರ ಯಂತ್ರಗಳನ್ನು ಪ್ರದರ್ಶಿಸಿರುತ್ತಾರೆ. ಈಪೈಕಿ ಕತ್ತಾಳೆಯಿಂದ ನಾರು ತೆಗೆಯುವ ಯಂತ್ರ ಬಂದಿರುತ್ತದೆ.

ಮತ್ತೊಂದುಕಡೆ ಮದರಾಸಿನಲ್ಲಾಗುವ ಕ್ರೋಂ (Chrome)ಚರ್ಮದ ಸಾಮಾನುಗಳಿರುತ್ತವೆ. ಈ ಚರ್ಮದಿಂದ ನೀರಿನಲ್ಲಿ ನೆನೆಯುವ ಕಪಿಲೆಬಾನೆ, ಪಾಪಾಸು, ಮೊದಲಾದವುಗಳನ್ನು ಮಾಡಬಹುದು. ಇಲಿಗಳು ಪ್ರವೇಶ ಮಾಡದರೀತಿ ವಿಶೇಷ ಲಾಗವಿಲ್ಲದೇನೆ ಮನೆ ಕಟ್ಟಬಹುದೆಂಬುದನ್ನು ತೋರಿಸುವ ಉದ್ದೇಶ್ಯ ಒಂದು ಮಾದರಿ ಮನೆಯನ್ನು ಕಟ್ಟಿ ಪ್ರದರ್ಶಿಸಿರುತ್ತೆ. ಫಾರಸ್ಟು ಇಲಾಖೆಯವರು ಸಹ ಸೆಂಟ್ರಲ್ ಪ್ರಾವಿನ್ಸಸ್ ಮತ್ತು ಇತರ ಕಡೆಗಳ ಫಾರೆಸ್ಟುಗಳ ಎಲ್ಲಾ ಬಗೆಯ ಮರಗಳನ್ನೂ ಮತ್ತು ಇತರ ಪದಾರ್ಥಗಳನ್ನೂ ಇಟ್ಟಿರುತ್ತಾರೆ.

---

## Correspondence.—Insect Pests.

## ಕರೆಸ್ಪಾಂಡೆನ್ಸ್.-ಪೈರುಗಳಿಗೆ ಬೀಳುವ ಹುಳುಗಳು.

ಕಳೆದ ಡಿಶಂಬರು ತಿಂಗಳು ರೆವಿನ್ಯೂ ಮತ್ತು ವ್ಯವಸಾಯಕ ಗೆಜೆಟ್ಟಿನ ಮೊದಲನೆಯ ಸಂಚಿಕೆಯಲ್ಲಿ ತರ್ಕಾರಿ ಗಿಡಗಳಿಗೆ ಬೀಳುವ ಹೇನಿಗೆ ಚಿಮ್ನಿ ಎಣ್ಣೆ ಮತ್ತು ಸಾಬೂನು ಇವುಗಳಿಂದ ಮಾಡುವ ನೀರಿನ ಪ್ರಹಾರದ ಸಂಗತಿ ಬರೆದಿದೆಯಷ್ಟೆ. ಇದೇ ವಿಷಯದಲ್ಲಿ ನಾರ್ಮಲ್ ಸ್ಕೂಲ್ ಹೆಡ್ ಮಾಸ್ಟರ್ ಮಿ|| ಕೆ. ನರಸಿಂಹೈಯ್ಯಂಗಾರ್ರವರು ಅವರ ಅನುಭವವನ್ನು ಬರೆದಿರುವದೇನಂದರೆ.—

ಸಸ್ಯಗಳ ಎಲೆಗಳಿಗೆ ತಗಲುವ ಹೇನನ್ನು ಮೈಸೂರು ಡಿಸ್ಟ್ರಿಕ್ಟಿನಲ್ಲಿ ' ನೊರಜು ' ಎಂತಲೂ, ಕೋಲಾರ ಡಿಸ್ಟ್ರಿಕ್ಟಿನಲ್ಲಿ ' ಹೀಡೆ ' ಎಂತಲೂ ಕರೆಯುವರು. ಇದು ಅನೇಕ ಬೆಳೆಗಳಿಗೆ ತಗಲುತ್ತದೆ, ಮತ್ತು ತ

ಗಲುವುದಕ್ಕೆ ಪ್ರಾರಂಭವಾದಮೇಲೆ ಸ್ವಲ್ಪಕಾಲದಲ್ಲಿಯೇ ಹೆಚ್ಚಾಗಿ ಅಭಿವೃದ್ಧಿ ಹೊಂದಿ ಪೈರನ್ನು ನಾಶಪಡಿಸುತ್ತದೆ. ಇದು ತಗಲಿದ ಎಲೆಗಳು ಮುದುರಿಕೊಂಡು ಗಿಡದ ಅಭಿವೃದ್ಧಿಗೆ ತಡೆ ಉಂಟಾಗುವುದರಿಂದ ಫಲ ಬಹಳ ಕಡಮೆಯಾಗುತ್ತದೆ ; ಆದರೆ ಫಸಲು ಎಷ್ಟು ಭಾಗ ಕಡಮೆಯಾಗುತ್ತದೆಂಬ ಅಂಶವು ವಿಶದವಾಗಿ ಗೊತ್ತಿಲ್ಲ, ನಷ್ಟವೇನೋ ಬಹಳ ಹೆಚ್ಚು. ತರಕಾರಿ ಪೈರುಗಳಲ್ಲಿ ಸೌತೆ, ಬದನೆ, ಚಪ್ಪದ ಅವರೆ, ಕೋಸು, ನೌಲುಕೋಲು ಇವುಗಳಿಗೆ ತಗಲುವುದನ್ನು ಎಲ್ಲರೂ ತಿಳಿದಿರುವರು. ಹೊಲಗಳಲ್ಲಿ ಬೆಳೆಯುವ ಪೈರುಗಳಲ್ಲಿ ಮುಖ್ಯವಾಗಿ ಹೆಸರು, ಅಲಸಂದಿ, ಉದ್ದು, ಹತ್ತಿ, ಇವುಗಳಿಗೂ ತಗಲುತ್ತವೆ. ಇನ್ನೂ ಅನೇಕ ಪೈರುಗಳಿಗೆ ತಗಲುವುದುಂಟು. ಆರಂಬಗಾರರು ತಾವು ಬೆಳೆ ಮಾಡುತ್ತಿರುವ ಪೈರನ್ನು ಪ್ರತಿನಿತ್ಯವೂ ಚನ್ನಾಗಿ ನೋಡುತ್ತಿರುವುದು ಮತ್ತು ಪೈರುಗಳಿಗೆ ರೋಗಾದಿಗಳು ತಗಲಿವೆ ಇಲ್ಲ ಎಂಬುದನ್ನು ಪರೀಕ್ಷಿಸುತ್ತಿರುವುದು ಬಹಳ ಅವಶ್ಯಕ. ಹೇಗಂದರೆ, ನೊರಜು ತಗಲಿದ ಒಡನೆ ಗೊತ್ತಾದರೆ ಆಗ ಅದನ್ನು ಸುಲಭದಲ್ಲಿ ಹೋಗಲಾಡಿಸಬಹುದು. ಬಹಳ ದಿವಸಗಳಾದಮೇಲೆ ಗೊತ್ತಾದರೆ ಅದನ್ನು ಹೋಗಲಾಡಿಸುವುದು ಕಷ್ಟ. ನಷ್ಟವೂ ಹೆಚ್ಚು.

ಮನೆ ಹಿತ್ತಲಲ್ಲಿ ಬೆಳೆಯುವ ತರ್ಕಾರಿ ಪೈರುಗಳಿಗೆ ನೊರಜು ತಗಲಿದ ಪಕ್ಷದಲ್ಲಿ ಬೂದಿಯನ್ನು ಎರಚುವ ವಾಡಿಕೆ ಎಲ್ಲರಿಗೂ ಗೊತ್ತಿದೆ. ಇದರಿಂದ ಅಷ್ಟು ಪ್ರಯೋಜನ ಉಂಟಾಗುವ ಹಾಗೆ ತಿಳಿದುಬರುವುದಿಲ್ಲ. ಸೀಮೆ ಎಣ್ಣೆ (ಚಿಮ್ನಿ ಎಣ್ಣೆ) ಮತ್ತು ಸಾಬೂನಿನ ನೀರನ್ನಾಗಲಿ, ಹೊಗೇಸೊಪ್ಪು ಮತ್ತು ಸಾಬೂನಿನ ನೀರನ್ನಾಗಲಿ ಉಪಯೋಗಿಸಬಹುದು.

ಸೀಮೆ ಎಣ್ಣೆ ನೀರನ್ನು ತರ್ಕಾರಿ ಪೈರುಗಳಿಗೆ ಎಲ್ಲಾ ಸಂದರ್ಭದಲ್ಲಿಯೂ ಉಪಯೋಗಿಸಬಾರದು. ಏಕಂದರೆ, ಎಣ್ಣೆಯ ವಾಸನೆ ಇದ್ದೇ ಇರುತ್ತದೆ. ಇದಲ್ಲದೆ ಇದನ್ನು ಬಹಳ ಜಾಗರೂಕತೆಯಿಂದ ಮಾಡಬೇಕು. ಇಲ್ಲವಾದರೆ ಸಾಬೂನಿನ ಜತೆಯಲ್ಲಿ ಬೆರೆಯದ ಎಣ್ಣೆಯ ಅಂಶ ನಿಲ್ಲುವುದರಿಂದ ಅದು ಬಿದ್ದಕಡೆ ಗಿಡದ ಎಲೆ ಸುಟ್ಟುಹೋಗುತ್ತದೆ. ತರಕಾರಿ ಗಿಡಗಳು ಕಾಯಿ ಬಿಡದೆ ಬಹಳ ಎಳಸಾಗಿರುವಾಗ ಇದನ್ನು ಉಪಯೋಗಿಸಬ

ಹುದು. ಹೊಲದ ಪೈರುಗಳಿಗೆ ಉಪಯೋಗಿಸಬಹುದು. ಹೊಗೆಯ ಸೊಪ್ಪು ಮತ್ತು ಸಾಬೂನಿನ ನೀರಾದರೆ ಎಲ್ಲಾ ಸಂದರ್ಭದಲ್ಲಿಯೂ ತರಕಾರಿ ಪೈರುಗಳಿಗೆ ಅತ್ಯುತ್ತಮ. ಇಲ್ಲಿನ ಗೌರ್ನಮೆಂಟ್ ಸಾಗುವಳಿ ತೋಟದಲ್ಲಿ ಇದನ್ನು ಉಪಯೋಗಿಸುವ ವಾಡಿಕೆ ಇದೆ. ಒಂದು ಅಥವಾ ಎರಡಾವರ್ತಿ ಹೊಗೆಯಸೊಪ್ಪಿನ ನೀರನ್ನು ಹಾಕಿದರೆ ಸಾಕು, ನೊರಜೆಲ್ಲಾ ನಾಶವಾಗುವುದು. ಪೈರನ್ನು ನೋಡಿಕೊಳ್ಳುತ್ತಿದ್ದು ಆಗಾಗ್ಯೆ ಇದನ್ನು ಉಪಯೋಗಿಸುತ್ತಾ ಇದ್ದಪಕ್ಷದಲ್ಲಿ ನೊರಜಿನಿಂದ ಸ್ವಲ್ಪವೂ ನಷ್ಟ ಸಂಭವಿಸುವುದಿಲ್ಲ. ಎಲೆಗಳ ಹಿಂಭಾಗದಲ್ಲಿ ಇವು ತಗಲುತ್ತವೆಯಾದುದರಿಂದ ಆಭಾಗದ ಮೇಲೆ ಹೊಗೆಯಸೊಪ್ಪಿನ ನೀರಿನಲ್ಲಿ ಬ್ರಷ್ ಅಥವಾ ಹಂಚಿಕಡ್ಡಿಗಳ ಕಂತೆಗಳನ್ನು ಅದ್ದಿ ನೀರನ್ನು ಚೆನ್ನಾಗಿ ಚಿಮುಕಿಸಬಹುದು. ನೀರನ್ನು ಸುರಿದು ತೊಳೆಯಬಹುದು. ಹೀಗೆ ಮಾಡಿದರೆ ನೀರು ಬಹಳ ನಷ್ಟವಾಗುವುದು. ಹೊಗೆಯಸೊಪ್ಪಿನ ನೀರನ್ನಾಗಲಿ ಇತರವಿಧವಾದ ಔಷಧಗಳನ್ನಾಗಲಿ ಗಿಡಗಳಮೇಲೆ ಅತ್ಯಂತ ಸೂಕ್ಷ್ಮವಾದ ಹನಿಗಳಾಗಿ ಹಾಕಿದರೆ ಖರ್ಚು ಕಡಮೆ. ಮತ್ತು ಹುಳುಗಳು ಸಾಯುತ್ತವೆ. ಇದಕ್ಕಾಗಿ ಅನೇಕ ಯಂತ್ರಗಳು ಇವೆ. ಈ ಯಂತ್ರವನ್ನು ಸ್ಪ್ರೇಯರ್ (Sprayer) ಎಂದು ಕರೆಯುವರು. ಇವುಗಳಲ್ಲಿ ಟಿನ್ನಿನಿಂದ ಮಾಡಿದ ಸಣ್ಣ ಸ್ಪ್ರೇಯರನ್ನು (ಚಿಮುಕಿಸುವ-ಚೀರ್ಕೊಳವೆ) ತರಕಾರಿ ಕೈತೋಟ ಮಾಡುವವರು ಸುಲಭದಲ್ಲಿ ಕೊಂಡುಕೊಳ್ಳಬಹುದು. ಇದರ ಕ್ರಯ ಎರಡು ರೂಪಾಯಿ ಮಾತ್ರ ಆಗುತ್ತದೆ. ದೊಡ್ಡದೊಡ್ಡ ಹೊಲಗಳಿಗೂ ತೋಟಗಳಿಗೂ ಸುಲಭವಾಗಿ ಉಪಯೋಗಿಸುವುದಕ್ಕೆ ಆಗುವ ದೊಡ್ಡ ಯಂತ್ರಗಳು ೩೦—೪೦ ರೂಪಾಯಿಗಳಿಗೆ ಸಿಕ್ಕುವುವು.

ಸೀಮೆ ಎಣ್ಣೆ ಮತ್ತು ಸಾಬೂನಿನ ನೀರನ್ನು ಮಾಡುವ ವಿಧಾನ.—೫ ಪೌಂಡು ಬಾರ್ ಸಾಬೂನನ್ನು (Bar Soap) ತೆಳ್ಳಗಿರುವ ಸಣ್ಣ ಸಣ್ಣ ಚೂರಾಗಿ ಕುಯಿದು ೯೫ ಪೌಂಡು ನೀರಿನಲ್ಲಿ ಚೆನ್ನಾಗಿ ಅರ್ಧ ಘಂಟೆ ಕಾಲದವರಿವಿಗೆ ಕುದುಯಿಸಿ ಕರಗಿಸುವುದು. ನಂತರ ಉರಿಯನ್ನು ತೆಗೆದು ೧೩೫ ಪೌಂಡು ಸೀಮೆ ಎಣ್ಣೆಯನ್ನು ಸ್ವಲ್ಪಸ್ವಲ್ಪವಾಗಿ ಹಾಕುತ್ತಾ ಚೆನ್ನಾಗಿ ಬೆರೆಯುವ ಹಾಗೆ ಎಣ್ಣೆಯ ಗುರ್ತು ಕಾಣದಂತೆ

ಕಲಕುವುದು. ಉರಿ ಇದ್ದರೆ ಸೀಮೆ ಎಣ್ಣೆ ಹತ್ತಿಕೊಳ್ಳಬಹುದು. ಇದು ಸರಿಯಾಗಿ ಆದಪಕ್ಷದಲ್ಲಿ ಎಣ್ಣೆಯು ಅಂಶವಿಲ್ಲದೆ ಎಲ್ಲವೂ ಹಾಲಿನಂತೆ ಬೆಳ್ಳಗಿರುತ್ತದೆ. ಈ ದ್ರಾವಕವನ್ನು ಒಂದು ಸೀಸೆಯಲ್ಲಿ ತುಂಬಿಟ್ಟಿದ್ದು ಉಪಯೋಗಿಸುವಾಗ ಅಳತೆಯು ೬ ರಿಂದ ೧೦ ಪಾಲುವರಿವಿಗೂ ನೀರನ್ನು ಬೆರಸಿ ಉಪಯೋಗಿಸಬೇಕು. ನೀರು ಬೆರಸದೆ ಉಪಯೋಗಿಸಬಾರದು.

ಹೊಗೇಸೊಪ್ಪು ಮತ್ತು ಸಾಬೂನಿನ ನೀರನ್ನು ಮಾಡುವ ವಿಧಾನ.—೯೫ ಪೌಂಡು ತೂಕ ನೀರಿನಲ್ಲಿ ೨ ಪೌಂಡು ತೂಕ ಹೊಗೇಸೊಪ್ಪನ್ನು ೨೪ ಘಂಟೆಗಳ ಕಾಲ ನೆನೆ ಹಾಕುವುದು, ಅಥವಾ ೪ ಘಂಟೆ ಕಾಲ ಬೇಯಿಸುವುದು. ಆಮೇಲೆ ೫ ಪೌಂಡು ಬಾರ್‌ಸೋಪನ್ನು ಹಾಕಿ ಕರಗಿಸುವುದು. ಇದನ್ನು ತೆಗೆದಿಟ್ಟುಕೊಂಡು ಉಪಯೋಗಿಸುವಾಗ ೭ ಪಾಲು ತಣ್ಣೀರು ಬೆರೆಸಬೇಕು.

ಬಾರ್ ಸಾಬೂನು (Bar Soap) ಷಾಪುಗಳಲ್ಲಿ ಒಂದಕ್ಕೆ ೩—೪ ಆಣೆಗಳ ಮೇರೆಗೆ ಸಿಕ್ಕುತ್ತದೆ.

## Cattle Shows.

## ದನಗಳ ಪ್ರದರ್ಶನಗಳು.

### I

ಘಾಟಿ ಸುಬ್ರಹ್ಮಣ್ಯ ಜಾತ್ರೆಯು ಕಳೆದ ಡಿಸೆಂಬರ್ ೨೪ಕ್ಕೆ ಪ್ರಾರಂಭವಾಗಿ ಇದೇ ಜನವರಿ ೪ಕ್ಕೆ ಮುಗಿಯಿತು. ಈ ವರ್ಷ ಜಾತ್ರೆಯಲ್ಲಿ ಸುಮಾರು ೨೫,೦೦೦ ದನಗಳು ಸೇರಿದ್ದವು. ಅವುಗಳಲ್ಲಿ ಹಳ್ಳಿಕಾರ, ಬೆಟ್ಟ ಜಾತಿ ದನಗಳಿದ್ದವು. ನಾಡುದನಗಳೆ ಹೆಚ್ಚಾಗಿದ್ದವು. ಇವು ಬೆಂಗಳೂರು, ನೆಲಮಂಗಲ, ದೊಡ್ಡಬಳ್ಳಾಪುರ, ದೇವನಹಳ್ಳಿ, ಚಿಕ್ಕಬಳ್ಳಾಪುರ, ಕಾನಕಾನಹಳ್ಳಿ, ತುಮಕೂರು ಮುಂತಾದ ತಾಲ್ಲೂಕುಗಳಿಂದ ಬಂದಿದ್ದವು. ಸುಮಾರು ೧೦,೦೦,೦೦೦ ರೂಪಾಯಿ ಒಟ್ಟು ಬೆಲೆಯುಳ್ಳ ದನಗಳು ಸೇರಿದ್ದವು. ಅವುಗಳಲ್ಲಿ ಜೋಡಿ ಒಂದಕ್ಕೆ ರೂ. ೬೦—೪೦೦ ವರೆಗೂ ಬೆಲೆಯುಳ್ಳದ್ದಾಗಿದ್ದವು. ಪ್ರದರ್ಶನಕ್ಕೆ ಬಂದ ರಾಸುಗಳಲ್ಲಿ ೭೫ ಜೋಡಿ ಹೋರಿ ಎತ್ತುಗಳನ್ನು ಚುನಾಯಿಸಿ ೧೬ ಬಹುಮಾನಗಳನ್ನು ಕೊಟ್ಟರು. ಬ

ಹುಮಾನ ಹೊಂದಿದ ರಾಸುಗಳು ರೂ. ೧೫೦—೪೦೦ ವರೆಗೂ ಬೆಲೆಯುಳ್ಳ ದ್ದಾಗಿದ್ದವು. ಹೋದ ವರ್ಷಕ್ಕಿಂತ ಈ ವರ್ಷ ರಾಸುಗಳ ಸಂಖ್ಯೆ ಕಡಮೆ ಯಾಗಿದ್ದರೂ ಒಳ್ಳೆ ಬೆಲೆಯುಳ್ಳ ಹೋರಿಗಳೂ ಎತ್ತುಗಳೂ ಬಂದಿದ್ದವು. ಬಳ್ಳಾರಿ, ಹಿಂದೂಪುರ, ಸೇಲಂ, ಕೊಯಮುತ್ತೂರು ಡಿಸ್ಟ್ರಿಕ್ಟುಗಳಿಂದ ಬಂದ ವ್ಯಾಪಾರಸ್ಥರು ರೂ. ೧೫೦—೩೫೦ ಬೆಲೆ ಬಾಳುವ ಅನೇಕ ಜೋಡಿ ಎತ್ತುಗಳನ್ನು ಕೊಂಡುಕೊಂಡರು. ಅಲ್ಲದೆ ಜಾವಾ ದೇಶದಿಂದ ಇಬ್ಬರು ಪಶುವೈದ್ಯರು ಪ್ರದರ್ಶನವನ್ನು ನೋಡುವದಕ್ಕೆ ಬಂದು ಕೆಲವು ಒಳ್ಳೆಜಾತಿ ಹೋರಿಗಳನ್ನು ಬೆಲೆಗೆ ತೆಗೆದುಕೊಂಡರು. ಉತ್ತಮವಾದ ರಾಸುಗಳಿಗೆ ಸಬ್‌ಡಿವಿಜನ್ ಆಫೀಸರು ಇನಾಮನ್ನೂ ಬಹುಮಾನ ಪತ್ರಿಕೆಗಳನ್ನೂ ಕೊಟ್ಟರು. ೧೦ ರೂಪಾಯಿನಿಂದ ೧೫ ರೂಪಾಯಿವರೆಗೂ ೧೬ ಬಹುಮಾನಗಳು ಹಂಚಲ್ಪಟ್ಟವು.

---

## II

ಸನ್ ೧೯೧೯ನೆ ಇಸವಿ ಮಾರ್ಚಿ ಮಾಹೆ ೨೪ನೆ ತಾರೀಖಿನಲ್ಲಿ ಪ್ರಾರಂಭವಾಗಿ ಒಂದು ವಾರದವರೆಗೂ ಶಿವಮೊಗ್ಗಾ ತಾಲ್ಲೂಕು ಕೂಡ್ಲಿಯಲ್ಲಿ ನಡೆಯುವ ಶ್ರೀ ಸಂಗಮೇಶ್ವರ ರಥೋತ್ಸವ ಕಾಲದಲ್ಲಿ ಒಂದು ದನಗಳ ಪ್ರದರ್ಶನವು ನಡೆಯುತ್ತದೆ.

ಪ್ರದರ್ಶನದಲ್ಲಿ ಉತ್ತಮವೆಂದು ತೇರ್ಗಡೆ ಹೊಂದಿದ ರಾಸುಗಳಿಗೆ ೧೦ ರೂಪಾಯಿನಿಂದ ೨೦ ರೂಪಾಯಿವರೆಗೂ ದರ್ಜೆವಾರು ೭ ಬಹುಮಾನಗಳು ಕೊಡಲ್ಪಡುತ್ತವಲ್ಲದೆ ಯೋಗ್ಯತಾ ಪತ್ರಗಳೂ ಸಹ ದೊರೆಯುವುವು.

ಜಾನುವಾರುಗಳನ್ನು ಪ್ರದರ್ಶನ ಮಾಡಲು ಇಷ್ಟವುಳ್ಳವರು ಶಿವಮೊಗ್ಗಾ ತಾಲ್ಲೂಕು ಅಮಲ್ದಾರರವರಿಗೆ ಆಗಲಿ ಅಥವಾ ಅವರಿಂದ ನೇಮಕ ಮಾಡಲ್ಪಟ್ಟ ಇತರ ನೌಕರರಿಗೆ ಆಗಲಿ ಪ್ರದರ್ಶನ ಶುರುವಾಗುವದಕ್ಕೆ ಒಂದು ದಿವಸಕ್ಕೆ ಕಮ್ಮಿ ಇಲ್ಲದೆ ಅವಕಾಶವಿರುವಂತೆ ಬರದು ತಮ್ಮ ಹೆಸರು ಜಾನುವಾರು ತಪಶೀಲು ದಾಖಲ್ಮಾಡಿಸಿಕೊಳ್ಳಬೇಕು.

ಕೂಡ್ಲಿ ಜಾತ್ರೆಗೆ ಬಹಳ ಜನಗಳು ಮತ್ತು ಜಾನುವಾರು ಸೇರು ವವರಿಂದ ವ್ಯಾಪಾರ ಬಹಳ ಚನ್ನಾಗಿ ನಡೆಯುತ್ತೆ.

ಈ ಭಾಗದಲ್ಲಿ ಇನ್ನೂ ಹೆಚ್ಚು ಸಂಗತಿಗಳನ್ನು ತಿಳಿಯಲಪೇಕ್ಷಿಸು ವವರು ಶಿವಮೊಗ್ಗಾ ತಾಲ್ಲೂಕು ಅಮಲ್ದಾರ್ರಿಗೆ ಸೀದಾ ಬರೆದು ತಿಳಿದು ಕೊಳ್ಳಬಹುದು.

## Occasional Notes.

## ವಿವಿಧ ವೃತ್ತಾಂತಗಳು.

೧. ಪ್ರಕೃತ ಇಂಡಿಯಾ ದೇಶದಲ್ಲಿ ಕಾಗದ ತಯಾರು ಮಾಡುವ ೮ ಕಾರ್ಖಾನೆಗಳಿರುತ್ತವಂತೆ. ಈ ಪೈಕಿ ೬ ನೇಟಿವ್ ಜನರ ಆಡಳಿತದಲ್ಲಿ ರುತ್ತವೆ. ಎಲ್ಲಾ ಮಿಲ್ಲುಗಳಲ್ಲೂ ಒಟ್ಟು ಇಷ್ಟೇ ಕಾಗದ ತಯಾರಾ ಗುತ್ತೆಂದು ನಿರಬಾಗಿ ಹೇಳುವದಕ್ಕಾಗುವದಿಲ್ಲ. ಪರಂತು ಬಂಗಾಳದಲ್ಲಿನ ಒಂದು ಕಾರ್ಖಾನೆಯಲ್ಲಿ ವರುಷಕ್ಕೆ ೧೪,೦೦೦ ಟನ್ ಕಾಗದ ತಯಾರಾಗು ತ್ತಂತೆ.— ಇಂಡಿಯನ್ ಟ್ರೇಡ್ ಜರ್ನಲ್.—೬—೮—೦೮.

---

೨. ಜಮೀನನ್ನು ಉಳುಮೆ ಮಾಡುವದೊಂದೇ ಅಲ್ಲದೆ ಅದರಲ್ಲಿನ ಕಳೆ ಕಿತ್ತು ಪಾಕಾಗಿಯೂ ಮತ್ತು ಮೇಲ್ಮಣ್ಣು ಪುಡಿಯಾಗಿಯೂ ಇರು ವಂತೆ ಮಾಡುವದು ಬಹಳ ಮುಖ್ಯವಾದದ್ದು. ಭೂಮಿಯಲ್ಲಿ ತನಿವು ಆರದ ರೀತಿ ಮೇಲ್ಗಡೆ ಕೊಟ್ಟಿಗೆ ಕಸ, ಸೊಪ್ಪು, ಎಲೆ, ಹುಲ್ಲು ಮುಂ ತಾದವುಗಳನ್ನು ಭೂಮಿಯ ಮೇಲೆ ಹಾಸುವದೂ ಅತ್ಯವಶ್ಯಕ. ಇದು ಇಂಡಿಯಾ ದೇಶದ ರೈತರಿಗೆ ಸಾಧಾರಣವಾಗಿ ಗೊತ್ತಾದ ಸಂಗತಿಯೇ.— ಅಗ್ರಿಕಲ್ಚರಲ್ ಅಂಡ್ ಇಂಡಸ್ಟ್ರಿಯಲ್ ಪ್ರೋಗ್ರೆಸ್.— ಡಿಸಂಬರು ೧೯೦೮.

---

V. B. Soobbiah & Sons, Printers, Bangalore.—1909.

THE MYSORE

# REVENUE & AGRICULTURAL GAZETTE.

ವಾಲ್ಯುಂ ೩.] ಸೋಮವಾರ, ೧ನೆ ಫಿಬ್ರವರಿ ೧೯೦೯. [ನಂ. ೭.

## Contents.



## ಅನುಕ್ರಮಣಿಕೆ.

## Indian Weaving Industry. *

## ಇಂಡಿಯಾ ದೇಶದ ನೇಗೆ ಕಸಬು.

ಇಂಡಿಯಾ ದೇಶದಲ್ಲಿ 'ಸಾಲ್ವೇಷನ್ ಆರ್ಮಿ' (Salvation Army) ಎಂಬ ಸಮಾಜಕ್ಕೆ ಮುಖಂಡರಾದ ಕಮಿಷನರ್ ಬೂತ್ ಟಕ್ಕರೆಯವರು (Commissioner Booth-Tucker) ಈ ದೇಶದ ನೇಗೆಯುವರ ಸ್ಥಿತಿಯನ್ನು ಕುರಿತು ಬರೆಯುವದೇನೆಂದರೆ.—

ಇಂಡಿಯಾದೇಶದಲ್ಲಿ ಪ್ರಪಂಚದಲ್ಲೆಲ್ಲಾ ಅತ್ಯಂತ ಚತುರರಾದ ನೇಗೆಯುವರು ಒಂದು ಕೋಟಿ ಹತ್ತು ಲಕ್ಷ ಮಂದಿ ಇದ್ಧಾರೆ. ಇವರಿಗೆ ನೇಗೆಯುಲ್ಲಿ ನಾಜೂಕಾದ ಕೆಲಸಕ್ಕೆ ಅವಶ್ಯಕವಾಗಿ ಬೇಕಾಗುವ ಕೈ ಕುಶಲತೆಯು ಅವರ ಪೂರ್ವೀಕರಿಂದ ವಂಶಪರಂಪರೆಯಾಗಿ ಅನುಸರಿಸಿ ಬಂದದ್ದಾಗಿರುತ್ತೆ. ಆದಾಗ್ಯೂ ಕೂಡ ಈ ಕಸಬು ಅವರಿಗೆ ಆದಾಯಕರವಾಗಿಲ್ಲವಾಗಿ ಇವರು ಆಷೇಯವಾಗಿ ನಡೆದು ಬಂದ ತಮ್ಮ ಕಸಬಿನಲ್ಲಿ ತಮ್ಮ ಮಕ್ಕಳನ್ನು ತರಬೇತುಮಾಡಲು ಹಿಂಜರಿಯುವದು ಸ್ವಭಾವವಾಗಿರುತಾ ದಕಾರಣ ಈ ಕಸಬಿನವರೇ ನಶಿಸಿಹೋಗುವ ಸಂಭವ ಉಂಟಾಗಿರುತ್ತೆ. ಪ್ರಕೃತ ನೇಗೆಯುವನು ಸಾಹುಕಾರರ ಕೈಗೆ ಸಿಕ್ಕಿ ತಪ್ಪಿಸಿಕೊಳ್ಳಲಾರದೆ ಹೆಣಗುತ್ತಿದ್ಧಾನೆ. ಸಾಹುಕಾರನೇ ಇವನಿಗೆ ಮಗ್ಗವನ್ನೂ ನೂಲನ್ನೂ ಕೊಳ್ಳುವದಕ್ಕೆ ಹಣ ಕೊಟ್ಟು ಕಡೆಗೆ ತಯಾರಾದ ಸರಕನ್ನು ಇವನ ಜೀವನ ನಡೆಯುವದಕ್ಕೂ ಕೂಡ ಕಷ್ಟವಾಗುವರೀತಿ ಕೇವಲ ಅಲ್ಪ ಖರೀದಿಗೆ ಕೊಂಡುಕೊಳ್ಳುತಾನೆ. ಇಂಥಾ ಕಷ್ಟ ದೆಶೆಯನ್ನು ತಪ್ಪಿಸಲು ಸಾಲ್ವೇಷನ್ ಆರ್ಮಿ ಸಮಾಜದವರು ಮಾಡುತ್ತಿರುವ ಪ್ರಯತ್ನಗಳೇನಂದರೆ, ಲೂಧಿಯಾನಾದಲ್ಲಿರುವ ಈ ಸಮಾಜದ ಕಾರ್ಖಾನೆಯಲ್ಲಿ ನೇಗೆಯುವರನ್ನು ನೇರಿಸಿಕೊಂಡು ಇವರಿಗೆ ನೂತನ ಕೈಮಗ್ಗಗಳ ಉಪಯೋಗವನ್ನು ಕಲಿಸುತ್ತಾರೆ. ಮತ್ತು ಅವರು ಕಾರ್ಖಾನೆಗೆ ಸೇರಿದ ದಿನದಿಂದಲೂ ಕೂಲಿಯನ್ನು ಕೊಡುತ್ತಾರೆ. ಈರೀತಿ ಸ್ವಲ್ಪ ಕಾಲದಲ್ಲೇ ನೇಗೆಯುವನು ತನ್ನ ಕೆಲಸದಲ್ಲಿ ಘಟ್ಟಿಗನಾಗಿ ಮಾಹೆಯಾನ ೧೪—೧೫ ರೂಪಾ

* ಇಂಡಿಯನ್ ಟ್ರೇಡ್ ಜರ್ನಲ್.—೧೧—೧೨—೦೮.

ಯಿ ಸಂಪಾದಿಸುವವನಾಗುತ್ತಾನೆ. ತರುವಾಯ ಇವನ ಸಂಪಾದನೆಯ ಲ್ಲಿ ಸ್ವಲ್ಪ ಭಾಗವನ್ನು ಕೂಡಿಟ್ಟು ಅದರಿಂದ ನೂತನ ತರಹೆ ಮಗ್ಗಗಳನ್ನು ಖರೀದಿಗೆ ತೆಗೆದುಕೊಂಡು ತನ್ನ ಮನೆಯಲ್ಲೇ ಸ್ವಂತವಾಗಿ ಈ ಕಸಬನ್ನು ನಡೆಸುವದರಲ್ಲಿ ಸಮಾಜದವರು ತಕ್ಕ ಪ್ರೋತ್ಸಾಹ ಕೊಡುತ್ತಾರೆ. ಇದೇರೀತಿ ಇತರ ಪ್ರದೇಶಗಳಲ್ಲೂ ಏರ್ಪಾಡಿಸುವ ಉದ್ದೇಶವಿರುತ್ತೆ. ಮನೆಗಳಲ್ಲಿಯೇ ಈ ಕಸಬನ್ನು ನಡೆಸುವವರ ಅನುಕೂಲತೆಗಾಗಿ ಮಧ್ಯರಾಷ್ಟ್ರವಾದ ಸ್ಥಳದಲ್ಲಿ ಒಂದು ಸಂಘವನ್ನು ಏರ್ಪಡಿಸಿ ತನ್ಮೂಲಕ ಇವರಿಗೆ ಹೊಸ ತರಹೆ ಯಂತ್ರೋಪಕರಣಗಳನ್ನು ಸರಬರಾಯಿಮಾಡುವದು, ನೂಲನ್ನು ಇವರಿಗೆ ಸುಲಭ ಖರೀದಿಗೆ ಮಾರುವದು ಮತ್ತು ಇವರು ತಯಾರಿಸಿದ ಸರಕನ್ನು ದೇಶಾಂತರಗಳಲ್ಲಿ ಲಾಭಕ್ಕೆ ವಿಕ್ರಯಿಸುವದು, ಈಏರ್ಪಾಟಿನ ಮುಖ್ಯಾಂಶವಾಗಿರುತ್ತೆ. ಈ ಏರ್ಪಾಟೇನೋ ಬಹಳ ದೊಡ್ಡದು. ಆದರೆ ಇದು ಕೈಗೂಡಬೇಕಾದರೆ ವರ್ತಕರ ಸಹಾಯವು ಅತ್ಯವಶ್ಯಕ. ಈ ಸಹಾಯವು ಕ್ರಮೇಣ ದೊರೆಯುವದರಲ್ಲಿ ಕಮಿಷನರವರಿಗೆ ನಂಬಿಕೆ ಇರುತ್ತೆ.

---

## The Mysore Exhibition, 1908.

## ಮೈಸೂರು ದಸರಾ ಕೈಗಾರಿಕೆ ಮತ್ತು ವ್ಯವಸಾಯಕ ಪ್ರದರ್ಶನ, ೧೯೦೮.

ಮೈಸೂರಿನಲ್ಲಿ ರೆವಿನ್ಯೂ ಕಮಿಷನರವರು ಶ್ರೀಮನ್ಮಹಾರಾಜರವರ ಸನ್ನಿಧಿಯಲ್ಲಿ ಅರಿಕೆ ಮಾಡಿದ ರಿಪೋರ್ಟಿನಲ್ಲಿ ಕಂಡುಬರುವ ಇನ್ನು ಕೆಲವು ಸ್ವಾರಸ್ಯವಾದ ಸಂಗತಿಗಳನ್ನು ನಮ್ಮ ವಾಚಕರ ತಿಳುವಳಿಕೆಗೆ ತರುತ್ತೇವೆ.

ಪ್ರದರ್ಶನ ವಸ್ತುಗಳು ಬರುವದರಲ್ಲಿ ಸಾವಕಾಶವಾದಾಗ್ಯೂ ಸೆಪ್ಟೆಂಬರು ೩೦ನೆ ತಾರೀಖಿನ ಸಾಯಂಕಾಲ ಪ್ರದರ್ಶನವು ತೆರೆಯಲು ಸಿದ್ಧವಾಯಿತು.

ಪ್ರದರ್ಶನದಲ್ಲಿ ಪ್ರದರ್ಶಿಸಲ್ಪಟ್ಟಿರುವ ವಸ್ತುಗಳ ತಪಶೀಲುಗಳನ್ನು ಈ ಕೆಳಗೆ ನಮೂದಿಸಿರುತ್ತೆ.

| | 1907. | 1908. |
|---|---|---|
| ವ್ಯವಸಾಯದ ಸೆಕ್ಷನ್ | 3292 | 3302 |
| ಕೈಗಾರಿಕೆ ಸೆಕ್ಷನ್ | 8762 | 10,433 |
| ಯಂತ್ರಗಳು | 75 | 176 |
| ಜುಮ್ಲಾ | 12,129 | 13,911 |

ಸೆಪ್ಟೆಂಬರು ೩ನೆ ತಾರೀಖು ಪ್ರಾತಃಕಾಲ ಶ್ರೀಮನ್ಮಹಾರಾಣಿ ಸಿ. ಐ. ಯವರು ಮತ್ತು ಯುವರಾಜರವರು ದಯಮಾಡಿಸಿ ಪ್ರದರ್ಶನವನ್ನು ಪರಾಂಬರಿಸಿದರು.

ಹೋದ ಸಾಲಿನಲ್ಲಿ ಫಾರೆಸ್ಟು ಮತ್ತು ಜಿಯಲಾಜಿಕಲ್ ಇಲಾಖೆಯವರಿಬ್ಬರೂ ಸೇರಿ ಒಂದೇ ಸ್ಟಾಲಿನಲ್ಲಿ ಸಾಮಾನುಗಳನ್ನು ಪ್ರದರ್ಶನ ಮಾಡಿದ್ದರು. ಈ ವರುಷ ಮಾತ್ರ ಈ ಎರಡು ಇಲಾಖೆಯವರೂ ವಿಶೇಷವಾಗಿ ಸಾಮಾನನ್ನು ಇಡತಕ್ಕ ಬಗ್ಯೆ ಪ್ರತ್ಯೇಕ ಕೊಠಡಿಗಳನ್ನು ಉಪಯೋಗಿಸಿಕೊಂಡರು. ಮದರಾಸ್ ಸರ್ಕಾರದವರು ತಮ್ಮ ಕ್ರೋಂ ಚರ್ಮದ ಸಾಮಾನುಗಳನ್ನು ಅಲ್ಯುಮಿನಿಯಂ ಲೋಹದ ಸಾಮಾನುಗಳನ್ನು ಮೈಸೂರು ಕೊಆಪರೇಟೀವ್ ಸಂಘದವರೂ ಮೆಸರ್ಸ್ ಮಥಿಸನ್ ಕಂಪೆನಿಯವರು, ಬಟ್ಲರ್ ಕಂಪೆನಿಯವರೂ ತಮ್ಮ ಸಾಮಾನುಗಳನ್ನು ಪ್ರದರ್ಶನಮಾಡಿದ್ದರು. ಬೊಂಬಾಯಿಯ ವರ್ತಕರಿಬ್ಬರು ಬನಾರೀಸ್ ಶೀರೆಗಳನ್ನೂ ಕಾಶ್ಮೀರದ ಶಾಲುಗಳನ್ನೂ ತಂದಿಟ್ಟಿದ್ದರು. ರಾಜಮಹೇಂದ್ರಿಯಲ್ಲಿ ತಯಾರಾದ ಹಾರ್ಮೋನಿಯಂ ಪ್ರದರ್ಶಿಸಲ್ಪಟ್ಟಿತ್ತು. ಮದರಾಸು ಆಧಿಪತ್ಯದ ಮಧುರೆ, ತಂಜಾವೂರು, ವೆಲ್ಲೂರು ಈ ಸ್ಥಳಗಳಿಂದ ಜೈಲಿನಲ್ಲಿ ತಯಾರಾದ ಭಾರಿ ಬೆಲೆಬಾಳುವ ಸಾಮಾನುಗಳು ಬಂದಿದ್ದವು. ಬೆಂಗಳೂರಿನಲ್ಲಿರುವ ಸ್ವದೇಶಿ ಮಾರ್ಟಿನ ಮ॥ ಎ. ಎಂ. ಶ್ರೀನಿವಾಸನ್‌ರವರು ಒಂದು ಸ್ಟಾಲಿನಲ್ಲಿ ತಮ್ಮ ಸಾಮಾನುಗಳನ್ನು ಪ್ರದರ್ಶಿಸಿದ್ದರು. ಇನ್ನೂ ಅನೇಕರು ಬಂದಿದ್ದಲ್ಲದೆ ಒಬ್ಬ ಮುಂಬೈ ಸಾಹುಕಾರ

ರು ಒಂದು ಕೊಠಡಿಯಲ್ಲಿ ಬೆಳ್ಳಿಯ ಸಾಮಾನುಗಳನ್ನು ಪ್ರದರ್ಶಿಸಿದ್ದರು.

ಮದರಾಸು ಗೌರ್ನಮೆಂಟಿನಲ್ಲಿ ಅಸಿಸ್ಟೆಂಟ್ ಕೆಮಿಕಲ್ ಎಗ್ಝಾಮಿನರಾದ ಮ|| ಸಿ. ನಂಜುಂಡರಾಯರು ಸ್ತ್ರೀ ವಿದ್ಯಾಭ್ಯಾಸಕ್ಕಾಗಿ ಮದರಾಸ್ ಪಟ್ಟಣದಲ್ಲಿ ಅವರು ಏರ್ಪಡಿಸಿರುವ ಪಾಠಶಾಲೆಯಲ್ಲಿ ತಯಾರಾದ ಅನೇಕ ಸಾಮಾನುಗಳನ್ನು ಕಳುಹಿಸಿದ್ದರಲ್ಲದೆ ಪ್ರದರ್ಶನಕ್ಕೆ ಬರುವ ಸ್ತ್ರೀಯರಿಗೆ ರತ್ನಕಂಬಳಿಗಳು, ಕಾಲ್‌ಚೀಲಗಳು, ಬನಿಯನ್‌ಗಳು ಮುಂತಾದ ಸಾಮಾನುಗಳನ್ನು ತಯಾರು ಮಾಡುವ ವಿಧಾನವನ್ನು ತೋರಿಸುವ ಬಗ್ಗೆ ಅಲ್ಲಿಂದಲೇ ಒಬ್ಬ ಹಿಂದು ಸ್ತ್ರೀಯನ್ನು ಮತ್ತು ಒಬ್ಬ ಬಾಲಕನನ್ನೂ ಸಹ ಕಳುಹಿಸಿದ್ದರು.

ಹೋದ ಸಾಲಿನಂತೆ ಮಧುರೆ ನಾಗಸಾಮಿಯವರು ಅನೇಕ ಉತ್ತಮತರಹೆ ಬಟ್ಟೆಗಳನ್ನು ಕಳುಹಿಸಿದ್ದರು. ಮೈಸೂರು ಮುಸಲ್ಮಾನ್ ವಿಧವೆಯರಿಗೋಸ್ಕರ ಏರ್ಪಡಿಸಿರುವ ಅಂಜುಮಾನಿನಿಂದಲೂ ಮತ್ತು ಮೈಸೂರು ಪಟ್ಟಣದ ಹಿಂದು ಸ್ತ್ರೀಯರಿಂದಲೂ ಗೋಟು ಕೆಲಸದ ಸಾಮಾನು ಕಳುಹಿಸಲ್ಪಟ್ಟಿದ್ದವು. ಕೊಚಿನ್, ಪುದುಕೋಟೆ, ತಿರುವಾಂಕೂರು, ಮೊದಲಾದ ಸಂಸ್ಥಾನಗಳಿಂದಲೂ ಮದರಾಸ್ ವ್ಯವಸಾಯ ಇಲಾಖೆಯಿಂದಲೂ ಬಂಗಾಳ ಸಂಸ್ಥಾನದಿಂದ ಮ|| ಮಾಲಿಕ್ ಮತ್ತು ಮ|| ನಿಹರ್‌ಚಂದ್ರಪಾಲ್‌ರವರಿಂದ ಸಹ ಪ್ರದರ್ಶನ ವಸ್ತುಗಳು ತಲಪಿದ್ದವು. ಪ್ರದರ್ಶನಕ್ಕೆ ಬಂದಿದ್ದ ಇನ್ನೂ ಅನೇಕ ಸಾಮಾನುಗಳ ವಿಷಯವಾಗಿ ಮುಂದಿನ ಸಂಚಿಕೆಯಲ್ಲಿ ತಿಳಿಸುವೆವು.

---

## Village Relief Works.

## ಗ್ರಾಮ ರಿಲೀಫ್ ಕಾಮಗಾರಿಗಳು.

ಗ್ರಾಮಾಂತರಗಳಲ್ಲಿ ಜನಗಳಿಗೆ ಸಹಾಯವನ್ನು ಒದಗಿಸಿ ಕೊಡುವ ಬಗ್ಗೆ ರಿಲೀಫ್ ಕಾಮಗಾರಿಗಳನ್ನು ಹೇಗೆ ಗೊತ್ತು ಮಾಡುವುದು ಮತ್ತು ಅವುಗಳನ್ನು ಹೇಗೆ ನಡೆಸಬೇಕು ಎಂಬೀ ವಿಚಾರಗಳಲ್ಲಿ ರೆವಿನ್ಯೂ ಕಮಿ

ಷನರ್ ಸಾಹೇಬರವರು ಡೆಪ್ಯುಟಿ ಕಮಿಷನರವರುಗಳ ತಿಳುವಳಿಕೆ ಮತ್ತು ನಡುವಳಿಕೆಬಗ್ಗೆ ಈ ಕೆಳಗೆ ಕಂಡ ಸರ್ಕ್ಯುಲರ್ ಹುಕುಂ ಕೊಟ್ಟಿರುತ್ತಾರೆ.

೧. ಮೇಲ್ಕಂಡ ಕಾಂಗಾರಿಗಳು ಒಂದಕ್ಕೊಂದು ಕೇವಲ ಸಮೀಪ ದಲ್ಲಿಲ್ಲದ ರೀತಿ ನೋಡಿಕೊಳ್ಳಬೇಕಲ್ಲದೆ ಒಂದು ಗ್ರಾಮದವರಿಗೋಸ್ಕರ ಏ ರ್ಪಡಿಸಿದ ಕಾಂಗಾರಿಯು ಸದರಿ ಗ್ರಾಮಕ್ಕೆ ೪-೫ ಮೈಲಿ ಫಾಸಲೆಯ ಲ್ಲಿಯೇ ಇರುವಂತೆ ಗೊತ್ತುಮಾಡಬೇಕು. ಏಕೆಂದರೆ, ಬಡ ಜಿರಾಯಿತು ದಾರ್ರು, ಮಾದಿಗರು, ಹೊಲೇರು ಮತ್ತು ಭೂಸ್ಥಿತಿ ಇಲ್ಲದ ಇತರರು ತ ಮ್ಮ ಗ್ರಾಮಗಳಲ್ಲಿಯೇ ವಾಸವಾಗಿದ್ದುಕೊಂಡು ಕಾಂಗಾರಿಗಳಿಗೆ ಹೋಗಿ ಬರಲು ಅನುಕೂಲವಾಗಿರುತ್ತದೆ.

೨. ಒಂದೇ ಕಾಂಗಾರಿಯಲ್ಲಿ ಅನೇಕ ಗ್ರಾಮಗಳ ಜನರು ಕೆಲಸ ಮಾಡುತ್ತಿರುವದಾದರೆ, ಸದರಿ ಕಾಂಗಾರಿಯನ್ನು ಒಂದು ಗ್ರಾಮಕ್ಕೆ ಒಂ ದು ಬ್ಲಾಕಿನಂತೆ ವಿಂಗಡಿಸಿ ಆಯಾ ಬ್ಲಾಕುಗಳಲ್ಲಿ ಕ್ರಮವಾಗಿ ಕೆಲಸ ತೆಗದುಕೊಳ್ಳುವಬಗ್ಗೆ ಆಯಾ ಗ್ರಾಮದ ಪಟೇಲರನ್ನೆ ನೇಮಿಸಬಹುದು.

೩. ಅಮಾನಿ ತರೀಕು.—ಕಾಂಗಾರಿಯು ಗ್ರಾಮದ ಪಟೇಲನ ಸುಫರ್ದಿನಲ್ಲಿರತಕ್ಕದ್ದು ಅವಶ್ಯ ಕಂಡಲ್ಲಿ ಇಂಥಾ ಕಾಂಗಾರಿ ನಡೆಯುದೇ ಇರು ವ ನೆರೆ ಗ್ರಾಮದ ಪಟೇಲನನ್ನು ಇವನಿಗೆ ಕುಮ್ಮಕು ಕೊಡಬಹುದು. ಕೆಲವು ಸಂದರ್ಭಗಳಲ್ಲಿ ಪಟೇಲನ ಜೊತೆಗೆ ಬುದ್ಧಿವಂತರಾದ ಇಬ್ಬರು ಪ್ರಮುಖ ರೈತರನ್ನು ಸಹಾಯಕ್ಕಾಗಿ ಕೊಡುವದು ಉತ್ತಮವಾಗಿ ಕಂ ಡುಬರಬಹುದು. ಮತ್ತೆ ಕೆಲವು ಸಂದರ್ಭಗಳಲ್ಲಿ ಪಟೇಲನೊಂದಿಗೆ ಶ್ಯಾನು ಭೋಗನು ಸಹಾ ಜಂಟಿಯಾಗಿ ಕಾಂಗಾರಿ ಛಾರ್ಜಿನಲ್ಲಿದ್ದರೆ ಉತ್ತಮ. ಇಷ್ಟೆಲ್ಲಾ ಮಾಡಿದಾಗ್ಯೂ ಕೂಡ ಕಾಂಗಾರಿಯು ಸರಿಯಾಗಿ ನಡೆಯುವ ದಕ್ಕೂ ಕ್ರಮವಾಗಿ ಕೂಲಿ ಬಟವಾಡೆಯಾಗುವದಕ್ಕೂ ಪಟೇಲನೇ ಮು ಖ್ಯ ಜವಾಬ್ದಾರನಾಗಿರತಕ್ಕದ್ದು.

ಈ ಕಾಂಗಾರಿಗಳ ಬಳಿ ಕೆಲಸವನ್ನು ಪ್ರತಿದಿವಸವೂ ಹಂಚಿ ಆ ಯಾದಿನವೇ ಜರೀಬುಮಾಡುವ ಪದ್ಧತಿ ಅನುಸರಿಸಬೇಕು. ಕೂಲಿಯವರ ಸ್ಥಿತಿಯನ್ನನುಸರಿಸಿ ಕೆಲಸವನ್ನು ಹೆಚ್ಚು ಕಡಮೆ ಹಂಚತಕ್ಕದ್ದು.

ಕೂಲಿಗೆ ತಕ್ಕಷ್ಟು ಕೆಲಸ ತೆಗೆಯುವ ಭಾಗದಲ್ಲಿ ಪಟೇಲನು ಜವಾಬ್ದಾರನಾಗಿರುತ್ತಾನೆ. ಕಾಂಗಾರಿಗೆ ಬರತಕ್ಕ ಕೂಲೀಜನರ ಹೆಸರು ಮಾರುತಪ್ಸೀಲು ತೋರಿಸುವಹಾಜರೀ ಪಟ್ಟಿಯನ್ನು ಶ್ಯಾನುಭೋಗನ ಸಹಾಯದಿಂದ ತಯಾರಿಸಿ ಇವನು ಕೆಲಸಕ್ಕೆ ಬಂದು ಕೂಲಿಯನ್ನು ತೆಗೆದುಕೊಳ್ಳುವಪ್ಪಕ್ಕೆ ಇದರಲ್ಲಿ ದಿನಚರಿಯುಲ್ಲೂ ಗುರ್ತುಮಾಡಬೇಕು.

ಪೇಟೆ ಧಾರಣೆ ಮತ್ತು ಫ್ಯಾಮಿನ್ ಕೋಡನಲ್ಲಿ ನಮೂದಿರುವ ದರಗಳನ್ನು ಪರ್ಯಾಲೋಚನೆಗೆ ತೆಗದುಕೊಂಡು ಕೂಲಿಯವರ ಆಶ್ರಿತವರ್ಗಕ್ಕೆ ಸಹಾಯಕವಾಗಿಯೂ ಇರುವಂತೆ ನ್ಯಾಯವಾದ ರೀತಿಯಲ್ಲಿ ಕೂಲಿ ದರವನ್ನು ಠರಾಯಿಸಿ ಬಟವಾಡೆ ಮಾಡಬೇಕು.

೪. ಕಂಟ್ರಾಕ್ಟು ತರೀಕು.—ಹೆಚ್ಚು ಅನುಕೂಲತೆ ಕಂಡುಬಂದಲ್ಲಿ ಕಾಂಗಾರಿಯನ್ನು ಕಂಟ್ರಾಕ್ಟು ತರೀಕು ನಡೆಸಬಹುದು. ಅದರೆ,

(a) ಪಟೇಲನೇ ಕಂಟ್ರಾಕ್ಟುದಾರನಾಗಿರಬೇಕು.

(b) ಇವನು ಬಡವರಾದ ಗ್ರಾಮಸ್ಥರನ್ನು ಕೂಲಿಗೆ ನೇಮಿಸಿಕೊಂಡು ಅವರಿಗೆ ಅಮಲ್ದಾರು ಒಪ್ಪುವ ನ್ಯಾಯವಾದ ದರದಂತೆ ಕೂಲಿಯನ್ನು ಆಯಾಯ ಕೂಡಲೆ ಪಾವತಿ ಮಾಡಲು ಒಪ್ಪಬೇಕು. ಸಾಧ್ಯವಾದಲ್ಲಿ ಕೂಲಿಯನ್ನು ಪೂರಾ ಧಾನ್ಯರೂಪವಾಗಿಯೋ ಇಲ್ಲವೆ ಸ್ವಲ್ಪ ಧಾನ್ಯರೂಪವಾಗಿಯೂ ಬಾಕಿ ನಗದಾಗಿಯೂ ಕೊಡಬಹುದು.

(c) ಸಾಧ್ಯವಾದ ಕಡೆಗಳಲ್ಲಿ ಗೌರವಸ್ಥರಾದ ಗ್ರಾಮಸ್ಥರಿಗೆ ಕಂಟ್ರಾಕ್ಟು ಕೊಡಬಹುದು. ಅಥವಾ ಕಾಂಗಾರಿಗಳ ಮೇಲ್ವಿಚಾರಣೆಯನ್ನು ವಹಿಸಬಹುದು.

೫. ಮೇಲ್ವಿಚಾರಣೆ.—ಶಾನುಭೋಗನು (ತಾನು ಸ್ವತಃ ಕಾಂಗಾರಿ ಛಾರ್ಜಿನಲ್ಲಿಲ್ಲದೇ ಇರುವಾಗ) ತನ್ನ ಫಿರ್ಕಾದಲ್ಲಿ ಜರಗುವ ಕಾಂಗಾರಿಗಳನ್ನು ನೋಡಿಕೊಂಡು ಪಟೇಲನಿಗೆ ಸಾಧ್ಯವಾದ ಕುಮ್ಮಕ್ಕನ್ನು ಕೊಡುತ್ತಿರಬೇಕು. ಮತ್ತು ವಾರಕ್ಕೊಂದಾವರ್ತಿ ಕಾಂಗಾರಿಯನ್ನು ಜರೀಬು ಮಾಡಿಸಿ ಪಾವತಿ ಪಟ್ಟಿಗಳ ತಯಾರಿಯಲ್ಲಿ ಪಟೇಲನಿಗೆ ಸಹಾಯ ಮಾಡಬೇಕು. ಪ್ರತಿದಿನವೂ ಕೂಲಿಯನ್ನು ಪಾವತಿ ಮಾಡುವದು ಅವಶ್ಯಕವೆಂ

ದು ಕಂಡುಬರುವ ಸಂದರ್ಭಗಳಲ್ಲಿ ವಿನಹ ವಾರಕ್ಕೊಂದಾವರ್ತಿ ಸಂತೆಯ ಹಿಂದಿನ ದಿವಸ ಕೂಲಿ ಬಟವಾಡೆ ಮಾಡಬೇಕು.

(b) ಶೇಕದಾರನು ತನ್ನ ಹೋಬಳಿಯಲ್ಲಿ ನಡೆಯುವ ಕಾಂಗಾರಿಗಳನ್ನೆಲ್ಲಾ ವಾರಕ್ಕೊಂದಾವರ್ತಿಯಾದರೂ ತನಿಖೆ ಮಾಡಿ ಕಾಂಗಾರಿಯಲ್ಲಾಗಲಿ ಬಟವಾಡೆಯಲ್ಲಾಗಲಿ ಕಂಡುಬರುವ ಲೋಪಗಳನ್ನೆಲ್ಲಾ ತನ್ನ ವಾರದ ಡೈರಿಗಳಲ್ಲಿ ಅಮಲ್ದಾರ್ರಿಗೆ ರಿಪೋರ್ಟು ಮಾಡತಕ್ಕದ್ದು.

(c) ಶೇಕದಾರನಿಗೆ ಕೆಲಸವು ಜಾಸ್ತಿಯಾದಲ್ಲಿ ರಿಲೀಫ್ ಕಾಂಗಾರಿಗಳ ಮೇಲ್ವಿಚಾರಣೆ ಮಾಡುವದರಲ್ಲಿ ಈತನಿಗೆ ಸಹಾಯ ಮಾಡುವ ಬಗ್ಗೆ ಅಸಿಸ್ಟೆಂಟ್ ಶೇಕದಾರರನ್ನು ನೇಮಿಸತಕ್ಕದ್ದು. ಇವರುಗಳನ್ನು ಶೇಕದಾರರ ಕೈಕೆಳಗಾಗಲಿ ಅಥವಾ ಸ್ವತಂತ್ರವಾಗಿ ಹೋಬಳಿಯ ಒಂದು ಭಾಗದ ಛಾರ್ಜಿನಲ್ಲಿರುವದಕ್ಕಾಗಲಿ ನೇಮಿಸಬಹುದು.

(d) ಅಮಲ್ದಾರರುಗಳು ಯಾವಾಗಲೂ ಸಂಚರಿಸತಕ್ಕದ್ದಲ್ಲದೆ ಏರ್ಪಾಟೆಲ್ಲವೂ ಸಮರ್ಪಕವಾಗಿ ನಡೆಯುವ ಭಾಗದಲ್ಲಿ ಜವಾಬ್ದಾರರಾಗಿರುತ್ತಾರೆ.

೬. ಮೇಲ್ಕಂಡಂತೆ ಗ್ರಾಮ ರಿಲೀಫ್ ಕಾಂಗಾರಿಗಳನ್ನು ನಡೆಸುವದಕ್ಕೆ ಅವಶ್ಯಕವಾದ ಒಳ ಏರ್ಪಾಟುಗಳ ವಿಷಯದಲ್ಲಿ ಡೆಪ್ಯುಟಿ ಕಮಿಷನರವರಿಗೆ ಪೂರ್ಣ ಸ್ವಾತಂತ್ರ್ಯ ವಿರುತ್ತೆ. ಈ ಕಾರ್ಯಗಳು ಕೈಗೂಡಬೇಕಾದರೆ ಡೆಪ್ಯುಟಿ ಕಮಿಷನರವರುಗಳು ಈ ವಿಚಾರದಲ್ಲಿ ತುಂಬಾ ಮುತವರ್ಜಿ ವಹಿಸಬೇಕು. ಸಾಧ್ಯವಾದ ಮಟ್ಟಿಗೂ ಸಹಾಯವನ್ನು ಒದಗಿಸಿಕೊಡುವದಲ್ಲದೆ ಸ್ಥಳೀಯರಿಗೆ ವಿಶೇಷ ಉಪಯೋಗವಾದ ಕಾಮಗಾರಿಗಳನ್ನು ಮಾಡಿಸುವದು ಇವರ ಮುಖ್ಯೋದ್ದೇಶವಾಗಿರಬೇಕು.

## Migration of Men & Cattle.

## ಜನಗಳು ಮತ್ತು ದನಗಳ ಸಂಚಾರ.

ಸಂಸ್ಥಾನದ ಕೆಲವು ಕಡೆ ಮಳೆಯು ಸರಿಯಾಗಿ ನಡಿಯದೆ ಪ್ರಕೃತ ಕಾಲಸ್ಥಿತಿಯು ಅಷ್ಟು ಅನುಕೂಲವಾಗಿಲ್ಲವಾಗಿ ದನಗಳನ್ನು ಮುಂದೆ

ಮುಂಪೆಯಾಗಿ ನೀರಿಗೂ ಮೇವಿಗೂ ಅನುಕೂಲವಾಗಿರುವ ಪ್ರದೇಶಗಳಿಗೆ ಹೊಡೆದುಕೊಂಡು ಹೋಗುತ್ತಿಧಾರೆಯಷ್ಟೆ. ಈ ವಿಚಾರವಾಗಿ ಗುಂಡ್ಲುಪೇಟೆ ಫಾರೆಸ್ಟು ರೇಂಜರು ತಮ್ಮ ೧೯೦೮ನೆ ಡಿಶಂಬರು ೨೭ನೆ ತಾರೀಖಿಗೆ ಆಖೈರಾಗುವ ವಾರದ ಡೈರಿಯಲ್ಲಿ ಬರೆಯುವದೇನಂದರೆ,—

ನಾಗಮಂಗಲ, ಕುಣಿಗಲು ಮತ್ತು ಚೆನ್ನರಾಯಪಟ್ಟಣ ತಾಲ್ಲೂಕುಗಳಿಂದ ದನಗಳನ್ನು ನೀಲಿಗಿರಿ ಡಿಸ್ಟ್ರಿಕ್ಟಿಗೆ ವಿಶೇಷವಾಗಿ ಹೊಡೆದುಕೊಂಡು ಹೋಗಿರುತ್ತಾರೆ. ಈ ತಾಲ್ಲೂಕುಗಳಿಂದ ಅನೇಕರು ನೀಲಿಗಿರಿಗೆ ಬಂದು ಕಛೇರಿಗಳಲ್ಲೂ ಮತ್ತು ಕಾಫಿತೋಟಗಳಲ್ಲೂ ನೌಕರಿಗಳನ್ನು ಸಂಪಾದಿಸಿಕೊಂಡು ಬಹಳ ಕಾಲದಿಂದಲೂ ಜೀವಿಸುತ್ತಿಧಾರೆ. ಉದಕಮಂಡಲ, ಕೂನೂರು ಮತ್ತು ಕೊಡೆಯಿಕೆನಾಲ್ ಕಡೆಗಳಲ್ಲಿ ತರಕಾರಿ ತೋಟಗಳನ್ನು ಮಾಡತಕ್ಕವರೆಲ್ಲಾ ಮೈಸೂರು ಕಡೆಯವರೇ. ಈರೀತಿ ಸಾವಿರಾರು ಮಂದಿ ಮೈಸೂರಿನವರು ನೀಲಿಗಿರಿಯಲ್ಲಿ ಅನೇಕ ಉದ್ಯೋಗಗಳಲ್ಲಿ ಸೇರಿ ನೆಮ್ಮದಿಯಾಗಿರುತ್ತಾರೆ. ಇವರು ಆಗಾಗ್ಯೆ ತಮ್ಮ ಊರುಗಳಿಗೆ ಬಂದು ಇಲ್ಲಿನವರಿಗೆ ನೀಲಿಗಿರಿಯಲ್ಲಿ ತಮಗಿರುವ ಅನುಕೂಲತೆಗಳನ್ನು ಮತ್ತು ಅಲ್ಲಿ ಕೂಲಿ ಕಸುಬಿಗಿರತಕ್ಕ ಗಿರಾಕಿಯನ್ನು ಹೇಳುವದುಂಟು. ಈ ಕಾರಣದಿಂದಲೂ ಮತ್ತು ತಮ್ಮ ಸ್ಥಳಗಳಲ್ಲಿ ಪೈರಾಗದೆ ತಿಂಡಿಗೂ ಮೇವಿಗೂ ಅನಾನುಕೂಲವಾಗಿ ಜನಗಳು ಜಾನ್ವಾರುಗಳನ್ನು ಅನೇಕವಾಗಟ್ಟಿಕೊಂಡು ಅಕ್ಟೋಬರ್ ಡಿಶಂಬರ್ ತಿಂಗಳುಗಳಲ್ಲಿ ನೀಲಿಗಿರಿ ಪ್ರಾಂತ್ಯ ಹೊರಟರು. ಇಲ್ಲಿಂದಹೋದವರಿಗೆಲ್ಲ ಅಲ್ಲಿ ಕೆಲಸ ದೊರೆಯದೆ ಅನೇಕರು ಜೀವನಕ್ಕಿಲ್ಲದೆ ತೊಂದರೆ ಪಡಬೇಕಾಗಿಬಂತು ; ಮತ್ತು ದನಗಳಿಗಾದರೊ ಸರಿಯಾಗಿ ಮೇವೂ ಪೋಷಣೆಯೂ ಸಾಲದೆ, ಇವುಗಳಲ್ಲಿ ದೊಡ್ಡರೋಗ ಮೊದಲಾದ ಜಾಡ್ಯಗಳು ಕಾಣಿಸಿಕೊಂಡು ಹರಡಲು ಕಾರಣವಾಯಿತು. ಈ ಅವಸ್ಥೆಯನ್ನು ನೋಡಿ ಅಲ್ಲಿನ ಕಾಫಿ ಪ್ಲಾಂಟರುಗಳು ಮತ್ತು ಇತರ ಜಮೀನ್ದಾರರು ಇಲ್ಲಿಂದ ಹೋದವರನ್ನು ತಮ್ಮ ಎಸ್ಟೇಟಿನಲ್ಲಿ ಬಿಟ್ಟುಕೊಳ್ಳುವದಕ್ಕೆ ತಕರಾರುಮಾಡಿದಕಾರಣ ಅವರು ತಮ್ಮ ಸ್ಥಳಕ್ಕೇನೆ ಲಾಚಾರಾಗಿ ತಮ್ಮ ದನಗಳನ್ನು ಅಟ್ಟಿಕೊಂಡು ಬಹಳ ಪ್ರಯಾಸಪಟ್ಟು ಹಿಂತಿರುಗಿ ಬರಬೇಕಾಯಿತು. ಈಪೈಕಿ ಕೆಲವರನ್ನು ಬಂಡಿಪುರದ ಫಾರೆಸ್ಟಿ

ನಲ್ಲಿ ನಿಂತು ದನಗಳನ್ನು ಮೇಯಿಸಬಹುದೆಂದು ಹೇಳಿದ್ದಾಯಿತು. ಈ ಫಾರೆಸ್ಟಿನಲ್ಲಿ ಹುಲ್ಲೇನೋ ಬಹಳ ಒಟ್ಟಾಗಿದೆ ಮತ್ತು ಅನೇಕವಾಗಿ ಬೀಜ ಹೊರಟು ಒಣಗುತ್ತಾ ಬಂದಿಧೆ. ಈ ಕಾರಣ ಇಲ್ಲಿ ದನಗಳಿಗೆ ಅಷ್ಟು ಅನುಕೂಲವಿಲ್ಲ. ಬೇರಂಬಾಡಿ ಕಡೆ ಡಿಸ್ಟ್ರಿಕ್ಟ್ ಫಾರೆಸ್ಟಿಗೆ ಕುಣಿಗಲು ಮತ್ತು ನಾಗಮಂಗಲ ತಾಲ್ಲೂಕುಗಳಿಂದ ಸುಮಾರು ೧೮೦ ರಾಸುಗಳು ಬಂದಿದ್ದವು.ಆದರೆ ಇವುಗಳಲ್ಲಿ ಗೊರಸುಮತ್ತು ಜಾಡ್ಯವು (Murrain) ಬಹಳ ಜೋರಾಗಿ ಹರಡಿದ್ದರಿಂದ ಅವು ಈ ಸ್ಥಳವನ್ನು ಬಿಟ್ಟು ಹೊರಟು ಹೋಗಿರುತ್ತವೆ. ಇಷ್ಟೆಲ್ಲಾ ಆದರೂ ಈ ಸಂಗತಿಗಳ್ಯಾವದೂ ತಿಳಿಯದೆ ತೊಂದರೆಯಾಗಿರುವ ಪ್ರದೇಶದಲ್ಲಿನ ಜನರು ನೀಲಿಗಿರಿ ಕಡೆಗೆ ಹೋಗುವದೇನೋ ಬಿಟ್ಟಿಲ್ಲ. ಗುಂಡ್ಲುಪೇಟೆ ತಾಲ್ಲೂಕು ಕಾಳಿಗೌಡನಹಳ್ಳಿ ಗ್ರಾಮಸ್ಥರು ತಮ್ಮ ಗ್ರಾಮದಲ್ಲಿ ದನಗಳಿಗೆ ಕುಡಿಯುವದಕ್ಕೆ ನೀರು ಇಲ್ಲವೆಂತ ಹೇಳಿಕೊಂಡಿದ್ದರಿಂದ ಸ್ಟೇಟ್ ಫಾರೆಸ್ಟಿನಲ್ಲಿ ದನಗಳ ರೊಪ್ಪಹಾಕುವದಕ್ಕೆ ಅವಕಾಶ ಕೊಟ್ಟಿರುತ್ತೆ.

---

## Indian Cotton Seed Oil. *

## ಇಂಡಿಯಾದೇಶದ ಹತ್ತಿ ಬೀಜದ ಎಣ್ಣೆ.

ಈದೇಶದ ಹತ್ತಿ ಬೀಜದಿಂದ ಅಮೆರಿಕಾ ದೇಶದ ಯಂತ್ರಗಳಲ್ಲಿ ಎಣ್ಣೆ ತೆಗೆದು ಇಲ್ಲಿನವರು ಅನುಕೂಲ ಹೊಂದಲು ಸಾಧ್ಯವಾದೀತೇ ಎಂಬ ಉದ್ದೇಶದಿಂದ ಬೊಂಬಾಯಿನ ಒಬ್ಬ ಭಾರೀ ವರ್ತಕರು ಅಮೆರಿಕಾ ದೇಶಕ್ಕೆ ಸ್ವಲ್ಪ ಹತ್ತಿ ಬೀಜವನ್ನು ಕಳುಹಿಸಿ ಕೊಟ್ಟಿದ್ದರು. ಅಲ್ಲಿ ಸುಮಾರು ೪ ಟನ್ ಬೀಜವನ್ನು ಅಜಮಾಯಿಷಿ ಮಾಡಿ ನೋಡಿದ್ದರಲ್ಲಿ ಫಲಿತಾಂಶವು ಬಹಳ ಸಮರ್ಪಕವಾಗಿಯೇ ಕಂಡು ಬಂದಿರುತ್ತೆ.

ಅರಳೆಯನ್ನು ಬಿಡಿಸಿಕೊಂಡ ಕೂಡಲೆ ಬೀಜವು ಹೊಸದಾಗಿರುವಾಗಲೇ ಎಣ್ಣೆ ತೆಗದಿದ್ದರೆ ಇನ್ನು ಉತ್ತಮವಾಗುತ್ತಿತ್ತೆಂದು ಅಲ್ಲಿ ಅಜಮಾಯಿಷಿ ನಡೆಸಿದವರು ಹೇಳುತ್ತಾರೆ. ಇಲ್ಲಿಂದ ೧೦,೦೦೦ಮೈಲಿ ದೂರ ಸಾಗಿ

---

* ಇಂಡಿಯನ್ ಟ್ರೇಡ್ ಜರ್ನಲ್.—೬—೮—೦೮.

ಹೋಗುವದರಲ್ಲಿಯೂ ಹವಾ ಭೇದದಿಂದಲೂ ಬೀಜವು ಒಣಗಲಾಗಿಯೂ ಘಟ್ಟಿಯಾಗಿಯೂ ಆಗಿ ಹೊಸ ಬೀಜದಿಂದ ತೆಗೆಯಬಹುದಾದಷ್ಟು ಎಣ್ಣೆಯನ್ನು ಇದರಿಂದ ತೆಗೆಯಲಿಕ್ಕೆ ಸಾಧ್ಯವಾಗದೇ ಹೋಯಿತು. ಇಷ್ಟು ಪ್ರತಿಕೂಲಗಳಿದ್ದರೂ ಕೂಡ ಅಜಮಾಯಿಷಿಯ ಫಲಿತಾಂಶವೇನೋ ಅನುಕೂಲವಾಗಿಯೇ ಇತ್ತು. ಇನ್ನು ಸೋಸದೇ ಯಂತ್ರದಿಂದಲೇ ತೆಗೆದ ಈ ದೇಶದ ಮಡ್ಡಿ ಎಣ್ಣೆಯು ಅಮೇರಿಕಾದೇಶದ ಸಾಧಾರಣ ಎಣ್ಣೆಗಿಂತಲೂ ಬಹಳ ಕಪ್ಪಾಗಿಯೂ ಮಂದವಾಗಿಯೂ ಇರುತ್ತದೆ. ಪರಂತು ಸೋಸಿದ ನಂತರ ಬಣ್ಣದಲ್ಲಿಯೂ, ಗುಣದಲ್ಲಿಯೂ ಅಮೇರಿಕಾದೇಶದ ಎಣ್ಣೆಗೆ ಯಾವತರದಲ್ಲೂ ಕೀಳಾಗಿರುವದಿಲ್ಲ.

---

## Correspondence.—Seed Grains.

## ಕರೆಸ್ಪಾಂಡೆನ್ಸ್.—ಬಿತ್ತನೆ ಬೀಜಗಳು.

ಸಂಸ್ಥಾನದ ಅನೇಕ ಕಡೆಗಳಲ್ಲಿ ಮಳೆ ಸಾಲದೆಯೂ ಮತ್ತು ಸಕಾಲದಲ್ಲಿ ಮಳೆ ನಡೆಸದೇಲೂ ಇದ್ದಕಾರಣ ಈಕಡೆಗಳಲ್ಲೆಲ್ಲಾ ಪೈರುಗಳು ಬಹಳವಾಗಿ ಸೊರಗಿದವು. ಈಗ ಎಲ್ಲೆಲ್ಲಿಯೂ ಅಲ್ಪ ಸ್ವಲ್ಪವಾಗಿ ಬೆಳೆದ ಫಸಲು ಕಟಾವಾಗಿ ಸುಗ್ಗಿಕಾಲವು ಮುಗಿಯುತ್ತಲಿರುವದು. ಪರಂತು ದೇವರ ದಯದಿಂದ ಬರುವ ಮುಂಗಾರು ಮಳೆಯಾದರೂ ಸರಿಯಾಗಿ ನಡೆಸೀತೆಂದು ನಾವು ಮನಃಪೂರ್ವಕವಾಗಿ ಹಾರೈಸುತ್ತೇವೆ. ಪ್ರಕೃತ ಕಾಲಸ್ಥಿತಿಯಲ್ಲಿ ಈಗಲೇ ರೈತಾಬಿಜನರು ತಕ್ಕ ಹುಷಾರಿಯನ್ನು ತೆಗದುಕೊಳ್ಳದೇಹೋದಲ್ಲಿ ಮುಂದೆ ಬಿತ್ತನೆ ಕಾಲವು ಸಮೀಪಿಸಿದಾಗ ಬಿತ್ತನೆ ಬೀಜಕ್ಕಾಗಿ ಬಹಳ ವ್ಯಥೆ ಪಡಬೇಕಾದೀತು. ಬಿತ್ತನೆ ಬೀಜಗಳನ್ನು ಆ ಕಾಲಕ್ಕೆ ಸರಿಯಾಗಿ ಜೊತೆ ಮಾಡಿಟ್ಟುಕೊಳ್ಳುವದರಲ್ಲಿ ಇನ್ನೊಂದಂಶವನ್ನು ಇವರು ನೆನಪಿನಲ್ಲಿಟ್ಟುಕೊಂಡರೆ ಉತ್ತಮ. ಈಗ ಜಿನಸಿಗಳ ಧಾರಣೆಯು ಏರಿರುವಕಾರಣ ಬೀಜವನ್ನು ದುಬಾರೆಯಾಗಿ ಕೊಳ್ಳುವದಕ್ಕೆ ಚೈತನ್ಯವಿರಲಾರದು. ಈ ಸಂದರ್ಭದಲ್ಲಿ ದಾಸ್ತಾನಿನಲ್ಲಿಟ್ಟುಕೊಂಡಿರುವ ಹ

ಳೆ ಬೀಜವನ್ನೇ ಮುಂದಕ್ಕೆ ಬಿತ್ತನೆ ಬಗ್ಗೆ ಉಪಯೋಗಿಸುವ ಅಭಿವಾ
ಯವು ಹುಟ್ಟಬಹುದು. ಆದರೆ ಹಳೆಬೀಜವನ್ನು ಬಿತ್ತನೆಗೆ ಉಪಯೋ
ಗಿಸಿದ್ದಾದರೆ ಇದು ಮುಗ್ಗಿಹೋಗಿ ಅಥವಾ ಅದರಲ್ಲಿ ಮೊಳೆಯುವ ಶಕ್ತಿ
ಕ್ಷಯಿಸಿ ಮುಂದಿನ ಪೈರು ಅತಂತ್ರವಾಗುವ ಸಂಭವ ಉಂಟು. ಮತ್ತು
ಗ ಹೊಸಬೀಜವನ್ನು ಒದಗಿಸಿಕೊಳ್ಳುವದೂ ಬಹಳ ಪ್ರಯಾಸವಾಗುತ್ತ
ದೆ. ಇದು ರೈತರಿಗೆ ಹೊಸ ವಿಷಯವಲ್ಲ. ಅವರಿಗೆ ಗೊತ್ತೇ ಇರುತ್ತ
ದೆ. ಏತತ್ಪ್ರಯುಕ್ತ ಈ ಸುಗ್ಗಿಯಲ್ಲಿಯೇ ರೈತಾಬಿಜನರು ಹೇಗಾ
ದರೂ ಮಾಡಿ ಮುಂದಕ್ಕೆ ಬಿತ್ತನೆಗೆ ಬೇಕಾಗುವಷ್ಟು ಬೀಜದ ಕಾಳನ್ನು
ಒದಗಿಸಿಕೊಂಡು ಜೋಪಾನವಾಗಿ ಇಟ್ಟಿರುವುದು ಅವಶ್ಯಕ. ಬತ್ತ, ರಾಗಿ
ಹುರಳಿ ಮುಂತಾದವುಗಳ ಸುಗ್ಗಿಯು ಪೂರೈಸುತ್ತಾ ಬಂತು. ಈ
ಲಸವನ್ನು ಮುಖ್ಯವಾಗಿ ಜಾಗ್ರತೆ ಮಾಡಿಕೊಳ್ಳಬೇಕು. ಈಗಲೆ ಸುಲಭ
ವಾಗಿ ಬೀಜವನ್ನು ಒದಗಿಸಿಕೊಳ್ಳಲು ಅನೇಕ ಉಪಾಯಗಳುಂಟು. ಬ
ಡವಾಳಸ್ತರು ಹೊಸ ಕಾಳನ್ನು ಬೀಜಕ್ಕಾಗಿಯೇ ಕೊಂಡು ಸಕಾಲದ
ಬಡ ರೈತಾಬಿಜನರಿಗೆ ಅನುಕೂಲಪಡಿಸಿಕೊಡುವ ಉದ್ದೇಶ ಶೇಖರಿಸಿಡ
ಹುದು. ಈಗ ಡಿಸ್ಟ್ರಿಕ್ಟ್ ಹೆಡ್‌ಕ್ವಾರ್ಟರುಗಳಲ್ಲಿ ಸ್ಥಾಪಿತವಾಗಿರುವ ವ್ಯ
ಸಾಯಸಂಘದ ಮೆಂಬರುಗಳು ಇದೇರೀತಿ ಸಹಾಯ ಮಾಡಬಹುದು. ಈ
ಸಂಘದವರು ಪ್ರತಿ ತಾಲ್ಲೂಕಿನಲ್ಲಿಯೂ ಅನುಕೂಲವಾದ ಒಂದು ಸ್ಥಳದ
ಸಾಕಾದಷ್ಟು ಬಿತ್ತನೆ ಬೀಜವನ್ನು ದಾಸ್ತಾನ್ ಮಾಡಿ ಆರಂಭಕಾಲ ಪ
ರುವಾಗುತ್ತಲೆ ಬಡ ರೈತಾಬಿಜನರಿಗೆ ಬಿತ್ತವನ್ನು ಒದಗಿಸಿ ಸಹಾಯ
ಮಾಡಿದರೆ ಬಹಳ ಉಪಕಾರ ಮಾಡಿದಂತಾಗುತ್ತದೆ. ಪ್ರಕೃತ ಇನ್ನೊ
ದು ಅನುಕೂಲವಿರುತ್ತದೆ. ಬೀಜವನ್ನು ಕೊಂಡಿಟ್ಟುಕೊಳ್ಳುವ ಉದ್ದೇಶ
ರೈತರುಗಳು ಸರ್ಕಾರದಿಂದ ತಕಾವಿ ಸಾಲಗಳನ್ನು ಖಾಯಿಷ್‌ಮಾಡಿ ಪ
ಯಬಹುದಾಗಿರುತ್ತೆ; ಮತ್ತು ಈ ವಿಚಾರದಲ್ಲಿ ಇನ್ಯಾವ ವಿಧದಲ್ಲಿಯಾ
ರೂ ಸರ್ಕಾರದಿಂದ ತಕ್ಕ ಸಹಾಯವನ್ನು ಅಪೇಕ್ಷಿಸಿದ್ದಾದರೆ ಇದೂ ದೊ
ರಕದೇ ಇರಲಾರದು.

ಹಿತಚಿಂತಕ.

—o—

# Government Proceedings.

## ಸರ್ಕಾರಿ ಹುಕುಂಗಳು.

I

ಪ್ರಕೃತ ದನಗಳಿಗೆ ಮೇವು ಸಿಕ್ಕುವದು ಬಹಳ ಕಷ್ಟವಾಗಿರುವಧರಿಂದ ಸರ್ಕಾರದವರು ಚಿತ್ರದುರ್ಗ, ಕೋಲಾರ ಮತ್ತು ತುಂಕೂರು ಡಿಸ್ಟ್ರಿಕ್ಟುಗಳಲ್ಲೂ ಮತ್ತು ಇತರ ಡಿಸ್ಟ್ರಿಕ್ಟುಗಳಲ್ಲಿ ಈರೀತಿ ಕಷ್ಟ ಪ್ರಾಪ್ತವಾಗಿರುವ ಪ್ರದೇಶಗಳಲ್ಲೂ ೧೯೦೮—೦೯ನೆ ಸಾಲಿಗೆ ಹುಲ್ಬನ್ನಿಯನ್ನು ಪೂರ್ತಿಯಾಗಿ ರಿಮಿಷನ್ ಮಾಡಿರುತ್ತಾರೆ.—ಗೌ. ಪ್ರೊ. ನಂ. ಆರ್. ೪೫೯೩—೪—ಅಗ್ರಿ ೧೧೨—೦೮—೨, ತಾ|| ೧೯—೧—೦೯.

---

II

ಮಂಡಗೆರೆ, ಹೇಮಗಿರಿ, ಶ್ರೀರಾಮದೇವರ ನಾಲೆಗಳ ಕೆಳಗೆ ಹಾಲಿ ನಿಂತಿರುವ ಪೈರಿಗೂ ಮತ್ತು ಶಿವನಸಮುದ್ರದ ವಿದ್ಯುಚ್ಛಕ್ತಿ ಕೆಲಸಕ್ಕೂ ನೀರಿನ ಅನಾನುಕೂಲ ಉಂಟಾಗದ ರೀತಿ ನೋಡಿಕೊಳ್ಳಬೇಕಾಗಿರುತ್ತೆ. ಪ್ರಕೃತಸ್ಥಿತಿಯಲ್ಲಿರುವಂತೆ ನದಿಯಲ್ಲಿ ನೀರು ಕಡಮೆಯಾಗುತ್ತಾ ಹೋದರೆ ಬಿಸಲು ಕಾಲದಲ್ಲಿ ಕಬ್ಬಿನ ಫಸಲಿಗೆ ನೀರು ಬಿಡಲು ಸಾಧ್ಯವಾಗದೇ ಹೋಗಬಹುದು. ಈ ಕಾರಣಗಳಿಂದ ಮೇಲ್ಕಂಡ ನಾಲೆಗಳ ಛಾರ್ಜಿನಲ್ಲಿರತಕ್ಕ ಅಸಿಸ್ಟೆಂಟ್ ಇಂಜನೀಯರವರು ಈ ನಾಲೆಗಳ ಕೆಳಗಿನ ರೈತರಿಗೆ ಎಚ್ಚರಿಸಿದಾಗ್ಯೂ ಕೂಡ ಇವರುಗಳು ಹೊಸದಾಗಿ ಕಬ್ಬಿನ ಪೈರು ಇಡುವುದರಲ್ಲುದ್ಯುಕ್ತರಾಗಿರುವದಾಗಿ ತಿಳಿದುಬರುತ್ತೆ. ಈ ನಾಲೆಗಳ ಕೆಳಗೆ ಬೇಸಿಗೆಯಲ್ಲಿ ಯಾವ ಪೈರನ್ನಾದರೂ ಇಟ್ಟರೆ ನೀರಿಗೆ ತೊಂದರೆಯಾಗಿ ಛಾನಲ್ ಡಿವಿಜನವರು ನೀರು ಸರಬರಾಜುಮಾಡಲು ಜವಾಬ್ದಾರರಾಗುವದಿಲ್ಲವಾದಕಾರಣ ಈ ವಿಚಾರವನ್ನು ಸಂಬಂಧಪಟ್ಟ ರೈತರ ತಿಳುವಳಿಕೆಗೆ ತಂದಿರುತ್ತೆ.

---

# Occasional Notes.

## ವಿವಿಧ ವೃತ್ತಾಂತಗಳು.

೧. ಸನ್ ೧೯೦೯ ಜನವರಿ ಮಾಹೆ ೨೭ನೆ ತಾರೀಖಿನ ಒಕ್ಕಲಿಗರ

ಪತ್ರಿಕೆಯಲ್ಲಿ ಪ್ರಕಟಿಸಲಾಗಿರುವ ದನಗಳ ಮೇವಿನ ವಿಷಯವಾದ ಒಂದು
ಲೇಖನವನ್ನು ನಮ್ಮ ವಾಚಕರ ತಿಳುವಳಿಕೆ ಬಗ್ಗೆ ಈ ಸಂಚಿಕೆಯೊಂದಿ
ಸಪ್ಲಿಮೆಂಟಾಗಿ ರವಾನಿಸಿರುತ್ತೇವೆ.

---

೨. ತರಕಾರಿ, ಗನ್ನ ಮತ್ತು ಹತ್ತಿ ಸಾಗುವಳಿಯಲ್ಲಿ ಸಾಲುಹೊ
ಡೆದು ಏರು ಹಾಕುವ ಕೆಲಸಕ್ಕೆ ಅಮೇರಿಕಾ ದೇಶದ „ಪ್ಲಾನೆಟ್ ಜೂನಿಯ
ಹಾರ್ಸ್ ಹೊ" ಎಂಬ ಗುಂಟೆಯನ್ನು (Planet Junior Horse Hoe
ಉಪಯೋಗಿಸಿದರೆ ಖರ್ಚು ಕಡಮೆಯಾಗುವದಾಗಿ ಗೊತ್ತಾಗಿರುತ್ತ
ಇದರ ಬೆಲೆ ೩೦ ರೂಪಾಯಿ. ಇದನ್ನು ಜಿರಾಯಿತುದಾರರು ಬಹುಶಃ ಪಸ
ದು ಮಾಡುವಂತೆ ತೋರುತ್ತೆ. ಆಗಲೆ ಪ್ರೈವೇಟು ಜನರಿಗೋಸ್ಕ
ಇಲಾಖೆಯವರು ೧೭ ಗುಂಟೆಗಳಿಗಾಗಿ ಬರೆದಿರುತ್ತಾರೆ.—ಪಂಜಾಬ್ ವ್ಯ
ಸಾಯ ಇಲಾಖೆಯ ೧೯೦೭—೦೮ನೆ ಸಾಲ್ ರಿಪೋರ್ಟು.

---

೩. ಕಾಶ್ಮೀರದೇಶದಲ್ಲಿ ರೇಷ್ಮೆ ಹುಳುಗಳಿಗೆ ರೋಗ ತಗಲುತ್ತಿ
ದ್ದದ್ದರಿಂದ ಷಾತರಾತ್ ಕಸಬನ್ನು ಸ್ಥಾಪಿಸಲು ನಡೆಸುತ್ತಿದ್ದ ಪ್ರಯತ್ನ
ಗಳೆಲ್ಲವು ಕೈಗೂಡದಂತಾಗಿತ್ತು. ಆದರೆ ಈಚೆಗೆ ಜಾಡ್ಯರಹಿತವಾ
ಮೊಟ್ಟೆಗಳನ್ನೇ ಹೊರಗಿನಿಂದ ತರಿಸಿ ಉಪಯೋಗಿಸಿದಾರಭ್ಯ ಮೇಲ್ಕಂ
ಕೈಗಾರಿಕೆಯು ಚೆನ್ನಾಗಿ ನಡೆಯುತ್ತಲಿದೆ. ಇದರಿಂದ ಸಾವಿರಾರು ಜ
ರ ಜೀವನವು ನಡೆದು ನೆಮ್ಮದಿಯಾಗಿರುವದಲ್ಲದೆ ಸಂಸ್ಥಾನಕ್ಕೂ ವಿಶೇಷ
ಲಾಭ ಉಂಟಾಗಿರುತ್ತೆ.—ಪಂಜಾಬ್ ವ್ಯವಸಾಯ ಇಲಾಖೆಯ ೧೯೦೭—೦೮
ಸಾಲ್ ರಿಪೋರ್ಟು.

---

೪. ದನದ ಗಂಜಲದ ಸಾರವು ಆರಿಹೋಗದರೀತಿ ಒಣಮಣ್ಣನ್ನು ಉಪ
ಯೋಗಿಸಿ ಇದನ್ನು ಕಾಪಾಡುವ ವಿಧಾನದಿಂದ ತೃಪ್ತಿಕರವಾದ ಫಲಿತಾ
ಶಗಳು ಕಂಡುಬಂದಿರುತ್ತವೆ. ಈರೀತಿ ಗಂಜಲದಲ್ಲಿ ಚನ್ನಾಗಿ ನೆನದ ಮ
ಣ್ಣು ಜಮೀನಿಗೆ ಸರ್ವೋತ್ತಮವಾದ ಗೊಬ್ಬರ. ಒಂದು ಎಕರೆಯ
ಒಂದು ಜೋಡಿ ಎತ್ತಿನಿಂದ ತೆಗೆಯಬಹುದಾದ ಉತ್ಪತ್ತಿಯನ್ನು ಈ
ಮೂಲಕ ಶೇಕಡ ೫೦ರಷ್ಟು ಹೆಚ್ಚಿಸಲು ಸಾಧ್ಯವಾಗುತ್ತೆ. ಇದಕ್ಕಾ

ಹೆಚ್ಚು ಖರ್ಚೇನೂ ತಗಲುವದಿಲ್ಲ.—ಸೆಂಟ್ರಲ್ ಪ್ರಾವಿನ್ಸಸ್ ವ್ಯವಸಾಯ ಇಲಾಖೆಯ ೧೯೦೭-೦೮ನೆ ಸಾಲ್ ರಿಪೋರ್ಟು.

———o———

೫. ದನಗಳಿಗೆ ಮೇವಿಗೋಸ್ಕರವೆ ಪೈರನ್ನು ಬೆಳೆಯಲಿಚ್ಛಿಸುವದಾದರೆ ಈ ಕೆಳಗೆ ಕಂಡ ಮೂರು ಸಂಗತಿಗಳನ್ನು ಗಮನಿಸಿ ತಕ್ಕ ಪೈರನ್ನಿಟ್ಟರೆ ಒಳ್ಳೇದು.

(೧) ಬಿತ್ತನೆಯಲ್ಲಿಯೂ ಸಾಗುವಳಿಯಲ್ಲಿಯೂ ಹೆಚ್ಚು ಲಾಗವಡು ಮತ್ತು ಶ್ರಮವೂ ಇಲ್ಲದೆ ಬೆಳೆ ತೆಗೆಯಲು ಸಾಧ್ಯವಾಗಿರಬೇಕು.

(೨) ಜಮೀನಿನಲ್ಲಿ ಸಾಮಾನ್ಯವಾಗಿ ಇತರ ಬೆಳೆಗಳ್ಯಾವವನ್ನೂ ಮಾಡದೇ ಇರುವ ಕಾಲದಲ್ಲಿ ಬೆಳೆಯುತಕ್ಕದ್ದಾಗಿರಬೇಕು.

(೩) ಈ ಬೆಳೆಯು ಜಮೀನನ್ನು ಹೆಚ್ಚು ಫಲವತ್ತಾಗಿ ಮಾಡತಕ್ಕದ್ದಾಗಿರಬೇಕು.—ಸೆಂಟ್ರಲ್ ಪ್ರಾವಿನ್ಸಸ್ ವ್ಯವಸಾಯ ಇಲಾಖೆಯ ೧೯೦೭-೦೮ನೆ ಸಾಲಿನ ರಿಪೋರ್ಟು.

———o———

೬. 'ರಾನ್ಸಮ್ಸ್ ಟರ್ನ್‌ರೆಸ್ಟ್ ಪ್ಲೌ' (Ransoms' Turnwrest Plough) ಎಂಬ ನೇಗಿಲೂ ಮತ್ತು "ಹಾರ್ಡರ್ಸ್ ಅಮೇರಿಕನ್ ವಿನೋಯರ್" (Harders' American Winnower) ಎಂಬ ತೂರುವ ಯಂತ್ರವೂ ಎಂದಿನಂತೆ ಧಾರಾಳವಾಗಿ ಬಿಕರಿಯಾಗಿರುತ್ತವೆ. ಜಮೀನುಗಳಲ್ಲಿ 'ಕಾನ್ಸ್' (Kans) ಮತ್ತು 'ಕುಂದಾ' (Kunda) ಎಂಬ ಗರಿಕೆ ಹುಲ್ಲು ಹತ್ತಿದ್ದರೆ ಅವುಗಳನ್ನು ಬುಡಮಟ್ಟ ಎಬ್ಬಿಸುವದರಲ್ಲಿ ಈ ನೇಗಿಲಿಗೆ ಸಮಾನವಾದ್ದು ಯಾವದೂ ಇಲ್ಲ. ಈ ನೇಗಿಲುಗಳು ಎಳೆತಕ್ಕೆ ಬಹಳ ಭಾರವಾಗಿರುವ ಕಾರಣ ಬೇರಾರು ಪ್ರಾಂತ್ಯದ ಭಾರಿ ಎತ್ತುಗಳಿಗೆ ಕೇವಲ ಲಾಯಕ್ಕಾಗಿವೆ; ಮತ್ತು ಅಲ್ಲಿ ಇವುಗಳಿಗೆ ವಿಶೇಷವಾಗಿ ಗಿರಾಕಿಯೂ ಇರುತ್ತದೆ.—ಸೆಂಟ್ರಲ್ ಪ್ರಾವಿನ್ಸಸ್ ವ್ಯವಸಾಯ ಇಲಾಖೆಯ ೧೯೦೭-೦೮ನೆ ಇಸವಿಯ ರಿಪೋರ್ಟು.

———o———

೭. ನಮ್ಮ ದೇಶದಲ್ಲಿ ನೂತನ ವ್ಯವಸಾಯ ಕ್ರಮಗಳನ್ನು ಅನುಸರಿಸದೇ ಹೋಗುವುದರಿಂದ ಒಳ್ಳೇ ಕಾಲದಲ್ಲಿ ಹೆಚ್ಚು ಬೆಳೆಯನ್ನು ಬೆಳೆದು

ಕೊಂಡು ಧಾನ್ಯವನ್ನು ಕೂಡಿಟ್ಟುಕೊಳ್ಳುವುದಕ್ಕೆ ಮಾರ್ಗವಿಲ್ಲದೆ ಹೋಗಿ ರುವುದು. ಒಂದು ಖಂಡಗ ಬೆಳೆಯುವ ಪ್ರದೇಶದಲ್ಲಿ ಎರಡು ಖಂಡಗಗಳ ನ್ನು ಬೆಳೆದುಕೊಳ್ಳುವಂತೆ ನೂತನ ಕ್ರಮಗಳನ್ನು ಅನುಸರಿಸದೆ ಆಪೇರ್ ಯಿಂದ ಬಂದ ಪದ್ಧತಿಯಂತೆಯೇ ನಡೆದುಕೊಳ್ಳುವದರಿಂದ ಫಸಲು ಹೆ ಚ್ಚಾಗದೆ ಕ್ರಮೇಣ ಕಮ್ಮಿಯಾಗುತ್ತಾ ಬರುವುದು. ಇದರಿಂದ ಬೆಳೆದ ಫಸಲು ತಿನ್ನುವುದಕ್ಕೇ ಸಾಲದೆ ಹೋಗುವದು. ಈ ಕಾರಣದಿಂದ ಜನ ರಲ್ಲಿ ಧಾನ್ಯವು ಬಂಡವಾಳ ನಿಲ್ಲದೆ ತೊಂದರೆಯು ಉಂಟಾಗುತ್ತಿರುವುದು.- ಒಕ್ಕಲಿಗರ ಪತ್ರಿಕೆ.—೨೦—೧—೦೯.

———o———

೪. ಬಿಳಿ ಬೂರಾ ಸಕ್ಕರೆಯು ತಯಾರಿಯಲ್ಲಿ ಎಲಬಿನ ಇದ್ದಲೂ ಮತ್ತು ರಕ್ತವೂ ಉಪಯೋಗಿಸಲ್ಪಡುತ್ತದೆಂದು ಇಂಡಿಯಾದೇಶದಲ್ಲಿ ಜನರು ಸಾ ಮಾನ್ಯವಾಗಿ ತಿಳಿದುಕೊಂಡಿರುತ್ತಾರೆ. ಇದು ತಪ್ಪು. ಬೆಲ್ಲದಿಂದ ಬಿಳಿ ಸ ಕ್ಕರೆಯನ್ನು ತಯಾರುಮಾಡಬೇಕಾದರೆ ಬೆಲ್ಲದ ಬಣ್ಣವನ್ನು ತೆಗದು ಹಾ ಕಬೇಕು. ಇದಕ್ಕೆ ಬೆಲ್ಲವನ್ನು ಎಲಿಬಿನ ಇದ್ದಲು ಮೂಲಕ ಶೋಧಿಸುವ ದೇ ಸರ್ವೋತ್ಕೃಷ್ಟವಾದ ಕ್ರಮವೇನೊ ನಿಜ್ಜ. ಇಂಡಿಯಾದಲ್ಲಿ ಉಪಯೋಗಪಡುವ ಸಕ್ಕರೆಗಳಲ್ಲಿ ಸ್ಥಳೀಯ ಕಾರ್ಖಾನೆಗಳಲ್ಲಿ ತಯಾರಾ ಗುವ ಸಕ್ಕರೆ ಮಾತ್ರ ಮೇಲ್ಕಂಡ ವಿಧಾನದಿಂದ ಮಾಡಲ್ಪಡುತ್ತೆ. ಏ ಕೆಂದರೆ, ಇಲ್ಲಿನವರು ಬೆಲ್ಲದಿಂದಲೇ ಸಕ್ಕರೆಯನ್ನು ತಯಾರುಮಾಡಬೇಕಾ ಗಿರುತ್ತದೆಯೇ ಹೊರ್ತು ಬೇರೊಂದು ಮಾರ್ಗವನ್ನು ಅರಿತವರಲ್ಲ. ಆದ ರೆ ಇಂಡಿಯಾದೇಶಕ್ಕೆ ಸಕ್ಕರೆಯನ್ನು ರಫ್ತುಮಾಡುವ ದೇಶಗಳಲ್ಲಿ ಕಬ್ಬಿನ ಹಾಲಿನಿಂದಲೇ ನೇಟಾಗಿ ಸಕ್ಕರೆಯನ್ನು ತಯಾರು ಮಾಡುತ್ತಾರಾದಕಾರ ಣ ಎಲಬಿನ ಇದ್ದಲನ್ನು ಸುತರಾಂ ಉಪಯೋಗಮಾಡುವದಿಲ್ಲ. ಈ ಚೆಗೆ ವಿ|| ಹಾಡಿಯುವರು ಕಂಡುಹಿಡಿದಿರುವ ವಿಧಾನದಿಂದ ಕಬ್ಬಿನ ಹಾಲಿ ನಿಂದಲೇ ನೇರವಾಗಿ ಸಕ್ಕರೆಯನ್ನು ತಯಾರುಮಾಡಬಹುದು ಮತ್ತು ಈ ಕ್ರಮ ಬಹಳ ಸಾಮಾನ್ಯವಾಗಿಯೂ ವಿಶೇಷ ಲಾಗವಡು ಅವಶ್ಯಕವಿಲ್ಲ ವಾದ್ದರಿಂದ ಹಳ್ಳಿಗಾಡುಗಳಲ್ಲಿಯೂ ಕೂಡ ಅನುಸರಿಸಬಹುದಾದ್ದಾಗಿ ಯೂ ಇರುತ್ತದೆ.—ಇಂಡಿಯನ್ ಟ್ರೇಡ್ ಜರ್ನಲ್.—೧೦—೧೨—೦೪.

———o———

V. B. Soobbiah & Sons, Printers, Bangalore.—1909.

THE MYSORE

# REVENUE & AGRICULTURAL GAZETTE.

ವಾಲ್ಯೂಂ ೩.] ಸೋಮವಾರ, ೧೫ನೆ ಫಿಬ್ರವರಿ ೧೯೦೯. [ನಂ. ೮.

## Contents.



## ಅನುಕ್ರಮಣಿಕೆ

## Agricultural Experiments in Bombay Presidency.

## ಬೊಂಬಾಯಿ ಅಧಿಪತ್ಯದಲ್ಲಿ ವ್ಯವಸಾಯದ ಅಜಮಾಯಿಷಿಗಳು

ಸನ್ ೧೯೦೭—೦೮ನೆ ಸಾಲಿನಲ್ಲಿ ಬೊಂಬಾಯಿ ಅಧಿಪತ್ಯದ ವ್ಯವಸಾಯಕ ಸ್ಟೇಷನ್ನುಗಳಲ್ಲಿ ನಡೆಸಿದ ಅಜಮಾಯಿಷಿಗಳಲ್ಲಿ ತಿಳಿದುಬಂದ ಕೆಲವು ಉಪಯುಕ್ತವಾದ ಅಂಶಗಳನ್ನು ನಮ್ಮ ವಾಚಕರ ತಿಳುವಳಿಕೆಗೆ ತರುತ್ತೇವೆ.

ನೆಲಗಡ್ಲೆ.—ಕೊಂಕಣ ಪ್ರದೇಶದಲ್ಲಿ ನೆಲಗಡ್ಲೆ ಪೈರು ಆಗುವದಿಲ್ಲವೆಂಬದಾಗಿ ತಿಳಿದಿದ್ದರು. ಪ್ರಸಕ್ತ ಸಾಲಿನಲ್ಲಿ ಈ ಪೈರನ್ನು ಬಾಳೆ ತೋಟಗಳಲ್ಲಿ ಇಟ್ಟು ಅಜಮಾಯಿಷಿಮಾಡಿದ್ದರಲ್ಲಿ ಫಲಿತಾಂಶವು ಅನುಕೂಲವಾಗಿ ಕಂಡುಬಂತು. ಇದರಿಂದ ಬಾಳೆ ತೋಟದಲ್ಲಿ ಕಳೆ ಹುಟ್ಟಲು ಆಸ್ಪದವಾಗಲಿಲ್ಲ. ಸೂರತ್ ಫಾರಮಿನ ರಿಪೋರ್ಟಿನಿಂದ ನೆಲಗಡ್ಲೆ ಧಾರಣೆಯು ಹೆಚ್ಚು ಕಡಮೆಯಾಗುವದಕ್ಕೆ ಅನೇಕ ಕಾರಣಗಳು ತಿಳಿದುಬರುತ್ತೆ. ಮೇಲಿನ ಸಿಪ್ಪೆ ದಪ್ಪವಾಗಿರುವ ಕಾಯನ್ನು ಸುಲಿಯದೆ ಹಾಗೆಯೇ ಮಾರಾಟಕ್ಕೆ ಕಳುಹಿಸುವದಕ್ಕಿಂತಲೂ ಸಿಪ್ಪೆ ಸುಲಿದು ಬೀಜ ಮಾರಿದರೆ ಹೆಚ್ಚು ಬೆಲೆ ಬರುತ್ತದೆ. ಅಲ್ಲದೆ ಕಾಯಿಯ ರಚನೆಯಲ್ಲಿ ವ್ಯತ್ಯಾಸವಾದಹಾಗೆಲ್ಲಾ ಎಣ್ಣೆ ಇಳಿಯುವದು ಹೆಚ್ಚು ಕಡಮೆಯಾಗುತ್ತದೆ. ಪಲಸರಕು ವ್ಯಾಪಾರಿಗಳು (Druggists) ಕೆಲವು ಜಾತಿ ಕಾಯಿಗಳಿಗೆ ಗಾಣ ಆಡುವವರು ಕೊಡುವ ಬಾಜಾರಿ ಧಾರಣೆಗಿಂತಲೂ ಶೇಕಡ ೨೫ರಷ್ಟು ಹೆಚ್ಚು ಬೆಲೆ ಕೊಡುತ್ತಾರೆ. ಒಳ್ಳೆ ಲಾಯಖಾದ ರಕಂ ಕಾಯಿಯಲ್ಲಿ ಜಾಗ್ರತೆಯಾಗಿ ಬಲಿಯತಕ್ಕದ್ದನ್ನು ಬಿತ್ತಕ್ಕಾಗಿ ಚುನಾಯಿಸಿಕೊಂಡದ್ದೇ ಆದರೆ ಗುಜರಾತಿನಲ್ಲಿನ ಖುಷ್ಕಿ ಜಮೀನುಗಳಲ್ಲಿ ನೆಲಗಡ್ಲೆ ಪೈರು ಮಾಡಲು ಸಾಧ್ಯವಾಗುತ್ತೆ. ನೆಲಗಡ್ಲೆಕಾಯಿ ತಿನ್ನುವುದಕ್ಕಾಗಿ ಸ್ಥಳದಲ್ಲಿಯೇ ಪೌಂಡು ಒಂದಕ್ಕೆ ಒಂದಾಣೆಯಂತೆ ವಿಕರಿಯಾಗುವದು ನಿಲ್ಲುವವರಿಗೂ ಇದರ ರಫ್ತು ವ್ಯಾಪಾರ ಹೆಚ್ಚುವದಾಗಿಲ್ಲ.

ಮಾಂಜರಿ ಫಾರಂನಲ್ಲಿ ಕಬ್ಬನ್ನು ಆವಿಯ ಬಲದಿಂದ ನಡೆಯುವ ಗಾಣದಲ್ಲಿ ಆಡಿ ನೋಡಿದ್ದರಲ್ಲಿ ಇದಕ್ಕೆ ತಗಲುವ ಖರ್ಚು ಕಬ್ಬಿಣದ ಕಣೆಗಳುಳ್ಳ ಗಾಣಗಳಲ್ಲಿ ಎತ್ತು ಕಟ್ಟಿ ಆಡುವದಕ್ಕಿಂತಲೂ ಬಹಳ ಮಟ್ಟಿಗೆ

ಕಮ್ಮಿ ಬೀಳುತ್ತದೆ ಮತ್ತು ಎತ್ತಿನ ಗಾಣದಲ್ಲಿ ಹಾಲು ನಿಂತುಹೋಗುವ ದರಿಂದ ಬಹಳ ಲುಕ್ಸಾನಾಗುತ್ತದೆ. ಆವಿಯ ಗಾಣದಲ್ಲಿ ಎತ್ತಿನ ಗಾಣಕ್ಕಿಂತಲೂ ಕನಿಷ್ಟಪಕ್ಷ ದಿನಕ್ಕೆ ೩ ರೂಪಾಯಿ ಕೂಡಿಬರುವದು.

ಉರಲುಗಡ್ಡೆ.—ಧಾರವಾಡದಲ್ಲಿ ನಡೆದ ಅಜಮಾಯಿಷಿಯಲ್ಲಿ ಈ ಪ್ರಾಂತ್ಯಕ್ಕೆ ಇಟಲಿ ದೇಶದ ಬೀಜವೇ ವಿಶೇಷ ಹುಲುಸಾಗಿ ಬೆಳೆಯುವದೆಂದು ಕಂಡುಬಂದಿರುತ್ತೆ. ಕೆಂಪು ಭೂಮಿಯಲ್ಲಿ ಬೆಳೆದ ಗಡ್ಡೆಗಳು ಕಪ್ಪು ಭೂಮಿಯಲ್ಲಾದವುಗಳಿಗಿಂತ ಹೆಚ್ಚು ಕಾಲ ಕೆಡದೆ ಇರುವದಾಗಿಯೂ ಹೆಚ್ಚು ಬೆಲೆ ಬಾಳುವುದಾಗಿಯೂ ತೋರಿಬಂತು. ರೈತನಿಗೆ ತನ್ನ ಉರಲುಗಡ್ಡೆಯನ್ನು ಬಹಳ ಕಾಲದವರೆಗೂ ಕೆಡದಂತೆ ದಾಸ್ತಾನ್ ಇಟ್ಟಿರುವದಕ್ಕೆ ಗೊತ್ತಿರುವದಿಲ್ಲವಾಗಿ ಬೀಜದ ಗಡ್ಡೆಗಳಿಗೆ ಬಿತ್ತನೆ ಕಾಲದಲ್ಲಿರತಕ್ಕ ಬೆಲೆಗೂ ಸುಗ್ಗಿಕಾಲದ ಬೆಲೆಗೂ ಸ್ವಲ್ಪ ಹೆಚ್ಚುಕಡಮೆ ಶೇಕಡ ೧೦೦ರಷ್ಟು ವೆತ್ಯಾಸಬರುವದು.

ಮಸಾಲೆಸೊಪ್ಪು (Lucerne).—ಸೂರತ್ ಫಾರಂನಲ್ಲಿ ಈ ಪೈರು ಮಾಡಿ ಪರೀಕ್ಷಿಸಿದ್ದರಲ್ಲಿ ಬಹಳ ಮೇಲಾದ ಫಲಿತಾಂಶವು ಕಂಡುಬಂದಿರುತ್ತದೆ. ಒಂದು ತಾಕಿನಲ್ಲಿ ನಾಲ್ಕು ವರುಷಗಳಿಂದಲೂ ಈ ಪೈರಿಟ್ಟಿತ್ತು. ಇದರಿಂದ ಎಕರೆಯೊಂದಕ್ಕೆ ಸರಾಸರಿ ೭೪೪ ರೂಪಾಯಿ ನಿವ್ವಳ ಆದಾಯ ತೇಲಿರುತ್ತೆ ಮತ್ತು ಪೈರಿಗೆ ತಿಂಗಳಿಗೊಂದಾವರ್ತಿ ನೀರು ಕಟ್ಟುವದಕ್ಕೆ ಬದಲಾಗಿ ೧೫ ದಿನಕ್ಕೊಂದಾವರ್ತಿಹಾಯಿಸಿದರೆ ಈ ಆದಾಯವು ಇನ್ನೂ ೨೭ ರೂಪಾಯಿಗಳಷ್ಟು ಹೆಚ್ಚುವದು.

---

## Sesamum Cultivation in Burma. *
## ಬರ್ಮಾದೇಶದಲ್ಲಿ ಎಳ್ಳು ಸಾಗುವಳಿ.

ಎಳ್ಳು ಮಳೆಗಾಲದ ಫಸಲು. ಬಾಳೆ ವ್ಯವಸಾಯಕ್ಕೆ ಅನುಕೂಲವಾದ ಜಮೀನಿನಲ್ಲಿ ಚೆನ್ನಾಗಿ ಆಗುತ್ತದೆ. ಆದರೆ ಇದನ್ನು ಬರ್ಮಾದೇಶದಲ್ಲಿ ಎಲ್ಲೆಲ್ಲಿಯೂ ಬೆಳೆಯುತ್ತಾರೆ. ಈ ಪೈರನ್ನು ಎರಡು ಕಾಲಗಳಲ್ಲಿ ತೆಗೆಯುವದುಂಟು. (೧) ಮಳೆಗಾಲದ ಕೊನೆಯಲ್ಲಿ ಬತ್ತದ ಫಸಲು ಕಟಾವು ಆಗುತ್ತಲೆ ಈ ಪೈರಿಟ್ಟು ನಂತರ ೨೪ ತಿಂಗಳು ಬಿಟ್ಟು ಛಳಿಗಾ

---

* ಇಂಡಿಯನ್ ಅಗ್ರಿಕಲ್ಚರಿಸ್ಟ್ ೧—೧೨—೦೮.

ಲದಲ್ಲಿ ಕಟಾವು ಮಾಡುತ್ತಾರೆ. ವಿಶೇಷ ಹಿಮ ಬೀಳುವ ಪ್ರದೇಶಗಳ ಲ್ಲಿನ ತಗ್ಗಾದ ಜೌಗುಭೂಮಿಯಲ್ಲಿ ಈರೀತಿ ಬೆಳೆಯಬಹುದು. ಆದರೆ ಉತ್ಪತ್ತಿಯೇನೋ ಅಷ್ಟು ಹೆಚ್ಚಾಗಿ ಆಗುವದಿಲ್ಲ. (೨) ಇನ್ನೊಂದು ಪೈರು ಆರುತಿಂಗಳ ಬೆಳೆ. ಇದು ಮಳೆಗಾಲದಲ್ಲಿ ಕಟಾವಿಗೆ ಬರುತ್ತದೆ. ಮಳೆಗಾಲದಲ್ಲಿ ಬಿದ್ದ ನೀರೆಲ್ಲ ಭೂಮಿಯಲ್ಲೇ ನಿಲ್ಲದೆ ಬಸಿದು ಹೋಗುವಂತಿರುವ ಮರಳು ಮಿಶ್ರವಾದ ಮೃದುಭೂಮಿಯು ಈ ಬೆಳೆಗೆ ಸರ್ವೋತ್ತಮ. ಮೊದಲು ಭೂಮಿಯಲ್ಲಿನ ಸೊಪ್ಪು ಸದೆ ಮೊದಲಾದ ಕಚರಾವನ್ನು ಕತ್ತರಿಸಿ ಸುಟ್ಟು ಏಪ್ರೀಲ್ ತಿಂಗಳಲ್ಲಿ ಜಮೀನನ್ನು ಒಂದಾವರ್ತಿ ಚೆನ್ನಾಗಿ ಉತ್ತು ಬಿಡಬೇಕು. ನಂತರ ಗ್ರಾಮಸಾರ, ದನವಿನ ಗೊಬ್ಬರ, ಕೆರೆಯಗೋಡು ಮುಂತಾದ್ದನ್ನು ಹಾಕಿ ಮೇ ತಿಂಗಳಲ್ಲಿ ಮಳೆ ಶುರುವಾಗುತ್ತಲೆ ಮತ್ತೊಂದಾವರ್ತಿ ಜಮೀನನ್ನು ಉತ್ತು ಹೆಂಟೆ ಹೊಡೆದು ಕುಂಟೆಯಿಂದ ಸಮಪಡಿಸಿ ಒಳ್ಳೆ ಉಳುಮೆಗೆ ತರಬೇಕು. ನಂತರ ಮೊಳಕ್ಕೆ ಒಂದರಂತೆ ಸಾಲು ಹೊಡೆದು ಬಿತ್ತನೆಗೆ ತಯಾರು ಮಾಡಿ ಮಳೆ ಪ್ರಾರಂಭವಾದ ಕೂಡ್ಲೇ ಈ ಸಾಲುಗಳಲ್ಲಿ ಸಮೀಪ ಸಮೀಪವಾಗಿ ಬಿತ್ತವನ್ನು ಹಾಕಿ ಮೇಲೆ ತೆಳುವಾಗಿ ಮಣ್ಣು ಮುಚ್ಚಬೇಕು. ಒಳ್ಳೆಬೀಜವನ್ನೇ ಬಿತ್ತನೆ ಮಾಡುವದು ಅವಶ್ಯಕ. ಚೆನ್ನಾಗಿ ಬಲಿತ ಎಣ್ಣೆಗೆಂಪಿನಮೇಲಿರುವ ಕಪ್ಪು ಬಣ್ಣದ ಬೀಜ ಉತ್ಕೃಷ್ಟವಾದದ್ದು. ಪೈರಿನಲ್ಲಿ ಕಾಯಿಗಳು ಹಳದಿ ಬಣ್ಣಕ್ಕೆ ತಿರುಗುತ್ತಲೆ ಫಸಲು ಕಟಾವು ಮಾಡಬಹುದು. ಎಕರೆಗೆ ಸುಮಾರು ೩ ಪಂಛೇರು ಬಿತ್ತ ಹಿಡಿಯುತ್ತೆ, ಮತ್ತು ೧೦ ಫಲ್ಲಾದಿಂದ ೧೮ ಪಲ್ಲಾ ಉತ್ಪತ್ತಿಯಾಗುತ್ತೆ. ಎಳ್ಳಿನ ಧಾರಣೆಯು ಒಂದೊಂದು ಸ್ಥಳದಲ್ಲಿ ಒಂದೊಂದು ರೀತಿ ಇದ್ದಾಗ್ಯೂ ಸಾಮಾನ್ಯವಾಗಿ ೮-೨½ ಪೌಂಡಿನ ಒಂದು ಮಣಕ್ಕೆ ೪ ರೂಪಾಯಿನಂತೆ ಇಟ್ಟು ಕೊಳ್ಳಬಹುದು. ಮತ್ತು ಎಳ್ಳು ಫಸಲು ತೆಗದುಕೊಂಡಕೂಡ್ಲೇ ಅದೇ ಜಮೀನಿನಲ್ಲಿ ಬತ್ತದ ಪೈರನ್ನು ಇಡಬಹುದಾದ್ದರಿಂದ ಒಂದು ಜೋಡಿ ಎತ್ತುಗಳಿಂದ ಎಳ್ಳು ಪೈರು ಜೊತೆಗೆ ಬತ್ತದ ಸಾಗುವಳಿಯನ್ನು ಮಾಡಬಹುದಾದಕಾರಣ ಎಕರೆಯೊಂದಕ್ಕೆ ೧೫ ರೂಪಾಯಿ ನಿವಳ ಆದಾಯ ತೇಲುತ್ತೆ. ಬೆಳೆಯು ಗಖಂ ಅನುಸರಿಸಿ ಹೆಚ್ಚುಕಡಿಮೆ ಎಣ್ಣೆ ಇಳಿಯುತ್ತದೆ.

## Subjects discussed at the Representative Assembly of 1908.

## ಪ್ರಜಾಪ್ರತಿನಿಧಿ ಸಭೆಯಲ್ಲಿ ಚರ್ಚಿಸಲ್ಪಟ್ಟ ವಿಷಯಗಳು.

ವಿಷಯ.—ಕಳೆದ ದಸರಾ ಪ್ರಜಾಪ್ರತಿನಿಧಿ ಸಭೆಯಲ್ಲಿ ಕೆಲವು ಮೆಂಬರುಗಳು ಡಿಸ್ಟ್ರಿಕ್ಟು ಹೆಡ್‌ಕ್ವಾರ್ಟರುಗಳಲ್ಲಿ ಡೆಮಾನ್ಸ್ಟ್ರೇಷನ್ ಘಾರಂಗಳನ್ನು ಸ್ಥಾಪಿಸಿ ತನ್ಮೂಲಕ ಹೊಸ ತರಹೆ ವ್ಯವಸಾಯ ಮುಟ್ಟುಗಳ ಉಪಯೋಗದ ವಿಷಯದಲ್ಲಿ ಆಯಾ ಪ್ರದೇಶದ ಜಿರಾಯಿತುದಾರರಿಗೆ ತಿಳುವಳಿಕೆ ಕೊಡಬೇಕಲ್ಲದೆ ಸಂಸ್ಥಾನದ ಪ್ರತಿ ತಾಲ್ಲೂಕಿನಲ್ಲಿಯೂ ಇಂಗ್ಲೀಷು ನೇಗಲುಗಳು ಮತ್ತು ಇತರ ನವೀನತರಹೆ ಮುಟ್ಟುಗಳನ್ನು ತರಿಸಿಟ್ಟು ಅಪೇಕ್ಷಿಸಿದವರಿಗೆ ಅವುಗಳನ್ನು ಖಾಸ್ ಖರೀದಿಗೇನೆ ಮಾರಬೇಕೆಂತ ವಗೈರೆ ಕೇಳಿಕೊಂಡರು.

ಈ ವಿಚಾರದಲ್ಲಿ ರೆವಿನ್ಯು ಕಮಿಷನರವರು ಸೂಚಿಸಿದ್ದೇನೆಂದರೆ.—ಇಂಥಾ ಮುಟ್ಟುಗಳು ಕೆಟ್ಟು ಹೋದರೆ ಇವುಗಳನ್ನು ಸರಿಪಡಿಸುವದರಲ್ಲಿ ಸಮರ್ಥರಾದವರು ಈಗ ಬೆಂಗಳೂರಲ್ಲಿರುತ್ತಾರೆ. ಈ ಮುಟ್ಟುಗಳ ಉಪಯೋಗವನ್ನು ರೈತರಿಗೆ ತೋರಿಸಿ ಕೊಡುವ ವಿಷಯದಲ್ಲಿ ಇಲ್ಲಿನ ಎಕ್ಸ್ಪೆರಿಮೆಂಟಲ್ ಫಾರಂನಲ್ಲಿಯಾಗಲಿ ಸಕ್ಕರೆ ತಯಾರಿಸುವ ಯಂತ್ರವಾಗಿದ್ದ ಪಕ್ಷದಲ್ಲಿ ಉರಗಳ್ಳಿ ಮ|| ಕ್ರಿಷ್ಣಯ್ಯಂಗಾರ್ರವರ ಫಾರಂನಲ್ಲಿಯಾಗಲಿ ಏರ್ಪಾಟು ಮಾಡಬಹುದು. ಬಡರೈತರ ವಿಚಾರದಲ್ಲಿ ಇವರಿಗೆ ಈ ಕಾಲದಲ್ಲಿ ತಗಲಬಹುದಾದ ಖರ್ಚಿನ ಪೈಕಿ ಕೊಂಚ ಸಹಾಯ ಮಾಡಲು ಸಾಧ್ಯವಾಗಬಹುದು. ಒಂದುಕಡೆಯಲ್ಲಿ ತಕ್ಕಷ್ಟು ಜನ ರೈತರು ಹೊಸತರಹೆ ನೇಗಿಲುಗಳನ್ನು ಉಪಯೋಗಿಸಲು ಸಮ್ಮತಿಸುವದಾದರೆ ಸ್ಥಳದಲ್ಲಿ ಅವರಿಗೆ ಇವುಗಳ ಉಪಯೋಗದ ವಿಚಾರದಲ್ಲಿ ತಿಳುವಳಿಕೆ ಕೊಡುವದಕ್ಕೆ ಒಬ್ಬ ಮನುಷ್ಯನನ್ನು ಕಳುಹಿಸಿ ಕೊಡುವ ಏರ್ಪಾಡಿಸುತ್ತೆ.

ಗೌರ್ನಮೆಂಟಿನವರ ಉತ್ತರ.—ಸರ್ಕಾರದವರು ರೈತರಿಗೆ ಹೊಸತರಹೆ ಮುಟ್ಟುಗಳನ್ನು ತರಿಸಿ ಕೊಡುವದಕ್ಕೂ ಮತ್ತು ಅವುಗಳ ಪ್ರಯೋಗವನ್ನು ಕಲಿಸುವದಕ್ಕೂ ರೆವಿನ್ಯು ಕಮಿಷನರವರು ಸಾಧ್ಯವಾದ ಮಟ್ಟಿಗೂ ಪ್ರಯತ್ನ ಪಡುತ್ತಲಿಧಾರೆಂದೂ ವ್ಯವಸಾಯ ಇಲಾಖೆಯು

ಕ್ರಮವಾಗಿ ಏರ್ಪಟ್ಟನಂತರ ಈ ಕಾರ್ಯಗಳನ್ನು ಇನ್ನೂ ಮೇಲಾಗಿ ಕ್ರಮಪಡಿಸಿ ವೃದ್ಧಿಗೊಳಿಸಲು ಸಾಧ್ಯವಾದೀತೆಂತಲೂ ಮತ್ತು ಈ ಅಂಶವನ್ನು ಸರ್ಕಾರದವರು ನೆನಪಿನಲ್ಲಿಟ್ಟುಕೊಂಡು ಇದಕ್ಕಾಗಿ ಪ್ರತಿವರುಷವೂ ಧಾರಾಳವಾಗಿ ಹಣವನ್ನು ಕೊಡುವದಾಗಿಯೂ ಅಪ್ಪಣೆ ಕೊಟ್ಟಿರುತ್ತಾರೆ.

---

## Manures. *

## ಗೊಬ್ಬರಗಳು.

ನಡಿಯಾದ್ ಮತ್ತು ಸೂರತ್ ಫಾರಂಗಳಲ್ಲಿ ಅನೇಕ ತರಹೆ ತಯಾರಿಸಿದ ಗೊಬ್ಬರಗಳು, ಕೊಟ್ಟಿಗೆ ಕಸ, ಗ್ರಾಮಸಾರ ಮತ್ತು ಕೊಳೆತ ಮಾಮಸು ಕತ್ತಾಳೆಗಳನ್ನು ಹತ್ತಿ, ಜೋಳ, ಎಳ್ಳು ಮುಂತಾದ ಪೈರುಗಳಿಗೆ ಹಾಕಿ ಅಜಮಾಯಿಷಿ ಮಾಡಿ ನೋಡಿದರು. ಅಜಮಾಯಿಷಿಯಲ್ಲಿ ತಿಳಿದುಬಂದ ಅಂಶಗಳೇನಂದರೆ,

೧. ದನವಿನ ಗೊಬ್ಬರ, ಹರಳುಹಿಂಡಿ, ಸೋಡಿಯಂ ನೈಟ್ರೇಟ್, ಪೆಟ್ಲುಪ್ಪು ಮತ್ತು ಸೂಪರ್‌ಫಾಸ್ಫೇಟ್ ಈ ಗೊಬ್ಬರಗಳನ್ನು ಹತ್ತಿ, ಜೋಳ, ಎಳ್ಳು ಪೈರುಗಳಿಗೆ ತಕ್ಕ ಪ್ರಮಾಣಗಳಲ್ಲಿ ಉಪಯೋಗಿಸುವದು ಆದಾಯಕರ. ಆದರೆ ತೊಗರಿ ಫಸಲಿಗೆ ಮಾತ್ರ ಸೂಪರ್‌ಫಾಸ್ಫೇಟು ವಿನಹಾ ಉಳಿದವು ಯಾವವೂ ಅನುಕೂಲಪಡುವದಿಲ್ಲ.

೨. ದನವಿನ ಗೊಬ್ಬರ ಮತ್ತು ಹರಳುಹಿಂಡಿಯಿಂದ ಹೆಚ್ಚು ಅನುಕೂಲ ಕಂಡುಬಂದಿದೆ. ಆದರೆ ಸೋಡಿಯಂ ನೈಟ್ರೇಟನ್ನು ಸೂಪರ್ ಫಾಸ್ಫೇಟನ್ನು ಬೆರೆಸಿ ಹಾಕಿದ್ದರಲ್ಲಿ ಹತ್ತಿಯ ಉತ್ಪತ್ತಿಯು ದನವಿನ ಗೊಬ್ಬರದಿಂದಾಗುವಂತೆಯೇ ಹೆಚ್ಚಿರುತ್ತದೆ. ಈ ಗೊಬ್ಬರಗಳನ್ನು ಸರಿಯಾದ ಪ್ರಮಾಣಗಳಲ್ಲಿ ಉಪಯೋಗಿಸಿದ್ದೇ ಆದರೆ ಫಸಲನ್ನು ಇನ್ನೂ ಹೆಚ್ಚಿಸಬಹುದು.

೩. ನಡಿಯಾದ್ ಫಾರಂನಲ್ಲಿ ಈಗ ನಾಲ್ಕು ವರುಷಗಳಿಂದಲೂ ಎಕರೆಯೊಂದಕ್ಕೆ ೬೦೦ ಪೌಂಡು ಹರಳು ಹಿಂಡಿ ಮತ್ತು ೧೦ ಟನ್ ದನವಿನ

* ಬೊಂಬಾಯಿ ವ್ಯವಸಾಯ ಇಲಾಖೆಯ ೧೯೦೭—೦೮ನೆ ಸಾಲಿನ ರಿಪೋರ್ಟು.

ಗೊಬ್ಬರವನ್ನು ಉಪಯೋಗಿಸಿ ಹೊಗೇಸೊಪ್ಪಿನ ಪೈರಿಟ್ಟದ್ದರಲ್ಲಿ ಆಳವಾಗಿ ಉಳದೇ ಇದ್ದ ತಾಕಿನಲ್ಲಿ ಎಕರೆಗೆ ೨೩ ರೂಪಾಯಿನಂತೆಯೂ ಆಳವಾಗಿ ಉತ್ತ ತಾಕಿನಲ್ಲಿ ೨೭ ರೂಪಾಯಿನಂತೆಯೂ ಸರಾಸರಿ ನಿವ್ವಳ ಆದಾಯ ಬಂದಿರುತ್ತೆ.

೪. ಹೊಗೇಸೊಪ್ಪಿಗೆ ಎಲ್ಲಾ ಗೊಬ್ಬರಗಳನ್ನು ಉಪಯೋಗಿಸಿ ಅಜಮಾಯಿಷಿ ಮಾಡುವಲ್ಲಿ ಜಮೀನನ್ನು ಆಳವಾಗಿ ಉಳುವದರಿಂದ ಗೊಬ್ಬರದ ಪ್ರಯೋಜನವು ಹೆಚ್ಚುವದು ಕಂಡುಬಂತು.

೫. ಹೊಗೇಸೊಪ್ಪಿನ ಬೆಳೆಗೆ ಬರಿ ಹರಳು ಹಿಂಡಿಯನ್ನೆ ಉಪಯೋಗಿಸುವದು ಅಷ್ಟು ಆದಾಯಕರವಾಗಿ ಕಾಣುವದಿಲ್ಲ. ಇದರ ಜೊತೆಗೆ ದನವಿನ ಗೊಬ್ಬರವನ್ನೂ ಉಪಯೋಗಿಸಬೇಕು.

೬. ಜಮೀನನ್ನು ಆಳವಾಗಿ ಉತ್ತು ಎಕರೆಗೆ ೧೧೨ ಪೌಂಡು ಪೆಟ್ಲುಪ್ಪನ್ನೂ ೧೦ ಟನ್ ದನವಿನ ಗೊಬ್ಬರವನ್ನು ಹಾಕಿ ಹೊಗೇಸೊಪ್ಪು ಪೈರು ಮಾಡಿದ್ದರಲ್ಲಿ ಎಕರೆಗೆ ೯ ರೂಪಾಯಿ ನಿವ್ವಳ ಲಾಭ ಬಂತು. ಮೇಲೆ ಮೇಲೆ ಉತ್ತ ಜಮೀನಿನಲ್ಲಿ ಇದೇ ರೀತಿ ಬೆಳೆ ಮಾಡುವಲ್ಲಿ ಸಾಗುವಳಿ ಖರ್ಚು ಮಾತ್ರ ತೇಲಿತು.

೭. ಕೈರಾ ಡಿಸ್ಟ್ರಿಕ್ಟಿನ ಮರಳು ಮಿಶ್ರವಾದ ಭೂಮಿಯಲ್ಲಿ ಹೊಗೇಸೊಪ್ಪು ಬೆಳೆಗೆ ಹಸುರು ಗೊಬ್ಬರವನ್ನೆ ಬಿಡದೆ ಹಾಕುತ್ತಾ ಬಂದದ್ದರಲ್ಲಿ ಪೈರಿಗೆ ಬಹಳ ಕೆಡುಕಾಯಿತು.

೮. ನದಿಯಾದಿನಲ್ಲಿ ಹೊಗೇಸೊಪ್ಪಿಗೆ ನಾನಾ ಗೊಬ್ಬರಗಳನ್ನು ಹಾಕಿ ಅಜಮಾಯಿಷಿ ಮಾಡಿ ನೋಡಿದ್ದರಲ್ಲಿ ತಕ್ಕಷ್ಟು ದನವಿನ ಗೊಬ್ಬರವನ್ನು ಮೊದಲು ಹಾಕಿ ನಂತರ ಇತರ ತಯಾರಿಸಿದ ಗೊಬ್ಬರಗಳನ್ನು ಸರಿಯಾದ ಪ್ರಮಾಣಗಳಲ್ಲಿ ಉಪಯೋಗಿಸಿದರೆ ಲಾಭಕರವೆಂದು ಗೊತ್ತಾಗುತ್ತದೆ. ಈ ಗೊಬ್ಬರಗಳ ಪೈಕಿ ಹರಳು ಹಿಂಡಿಯು ಬಹಳ ಉತ್ತಮವಾದದ್ದು.

೯. ಗ್ರಾಮಸಾರ, ಪಾಟಾಸುಕತ್ತಾಳೆ ಮತ್ತು ದನವಿನ ಗೊಬ್ಬರಗಳನ್ನು ಕಪ್ಪು ಭೂಮಿಗಳಿಗೆ ಹಾಕುವದರಿಂದ ಜಮೀನಿನಲ್ಲಿ ಸಾರವು ಬಹಳಕಾಲ ನಿಂತು ಮುಂದಿನ ಫಸಲಿಗೂ ಕೂಡ ಅನುಕೂಲಪಡುತ್ತದೆ.

## The Mysore Exhibition, 1908.

## ಮೈಸೂರು ದಸರಾ ಕೈಗಾರಿಕೆ ಮತ್ತು ವ್ಯವಸಾಯಿಕ ಪ್ರದರ್ಶನ, ೧೯೦೮.

ಹೋದ ಸಂಚಿಕೆಯಲ್ಲಿ ಸೂಚಿಸಿದಮೇರೆ ಪ್ರದರ್ಶನಕ್ಕೆ ಬಂದಿದ್ದ ಇತರ ಅನೇಕ ವಸ್ತುಗಳ ಪೈಕಿ ಮುಖ್ಯವಾದವುಗಳನ್ನು ಇಲ್ಲಿ ವಿವರಿಸುತ್ತೇವೆ. ವಾಟರ್ ಸಪ್ಲೈ ಇಲಾಖಾದವರು ಕಳೆದ ಸಾಲಿನಂತೆಯೇ ವ್ಯವಸಾಯಕ್ಕೆ ಬೇಕಾದ ಯಂತ್ರಗಳನ್ನೂ ನೀರು ಎತ್ತುವ ಪಂಪುಗಳನ್ನೂ ಪ್ರದರ್ಶನ ಮಾಡಿ ಅವುಗಳ ಉಪಯೋಗವನ್ನು ಜನಗಳಿಗೆ ತಿಳಿಸುತ್ತಿದ್ದರು. ಈ ಇಲಾಖೆಯವರು ಭಾವಿ ಕೊರೆಯುವ ಹತ್ಯಾರುಗಳಿಂದ ಕೆಲಸ ಮಾಡಿ ತೋರಿಸಿದರು. ಬೆಂಗಳೂರು ಸಿಟಿ ನರಸಿಂಹನ್ ಬ್ರದರ್ಸ್ ಮತ್ತು ಕರಣೀಕ ಕಂಪೆನಿಯವರು ಸಹ ಯಂತ್ರಗಳನ್ನು ತಂದು ಅವುಗಳ ಉಪಯೋಗವನ್ನು ತೋರಿಸಿದರು. ಮೆಸ್ಸರ್ಸ್ ನರಸಿಂಹನ್ ಬ್ರದರ್ಸ್ ಯವರು ಸಪ್ಪೆ ಕೊರೆಯುವ ಯಂತ್ರ, ತೂರುವ ಯಂತ್ರ, ಕಾಳು ಬೀಸುವ ಯಂತ್ರ, ಕಬ್ಬಿನ ಗಾಣ, ಇವುಗಳನ್ನು ತಿರುಗಿಸಿ ಕೆಲಸಮಾಡುವದಕ್ಕಾಗಿ ಅವರು ತಯಾರಿಸಿರುವ ಆಯಿಲ್ ಎಂಜಿನನ್ನು (Oil Engine) ಪ್ರದರ್ಶಿಸಿದ್ದರು. ಬೊಂಬಾಯಿ ಸಾಲ್ವೇಷನ್ ಆರ್ಮಿಯವರು ಎರಡು ಸ್ವದೇಶಿ ಮಗ್ಗಗಳನ್ನು ಕಳುಹಿಸಿದ್ದರು.

ಮದರಾಸ್ ಚೆಸ್ಟ್ ಕಂಪೆನಿಯವರು, ಬೆಂಗಳೂರು ಮೆರ್ಕಂಜಿ, ಪೀಟರ್ಸ್, ಮತ್ತು ಇಂಡಿಯನ್ ಸೈಕಲ್ ಕಂಪೆನಿಯವರು ತಮ್ಮ ತಮ್ಮ ಕಂಪೆನಿಗಳಿಗೆ ಸಂಬಂಧಿಸಿದ ಸಾಮಾನುಗಳನ್ನು ಕಳುಹಿಸಿದ್ದರು. ಮದರಾಸ್ ಪ್ಯಾರಿ ಕಂಪೆನಿಯವರು ಗೊಬ್ಬರದ ರಖಂಗಳನ್ನು, ಚಿಕ್ಕಮಗಳೂರು ಏಜನ್ಸಿಯವರು ಕಾಫಿ ರಖಂಗಳನ್ನು ಪ್ರದರ್ಶಿಸಿದ್ದರು.

ಅರಮನೆ ಇಲಾಖಾ ಎಗ್ಸಿಕ್ಯೂಟಿವ್ ಇಂಜನಿಯರ್ ಮೆ॥ ಬಿ. ಪಿ. ರಾಘವಲು ನಾಯುಡುಯವರು ಒಂದು ಕೊಠಡಿಯನ್ನು ಅಲಂಕಾರ ಮಾಡಿ ಸಾಮಾನುಗಳನ್ನು ಬಹಳ ಚೆನ್ನಾಗಿ ತಿಳುವಳಿಕೆಗೆ ಬರುವಂತೆ ಪ್ರದರ್ಶಿಸಿದ್ದರು.

ಶ್ರೀಮನ್ ಮಹಾರಾಜರವರ ಅಪ್ಪಣೆ ಪಡದು ಅರಮನೆಗೆ ಸೇರಿದ

ಕೆಲವು ಉತ್ಕೃಷ್ಟವಾದ ಸಾಮಾನುಗಳು, ಶ್ರೀಮತ್ ಯುವರಾಜರವರು ಕಾಶ್ಮೀರದಿಂದ ತಂದ ಅನೇಕ ಬೆಲೆಯುಳ್ಳ ಸಾಮಾನುಗಳು, ಮದರಾಸಿನ ಮಾಣಿಕಾಚಾರಿಯವರಿಂದ ತಯಾರಾದ ಚಿನ್ನ ಬೆಳ್ಳಿ ಕೆಲಸಮಾಡಿದ ರಥರೂಪವಾದ ಒಂದು ಕಾಸ್ಕೆಟ್ಟು (Casket) ಇವುಗಳೆಲ್ಲಾ ಒಂದು ಸ್ಟಾಲ್‌ನಲ್ಲಿ ಪ್ರದರ್ಶಿಸಲ್ಪಟ್ಟಿದ್ದವು.

ಸಂಸ್ಥಾನದ ಎಲ್ಲಾ ಡಿಸ್ಟ್ರಿಕ್ಟುಗಳಿಂದಲೂ ಸಾಮಾನುಗಳು ಬಂದಿದ್ದವು. ಕೋಲಾರ ಡೆಪ್ಯುಟಿ ಕಮಿಷನರವರು ಚಿಂತಾಮಣಿಯಲ್ಲಿ ಪ್ರದರ್ಶಿಸಲ್ಪಟ್ಟ ಸಾಮಾನುಗಳ ಪೈಕಿ ಚುನಾಯಿಸಿ ಕೆಲವನ್ನ ಕಳುಹಿಸಿದ್ದರು.

ಪ್ರದರ್ಶನದ ಪ್ರೋಟಾಪ್ರೋಟಿಗೆ ೧೪ ಮಗ್ಗಗಳು ಬಂದಿದ್ದವು. ಇವುಗಳಲ್ಲಿ ೫ ಗುಳಿ ಮಗ್ಗಗಳು, ೭ "ಪಿಟ್ ಅಂಡ್ ಫ್ಲೈ ಷಟಲ್" (Pit and fly shuttle) ಮಗ್ಗಗಳು, (ಅಂದರೆ ಗುಳಿ ಮಗ್ಗದಲ್ಲಿ ಹಾರುವ ಲಾಳಿಯನ್ನು ಉಪಯೋಗಿಸುವ ಕ್ರಮ) ಸೇಲಂ ವೀವಿಂಗ್ ಫ್ಯಾಕ್ಟರಿಯಿಂದ ೧, ಮೈಸೂರು ಟವನ್ನಿಂದ ೬, ಕಡಪಾ ಡಿಸ್ಟ್ರಿಕ್ಟಿನ ಪ್ರೊದ್ದತ್ತೂರು ಇಂಡಸ್ಟ್ರಿಯಲ್ ಅಸೋಸಿಯೇಷನ್ನಿಂದ ೨, ಚಿಕ್ಕನಾಯ್ಕನಹಳ್ಳಿ ಇಂಡಸ್ಟ್ರಿಯಲ್ ಸ್ಕೂಲಿನಿಂದ ೩, ಮೊಳಕಾಲ್ಮುರುವಿನಿಂದ ೨, ಹೊಳೇನರಸೀಪುರದಿಂದ ೧, ಮತ್ತು ದೊಡ್ಡಬಳ್ಳಾಪುರದಿಂದ ೩, ಈಪ್ರಕಾರ ಪ್ರದರ್ಶಿಸಲ್ಪಟ್ಟಿದ್ದವು. ಇವಲ್ಲದೆ ಬೊಂಬಾಯಿ ಸಾಲ್ವೇಷನ್ ಆರ್ಮಿ ಫ್ಯಾಕ್ಟರಿಯವರು ಒಂದು ಮಗ್ಗವನ್ನೂ ಮತ್ತು ಮೊಳಕಾಲ್ಮುರು ಇಂಡಸ್ಟ್ರಿಯಲ್ ಸ್ಕೂಲಿನವರು ಎರಡು ಮಗ್ಗಗಳನ್ನು ಹಾರುವ ಲಾಳಿಯ ಉಪಯೋಗದಿಂದ ರೇಷ್ಮೆ ಬಟ್ಟೆಯನ್ನು ನೆಯ್ಯುವದು ಸಾಧ್ಯವೆಂದು ತೋರಿಸುವ ಉದ್ದಿಶ್ಯ ಪ್ರದರ್ಶಿಸಿದ್ದರು.

ಪ್ರೋಟಾಪ್ರೋಟಿಗೆ ೧೨ ನೇಗಿಲುಗಳು ಬಂದಿದ್ದವು. ಈಪೈಕಿ ೬ ದೇಶೀಯ ತರಹೇವು. ಇವುಗಳನ್ನು ಪರೀಕ್ಷಿಸಲು ಮಳೆ ಇಲ್ಲದ್ದರಿಂದ ನೀರು ಹಾಯಿಸಿ ಜಮೀನನ್ನು ತಯಾರು ಮಾಡಬೇಕಾಯಿತು. ಕೆನೇಡಿಯನ್, ಸ್ವೀಡಿಷ್, ಕೋಲಾರ ಮಿಷನ್ ಮತ್ತು ಪುದುಕೋಟೆ ಈ ನಾಲ್ಕು ತರಹೆ ನೇಗಿಲುಗಳ ಉಪಯೋಗವು ನಿದರ್ಶಿಸಲ್ಪಟ್ಟಿತು.

ಏತಗಳು, ಸೊಪ್ಪು ಕೊರೆಯುವ ಯಂತ್ರಗಳು, ತೂರುವ ಯಂತ್ರ

ಗಳು, ತುಳಿಯುವ ಕಲ್ಲು ಮತ್ತು ಎಂತ್ರ, ಹಲುಬೆಗಳು, ಕುಂಟೆಗಳು, ಕೂರಿಗೆಗಳು, ಕಬ್ಬಿಣದ ಗಾಣಗಳು, ಆಯಿಲ್ ಎಂಜಿನ್‌ಗಳು, ಬೀಸುವ ಯಂತ್ರಗಳು, ಆಯಿಲ್ ಪಂಪುಗಳು, ಸಕ್ಕರೆ ತಯಾರಿಸುವ ಸೆಂಟ್ರಿಫ್ಯೂಗಲ್ ಎಂತ್ರ, ಭತ್ತ ಕುಟ್ಟುವ ಯಂತ್ರ, ಕಡಲೆಕಾಯಿ ಸುಲಿಯುವ ಯಂತ್ರ, ಕಟಾವು ಮಾಡುವ ಯಂತ್ರ, ಹೊಸತರಹ ಕೊಪ್ಪರಿಕೆಗಳು, ಇವೇ ಮೊದಲಾದ ವ್ಯವಸಾಯಕ ಮುಟ್ಟುಗಳು ಮತ್ತು ಯಂತ್ರಗಳೂ ಜಮಾಯಿಸಿದ್ದವು. ಈವರುಷ ಸಾಮಾನುಗಳ ಪರೀಕ್ಷೆಯು ಜರುಗ ತಪ್ಪಿಹೋಗಿತ್ತು.

ಬಂಗಾಳಾದೇಶದ ರೇಷ್ಮೆ ನೂಲು ತೆಗೆಯುವ ವಿಧಾನವು ತೋರಿಸಲ್ಪಟ್ಟಿತು. ಮಳವಳ್ಳಿ, ಕೊಳ್ಳೇಗಾಲ, ನಂಜನಗೂಡು, ಮಂಡ್ಯ ಮತ್ತು ತುಂಕೂರು ತಾಲ್ಲೂಕುಗಳಿಂದ ೪೯ ತರಹೆ ರೇಷ್ಮೆ ಗೂಡುಗಳನ್ನು ತರಿಸಿತ್ತು. ಈ ವಿಚಾರದಲ್ಲಿ ಮಾಹಿತಿ ಹೊಂದಿರುವ ಮಿ|| ಓಡ್ಡ್ರಯವರು ರೈತರಿಗೆ ಈ ಗೂಡುಗಳನ್ನು ಪರೀಕ್ಷಿಸುವ ವಿಧಾನವನ್ನು ತಿಳಿಸಿದ್ದಲ್ಲದೆ ಅವಸ್ಥಾಂತರಗಳಲ್ಲಿರುವ ರೇಷ್ಮೆ ಹುಳುಗಳನ್ನು ಮತ್ತು ಇವುಗಳಿಗೆ ಮೇವು ಕೊಡುವ ವಿಧಾನವನ್ನು ಸಹ ತೋರಿಸಿದರು.

---

## Scientific Agriculture.
## ಶಾಸ್ತ್ರಸಮ್ಮತವಾದ ವ್ಯವಸಾಯ.

(By Mr. S. K. Venkatanarayana Iyer.)

(Dean Swift) ಡೀನ್ ಸ್ವಿಫ್ಟ್ ಎಂಬುವರು ಹೇಳುವದೇನೆಂದರೆ:-"ಒಂದು ರಾಜ್ಯದಲ್ಲಿ ಯಾರು ಒಂದು ತೆನೆ ಬಿಡುವ ಕಡೆಯಲ್ಲಿ ೨ ತೆನೆ ಬೆಳೆಯುವಂತೆ ವ್ಯವಸಾಯಕ್ಕೆ ಹೆಚ್ಚು ಗಮನ ಕೊಟ್ಟು ಮಾಡುವರೊ ಅವರು ರಾಜ್ಯತಂತ್ರ ಪ್ರವೀಣರ ೧೦೦ ಮಂದಿಗಿಂತಲೂ ಹೆಚ್ಚು ಉಪಕಾರವನ್ನು ಮಾಡುವರು". ಜರ್ಮನ್ ದೇಶದ ಚರಿತ್ರೆಯನ್ನು ನೋಡಿದರೆ ಕ್ರಿ. ಪೂ. ೬೬೦ರಲ್ಲಿ ಮೊದಲನೆ ಚಕ್ರವರ್ತಿಯಾದ ಜೀಮೂಟಿನ್ ಆದಿಯಾಗಿ ಎಲ್ಲಾ ಚಕ್ರವರ್ತಿಗಳೂ, ವ್ಯವಸಾಯದ ವಿಷಯದಲ್ಲಿ ಹೆಚ್ಚು ಗಮನ ಕೊಟ್ಟರೆಂದು ತಿಳಿಯುಬರುತ್ತೆ. ಈ ಪಾಶ್ಚಿಮಾತ್ಯ ಶಾಸ್ತ್ರ ಮತ್ತು ಕಲೆಗಳು (Western Sciences and Arts) ಜರ್ಮನ್ ದೇಶಕ್ಕೆ ಬಂದ

ಲಾಗಾಯಿತು ವ್ಯವಸಾಯವು ಹೆಚ್ಚು ಅಭಿವೃದ್ಧಿ ಸ್ಥಿತಿಯನ್ನು ಹೊಂದಿದೆ. ೩೦ ವರುಷಗಳಿಗೆ ಹಿಂದೆ ಜರ್ಮನ್ ದೇಶದವರು ಶಾಸ್ತ್ರರೀತಿಯಾಗಿ ವ್ಯವಸಾಯವನ್ನು ಮಾಡುವದಕ್ಕೆ ಪ್ರಾರಂಭಿಸಿದರು. ಇದಕ್ಕಾಗಿ ಅನೇಕ (Experimental farms) ವ್ಯವಸಾಯ ತೋಟಗಳನ್ನು ಅಜಮಾಯಿಷಿ ತರೀಖಾಗಿ ಸರ್ಕಾರದವರು ಸ್ಥಾಪಿಸಿದರು. ಇತರ ದೇಶದಿಂದ ನಾನಾವಿಧವಾದ ಕಾಲ್ನಡೆಗಳು, ಧಾನ್ಯದ ಬೀಜಗಳು, ಕೃಷಿಗೆ ಉಪಯೋಗವಾದ ಆಯುಧಗಳನ್ನು ತರಿಸಿದರು. ೧೮೮೬ನೆ ಇಸವಿಯಲ್ಲಿ ವ್ಯವಸಾಯ ಮತ್ತು ವ್ಯಾಪಾರದ ಇಲಾಖೆಯವರು ಟೋಕ್ಯೋ ವ್ಯವಸಾಯದ ವಿದ್ಯಾಶಾಲೆಯಲ್ಲಿ ಅನೇಕರನ್ನು ತರಬೇತು ಮಾಡಿದರು. ಇವರು ಇತರ ಬೇಸಾಯ ಮಾಡುವ ರೈತರೊಂದಿಗೆ ಸೇರಿ ಸುಲಭವಾದ ಶೋಧನೆಗಳನ್ನು ಮಾಡಿ ಬೀಜಗಳನ್ನು ಆರಿಸುವುದು, ಗೊಬ್ಬರಗಳ ಉಪಯೋಗ ಮುಂತಾದ ವಿಷಯಗಳನ್ನು ಎಲ್ಲಾ ರೈತಾಪಿ ಜನರಿಗೂ ಅನುಭವಸಿದ್ಧವಾಗಿ ಬೋಧಿಸುತ್ತಾ ಬಂದರು. ರೈತಾಪಿಜನರೆ ಜರ್ಮನ್‌ದೇಶದ ನಾನಾಕಡೆಯಲ್ಲಿಯೂ, ಕಳೆದ ೩೦ ವರ್ಷಗಳಲ್ಲಿ ಅನೇಕ ವ್ಯವಸಾಯ ಸಂಘಗಳನ್ನು ಸ್ಥಾಪಿಸಿ ಇಂಥಾ ಸಂಘಗಳು ೧೦ ಸಾವಿರದವರೆಗೆ ಇವೆ. ಈ ವ್ಯವಸಾಯ ಸಂಬಂಧವಾಗಿ ಉಪನ್ಯಾಸ ಮಾಡತಕ್ಕವರ ಸಂಖ್ಯೆ ೩೧೦ ಮಂದಿ ಇದ್ದಾರೆ. ಇವರು ರೈತಾಪಿ ಜನರಿಗೆ ತೋರುವ ಅನುಮಾನವನ್ನು ಉಪನ್ಯಾಸಪೂರ್ವಕವಾಗಿ ಪರಿಹಾರ ಮಾಡುತ್ತಾರೆ. ಶಾಸ್ತ್ರರೀತಿಯಾದ ಬೇಸಾಯವು ಅಭಿವೃದ್ಧಿಯನ್ನು ಹೊಂದುತ್ತಾ ಯಾವ ಭೂಮಿಗೆ, ಎಂಥಾ ಪೈರಿಗೆ ಯಾವ ತರಹ ಗೊಬ್ಬರವನ್ನು ಉಪಯೋಗಿಸಬೇಕೆಂಬ ಕುತೂಹಲವು ಹೆಚ್ಚಿತು. ಈ ಗೊಬ್ಬರ ಒಳ್ಳೇದು, ಕೆಟ್ಟದ್ದು ಎಂದು ತಿಳಿಸುವದಕ್ಕೆ ೨೦ ರಸಾಯನ ಶಾಸ್ತ್ರಜ್ಞರು ಸಹ ನೇಮಿಸಲ್ಪಟ್ಟಿರುವರು. ವ್ಯವಸಾಯಕ್ಕೆ ಸಹಾಯವಾದ ಫಾರೆಸ್ಟ್ ಸ್ಕೂಲ್ ೧೮೮೨ನೆ ಇಸವಿಯಲ್ಲಿ ಬಂದು ಇತ್ತು. ಈಗ ೬೨ ಸ್ಕೂಲುಗಳು ಶಾಸ್ತ್ರರೀತಿಯಾಗಿ ವಿಷಯವನ್ನು ಬೋಧಿಸುತ್ತಿವೆ. ರೇಷ್ಮೆ ಹುಳವನ್ನು ಸಾಕಿ, ರೇಷ್ಮೆ ಬೇಸಾಯವನ್ನು ಮಾಡುವುದು ಜರ್ಮನ್ ದೇಶದ ವ್ಯವಸಾಯದ ಮುಖ್ಯ ಕೆಲಸವಾಗಿದೆ. ರೇಷ್ಮೆ ಬೇಸಾಯದಲ್ಲಿ ಉದ್ಯುಕ್ತರಾಗಿರುವ ಜನರು ೨,೫೬೮,೨೦೮ ಕುಟುಂಬದವರಾಗಿದ್ದಾರೆ. ಈ ರೇಷ್ಮೆ ವ್ಯವಸಾಯದಲ್ಲಿ ಜರ್ಮನಿಯಲ್ಲಿ ೧೮೯-೨-೦,

ಫ್ರಾನ್ಸ್ ೧೯೧.೦.೦, ಇಟೆಲಿ ೧೫೬-೮-೦, ಇಂಡಿಯಾ ೮೯-೧೦.೦, ಈಜಿಪ್ಟ ೨೪೯..೨.೦, ಜರ್ಮನ್ ೪೩೨-೧೩-೦, ಈರೀತಿಯಾಗಿ ಸಂಪಾದಿಸುತ್ತಾರೆ. ಜರ್ಮನ್ ದೇಶದ ವ್ಯವಸಾಯವನ್ನ ಇಂಗ್ಲಾಂಡು ದೇಶದ ವ್ಯವಸಾಯಕ್ಕೆ ಹೋಲಿಸಿ ತಾರತಮ್ಯವನ್ನು ನೋಡೋಣ, ಜರ್ಮನ್ ದೇಶದಲ್ಲಿ ಹೆಚ್ಚು ಬೆಟ್ಟಗಳಿರುವದರಿಂದಲೂ, ಸ್ವಭಾವತಃ ಬಂಜರಾಗಿರುವದರಿಂದಲೂ, $\frac{1}{6}$ ಭಾಗ ವಿಸ್ತೀರ್ಣ ಅಂದರೆ ಐರ್ಲಾಂಡು ದೇಶದ ವಿಸ್ತೀರ್ಣಕ್ಕಿಂತ ಕಮ್ಮಿಯಾಗಿರುವ ಭೂಮಿಯು ಸಾಗುವಳಿಯಲ್ಲಿದೆ. ಆದರೆ ಗ್ರೇಟ್ ಬ್ರಿಟನ್ನ $\frac{3}{5}$ ಭಾಗವು ಅಂದರೆ ೪೮೦,೦೦,೦೦೦ ಎಕರೆಗಳು ಬೇಸಾಯದಲ್ಲಿವೆ. ಜರ್ಮನ್ ದೇಶವು ತನ್ನ ಪ್ರಜೆಗಳಾದ ೪ ಕೋಟಿ ಜನರಿಗೆ ಸಾಕಾದಷ್ಟು ಆಹಾರವನ್ನು ಒದಗಿಸಿಕೊಡುತ್ತದೆ. ಜರ್ಮನ್ ದೇಶದಷ್ಟು ಸಾಗುವಳಿ ಭೂಮಿಯನ್ನು ಉಂಟಾಗಿದ್ದಾಗ್ಯೂ ಗ್ರೇಟ್ ಬ್ರಿಟನ್ ೧೦ ಕೋಟಿ ಜನರಿಗೆ ಮಾತ್ರ ಆಹಾರವನ್ನು ಒದಗಿಸಿಕೊಡುತ್ತದೆ. ಜರ್ಮನ್ ದೇಶದವರು ಇಷ್ಟೊಂದು ಜನರಿಗೆ ಆಹಾರವನ್ನ ಒದಗಿಸಿಕೊಡುವದಕ್ಕೆ ಮುಖ್ಯ ಕಾರಣವು ಅವರು ಶಾಸ್ತ್ರ ಸಮ್ಮತವಾಗಿ ವ್ಯವಸಾಯ ಮಾಡುವದರಿಂದಲೂ, ಮಿತ ವ್ಯಯದಿಂದಲೂ, ಅವರ ಕೈಗಾರಿಕೆ ಕುಶಲತೆಯಿಂದ ಹೊರ್ತು ಮತ್ತೇನು ಇಲ್ಲ.

---

## President's Address at the Indian Industrial Conference of 1908.

## ೧೯೦೮ನೆ ಇಸವಿಯ ಇಣ್ಡಿಯನ್ ಇಣ್ಡಸ್ಟ್ರಿಯಲ್ ಕಾನ್‌ಫರೆನ್ಸ್ ಪ್ರೆಸಿಡೆಂಟರವರ ಉಪನ್ಯಾಸ.

ಮದರಾಸಿನಲ್ಲಿ ನಡೆದ ಇಂಡಿಯನ್ ಇಂಡಸ್ಟ್ರಿಯಲ್ ಕಾನ್‌ಫರೆನ್ಸ್ ಸಭೆಯ ಪ್ರೆಸಿಡೆಂಟರು ಈ ದೇಶದ ವ್ಯವಸಾಯಸ್ಥಿತಿಯನ್ನು ಕುರಿತು ಹೇಳಿದ್ದೇನಂದರೆ. —

ಸಧ್ಯದಲ್ಲಿ ವ್ಯವಸಾಯವೇ ಈ ದೇಶೀಯರಿಗೆ ಮುಖ್ಯಾಧಾರವಾಗಿರುತ್ತದೆ ಮತ್ತು ಈ ಉದ್ಯೋಗವು ಇನ್ನೂ ಅಭಿವೃದ್ಧಿಗೆ ಬಂದಿಲ್ಲದೆ ಇ

* ಇಣ್ಡಿಯನ್ ಅಗ್ರಿಕಲ್ಚರಿಸ್ಟ್, ೧—೧—೦೯.

ಲ್ಲಿನ ಜನಾಂಗದವರಿಗೆ ನೆಮ್ಮದಿಯು ಪ್ರಾಪ್ತವಾಗಲಾರದು. ವ್ಯವಸಾಯೋದ್ಯೋಗವೇ ಈಗಲೂ ಇನ್ನೂ ಮುಂದೆಯೂ ನಮ್ಮ ಆಹಾರಪದಾರ್ಥಗಳನ್ನೂ ಮತ್ತು ವಿಶೇಷ ಲಾಭಕರವಾದ ನಮ್ಮ ಇತರ ಕೈಗಾರಿಕೆಗಳಿಗೆ ಬೇಕಾಗುವ ಸಾಮಗ್ರಿಗಳನ್ನು ಒದಗಿಸಿಕೊಡತಕ್ಕದ್ದು. ಬ್ರಿಟಿಷ್ ಇಂಡಿಯಾದಲ್ಲಿ ಬರ್ಮಾದೇಶವು ಸೇರಿ ವ್ಯವಸಾಯಕ್ಕೆ ಲಾಯಖಾದ ಜಮೀನಿನ ಒಟ್ಟು ವಿಸ್ತೀರ್ಣವು ಸುಮಾರು ೪೪೯,೬೦೦ ಚದರುಮೈಲಿಗಳಾಗುತ್ತದೆ. ಈಪೈಕಿ ಸುಮಾರು ೩೫೮,೪೦೦ ಚದರುಮೈಲಿಗಳು ಆಗಲೆ ವ್ಯವಸಾಯದಲ್ಲಿರುತ್ತೆ. ಉಳಿದ ವಿಸ್ತೀರ್ಣವನ್ನು ವ್ಯವಸಾಯಕ್ಕೆ ಲಾಯಖುಮಾಡಲು ಬಹಳ ದುಬಾರಿ ಲಾಗವಡು ತಗಲುವಕಾರಣ ಈಗಿನ ಸ್ಥಿತಿಯಲ್ಲಿ ಇದು ಸಾಧ್ಯವಲ್ಲ. ಈಚಿಗೆ ಹತ್ತಿ, ಜೂಟ್‌ನಾರು, ಮುಂತಾದ ಆಹಾರಪದಾರ್ಥವಲ್ಲದ ಪೈರುಗಳನ್ನು ಮೊದಲಿಗಿಂತಲೂ ಹೆಚ್ಚು ವಿಸ್ತೀರ್ಣದಲ್ಲಿ ಮಾಡುತ್ತಲಿಧಾರೆ. ಇವು ಆಹಾರವಾಗಿ ಉಪಯೋಗಪಡದೇ ಹೋದರೂ ವ್ಯಾಪಾರಕ್ಕೂ ಮತ್ತು ಕೈಗಾರಿಕೆ ಕಸಬಿಗೂ ಅವಶ್ಯಕವಾಗಿರುತ್ತವೆ. ಹೀಗೆ ಆಹಾರಪದಾರ್ಥಗಳಾಗುವ ವಿಸ್ತೀರ್ಣವು ಕಮ್ಮಿಯಾಗಿ ಜಿನಸಿಗಳ ಧಾರಣೆವಾಸಿಗಳು ಏರುವದಕ್ಕೆ ಕಾರಣವಾಯಿತು. ಆದಕಾರಣ ವರ್ಷ ವರ್ಷ ಹೀಗೆ ಕಮ್ಮಿಯಾಗುತ್ತಿರುವ ವಿಸ್ತೀರ್ಣದಲ್ಲೇ ಆಹಾರ ಜಿನಸಿಗಳ ಉತ್ಪತ್ತಿಯನ್ನು ಹೆಚ್ಚಿಸಲು ನಾವು ಸಧ್ಯದಲ್ಲಿ ಪ್ರಯತ್ನಪಡಬೇಕಲ್ಲದೆ ಹಾಲಿ ಜರಗುತ್ತಿರುವ ರಫ್ತುವ್ಯಾಪಾರವನ್ನು ಏಕಪ್ರಕಾರವಾಗಿ ನಡೆಸಿಕೊಂಡು ಈ ದೇಶದಲ್ಲಿ ತಿನ್ನಲಿಕ್ಕೂ ಬೇಕಾಗುವಷ್ಟು ಜಿನಸಿಗಳನ್ನು ಬೆಳೆಯಲೆತ್ನಿಸಬೇಕು.

ಒಂದು ಎಕರೆ ಜಮೀನಿನಲ್ಲಿ ಈಗ ಏನು ಹುಟ್ಟುವಳಿಯಾಗುತ್ತಿದೆ, ಪೂರ್ವದಲ್ಲೇನಾಗುತ್ತಿತ್ತು ಮತ್ತು ಅನ್ಯದೇಶಗಳಲ್ಲಿ ಇಷ್ಟೇಜಮೀನಿನಲ್ಲಿ ಎಷ್ಟಾಗುತ್ತದೆ ಎಂದು ಹೋಲಿಸಿ ನೋಡಿದರೆ ಈ ಭಾಗದಲ್ಲಿ ನಾವು ವಿಶೇಷ ವೃದ್ಧಿಗೊಳಿಸಲು ಅವಕಾಶವಿರುವದು ತಿಳಿದುಬರುತ್ತೆ. ಯುನೈಟೆಡ್ ಪ್ರಾವಿನ್ಸಸ್‌ಕಡೆಯಲ್ಲಿ ಅಕ್ಬರ್ ಕಾಲದಲ್ಲಿ ಒಂದು ಎಕರೆ ಜಮೀನಿನಲ್ಲಿ ೧೧೪೦ ಪೌಂಡು ಗೋಧಿ ಉತ್ಪತ್ತಿಯಾಗುತ್ತಿದ್ದದ್ದು ಈಗ ೮೪೦ ಪೌಂಡಿಗೆ ಇಳಿದಿಧೆ. ಈಗ ಇಂಡಿಯಾದಲ್ಲಿ ಗೋಧಿಯ ಉತ್ಪತ್ತಿಯು ಸರಾಸರಿ ಎಕರೆಗೆ ೭೦೦ ಪೌಂಡು ; ಇಂಗ್ಲೆಂಡಿನಲ್ಲಾದರೋ ೧೯೭೦೦

ಪೌಂಡುಗಳು. ಇದೇ ರೀತಿ ಅಕ್ಕಿ ಇಂಡಿಯಾದಲ್ಲಿ ಎಕರೆಗೆ ೭೦೦ ಪೌಂಡು
ಆಗುತ್ತಿದೆ; ಬಟಿವಿಯಾದಲ್ಲಿ ೨೫೦೦ ಪೌಂಡು ಉತ್ಪತ್ತಿಯಾಗುತ್ತದೆ.
ಇಷ್ಟೇ ಅಲ್ಲ ಇಲ್ಲಿ ಎಕರೆಗೆ ಸುಮಾರು ೬೦—೭೦ ಪೌಂಡು ಜಿಡಿನ ಉ
ತ್ತಿ ಆದರೆ ಅಮೇರಿಕಾದಲ್ಲಿ ೨೦೦ ಪೌಂಡು ಆಗುತ್ತಿದೆ. ಇಲ್ಲಿನ ಒಕ್ಕಲ
ನವರಲ್ಲಿ ಸ್ವಲ್ಪ ತಿಳುವಳಿಕಸ್ತರಾದವರೇನೋ ಗೊಬ್ಬರದ ಉ
ಯೋಗ, ಪರಿವರ್ತನೆಯಿಂದ ಪೈರು ಮಾಡುವದು, ಉಚಿತವಾದ ಕಾಲಗ
ಲ್ಲಿ ತಕ್ಕ ಬೆಳೆಗಳನ್ನು ಮಾಡುವದು, ಇವೇ ಮೊದಲಾದ ವಿಷಯಗಳನ್ನು
ಬಲ್ಲವರಾದಾಗ್ಯೂ ಕೂಡ ಅನೇಕ ಸಂದರ್ಭಗಳಲ್ಲಿ ಈ ಅನುಭವಸಿದ್ಧವಾ
ದ ಒಳ್ಳೇ ಕ್ರಮಗಳು ರೂಢಿಯಲ್ಲಿಲ್ಲ. ಈ ಕಾರಣದಿಂದಲೂ ಮತ್ತು
ನ್ನೂ ಅನೇಕ ಇತರ ಕಾರಣಗಳಿಂದಲೂ ಜಮೀನಿನ ಉತ್ಪತ್ತಿಯು ಬಹು
ಮಟ್ಟಿಗೆ ಕಮ್ಮಿಯಾಗಿರುತ್ತದೆ. ಈಗಿನ ತಾಟಾಪೋಟಿ ವ್ಯವಸಾಯ
ವನ್ನು ಉತ್ತಮಪಡಿಸಬೇಕು. ಗೊಬ್ಬರ ಹಾಕುವದನ್ನಾದರೋ ಇ
ರ ಪ್ರಯೋಜನವನ್ನು ತಿಳಿದವರೂ ಕೂಡ ಮರೆತುಬಿಟ್ಟಿರುತ್ತಾರೆ. ಪರಿ
ರ್ತನೆ ಕ್ರಮವನ್ನು ಅನೇಕವಾಗಿ ಅಲಕ್ಷ್ಯಮಾಡಿರುತ್ತಾರೆ. ಹೊಸ
ರಹ ಹತ್ಯಾರುಗಳು, ಮುಟ್ಟುಗಳು ಮತ್ತು ಯಂತ್ರೋಪಕರಣಗಳ ಹೆ
ರೇ ಇಲ್ಲ. ಬೀಜಗಳ ಚುನಾವಣೆಗೆ ನಿಗಾ ಕಮ್ಮಿ ಬೇಸಾಯಕ್ರಮದ
ಲೋಪಗಳನೇಕ. ರೈತನು ಅನೇಕ ವೇಳೆ ತಾಪತ್ರಯದಿಂದ ಉತ್ತಮ
ಖು ಬೆಳೆ ಇಟ್ಟರೆ ಹವಾದಲ್ಲಿ ಹೆಚ್ಚು ಕಡಮೆಯಾಗಿ ಪೈರು ಕೆಡುವದೆ
ದು ಭಯಪಟ್ಟು ಕೀಳರಖಂ ಗಟ್ಟಿತರಹ ಬೆಳೆಯನ್ನು ಮಾಡಿ ತೃಪ್ತಿಪಡು
ತ್ತಾರೆ. ಈ ಕಾರಣಗಳಿಂದ ಜಮೀನುತ್ಪತ್ತಿಯು ಕಮ್ಮಿಯಾಗಿರು
ದೊಂದೇ ಅಲ್ಲದೆ ಜಿನಸಿಯ ರಖಂ ಸಹ ಕೀಳಾಗಿರುತ್ತದೆ.

---

## Occasional Notes.

## ವಿವಿಧ ವೃತ್ತಾಂತಗಳು.

೧. ನಂಜನಗೂಡಿನಲ್ಲಿ ೧೯೧೯ನೆ ಏಪ್ರಿಲ್ ಮಾಹೆ ೨ ಮತ್ತು ೩ನೆ ತಾ
ರೀಖುಗಳಲ್ಲಿ ಶ್ರೀ ಶ್ರೀಕಂಠೇಶ್ವರ ಸ್ವಾಮಿಯವರ ರಥೋತ್ಸವಕಾಲದ
ಒಂದು ದನಗಳ ಪ್ರದರ್ಶನ ನಡೆಯಿತು. ಉತ್ತಮವಾದ ದನಗಳಿ
ಬಹುಮಾನ ದೊರೆಯಿತು. ವಿಶೇಷ ವಿಷಯಗಳನ್ನು ತಿಳಿಯಬೇ

ಕ್ಷಿಸುವವರು ಆ ತಾಲ್ಲೂಕು ಅಮಲ್ದಾರ್ರವರಿಗೆ ಬರೆದು ತಿಳಿದುಕೊಳ್ಳಬಹುದು.

---

೨. ಅಮೃತಮಹಲ್ ಸೂಪರಿಂಟೆಂಡೆಂಟರವರು ಕಡೂರು ಡಿಸ್ಟ್ರಿಕ್ಟಿನ ತುರ್ಚಿಗುತ್ತ, ಜಕ್ಕೇರಿ, ತಂಡ್ರೆಜೋರಿ, ಲಕ್ಕ್ರನಹಳ್ಳಿ, ಅತ್ತಿಗುಡ್ಡ, ಬೀರೂರು ಮತ್ತು ತಗ್ಗಿಹಳ್ಳಿ ಸರ್ಕಾರಿ ಅಮೃತಮಹಲ್ ಕಾವಲುಗಳಲ್ಲಿ ಬರುವ ಮುಂಗಾರುಮಳೆ ಷುರುವಾಗುವತನಕ ದನಗಳನ್ನು ರುಸುಂ ಇಲ್ಲದೆ ಮೇಯಿಸಲಿಕ್ಕೆ ಅವಕಾಶ ಕೊಟ್ಟಿರುತ್ತಾರೆ.

---

೩. ಮದರಾಸು ಆಧಿಪತ್ಯದ ರೈತ್ವಾರಿ ಗ್ರಾಮಗಳಲ್ಲಿ ೧೯೦೮ನೆ ಡಿಶಂಬರು ಆಖೈರುವರಿವಿಗೆ ಒಟ್ಟು ೪೧,೮೦೦ ಎಕರೆ ಜಮೀನಿನಲ್ಲಿ ಕಬ್ಬಿನ ಬೆಳೆ ಇಟ್ಟಿತ್ತು. ಹಿಂದಿನವರ್ಷ ಸಾಗಿನಲ್ಲಿದ್ದ ವಿಸ್ತೀರ್ಣಕ್ಕಿಂತ ಇದು ಶೇಕಡ ೧೨ರಷ್ಟು ಕಮ್ಮಿಯಾಗಿರುತ್ತದೆ. ಸುಮಾರು ೭೮,೦೦೦ ಟನ್ ಬೆಲ್ಲ ಉತ್ಪತ್ತಿಯಾಗಬಹುದು.—ಮದರಾಸ್ ಮೇಲ್‌ಪತ್ರಿಕೆ—೧೯-೧-೦೯.

---

೪. ಬಾಳೆಹಣ್ಣಿನಲ್ಲಿ ರಂಜಕಪದಾರ್ಥವು (Phosphorus) ವಿಶೇಷವಾಗಿರುತ್ತದೆಯಾದಕಾರಣ ಇದು ಯಾವಾಗಲೂ ಬುದ್ಧಿಯನ್ನು ಪಯೋಗಿಸಿ ಕೆಲಸ ಮಾಡತಕ್ಕವರಿಗೆ ಕೇವಲ ಅನುಕೂಲವಾದ ಆಹಾರಪದಾರ್ಥವಾಗಿರುತ್ತದೆ. ಈ ಅಂಶವು ಸಾಮಾನ್ಯವಾಗಿ ಗೊತ್ತಿಲ್ಲದಿದ್ದರೂ ಕೂಡ ಇಲ್ಲಿನವರು ಹಟಾತ್ತಾಗಿಯೋ ಅಥವಾ ರೂಢಿಯಿಂದಲೊ ಇಲ್ಲವೇ ಅನುಭವದಿಂದಲೋ ಹ್ಯಾಗೊ ಅಂತು ಈ ಹಣ್ಣು ಬಹಳ ಆರೋಗ್ಯಕರವಾದ್ದೆಂದು ತಿಳಿದಿರುತ್ತಾರೆ.—ಇಂಡಿಯನ್ ಅಗ್ರಿಕಲ್ಚರಿಸ್ಟ್, ೧—೧—೦೯.

---

೫. ಸಿಲೋನ್ ದ್ವೀಪದಲ್ಲಿ ೧೫೦ ಪಾಠಶಾಲೆಗಳಲ್ಲಿ ಸ್ಕೂಲುಗಳಿಗೆ ಸೇರಿದ ಹಾಗೆ ಕೈತೋಟಗಳಿರುತ್ತವೆ. ಈ ತೋಟಗಳ ಕೆಲಸವನ್ನು ಪಾಠಶಾಲೆಗಳ ಹುಡುಗರು ಮತ್ತು ಹುಡುಗಿಯರೇ ಮಾಡುತ್ತಾರೆ. ಇವರ ಕೆಲಸವು ಅಲ್ಲಿನ ಉಪಾಧ್ಯಾಯರ ಮೇಲ್ವಿಚಾರಣೆಯಲ್ಲಿರುವದಲ್ಲದೆ, ಇದನ್ನು ಟ್ರೇನಿಂಗ್ ಇನ್ಸ್ಪೆಕ್ಟರುಗಳು ಆಗಾಗ್ಯೆ ತನಿಖೆ ಮಾಡುತ್ತಿರುತ್ತಾರೆ.

ಇಲ್ಲಿ ಹುಡುಗರಿಗೆ ಪ್ರಕೃತಿ ವಿಷಯಕವಾದ ಪಾಠಗಳನ್ನು (Nature study lessons) ಬಿತ್ತನೆ ಕೆಲಸ, ಗಿಡಗಳಿಗೆ ನೀರು ಕಟ್ಟುವದು, ಕಳೆ ಕೀಳುವದು, ಜಮೀನು ಸಾಗುವಳಿ ಮಾಡುವದು ಈ ವಿಷಯಗಳಲ್ಲಿನ ಮುಖ್ಯ ಸಂಗತಿಗಳನ್ನು ಕಲಿಸುತ್ತಾರೆ. ಈ ಏರ್ಪಾಟಿನಲ್ಲಿ ಒಂದೊಂದು ಗ್ರಾಮದಲ್ಲೂ ಒಂದು ಅಜಮಾಯಿಷಿ ತೋಟವನ್ನು ಸುಲಭ ಖರ್ಚಿನಿಂದ ಸ್ಥಾಪಿಸಲು ಅವಕಾಶವಿರುತ್ತೆ.—ಅಗ್ರಿಕಲ್‌ಚರಲ್ ಅಂಡ್ ಇಣಡಸ್ಟ್ರಿಯಲ್ ಪ್ರೋಗ್ರೆಸ್, ಆಗಸ್ಟ ೧೯೦೪.

---

೬. ಈಗ ಇಂಡಿಯಾದಲ್ಲಿ ಮೊಗದುಂಸಕ್ಕರೆಯು ಉತ್ಪತ್ತಿಯು ಎಕರೆಯೊಂದಕ್ಕೆ ಸುಮಾರು ೧$\frac{1}{4}$ ಟನ್ ಆಗುತ್ತೆ. ಆದರೆ ಕ್ಯೂಬಾ ದ್ವೀಪದಲ್ಲಿ ಎಕರೆಯೊಂದಕ್ಕೆ ೨ ಟನ್, ಜಾವಾದ್ವೀಪದಲ್ಲಿ ಸುಮಾರು ೩೪ ಟನ್ ಮತ್ತು ಹವೈದ್ವೀಪದಲ್ಲಿ ೪ ಟನ್, ಈಮೇರೆ ಉತ್ಪತ್ತಿಯಾಗುತ್ತಿರುವದು. ಪರಂತು ಮೇಲೆ ಹೇಳಿದ ಯಾವಸ್ಥಳಗಳಲ್ಲಿಯೂ ಕೂಡ ಉತ್ಪತ್ತಿಯು ಅಷ್ಟು ವಿಶೇಷ ಅಭಿವೃದ್ಧಿಗೆ ಬಂದಿದೆಯೆಂದು ಹೇಳುವದಕ್ಕಾಗುವದಿಲ್ಲ. ಇಂಡಿಯಾದೇಶದಲ್ಲಿ ಸಕ್ಕರೆ ತಯಾರುಮಾಡುವ ಕ್ರಮಗಳು ವ್ಯವಸಾಯ ಕ್ರಮಗಳಂತೆಯೇ ಇನ್ನೂ ಬಹಳ ಹಿಂದೆ ಬಿದ್ದಿರುತ್ತವೆಂದು ಸಾಮಾನ್ಯವಾಗಿ ಹೇಳಬಹುದು. ಈ ಕಸಬನ್ನು ಅಭಿವೃದ್ಧಿಪಡಿಸುವದಕ್ಕೆ ಸಧ್ಯದಲ್ಲಿ ಮಾಡಬೇಕಾದ್ದೇನಂದರೆ, ಉತ್ತಮ ರಖಂ ಕಬ್ಬುಗಳನ್ನು ಬೆಳೆಯಬೇಕು. ಕಾರ್ಖಾನೆಗಳನ್ನು ಸ್ಥಾಪಿಸಿ ಹೊಸ ತರಹೆ ಯಂತ್ರೋಪಕರಣಗಳಿಂದ ಕೆಲಸ ನಡಿಸಬೇಕು. ಅಂತು ಉತ್ಪತ್ತಿಯನ್ನು ಈಗಿನಗಿಂತಲೂ ಹೆಚ್ಚಿಸುವದಕ್ಕೆ ಸಲಹೆಯನ್ನು ಕಲ್ಪಿಸಬೇಕು. ಈ ಅಭಿಪ್ರಾಯವನ್ನು ಜನರು ಈಗೀಗ ತಿಳಿದುಕೊಳ್ಳುತಲಿಧಾರೆ. ಇಂಡಿಯಾದೇಶದಲ್ಲಿ ಕೈಗಾರಿಕೆ ಕಸಬುಗಳನ್ನು ಉಚ್ಛ್ರಾಯಸ್ಥಿತಿಗೆ ತರಬೇಕಾದರೆ ಮುಖ್ಯವಾಗಿ ನೂತನ ವಿಧಾನಗಳನ್ನು ಕಲಿತು ಆಚರಿಸಬೇಕು.—ಇಂಡಿಯನ್ ಅಗ್ರಿಕಲ್ಚರಿಸ್ಟ್, ೦—೧—೦೯.

---

V. B. Soobbiah & Sons, Printers, Bangalore.—1909.

THE MYSORE

# REVENUE & AGRICULTURAL GAZETTE.

ವಾಲ್ಯೂಂ ೩.] ಸೋಮವಾರ, ೧ನೆ ಮಾರ್ಚಿ ೧೯೦೯. [ನಂ. ೯.

## Contents.



## ಅನುಕ್ರಮಣಿಕೆ.



## Pineapple Industry. *

## ಅನನಾಸ್ ವ್ಯವಸಾಯ.

ಅನನಾಸ್ ಹಣ್ಣಿಗೆ ಇಂಡಿಯಾ ದೇಶದಲ್ಲಿ ವಿಶೇಷ ಗಿರಾಕಿ ಇದ್ದಾಗ್ಯೂ ಕೂಡ ಹಣ್ಣೇನೂ ಸರಬರಾಯಿ ಆಗುತ್ತಿರುವದಿಲ್ಲ. ಇದನ್ನು ಈ ದೇಶದ ಎಲ್ಲಾ ಭಾಗಗಳಲ್ಲೂ ವಿಶೇಷವಾಗಿಯೇ ಬೆಳೆಯುತ್ತಾರೆ. ಆದರೂ

* ಇಂಡಿಯನ್ ಟ್ರೇಡ್ ಜರ್ನಲ್. —೨೧—೧—೦೯.

ಹಣ್ಣಿನ ತರಹೆಯನ್ನು ಉತ್ತಮ ಪಡಿಸುವ ಭಾಗದಲ್ಲಿ ಮಾತ್ರ ಯಾವನೊಂದು ಪ್ರಯತ್ನವೂ ನಡೆಯಿಸುವದಿಲ್ಲ. ಹಾಲಿ ಇಲ್ಲಿ ಮಾರಾಟವಾಗುವ ಹಣ್ಣುಗಳು ತಿನ್ನಲಿಕ್ಕೆ ನಾಲಾಯಖಾಗಿರುವವು. ಈ ಕಾರಣದಿಂದಲೆ ಈ ದೇಶದ ಹಣ್ಣುಗಳಿಗೆ ಸ್ವಲ್ಪ ಮಧುರವಾಗಿದ್ದರೂ ಕೂಡ ಒಳ್ಳೆ ಬೆಲೆ ದೊರೆಯುತ್ತದೆ. ಇವು ತಕ್ಕಷ್ಟು ದೊರಿಯದೇ ಇರುವದರಿಂದ ಸ್ಟ್ರೇಟ್ ಸೆಟ್ಲಮೆಂಟ್ಸ (Strait Settlements) ಸಿಲೋನ್ ಮತ್ತು ಮರೀಷಸ್ (Mauritius) ಕಡೆಗಳಿಂದ ಬರುವ ಬಲಿಯದೇ ಸಪ್ಪೆಯಾಗಿರುವ ಹಣ್ಣುಗಳು ೨ರಿಂದ ೪ಆಣೆಗೆ ಒಂದರಂತೆ ಸಲೀಸಾಗಿ ವಿಕರಿಯಾಗುತ್ತವೆ. ಪರಂತು ಉತ್ತರ ಬಂಗಾಳದ ಒಂದು ಸಣ್ಣ ತೋಟದಲ್ಲಿ ಬೆಳೆಯುತ್ತಿರುವ ಬಹಳ ರಸವತ್ತಾದ ಅನನಾಸು ಹಣ್ಣಿಗೆ ಒಂದಕ್ಕೆ ೮ಆಣೆಯಂತೆ ಧಾರಾಳವಾಗಿ ಬೆಲೆ ದೊರೆಯುವವಾಗಿ ತಿಳಿದು ಬಂದಿರುತ್ತೆ. ಈ ದೇಶದಲ್ಲಿ ಈ ಹಣ್ಣಿನ ತರಹೆಯನ್ನು ಉತ್ತಮ ಪಡಿಸುವ ಭಾಗದಲ್ಲೂ ಮತ್ತು ಇಲ್ಲಿಗೆ ಬೇಕಾಗುವಷ್ಟು ಒದಗುವ ಹಾಗೆ ಹೆಚ್ಚಾಗಿ ಬೆಳೆಯುವ ಭಾಗದಲ್ಲೂ ಪ್ರಯತ್ನನಡೆದಲ್ಲಿ ಬಹಳ ಲಾಭಕರವಾಗುವದು. ಇತರ ದೇಶಗಳಲ್ಲಿ ಇದರ ವ್ಯವಸಾಯವು ಯಾವ ರೀತಿಯಲ್ಲಿ ಅಭಿವೃದ್ಧಿಯನ್ನು ಹೊಂದಿರುತ್ತದೆ ಎಂಬುದನ್ನು ವಿಚಾರ ಮಾಡಿ ನೋಡೋಣ. ಈಗ ೫೦ ವರುಷಗಳ ಕೆಳಗೆ ಫ್ಲಾರಿಡಾ ರಾಜ್ಯದಲ್ಲಿ (Florida) ಈ ಹಣ್ಣಿನ ಹೆಸರೇ ಇರಲಿಲ್ಲ. ಈಗಲಾದರೊ ಅನೇಕ ವ್ಯಕ್ತಿಗಳ ಫಸಲೆ ವಿಸ್ತೀರ್ಣದಲ್ಲಿ ಫಕ್ತು ಅನನಾಸನ್ನೆ ಬೆಳೆಯುತ್ತಲಿಧಾರೆ. ಸಿಂಗಪುರದಲ್ಲಿ ಹಣ್ಣನ್ನು ಟಿನ್ನುಗಳಲ್ಲಿ ಹಾಕಿ ಬಹಳ ಕಾಲದ ವರೆಗೂ ಕೆಡದಂತೆ ಕೂಡಿಡುವ ಉದ್ಯೋಗವು ದಿನೇ ದಿನೇ ವೃದ್ಧಿಯಾಗುತ್ತಿದೆ. ಇಂಗ್ಲಂಡ್ ಮೊದಲಾದ ದೇಶಗಳಲ್ಲಿ ಈರೀತಿ ಕೂಡಿಟ್ಟ ಹಣ್ಣಿಗೆ ಬಹಳ ಗಿರಾಕಿ ಉಂಟು. ಮತ್ತು ಇದನ್ನು ಬಹಳ ಮಟ್ಟಿಗೆ ಸಿಂಗಪುರವೇ ಒದಗಿಸುತ್ತದೆ. ಫ್ಲಾರಿಡಾದಲ್ಲಿ ಅನನಾಸ್ ಹಣ್ಣಿನ ರಫ್ತು ವ್ಯಾಪಾರ ಮಾತ್ರ ನಡೆಯುವದು. ಹವೈ ದ್ವೀಪಗಳಲ್ಲಾದರೊ ಇದರ ವ್ಯವಸಾಯವು ಕೇವಲ ಅಭಿವೃದ್ಧಿಯಲ್ಲಿದೆ. ಈ ದ್ವೀಪಗಳಲ್ಲಿ ಈ ಉದ್ಯೋಗವು ಆರಂಭವಾಗಿ ಈಗ ಸುಮಾರು ೩ ವರುಷಗಳಾದಾಗ್ಯೂ ಕೂಡ ಈಗ ಫ್ಲಾರಿಡಾ ಮತ್ತು ಸಿಂಗಪೂರಿನಲ್ಲಿರುವ ದಕ್ಕಿಂತಲೂ ಪ್ರಬಲ ಹೊಂದಿರುತ್ತದೆ. ಇಂಡಿಯಾ ದೇಶದಲ್ಲಿ ಎಲ್ಲಾ ತ

ರದ ಹವಾಗಳೂ ಇರುವದ್ದರಿಂದ ಮೇಲ್ಕಂಡ ದೇಶಗಳಂತೆಯೇ ಇಲ್ಲಿಯೂ ಕೂಡಾ ಈ ಹಣ್ಣನ್ನು ಬಹಳವಾಗಿ ಬೆಳೆದು ಅನ್ಯದೇಶಗಳೊಂದಿಗೆ ಭಾರಿಯಾಗಿ ವ್ಯಾಪಾರ ನಡೆಸಬಹುದಾಗಿರುತ್ತೆ.

ಅನನಾಸು ವ್ಯವಸಾಯವು ಬಹಳ ಸುಲಭ. ಸಾಮಾನ್ಯ ತರಕಾರಿಗಳನ್ನು ಬೆಳೆಯುವ ಜಮೀನಿನಲ್ಲಿ ಇದನ್ನು ಬೆಳೆಯಬಹುದು. ಆದರೆ ವಿಶೇಷ ಮಳೆಗಾಲದಲ್ಲಿಯೂ ಕೂಡ ಭೂಮಿಯಲ್ಲಿ ನೀರು ನಿಲ್ಲದೆ ಬಸಿದು ಹೋಗುವಂತೆ ಇರಬೇಕು. ಮೇಲ್ಮಣ್ಣು ಪುಡಿಯಾಗಿಯೂ ಅಡಿಮಣ್ಣು ನೀರು ಬಸಿದು ಹೋಗುವಂತೆಯೂ ಇರುವ ಜಮೀನಿನಲ್ಲಿ ಉತ್ಕೃಷ್ಟವಾದ ಬೆಳೆಯಾಗುತ್ತೆ. ಫ್ಲಾರಿಡಾ ದೇಶದಲ್ಲಿ ಅನನಾಸು ಗಿಡಗಳನ್ನು ೧½—೨ಅಡಿ ದೂರದಲ್ಲಿ ನೆಡುತ್ತಾರೆ. ಬಹಾಮಾ ದ್ವೀಪದಲ್ಲಾದರೋ ಎಕರೆಗೆ ೭೦ ಸಾವಿರ ಗಿಡಗಳನ್ನು ಹಾಕುವದುಂಟು ಮತ್ತು ಇವು ಗಿಡ ಒಂದಕ್ಕೆ ಒಂದೇ ಹಣ್ಣಿನಂತೆ ಬಿಡುತ್ತವೆ. ಹಣ್ಣೊಂದಕ್ಕೆ ೪, ೮, ೨ ಅಥವಾ ೧ ಆಣೆ ಮೇರಿಗೆ ವಿಕರಿಮಾಡಿದರೂ ಕೂಡ ಎಕರೆ ಒಂದಕ್ಕೆ ಒಳ್ಳೆಲಾಭವೇ ತೋಲುವದು. ಹೀಗೆ ಹಣ್ಣಿನಿಂದಲೇ ಅಲ್ಲದೆ ಇತರ ವಿಧಗಳಲ್ಲೂ ಈ ಬೆಳೆಯಿಂದ ಲಾಭವುಂಟು. ಲಂಡನ್ ಪಟ್ಟಣದಲ್ಲಿ ಅನನಾಸು ನಾರು ಟನ್ ಒಂದಕ್ಕೆ ೩೦ ಪೌಂಡುಗಳಂತೆ ವಿಕರಿಯಾಗುತ್ತೆ ಮತ್ತು ಈ ನಾರಿಗೆ ಉತ್ತರ ಬಂಗಾಳ ಮತ್ತು ದಖನ್ ಪ್ರಾಂತ್ಯಗಳಲ್ಲಿ ವಿಶೇಷ ಗಿರಾಕಿ ಉಂಟು. ಹೊನೂಲೂಲು ಕಾರ್ಖಾನೆಯಲ್ಲಿ ಈ ಹಣ್ಣಿನ ಕಸವನ್ನು ಕಬ್ಬಿನ ಆಲೆಗಳಂತಿರುವ ಯಂತ್ರದಲ್ಲಿ ಕೊಟ್ಟ ರಸವನ್ನು ಹಿಂಡಿ ಅದರಿಂದ ಅನನಾಸ್ ಬ್ರಾಂಡಿ ಮತ್ತು ಷರಬತ್ತುಗಳನ್ನು ತಯಾರು ಮಾಡುತ್ತಾರೆ. ನಿಂತ ಸಿಪ್ಪೆಯನ್ನು ಒಲೆಗೆ ಉಪಯೋಗಿಸುತ್ತಾರೆ. ಈ ರಸವನ್ನು ಕಾಯಿಸಿ ಸಕ್ಕರೆಯನ್ನು ಕೂಡ ತಯಾರು ಮಾಡಬಹುದೆಂದು ಹೇಳುತ್ತಾರೆ.

ಹೀಗೆ ಅನನಾಸು ವ್ಯವಸಾಯವು ಅನ್ಯದೇಶಗಳಲ್ಲಿ ವೃದ್ಧಿ ಹೊಂದಿರುವದನ್ನು ನೋಡಿ ಇಂಡಿಯಾ ದೇಶದಲ್ಲಿಯೂ ಕೂಡ ಕೆಲವು ಪ್ರಾಂತ್ಯಗಳಲ್ಲಿ ಈ ಉದ್ಯೋಗವನ್ನು ಸ್ಥಾಪಿಸಿ ಲಾಭ ಪಡಿಯಬಹುದು. ಅನ್ಯದೇಶಗಳಿಂದ ಈ ದೇಶಕ್ಕೆ ಹೋದ ಸಾಲಿನಲ್ಲಿ ೨,೪೫, ೩೪೧, ರೂಪಾಯಿಗಳಷ್ಟು ಈ ಹಣ್ಣು ಆಮದಾಗಿರುತ್ತದೆ. ಇದರಿಂದ ಈ ದೇಶದಲ್ಲಿ ಅನನಾಸ್ ಹಣ್ಣಿಗೆ ಇರುವ ಗಿರಾಕಿ ವ್ಯಕ್ತಪಡುತ್ತದೆ.

## Improvement of the Soil *

## ಭೂಸಾರವನ್ನು ವೃದ್ಧಿ ಮಾಡುವುದು.

ಭೂಮಿಯ ಸಾರವನ್ನು ವೃದ್ಧಿಮಾಡುವುದು ಹೇಗೆಂದು ಪ್ರತಿರೈತ
ನೂ ಕೇಳುವನು. ಪೈರುಗಳನ್ನು ಬದಲಾಯಿಸಿ ಹಾಕುವುದು ಮೊದಲ
ನೆ ಮಾರ್ಗವೆಂದು ಹೇಳಬಹುದು.

ರಾಗಿ, ಜೋಳ, ಮುಂತಾದ ಪೈರುಗಳು ಭೂಮಿಯಿಂದ ವಿಶೇಷ
ವಾಗಿ ಫಾಸ್ಫರಸ್ ಎಂಬ ಪದಾರ್ಥವನ್ನೂ ಮತ್ತು ನೈಟ್ರೋಜನ್ ಎಂಬ
ವದನ್ನೂ ಪರಿಗ್ರಹಿಸುವವು. ಕಡಲೆ, ಹುರುಳಿ, ಹೆಸರು, ತೊಗರಿ, ಮೊ
ದಲಾದ ಪೈರುಗಳು ಭೂಮಿಯಿಂದ ಮುಖ್ಯವಾಗಿ ಸುಣ್ಣವನ್ನು ತೆಗೆದು
ಕೊಳ್ಳುವವು. ಪ್ರತಿವರ್ಷವೂ ಅವುಗಳನ್ನೆ ಹಾಕಿದರೆ ವರ್ಷವರ್ಷಕ್ಕೂ
ಒಂದು ವಿಧವಾದ ಪದಾರ್ಥವೆ ಭೂಮಿಯಿಂದ ಪರಿಗ್ರಹಿಸಲ್ಪಡುತ್ತಿರು
ವುದು; ಆಗ ಭೂಮಿಯು ನಿಸ್ಸಾರವಾಗುವುದು. ಆದಕಾರಣ ಪೈರುಗ
ಳು ಕೆಟ್ಟುಹೋಗುವವು. ಈ ರೀತಿ ಮಾಡದೆ ಧಾನ್ಯವನ್ನು ಬಿತ್ತಿದಮೇ
ಲೆ ಕಾಳನ್ನೂ, ಕಾಳಾದ ಮೇಲೆ ಧಾನ್ಯವನ್ನೂ ಬದಲಾಯಿಸಿ ಬಿತ್ತುತ್ತಾ
ಬಂದರೆ ಮೇಲೆ ಹೇಳಿದಂತೆ ನಷ್ಟವು ಭೂಮಿಗೆ ಉಂಟಾಗುವದಿಲ್ಲವು.
ಭೂಮಿಯು ಕಾಲಕ್ರಮದಲ್ಲಿ ಬೇಕಾದ ನೂತನ ಪದಾರ್ಥಗಳನ್ನು ಸೃ
ಷ್ಟಿಸಿಕೊಳ್ಳುವುದು.

ಆವಕಾರಣ ಒಂದುಬಗೆಯ ಪೈರು ತೆಗೆದುಕೊಳ್ಳುವ ಪದಾರ್ಥವನ್ನು
ಮತ್ತೊಂದು ಬಗೆಯ ಪೈರು ಭೂಮಿಗೆ ಕೊಡಬಲ್ಲದು. ಇದೂ ಅಲ್ಲದೆ ಕಾ
ಳುಗಳ ಪೈರುಗಳು ಭೂಮಿಗೆ ನೈಟ್ರೋಜನನ್ನು ವಿಶೇಷವಾಗಿ ಕೊ
ಟ್ಟು ಬಲಮಾಡುವ ಸ್ವಭಾವವುಳ್ಳವುಗಳಾಗಿರುವವು. ಇದರಿಂದ ಮತ್ತೊಂ
ದು ಸಸ್ಯಕ್ಕೆ ಅನುಕೂಲಿಸುವಷ್ಟು ನೈಟ್ರೋಜಿನು ಭೂಮಿಗೆ ಲಾಭವಾ
ಗುತ್ತಿರುವುದು.

ನೀಲಿ, ಹತ್ತಿ, ಮುಂತಾದ ಪೈರುಗಳು ಬೇರುಗಳನ್ನು ಆಳವಾಗಿ ಬಿ
ಟ್ಟು ಭೂಮಿಯ ಕೆಳಮಣ್ಣಿನ ಭಾಗದಿಂದ ಆಹಾರವನ್ನು ತೆಗೆದುಕೊಳ್ಳು
ವವು. ರಾಗಿ ಮುಂತಾದ ಪೈರುಗಳು ಭೂಮಿಯ ಮೇಲ್ಭಾಗದಿಂದಲೇ

* ಒಕ್ಕಲಿಗರ ಪತ್ರಿಕೆ.—೧೭—೨—೧೯.

ಆಹಾರವನ್ನು ತೆಗೆದುಕೊಳ್ಳುವವು. ಆದುದರಿಂದ ಬದಲಾಯಿಸಿ ಪೈರುಗಳನ್ನು ಹಾಕಿದರೆ ಒಂದುಸಾರಿ ಭೂಮಿಯ ಮೇಲ್ಭಾಗಕ್ಕೂ, ಮತ್ತೊಂದುಸಾರಿ ಆಳವಾದ ಭಾಗಕ್ಕೂ ವಿಶ್ರಾಂತಿ ಸಿಕ್ಕುವದು. ಈ ವಿಶ್ರಾಂತಿಸಮಯದಲ್ಲಿ ಭೂಮಿಯು ತನಗೆ ಆ ಭಾಗದಲ್ಲಿ ಸಂಭವಿಸಿದ ನಷ್ಟವನ್ನು ಸಂಪಾದಿಸಿಕೊಳ್ಳುವದು. ಒಂದೇ ಜಾತಿ ಪೈರನ್ನು ಹಾಕಿದರೆ ಒಂದೇ ಭೂಭಾಗದಿಂದ ಪದೇಪದೇ ಆಹಾರವು ಹೋಗುತ್ತಿರುವುದರಿಂದ ಆ ಭೂಮಿಯು ನಿಸ್ಸಾರವಾಗುವುದು.

ಕೆಲವು ಪೈರುಗಳಿಗೆ ಕೆಲವು ತರಹೆ ಹುಳಗಳು ಬೀಳುವವು. ಆ ಹುಳಗಳು ಆ ಪೈರನ್ನೆ ತಿನ್ನುವವಲ್ಲದೆ ಬೇರೆಜಾತಿ ಪೈರುಗಳನ್ನು ತಿನ್ನುವವು. ವರ್ಷವರ್ಷಕ್ಕೂ ಒಂದೇಭೂಮಿಯಲ್ಲಿ ಒಂದೇಪೈರನ್ನು ಹಾಕುತ್ತಾಬಂದರೆ ಆ ಪೈರಿಗೆ ಬೀಳುವ ಹುಳಗಳು ಭೂಮಿಯೊಳಕ್ಕೆ ಹೋಗಿ ಅಲ್ಲಿ ಸ್ಥಿರವಾಗಿ ನಿಂತುಹೋಗುವವು. ಆದುದರಿಂದಲೇ ಹುಳುವಿನ ಜಾಡ್ಯಗಳು ಪೈರುಗಳಿಗೆ ಬರುವವು. ಪೈರುಗಳನ್ನು ಬದಲಾಯಿಸಿ ಹಾಕುತ್ತಾಬಂದರೆ, ಒಂದು ಜಾತಿ ಪೈರಿಗೆ ಬೀಳುವ ಹುಳಗಳು ಎರಡನೆಜಾತಿ ಪೈರಿಗೆ ಬೀಳುವದಿಲ್ಲವಾದಕಾರಣ, ಎರಡನೆಪೈರನ್ನು ಹಾಕಿದಾಗ ಮೊದಲನೆ ಪೈರಿನ ಹುಳಗಳು ತಿನ್ನುವುದಕ್ಕೆ ಅನುಕೂಲವಾದ ಆಹಾರವು ದೊರೆಯದೆ ಅವು ಸತ್ತುಹೋಗುವವು. ಒಂದೇಪೈರನ್ನು ಹಾಕಿದ್ದೇಆದರೆ ಹುಳಗಳಿಗೆ ಯಾವಾಗಲೂ ಪುಷ್ಕಳವಾದ ಆಹಾರವು ಸಿಕ್ಕುವುದು. ಆದುದರಿಂದ ಆ ಪೈರುಗಳು ಹುಳುಬಿದ್ದು ಕೆಟ್ಟುಹೋಗುವವು. ಹೊಗೆಸೊಪ್ಪು, ಗೋಧಿ, ಮುಂತಾದವುಗಳು ನೆಲದಿಂದ ಸಾರವನ್ನು ವಿಶೇಷವಾಗಿ ಎಳೆಯುವವು. ಹುರುಳಿ, ಬಟಾಣಿ, ಮುಂತಾದವು ನೆಲಕ್ಕೆ ಬಲವನ್ನು ಕೊಡುವವು. ಸಾರವನ್ನು ಎಳೆಯುವ ಪೈರನ್ನು ಹಾಕಿದ ತರುವಾಯ ಸಾರಪ್ರದವಾದ ಪೈರನ್ನು ಹಾಕುವುದರಿಂದ ಭೂಮಿಯು ಫಲಪ್ರದವಾಗುವುದು. ಈ ಸ್ಥಿತಿಗಳನ್ನು ಗಮನಿಸಿ ವ್ಯವಸಾಯಗಾರರು ಯುಕ್ತವಾದ ಪೈರುಗಳನ್ನು ಬದಲಾಯಿಸುತ್ತಾಬಂದರೆ ನೆಲಕ್ಕೆ ಸಾರವು ಹೆಚ್ಚಾಗುವುದು. ಒಂದೇಭೂಮಿಯಲ್ಲಿ ವರ್ಷವರ್ಷವೂ ಗೋಧಿಯನ್ನೇ ಒಬ್ಬ ವ್ಯವಸಾಯಗಾರನು ಬೆಳೆದನು. ಈ ಪ್ರಕಾರ ಮಾಡಿದ್ದರಿಂದ ತನ್ನ ಭೂಮಿಯ ಒಂದೊಂದು ಎಕರೆಯಲ್ಲಿ ೫ ವರ್ಷಗಳಲ್ಲಿ ೧೭೧ ತೊಲೆ ತೂಕವುಳ್ಳ ನೈಟ್ರೋಜನು ನಾ

ಕವಾಯಿತೆಂದು ನಿರ್ಧರಿಸಿದ್ದಾನೆ. ಆತನು ಬದಲಾಯಿಸಿ ಪೈರುಗಳನ್ನು ಹಾಕಿದ್ದರಿಂದ ಎಕರೆಗೆ ಒಂದು ವರ್ಷದಲ್ಲಿ ೬೧ ತೊಲೆಗಳಿಗೆ ಮೇಲ್ಪಟ್ಟ ನೈಟ್ರೋಜನು ವೃದ್ಧಿಯಾಯಿತೆಂದು ಹೇಳುತ್ತಿದ್ದಾನೆ. ಒಂದು ಪುಟ್ಟಿ ಬೆಳೆಯುವ ಭೂಮಿಯಲ್ಲಿ ಮೂರು ಪುಟ್ಟಿಗಳನ್ನು ಬೆಳೆಯಬೇಕಾದರೆ ಈ ಪದ್ಧತಿಗಳನ್ನು ಅನುಸರಿಸಬೇಕು.

---

## Agricultural Experiments in Bombay.

## ಬೊಂಬಾಯಿ ಅಧಿಪತ್ಯದಲ್ಲಿ ವ್ಯವಸಾಯಕ ಅಜಮಾಯಿಷಿಗಳು.

ಸನ್ ೧೯೦೭-೦೮ನೆ ಸಾಲಿನಲ್ಲಿ ಬೊಂಬಾಯಧಿಪತ್ಯದ ಅಗ್ರಿಕಲ್ಚರಲ್ ಕೆಮಿಷ್ಟುಯವರು (Agricultural Chemist) ಈ ಕೆಳಗೆ ಕಂಡಂತೆ ಅನೇಕ ಪದಾರ್ಥಗಳನ್ನು ಪರಿಶೋಧಿಸಿ ಇವುಗಳಲ್ಲಿ ಯಾವ ಯಾವ ಪ್ರಮಾಣದಲ್ಲಿ ಯಾವ ಯಾವ ಅಂಶಗಳಿರುತ್ತವೆಂಬುದನ್ನು ಅಜಮಾಯಿಷಿ ಮಾಡಿರುತ್ತಾರೆ.

| ಪರಿಶೋಧಿಸಲ್ಪಟ್ಟ ಪದಾರ್ಥಗಳು. | | ಮಾದರಿಗಳ ಸಂಖ್ಯೆ. | |
|---|---|---|---|
| | | 1906-07. | 1907-08. |
| ಮಣ್ಣುಗಳು | ... | 67 | 101 |
| ಗೊಬ್ಬರಗಳು | ... | 43 | 105 |
| ಆಹಾರ ಪದಾರ್ಥಗಳು | ... | 17 | 41 |
| ಜಲಗಳು | ... | 22 | 80 |
| ಬೆಲ್ಲ | .. | 32 | 84 |
| ಬೆಲ್ಲದ ಮಡ್ಡಿ | ... | ... | 40 |
| ಕಬ್ಬಿನ ಹಾಲು | .. | ... | 2 |
| ಎಣ್ಣೆ ಬೀಜಗಳು | ... | 47 | 98 |
| ಹಾಲು | ... | 110 | 513 |
| ಕಡೆದ ಹಾಲು | ... | 123 | 153 |
| ಕೆನೆ | ... | 123 | 1 |
| ಬೆಣ್ಣೆ | ... | 2 | 2 |
| ಇತರ ಪದಾರ್ಥಗಳು | ... | 10 | 22 |
| ಜುಮ್ಲ | ... | 596 | 1,192 |

* ಬೊಂಬಾಯಿ ವ್ಯವಸಾಯ ಇಲಾಖೆಯ—೧೯೦೮—೦೯ನೇ ರಿಪೋರ್ಟು.

ಪ್ರಸಕ್ತ ಸಾಲಿನಲ್ಲಿ ಒಂದು ವಿಶೇಷವೇನಂದರೆ, ಪದಾರ್ಥಗಳನ್ನು ಅಜಮಾಯಿಷಿ ಬಗ್ಗೆ ಸರ್ಕಾರಿ ಹುದ್ದೆದಾರರಲ್ಲದ ಇತರರೂ ಸಹ ಕಳುಹಿಸಿದ್ದರು. ಈಪೈಕಿ ಬೇಸಾಯಗಾರರಿಂದ ೧೧ ಮಾದರಿ ಮಣ್ಣುಗಳು, ಇವರು ಮತ್ತು ವರ್ತಕರೂ ಸೇರಿ ಇವರುಗಳಿಂದ ೧೨ ಮಾದರಿ ಗೊಬ್ಬರಗಳು, ೧೧ ಮಾದರಿ ಆಹಾರ ಪದಾರ್ಥಗಳು, ೩ ಮಾದರಿ ನೀರು, ಈ ಮೇರೆ ಅಜಮಾಯಿಷಿಗೆ ಬಂದಿದ್ದವು.

ಒಂದು ನಿರ್ದಿಷ್ಟವಾದ ಭೂಮಿಯಲ್ಲಿ ಹತ್ತಿಬೆಳೆಯು ಬಲಿಯುವದರಲ್ಲಿ ಅನಾನುಕೂಲ ಕಂಡುಬಂದ ಕಾರಣ ಈವಿಚಾರವನ್ನು ಅಜಮಾಯಿಷಿ ಮಾಡಲಾಯಿತು. ಈಭೂಮಿಯ ಮಣ್ಣನ್ನು ಅಜಮಾಯಿಷಿ ಮಾಡಲಾಗಿ ಹತ್ತಿಬೆಳೆಗೆ ಲಾಯಖಾದ ಇತರ ಜಮೀನುಗಳಂತೆಯೇ ಇದು ಸಾರವತ್ತಾಗಿರುವಂತೆ ಕಂಡುಬಂತು. ಆದರೆ ಈ ಭೂಮಿಯಲ್ಲಿ ಕಂಕರು ಇತರ ಜಮೀನುಗಳಲ್ಲಿರುವಂತೆ ಹೆಂಟೆ ಹೆಂಟೆಯಾಗಿಲ್ಲದೆ ಪುಡಿಪುಡಿ ಯಾಗಿತ್ತು. ಕಂಕರು ಪುಡಿಪುಡಿಯಾಗಿರುವ ಕಾರಣ ಈ ಭೂಮಿಯು ಮಳೆ ಬಂದು ಒಣಗಿದನಂತರ ಮಣ್ಣು ಒತ್ತಾಗಿ ಕೂತು ಗಡಸಾಗುವದು. ಇದರಿಂದ ಹತ್ತಿಗಿಡದ ಬೇರುಗಳು ಸಲೀಸಾಗಿ ಭೂಮಿಯಲ್ಲಿಳಿಯುವದಕ್ಕೆ ಅನಾನುಕೂಲವಾಗಿರಬಹುದಾಗಿ ತೋರಿತು.

ಅಹಮುದಾಬಾದಿನ ಸಾಗುವಳಿಗುಪಯೋಗಿಸುತ್ತಿರುವ ಭಾವಿ ನೀರಿನ ಕೆಲವು ಮಾದರಿಗಳನ್ನು ಅಜಮಾಯಿಷಿ ಮಾಡಲಾಯಿತು. ಈ ನೀರಿನ ಉಪಯೋಗದಿಂದ ಜಮೀನಿನ ಹುಲುಸು ಕಮ್ಮಿಯಾಗುತ್ತಾ ಬಂದಿದೆ ಎಂದು ಅಲ್ಲಿನ ರೈತರ ಅನುಭವದಲ್ಲಿ ಗೊತ್ತಾಗಿರುತ್ತೆ. ಅಜಮಾಯಿಷಿಯಲ್ಲಿ ಈ ನೀರಿನಲ್ಲಿ ವಿಶೇಷ ಕ್ಷಾರವಿರುವದು ಗೋಚರವಾಯಿತು; ಮತ್ತು ಜಮೀನು ಮೇಲ್ಕಂಡಂತೆ ಕೆಡುವದಕ್ಕೆ ಇದೇ ಕಾರಣ.

ಅಜಮಾಯಿಷಿಗೆ ಬಂದಿದ್ದ ಕುಸುಂಬೆ ಹಿಂಡಿಗಳಲ್ಲಿ ಸುಮಾರು ಶೇಕಡ ೪೦ರಷ್ಟು ರಸವತ್ತಾದ ಪದಾರ್ಥಗಳಿದ್ದವು. ಒಂದು ರಖಂನಲ್ಲಿ ಸುಮಾರು ಶೇಕಡ ೧೭ರಷ್ಟು ಎಣ್ಣೆ ಇತ್ತು.

ಈಜಿಪ್ಟ ದೇಶದ ಹತ್ತಿ ಬೀಜ ಮತ್ತು ಇಂಡಿಯಾ ದೇಶದ ಹತ್ತಿ ಬೀಜಗಳನ್ನು ಪರೀಕ್ಷಿಸಿ ನೋಡಿದ್ದರಲ್ಲಿ ಈಜಿಪ್ಟ ಹತ್ತಿಬೀಜದಲ್ಲಿ ಶೇಕಡ

೨೫ರಷ್ಟು ಎಣ್ಣೆಯು ಈ ದೇಶದ ಬೀಜದಲ್ಲಿ ಶೇಕಡ ೧೭ರಷ್ಟು ಎಣ್ಣೆಯು ಇರುವದಾಗಿ ಕಂಡುಬಂತು. ಇದೂ ಅಲ್ಲದೆ ಈಜಿಪ್ಟ ಹತ್ತಿಬೀಜಕ್ಕೆ ಅರಳೆ ಅಂಟಿರಲಿಲ್ಲ. ಈ ದೇಶದ ಬೀಜದಲ್ಲಿ ಬಹಳ ಅರಳೆ ಅಂಟಿತ್ತು.

ಮಿಲಿಟರಿ ಇಲಾಖೆಯಿಂದ ನಲಾಯಖೆಂತ ತ್ಯಜಿಸಿದ್ದ ಒಂದು ರಖಂ ತವುಡನ್ನು ಅಜಮಾಯಿಷಿ ಮಾಡಿದ್ದರಲ್ಲಿ ಇದರಲ್ಲಿ ವಿಶೇಷ ಹೊಟ್ಟು ಅಥವಾ ಹುಲ್ಲು ಇರಲಿಲ್ಲ. ಪರಂತು ಇದು ಸ್ವಲ್ಪ ಹುಳಿಯಾಗಿತ್ತು ಮತ್ತು ದುರ್ನಾತ ಬಡಿಯುತ್ತಿತ್ತು. ಇದನ್ನು ತ್ಯಜಿಸುವದಕ್ಕೆ ಇದೇ ಸಾಕಾದ ಕಾರಣ.

ಅಕ್ಕಿ ತವುಡು ದನಗಳಿಗೆ ಬಹಳ ಒಳ್ಳೇ ಮೇವು. ಇದರಲ್ಲಿ ಶೇಕಡ ೧೩ರಕ್ಕೂ ಹೆಚ್ಚಾಗಿ ರಸವತ್ತಾದ ಪದಾರ್ಥಗಳು ಮತ್ತು ಶೇಕಡ ೧೬ರಷ್ಟು ಕೊಬ್ಬು ಇರುತ್ತೆ.

ಎಳ್ಳು ರಖಂಗಳನ್ನು ಅಜಮಾಯಿಷಿ ಮಾಡಿದ್ದರಲ್ಲಿ ಕಪ್ಪು ಎಳ್ಳಿನಲ್ಲಿ ಶೇಕಡ ೫೦.೫೩, ಬಿಳಿ ಎಳ್ಳಿನಲ್ಲಿ ಶೇಕಡ ೫೫.೫ರಿಂದ ೫೮ ವರೆಗೂ ಮತ್ತು ಕೆಂಪು ಎಳ್ಳಿನಲ್ಲಿ ಶೇಕಡ ೫೪ರಿಂದ ೫೫ ವರೆಗೂ ಎಣ್ಣೆ ಇರುವದಾಗಿ ಕಂಡುಬಂತು.

ಅನೇಕ ರಖಂ ನೆಲಗಡ್ಲೆಕಾಯಿಗಳನ್ನು ಪರೀಕ್ಷಿಸಿ ನೋಡಿದ್ದರಲ್ಲಿ, ಇದರಲ್ಲಿ ಶೇಕಡ ೪೦ರಿಂದ ೫೧ರ ವರೆಗೂ ಎಣ್ಣೆ ಇರುವದಾಗಿ ಗೊತ್ತಾಗುತ್ತೆ. ಪಾಂಡಿಚೆರಿ ಕಾಯಿಯಲ್ಲಿ ಹೆಚ್ಚು ಎಣ್ಣೆ ಇರುವದಾಗಿ ತೋರಿತು. ಆದರೆ ಸಾಮಾನ್ಯವಾಗಿ ಎಲ್ಲಾ ರಖಂಗಳಲ್ಲೂ ಎಣ್ಣೆಯ ಅಂಶವು ಸ್ವಲ್ಪ ಹೆಚ್ಚು ಕಡಿಮೆ ಒಂದೇಸಮನಾಗಿತ್ತು.

ಗೊಬ್ಬರಗಳ ಪರಿಶೋಧನೆಯಲ್ಲಿ ಈಕೆಳಗೆ ಕಂಡ ಫಲಿತಾಂಶವು ತೋರಿರುತ್ತೆ.

| ಗೊಬ್ಬರದ ರಖಂ. | | ಇದರಲ್ಲಿ ಶೇಕಡಾ ಎಷ್ಟು ನೈಟ್ರೋಜನ್ ಇರುತ್ತೆ. |
|---|---|---|
| ಮೀನು ಗೊಬ್ಬರ | ... | ೫.೯೩. |
| ಒಣಗಿದ ರಕ್ತ | ... | ೧೦ |
| ಬೇವಿನ ಸೊಪ್ಪು | ... | ೨.೨. |
| ಬೇವಿನ ಹಿಂಡಿ | ... | ೭.೦. |

| ಗೊಬ್ಬರದ ರಖಂ | | ಇದರಲ್ಲಿ ಶೇಕಡಾ ಎಷ್ಟು ನೈಟ್ರೋಜನ್ ಇರುತ್ತೆ. |
|---|---|---|
| ಗ್ರಾಮಸಾರ | ... | ·೪೦. |
| ಕುಸುಂಬೆ ಹಿಂಡಿ | ... | ೧·೬೫—೭·೬. |
| ಹರಳು ಹಿಂಡಿ | ... | ೪ — ೫. |
| ಕೊಬರಿ ಹಿಂಡಿ | ... | ೩·೮೪. |
| ಇಪ್ಪೆಹಿಂಡಿ | ... | ೧·೬. |

## Sugarcane Borer. *

## ಕಬ್ಬಿಗೆ ಬೀಳುವ ಹುಳ.

ಕಬ್ಬು, ಜೋಳ ಮತ್ತು ಮುಸುಕಿನಜೋಳ, ಈ ಪೈರುಗಳಿಗೆ ಒಂದು ತರಹದ ಹುಳ ಬೀಳುತ್ತದೆ. ಇದು ದಂಟನ್ನು ಕೊರೆಯುವದರಿಂದ ಪೈರು ಬಹಳ ನಷ್ಟವಾಗುತ್ತದೆ. ಇದು ಬಿಳೀಹುಳ ಮತ್ತು ಒಂದು ಅಂಗುಲ ಉದ್ದವಾಗಿರುತ್ತದೆ. ಇದನ್ನು ಸಾಮಾನ್ಯವಾಗಿ ಎಳೆ ಕಬ್ಬಿನಲ್ಲಿ ನೋಡಬಹುದು. ಕಬ್ಬಿನ ಪೈರು ಚಿಗರಿದ ಕೂಡ್ಲೆ ಇದು ಅನೇಕ ವೇಳೆ ನರಟಿ ಹೋಗಿರುವದನ್ನು ಎಲ್ಲರೂ ನೋಡಿರಬಹುದು. ಈ ಚಿಗರನ್ನು ಕಿತ್ತು ನೋಡಿದರೆ ಹುಳುವು ಗಿಡದ ದಂಟಿನ ಮಧ್ಯೆ ತಿಂದು ಮೇಲಕ್ಕೂ ಕೆಳಕ್ಕೂ ಒಂದು ಸಣ್ಣ ರಂಧ್ರವನ್ನು ಮಾಡಿರುವದರಿಂದ ಹೀಗಾಗುವದಕ್ಕೆ ಕಾರಣವಾಯಿತೆಂಬುವದು ಚನ್ನಾಗಿ ಗೊತ್ತಾಗುತ್ತದೆ. ಹುಳುವು ದಂಟಿನಲ್ಲಿ ಪ್ರವೇಶಮಾಡಿದ ಸಣ್ಣ ದ್ವಾರವನ್ನು ನೋಡಬಹುದು.

ಈ ಹುಳುಗಳ ಬಾಧೆಯನ್ನು ತಪ್ಪಿಸುವದಕ್ಕೆ ಈ ಕೆಳಗೆ ಕಂಡ ಕೆಲವು ಸಾಮಾನ್ಯ ಪರಿಹಾರಗಳನ್ನು ಮಾಡಬಹುದು.

(೧) ನರಟಿದ ಚಿಗರುಗಳನ್ನು ಕತ್ತರಿಸಿ ಅಥವಾ ಚಾಕುನಿಂದ ಕೆಳಗಿನ ತನಕ ಕೊಯಿದು ಸುಟ್ಟುಬಿಡಬೇಕು. ಏಕಂದರೆ, ಇವು ಪುನಃ ಚಿಗರುವದಿಲ್ಲವಾದಕಾರಣ ರೈತನಿಗೆ ಇದರಿಂದ ನಷ್ಟವೇನೂ ಇಲ್ಲ. ಆದರೆ ಇವುಗಳನ್ನು ಕತ್ತರಿಸದೇನೆ ಬಿಟ್ಟರೆ ಹುಳುಗಳು ಇತರ ಒಳ್ಳೇಸ್ಥಿತಿಯಲ್ಲಿರುವ ಚಿಗರುಗಳಿಗೂ ಹರಡುತ್ತವೆ.

---

* ಬೊಂಬಾಯಿ ವ್ಯವಸಾಯ ಇಲಾಖೆಯ ಲೀಫ್ಲೆಟ್ ನಂ. ೪, ೧೯೦೮.

(೨) ಕಟಾವಾದನಂತರ ಜೋಳ ಮತ್ತು ಮುಸುಕಿನಜೋಳಗಳ ಕೂಳೆಯನ್ನು ಬೇರು ಸಹಿತ ಕಿತ್ತು ಸುಟ್ಟುಬಿಡಬೇಕು. ಏಕಂದರೆ, ಹುಳುಗಳು ಇದರಲ್ಲಿ ವರ್ಷ ವರ್ಷ ಜೀವಿತವಾಗಿರುತ್ತವೆ. ಈ ಪದ್ಧತಿಯು ನ್ನು ಎಲ್ಲರೂ ಅನುಸರಿಸಿದರೆ ಹುಳುಗಳು ನಿರ್ಮೂಲವಾಗುವುವು.

(೩) ನವಂಬರು, ಡಿಸಂಬರು ಮತ್ತು ಜನವರಿ ತಿಂಗಳುಗಳಲ್ಲಿ ಈ ಹುಳುಗಳು ಅಷ್ಟು ಕಾಣಿಸಿಕೊಳ್ಳುವದಿಲ್ಲವಾದಕಾರಣ ನವಂಬರು ಡಿಸಂಬ ರು ತಿಂಗಳಲ್ಲಿ ಕಬ್ಬಿನ ಪೈರು ಹಾಕಿದರೆ ಹುಳುಗಳು ಕಾಣಿಸಿಕೊಳ್ಳುವ ದರೊಳಗಾಗಿ ಪೈರು ಬಲಿತು ಹುಳುವು ಬಿದ್ದಾಗ್ಯೂ ಕೂಡ ಬಹಳವು ಟ್ಟಿಗೆ ತಡಿಯುವಷ್ಟು ಶಕ್ತಿಯುಳ್ಳದ್ದಾಗಿರುತ್ತದೆ.

(೪) ಹುಳವು ಕಬ್ಬಿಗಿಂತ ಮುಸುಕಿನಜೋಳಕ್ಕೆ ಬೀಳುವದು ವಿಶೇಷವಾದ್ದರಿಂದ ಕಬ್ಬಿನ ಗದ್ದೆಯಲ್ಲಿ ಮುಸುಕಿನಜೋಳವನ್ನು ಅಲ್ಲಲ್ಲಿ ಚಲ್ಲಿ ೨ ತಿಂಗಳು ನಂತರ ಜೋಳದ ಕಡ್ಡಿಗಳನ್ನು ಕೊಯಿದು ದನಗಳಿಗೆ ಹಾಕಬಹುದು. ಈರೀತಿ ಮಾಡುವದು ಕಬ್ಬು ಬೆಳೆಯುವವರಿಗೆ ಫಾಯಿ ದೆಕರವಾಗಿರುತ್ತದೆ.

ಈ ಬೋರರ್ (Borer) ಹುಳುವಿನಿಂದ ಆಗುವ ಲುಕ್ಸಾನವನ್ನು ಅಂದಾಜು ಮಾಡುವದು ಕಷ್ಟ. ಕೆಟ್ಟ ವರ್ಷಗಳಲ್ಲಿ ಈ ಹುಳುವಿನ ಕಾ ಟದಿಂದ ಹೊಲಗಳಲ್ಲಿ ಜೋಳದ ಪೈರೇ ನಷ್ಟವಾಗಿರುವದು ಗೋಚರಕ್ಕೆ ಬಂದಿರುತ್ತೆ.

---

## President's Address at the Indian Industrial Conference of 1908.

## ೧೯೦೮ನೆ ಇಸವಿಯ ಇಣ್ಡಿಯನ್ ಇಣ್ಡಸ್ಟ್ರಿಯಲ್ ಕಾನ್ಫರೆನ್ಸ್ ಪ್ರೆಸಿಡೆಂಟರವರ ಉಪನ್ಯಾಸ.

ಈವರುಷ ಮದರಾಸಿನಲ್ಲಿ ನಡೆದ ಇಂಡಸ್ಟ್ರಿಯಲ್ ಕಾನ್ಫರೆನ್ಸಿನ ಪ್ರೆ ಸಿಡೆಂಟರವರು ತಿಳಿಸಿದ ಈದೇಶದ ವ್ಯವಸಾಯದಲ್ಲಿ ಕಂಡುಬರುವ ನ್ಯೂನತೆ ಗಳನ್ನು ಹೋದ ಸಂಚಿಕೆಯಲ್ಲಿ ನಮೂದಿಸಿಧೆಯಷ್ಟೆ. ಈ ನ್ಯೂನತೆಗಳ

* ಇಣ್ಡಿಯನ್ ಅಗ್ರಿಕಲ್ಚರಿಸ್ಟ್ ೧—೧—೯.

ನ್ನು ಸರಿಪಡಿಸುವದಕ್ಕೆ ಇವರು ಹೇಳಿರುವ ಕೆಲವು ಸಲಹೆಗಳನ್ನು ಈಗ ತಿಳಿಸುತ್ತೇವೆ. ಸಾಮಾನ್ಯ ಜಿರಾಯಿತುದಾರನ ಯೋಗ್ಯತೆಗೂ ಚೈತನ್ಯಕ್ಕೂ ಮೀರದ ಕೆಲವು ನೂತನ ಕ್ರಮಗಳನ್ನು ಆಚರಣೆಗೆ ತಂದದ್ದೇ ಆದರೆ ಜಮೀನು ಉತ್ಪತ್ತಿಯನ್ನು ಹೆಚ್ಚಿಸಬಹುದಲ್ಲದೆ ಉತ್ತಮ ತರಹೆ ಫಸಲನ್ನು ಸಹಾ ಬೆಳೆಯಬಹುದೆಂದು ಈಚಿಗೆ ಸರ್ಕಾರದವರು ಮತ್ತು ಖಾಸಗಿ ಜನರು ನಡೆಸಿರುವ ಅಜಮಾಯಿಷಿಗಳಿಂದ ಗೊತ್ತಾಗುತ್ತೆ. ಆದರೆ ವಿದ್ಯಾವಂತರಾದ ಮುಖಂಡರೂ ಮತ್ತು ಸರ್ಕಾರಿ ನೌಕರರೂ ಕಲಿತು ಅಜಮಾಯಿಷಿಗಳ ಫಲಿತಾಂಶಗಳನ್ನು ವಿಶೇಷ ಪ್ರಚಾರಕ್ಕೆ ತರುವದರಲ್ಲಿ ಹೆಚ್ಚು ಶ್ರದ್ಧೆಯನ್ನು ವಹಿಸಬೇಕು ಮತ್ತು ಜಮೀನುದಾರರಿಗೂ ರೈತರಿಗೂ ಬೇಕಾದ ದ್ರವ್ಯಾನುಕೂಲಗಳನ್ನು ಕಲ್ಪಿಸಬೇಕು. ನಿದರ್ಶಕರು ಗ್ರಾಮದಿಂದ ಗ್ರಾಮಕ್ಕೆ ಸಂಚರಿಸುತ್ತಾ ಎಕ್ಸ್ಪೆರಿಮೆಂಟಲ್ ಫಾರಂಗಳಲ್ಲೂ ಡೆಮಾನ್ಸ್ಟ್ರೇಷನ್ ಫಾರಂಗಳಲ್ಲೂ ನಡೆಯುವ ಅಜಮಾಯಿಷಿಗಳ ಫಲಿತಾಂಶಗಳನ್ನು ಗ್ರಾಮಸ್ಥರಿಗೆ ಬೋಧಿಸುವದೇ ಅಲ್ಲದೆ ಸದರಿ ಅಜಮಾಯಿಷಿ ಕ್ರಮಗಳನ್ನು ಮಾಡಿ ತೋರಿಸಬೇಕು. ಇಂಥಾ ಫಾರಂಗಳನ್ನು ಇನ್ನೂ ಹೆಚ್ಚಿಸುವದು ಅವಶ್ಯಕ. ವ್ಯವಸಾಯಕ ಸಂಘಗಳು ಈಗಿನಗಿಂತಲೂ ಹೆಚ್ಚು ಶ್ರದ್ಧೆಯಿಂದ ಕೆಲಸ ಮಾಡಬೇಕಲ್ಲದೆ ಉಪಸಂಘಗಳನ್ನು ಒಂದೊಂದು ಗ್ರಾಮದಲ್ಲೂ ಕನಿಷ್ಟಪಕ್ಷ ಒಂದೊಂದು ತಾಲ್ಲೂಕಿನಲ್ಲಾದರೂ ಸ್ಥಾಪಿಸಬೇಕು. ಬೀಜವನ್ನು ಹುಷಾರಾಗಿ ಚುನಾಯಿಸುವದು, ಆಯಾಯ ಸ್ಥಳಕ್ಕೂ ಹವಾಕ್ಕೂ ಅನುಕೂಲವಾದ ಶ್ರೇಷ್ಠರಕಂ ಬೆಳೆಗಳನ್ನು ರೂಢಿಯಲ್ಲಿ ತರುವದು, ದನವಿನ ಗೊಬ್ಬರದ ಫಲವನ್ನು ಪೂರಾ ಹೊಂದುವ ರೀತಿ ಉಪಯೋಗಿಸುವದು, ಸುಲಭಬೆಲೆಯುಳ್ಳ ಒಳ್ಳೆ ಜಿರಾಯಿತು ಉಪಕರಣಗಳನ್ನು ರೂಢಿಯಲ್ಲಿ ತರುವದು, ಪೈರುಗಳನ್ನು ಬೆಳೆಯುವದರಲ್ಲಿ ಪರಿವರ್ತನೆ ಕ್ರಮವನ್ನು ಅನುಸರಿಸುವದಲ್ಲದೆ ದ್ವಿದಳ ಧಾನ್ಯಗಳನ್ನು ಕ್ರಮವಾಗಿ ವ್ಯವಸಾಯ ಮಾಡುವದು, ಇವೇ ಮೊದಲಾದವುಗಳನ್ನು ಆಚರಣೆಗೆ ತರುವದರಲ್ಲಿ ರೈತನಿಗೆ ಈಗಿನಗಿಂತಲೂ ಹೆಚ್ಚು ಶ್ರಮವೇನೂ ಆಗುವದಾಗಿಲ್ಲ. ಈಚಿಗೆ ನಡೆದಿರುವ ಅನ್ವೇಷಣಗಳನ್ನು ಜನಗಳತಿಳುವಳಿಕೆಗೆ ತಂದು ಅವರು ಹೆಚ್ಚು ಶ್ರಮಪಟ್ಟು ಕೆಲಸ ಮಾಡುವಂತೆ ಮಾಡುವದೆ ಸಧ್ಯದಲ್ಲಿ

ನಮ್ಮ ಮುಖ್ಯ ಕರ್ತವ್ಯವಾಗಿರುತ್ತದೆ. ವರ್ಷ ವರ್ಷವೂ ಹೆಚ್ಚುತ್ತಿರುವ ಹತ್ತಿಬೀಜ ಮತ್ತು ಎಣ್ಣೆ ಬೀಜಗಳ ರಫ್ತುವ್ಯಾಪಾರವೇ ಈ ದೇಶದಲ್ಲಿ ಸರ್ವೋತ್ತಮವಾದ ಗೊಬ್ಬರ ಮತ್ತು ದನಗಳ ಆಹಾರವು ಕಡಿಮೆಯಾಗುವದಕ್ಕೆ ಕಾರಣವಾಗಿರುವದು. ಇಲ್ಲಿನ ಎಣ್ಣೆ ತಯಾರಿಯನ್ನು ಅಭಿವೃದ್ಧಿಪಡಿಸುವದರಮೂಲಕ ಈ ಅನಾನುಕೂಲವನ್ನು ಬಹಳಮಟ್ಟಿಗೆ ಹೋಗಲಾಡಿಸಬಹುದು. ಇಂಡಿಯಾ ದೇಶದ ಜಮೀನಿನಲ್ಲಿ ರಂಜಕ ಸಂಬಂಧವಾದ ಉಪ್ಪುಗಳು (Phosphates) ಕಮ್ಮಿ. ಈ ನ್ಯೂನತೆಯನ್ನು ಎಲುಬು ಗೊಬ್ಬರದ ಉಪಯೋಗದಿಂದ ತಪ್ಪಿಸಬಹುದು. ಆದರೆ ಸಾಲ್ಬಸಾಲ್ ಸುಮಾರು ೫೫ ಲಕ್ಷ ರೂಪಾಯಿಗಳ ಎಲುಬು ಅನ್ಯದೇಶಗಳಿಗೆ ಸಾಗಿ ಹೋಗುತ್ತಿದೆ. ಈ ದೇಶದಲ್ಲಿ ರಸಾಯನ ಕೈಗಾರಿಕೆಗಳನ್ನು ಸ್ಥಾಪಿಸಿ ಸಲ್ಫ್ಯೂರಿಕ್ ಆಸಿಡ್ (Sulphuric acid) ದ್ರಾವಕವನ್ನು ಅಗ್ಗವಾಗಿ ಒದಗಿಸಿದ್ದೇ ಆದರೆ ಈ ಮೂಲಕ ಎಲುಬನ್ನು ತಕ್ಕಷ್ಟು ಅಗ್ಗವಾದ ಗೊಬ್ಬರವನ್ನಾಗಿ ಮಾಡಬಹುದು. ಇದರಿಂದ ವ್ಯವಸಾಯೋನ್ನತಿಯಲ್ಲಿ ಹೆಚ್ಚು ಸಹಾಯ ಮಾಡಿದಂತಾಗುತ್ತದೆ.

---

## Rat Skin Industry. *
## ಇಲಿ ಚರ್ಮದ ಉಪಯೋಗಗಳು.

ಇಲಿಯ ಚರ್ಮವು ಅನೇಕ ಕೈಗಾರಿಕೆ ಕಸಬುಗಳಲ್ಲಿ ಉಪಯೋಗಪಡುತ್ತದೆ. ಈ ಕಾರಣದಿಂದಲೇ ಲಂಡನ್ ಪಟ್ಟಣದಲ್ಲಿ ಪ್ರತಿ ವರ್ಷದಲ್ಲೂ ಸುಮಾರು ೫೦,೦೦೦ ಪೌನಿನಷ್ಟು (೭೫೦,೦೦೦ ರೂಪಾಯಿಗಳು) ಈ ಚರ್ಮದ ವ್ಯಾಪಾರ ನಡಿಯುತ್ತದೆ. ಇದು ಬುಕ್‌ಬೈಂಡಿಂಗ್, ಫೋಟೊ ಚೌಕಟ್ಟುಗಳು, ಸಣ್ಣಚೀಲಗಳು, ಹೆಂಗಸರು ಉಪಯೋಗಿಸುವ ಕೈಚೀಲಗಳ ಹೆಪ್ಪೆಟ್ಟುಗಳು, ಇವೇ ಮೊದಲಾದ ಇನ್ನೂ ಇತರ ಸಾಮಾನುಗಳ ತಯಾರಿಯಲ್ಲಿ ಉಪಯೋಗಪಡುತ್ತದೆ. ಡೆನ್ಮಾರ್ಕ್ ರಾಜ್ಯದಲ್ಲಿ ಹೋದ ವರುಷ ಬೇರೆ ಉದ್ಯೋಗವಿಲ್ಲದೆ ಇದ್ದವರು ಇದರಿಂದ ದಿನವೂ ೩—೩½ ಷಿಲಿಂಗುಗಳನ್ನು ಸಂಪಾದಿಸುತ್ತಲಿದ್ದರಂತೆ. ಇಲಿಗಳು ಇಂಗ್ಲೆಂಡಿನಲ್ಲಿ ವರ್ಷ ವರ್ಷ ಕೋಟ್ಯಾಂತರ ರೂಪಾಯಿಗಳ ನಷ್ಟವನ್ನುಂಟು

---

* ಇಂಡಿಯನ್ ಟ್ರೇಡ್ ಜರ್ನಲ್.—೧೧—೨—೦೯.

ಮಾಡುತ್ತಿವೆ. ಆಗಲೆ ಅನೇಕರು ಇವುಗಳ ಹಾವಳಿಯನ್ನು ತಪ್ಪಿಸುವ ಉದ್ದೇಶದಿಂದ ಇವನ್ನು ಹಿಡಿಯುವ ಉದ್ಯೋಗದಲ್ಲಿ ಪ್ರವೃತ್ತರಾಗಿರುತ್ತಾರೆ. ಅಲ್ಲದೆ ಇಂಗ್ಲೆಂಡಿನಲ್ಲಿ ದೊಡ್ಡ ಕಪ್ಪೆಗಳ ಚರ್ಮಕ್ಕೂ ಕೂಡ ವಿಶೇಷ ಗಿರಾಕಿ ಉಂಟು; ಮತ್ತು ಇದು ಇಲ್ಲಿಗೆ ಒಣಗಿದ ಸ್ಥಿತಿಯಲ್ಲಿ ಬರುತ್ತಿದೆ. ಇಂಡಿಯಾ ದೇಶದಲ್ಲಿ ಈ ಚರ್ಮವನ್ನು ಜಮಾಯಿಸುವದಾದರೆ ಇಲ್ಲಿನ ಗುಟ್ಟ ಬೆಟ್ಟಗಳಲ್ಲಿ ವಾಸಮಾಡುವ ಅನಾಗರೀಕರಾದ ಜನರಿಗೆ ಒಂದು ಲಾಭಕರವಾದ ಉದ್ಯೋಗವು ದೊರೆಯುತ್ತದಲ್ಲದೆ, ಚರ್ಮವನ್ನು ರಫ್ತುಮಾಡುವ ವ್ಯಾಪಾರಿಗೂ ಸಹ ಒಳ್ಳೇ ಫಾಯಿದೇಕರವಾಗಿರುವದು. ಕಪ್ಪೆ ಚರ್ಮವು ಅದರ ದಪ್ಪಕ್ಕೆ ಬಹಳ ಘಟ್ಟಿಯಾದ ತೊಗಲಾಗುತ್ತದಂತೆ. ಜಂಗಲುಗಳು ಮತ್ತು ಸಾಗಿನಲ್ಲಿಲ್ಲದೆ ಇರುವ ಜಮೀನುಗಳಲ್ಲಿ ಕಾಡು ಕತ್ತಾಳೆ ನಾರನ್ನು ಜಮಾಯಿಸುವ ಕೀಳು ಜಾತಿಯ ಜನರು ಬಹಳ ಸ್ವಲ್ಪ ಲಾಗವಡಿನಿಂದ ಒಣಗಿದ ಇಲಿ ಮತ್ತು ಕಪ್ಪೆ ಚರ್ಮಗಳನ್ನು ಕೂಡಿಹಾಕಿ ವ್ಯಾಪಾರ ಮಾಡಬಹುದು.

———0———

## Utility of Chemistry in Tanning.
## ಚರ್ಮವನ್ನು ಹದಗೊಳಿಸುವಿಕೆ.

(By Mr. S. K. Venkatanarayana Iyer.)

ರಸಾಯನ ಶಾಸ್ತ್ರವು ಕೈಗಾರಿಕೆಗೆ ಮಾಡತಕ್ಕ ಮೊದಲನೆ ಸಹಾಯವು ಏನೆಂದರೆ.—

(೧) ಕೈಗಾರಿಕೆಗೆ ಉಪಯೋಗಿಸುವ ಪದಾರ್ಥಗಳ ಸ್ವಭಾವ ಮತ್ತು ಗುಣ.

(೨) ಯಾವ ಪರಿಮಾಣದಲ್ಲಿ ಆ ಪದಾರ್ಥಗಳನ್ನು ಉಪಯೋಗಿಸಬೇಕು.

(೩) ಇದುವರಿವಿಗೂ ಆಚರಣೆಯಲ್ಲಿರತಕ್ಕ ಕೈಗಾರಿಕೆಯ ವಿಧಾನದ ನಿಯಮಗಳನ್ನು ವಿವರಿಸತಕ್ಕವೆಂಬಿವ್ರಗಳ

ಚರ್ಮವನ್ನು ಹದಗೊಳಿಸಬೇಕಾದರೆ ಮೊದಲು ಅನುಸರಿಸಬೇಕಾದ ವಿಧಾನವು.

ಕಟುಗರವನ ಅಂಗಡಿಯಿಂದ ಬರತಕ್ಕ ಚರ್ಮದಲ್ಲಿರುವ ರಕ್ತ ಮತ್ತು ಕೊಳೆಯನ್ನು ತಣ್ಣೀರಿನಲ್ಲಿ ತೊಳೆಯಬೇಕಾದರೆ ಚರ್ಮವನ್ನು ಒಂ

ಡು ಕಷಾಯಿಯಲ್ಲಿರುವ ನೀರಿನಲ್ಲಿ ಕೆಲವು ಘಂಟೆಗಳಕಾಲ ತೊಯಿಸುತ್ತಾರೆ. ಮದ್ರಾಸಿನಲ್ಲಿರುವ ಕೈಗಾರಿಕೆಯ ಡೈರೆಕ್ಟರಾದ ಮೆ|| ಚಾಟರ್ಜೀ ಯವರು ಹೇಳುವದೇನೆಂದರೆ, ಒಂದು ಪ್ರಾಣಿ ಸತ್ತಕೂಡಲೆ ಅದನ್ನು ನೆರಳಾಗಿರತಕ್ಕ ತಂಪುಳ್ಳ ಸ್ಥಳಕ್ಕೆ ತೆಗದುಕೊಂಡುಹೋಗಿ ಚರ್ಮವನ್ನು ಸರಿಯಾಗಿ ಆ ಮೃಗದಿಂದ ಸುಲಿದು ತಣ್ಣೀರಿನಲ್ಲಿ ರಕ್ತ ಮತ್ತು ಇತರ ಕೊಳೆಗಳನ್ನು ತೊಳೆದು ಬಿಸಲಿನಲ್ಲಿ ಚೆನ್ನಾಗಿ ಒಣಗಿಸಬೇಕು. ಚರ್ಮವು ಚೆನ್ನಾಗಿ ಒಣಗದಿದ್ದರೆ ದುರ್ವಾಸನೆ ಹುಟ್ಟುವದಲ್ಲದೆ ಕೂದಲು ಸಹ ಉದುರಿಹೋಗುವುದು. ಉಪ್ಪುನೀರಿನಲ್ಲಿ ಚರ್ಮದ ಒಳಭಾಗವನ್ನು ಅದ್ದಿ ತಿಕ್ಕುತ್ತಾರೆ. ಮತ್ತೆ ಕೆಲವರು ಭೂಮಿಯಮೇಲೆ ಚರ್ಮವನ್ನು ಹರಡಿ ಅದರಮೇಲೆ ಉಪ್ಪುನೀರನ್ನು ಚಿಮುಕಿಸಿ ತಿಕ್ಕುತ್ತಾರೆ. ತರುವಾಯ ಚರ್ಮವನ್ನು ಮಡಿಚಿ ನೆರಳಾದ ಒಂದು ಸ್ಥಳದಲ್ಲಿ ಒಣಗುವದಕ್ಕೆ ಬಿಡುತ್ತಾರೆ. ಅದು ಸಂಪೂರ್ಣವಾಗಿ ಒಣಗಿದಾಗ ನೆಲದಮೇಲೆ ನಾಲ್ಕು ಗೂಟಗಳನ್ನು ಬಡದು ಅವುಗಳಿಗೆ ಇದನ್ನು ಬಿಗಿದು ಎರಡನೆ ದಫೆ ಉಪ್ಪು ಕರಗಿದ ನೀರನ್ನು ಹಾಕುತ್ತಾರೆ. ಅದು ಸಂಪೂರ್ಣವಾಗಿ ಒಣಗಿದ ತರುವಾಯ ನಾಪ್ಥಲೀನ್ (Naphthalene) ಮಂಣು ತೈಲದಿಂದ ಚಿಮುಕಿಸಿ ಕೂದಲು ಒಳಗೆ ಬರುವಂತೆ ಮಧ್ಯಕ್ಕೆ ಸರಿಯಾಗಿ ಮಡಿಸಿ ಒಣಗಿಸಿ ಸುರಳಿಸುತ್ತಿ ಕಟ್ಟುತ್ತಾರೆ. ಮತ್ತು ಕೆಲವರು ಫಾರ್ಮಿಕ್ ದ್ರಾವಕದಲ್ಲಿ (Formic Acid) ಅರ್ಧಘಂಟೆವರಿಗೂ ಚರ್ಮವನ್ನು ತೋಯಿಸಿ ಉಪ್ಪುಕರಗಿದ ನೀರನ್ನು ಉಪಯೋಗಿಸುತ್ತಾರೆ. ಇನ್ನೂ ಕೆಲವರು ಸೋಡಿಯಂ ಆರಿಸಿನೈಟ್ (Sod um Arsenite) ೧ ಭಾಗ, ೧೦ ಭಾಗ ನೀರು, ಈ ಪರಿಮಾಣದಲ್ಲಿ ಬೆರಸಿದ ನೀರನ್ನು ಚರ್ಮದ ಒಳಭಾಗಕ್ಕೆ ಹಾಕುತ್ತಾರೆ. ಹೀಗೆ ಮಾಡುವದಕ್ಕೆ ಮುಂಚೆ ಉಪ್ಪು ಕರಗಿದ ನೀರನ್ನು ಚಿಮುಕಿಸಿ ಒಣಗಿಸಿ ತರುವಾಯ ಇದನ್ನು ಹಾಕಬೇಕು.

ಕ್ರೋಂ ಹದಗೊಳಿಸುವಿಕೆಯನ್ನು (Chrome Tanning) ೨ ದೊಡ್ಡ ಮಡಿಕೆಯಲ್ಲಿ ಬಹಳ ಸುಲಭವಾಗಿ ೨ ದಿನಗಳಲ್ಲಿ ಜಿಂಕೆ, ಚಿರತೆ, ಹುಲಿ, ಮುಂತಾದ ಪ್ರಾಣಿಗಳ ಚಕ್ಕಳಕ್ಕೆ ಮಾಡಬಹುದು. ಈರೀತಿಯಾಗಿ ಸರ್ಪದ ಚರ್ಮವನ್ನು ಸಹ ಹದಗೊಳಿಸುತ್ತಾರೆ. ಟ್ಯಾನೋಲೀನ್ ಪೌಡರ್

ಬೆರಸಿರುವ ನೀರಿನಲ್ಲಿ ಸಹಾ ಹದಗೊಳಿಸುತ್ತಾರೆ. ಎತ್ತು ಹಸು ಮುಂತಾದ ಪ್ರಾಣಿಗಳ ಚರ್ಮವನ್ನು ೩—೪ ದಿನಗಳವರಿವಿಗೆ ನೀರಿನಲ್ಲಿ ತೋಯಿಸಿ ನಾಲ್ಕಾರು ಕಡಾಯಿಗಳಲ್ಲಿ ತೊಳೆಯುತ್ತಾರೆ. ಚರ್ಮವು ಕೊಳೆಯದಿರುವದಕ್ಕೆ ತಕ್ಕ ಅನುಕೂಲತೆಗಳನ್ನು ಕಲ್ಪಿಸಿರುತ್ತಾರೆ. ೧೦೦ ಭಾಗ ನೀರಿನಲ್ಲಿ ೧| ಭಾಗ ಸುಣ್ಣ ಬೆರಸಿ ಬರುವ ತಿಳಿನೀರನ್ನು ಚರ್ಮದಮೇಲೆ ಹಾಕುತ್ತಾರೆ. ಇದರಿಂದ ಕೂದಲು ಮುಂತಾದ್ದು ಉದುರಿಹೋಗುವದು, ಚರ್ಮವೂ ಕೊಳೆಯುವದಿಲ್ಲ. ಚೆನ್ನಾಗಿ ಹದಗೊಳಿಸಲ್ಪಡುವದು.

---

ನಂ|| ೮—೨೫೫, ತಾ|| ೧೬—೨—೦೯.

ಮೈಸೂರು ಸರ್ವಿಸ್ ರೆಗ್ಯುಲೇಷನ್ಸ್ ೧೭೭ನೆ ಪ್ರಕರಣದಮೇರೆ ಅರಕಲಗೂಡು ತಾಲ್ಲೂಕು ಅಮಲ್ದಾರ್ ಮೆ|| ಯಂ. ಕೃಷ್ಣರಾಯರಿಗೆ ೧೯೦೯ನೆ ಇಸವಿ ಫಿಬ್ರವರಿ ತಾರೀಖು ೧೭ ಲಾಗಾಯಿತು ೧೫ ದಿನಗಳ ಪ್ರಿವಿಲೇಜು ರಜಾ ಮಂಜೂರ್ಮಾಡಿರುತ್ತೆ.

೨. ಅವರ ಗೈರ್‌ಹಾಜರಿಯಲ್ಲಿ ಹಾಸನ ಡಿಸ್ಟ್ರಿಕ್ಟ್ ಡೆಪ್ಯುಟಿ ಕಮಿಷನರ ಆಫೀಸ್ ಇಂಗ್ಲೀಷ್ ಹೆಡ್‌ಕ್ಲಾರ್ಕ್ ಜಿ. ಎಸ್. ರಾಮಸ್ವಾಮಿಯ್ಯಂಗಾರ್ರು ತಾಲ್ಲೂಕು ಛಾರ್ಜಿನಲ್ಲಿರತಕ್ಕದ್ದು.

---

## Notifications.

## ಇಸ್ತಿಹಾರ್‌ನಾಮೆಗಳು.

ನಂ|| ೮—೨೪೯, ತಾ|| ೧೬—೨—೦೯.

ಮೈಸೂರು ಸರ್ವಿಸ್ ರೆಗ್ಯುಲೇಷನ್ಸ್ ೧೭೭ನೆ ಪ್ರಕರಣದಮೇರೆ ಮೂಡಗೆರೆ ತಾಲ್ಲೂಕು ಆಕ್ಟಿಂಗ್ ಅಮಲ್ದಾರ್ ಮೆ|| ಕೆ. ಕೆ. ವೆಂಕಟಸ್ವಾಮಿಅಯ್ಯಂಗಾರ್ರವರಿಗೆ ೧೯೦೯ನೆ ಇಸವಿ ಫಿಬ್ರವರಿ ೧೫ನೆ ತಾ|| ಲಾಗಾಯಿತು ೧೫ ದಿನಗಳ ಪ್ರಿವಿಲೇಜ್ ರಜಾ ಮಂಜೂರ್ಮಾಡಿರುತ್ತೆ.

೨. ಅವರ ಗೈರಹಾಜರಿಯಲ್ಲಿ ತಾಲ್ಲೂಕು ಶಿರಸ್ತೇದಾರ್ ಟಿ. ಅಬ್ದುಲ್ ರಸೂಲ್‌ಯವರು ತಾಲ್ಲೂಕು ಛಾರ್ಜಿನಲ್ಲಿರತಕ್ಕದ್ದು.

---

## Occasional Notes.

## ವಿವಿಧ ವೃತ್ತಾಂತಗಳು.

೧. ರಬ್ಬರು ಬೀಜಗಳಲ್ಲಿ ಹಾಲು ಇಳಿಸಿದ ಗಿಡದ ಬೀಜ ಹಾಲು ಇಳಿಸದೇಯಿರುವ ಗಿಡದ ಬೀಜ, ಈವೈಕಿ ಯಾವದು ಉತ್ತಮವಾದದ್ದು ಮತ್ತು ಜಾಗ್ರತೆ ಮೊಳೆಯುತ್ತದೆ. ಎಂಬ ವಿಚಾರವಾಗಿ ಅಜಮಾಯಿಷಿಗಳು ನಡೆದದ್ದರಲ್ಲಿ ಹಾಲು ಇಳಿಸದೆ ಇರುವ ಗಿಡದ ಬೀಜಗಳನ್ನು ೨ ವಾರಕ್ಕಿಂತ ಹೆಚ್ಚಾಗಿ ಇಟ್ಟಿದ್ದರೆ ಮೊಳೆಯುವದೇ ಇಲ್ಲವೆಂತಲೂ ಮತ್ತು ಹಾಲು ಇಳಿಸಿದ ಗಿಡದ ಬೀಜಗಳು ಇವುಗಳಿಗಿಂತ ಜಾಗ್ರತೆಯಾಗಿಯೂ ಮತ್ತು ಬಹಳ ಹಲಾಕಾಗದೇಯೂ ಸ್ವಲ್ಪ ಹೆಚ್ಚು ಕಡಿಮೆ ಎಲ್ಲವೂ ಮೊಳೆಯುತ್ತವೆಂತಲೂ ಕಂಡುಬಂದಿರುತ್ತೆ. ಮೊಳೆಯುವ ವಿಚಾರದಲ್ಲಿ ಮಾತ್ರ ಈ ಎರಡು ತರಹೆ ಬೀಜಗಳಿಂದ ವೆತ್ಯಾಸ ಕಂಡು ಬಂದಿರುತ್ತದೆಯೇ ಶಿವಾಯಿ ಗಿಡಗಳ ಸ್ವಭಾವಗಳಲ್ಲಿ ಇನ್ನು ಯಾವ ವೆತ್ಯಾಸವೂ ಕಂಡುಬಂದಿರುವದಿಲ್ಲ.—ಕ್ಯೂರಾಯಲ್ ಬೊಟಾನಿಕಲ್ ಗಾರ್ಡನ್ ಬುಲೆಟಿನ್ ನಂ. ೪—೧೯೦೪.

---

೨. ಬಾಂಕು ಬತ್ತದ ಸಾಗುವಳಿಯು ಬಹಳ ಅನುಕೂಲವಾಗಿರುವಂತೆ ಕಾಣಬರುತ್ತದೆ. ಒಂದೊಂದೇ ಸಸಿ ನಾಟುವ ಪದ್ಧತಿಯನ್ನು ಅನೇಕವಾಗಿ ಅಜಮಾಯಿಷಿ ಮಾಡಿ ನೋಡಿದ್ದರಲ್ಲಿ ಬಹಳ ಅನುಕೂಲ ಕಂಡುಬಂದಿರುತ್ತದೆ. ಆದರೆ ಇದರ ಅನುಕೂಲತೆಯ ವಿಚಾರದಲ್ಲಿ ನಿಸ್ಸಂದೇಹವಾಗಿ ಹೇಳಬೇಕಾದರೆ ಇನ್ನೂ ೨—೩ ವರುಷಗಳ ಅನುಭವ ಬೇಕಾದೀತು.

ಬೆಳವಳಿಕೆಗೆ ಸಾಕಾದಷ್ಟು ಸ್ಥಳವಿದ್ದಲ್ಲಿ ಒಂದು ಬತ್ತದ ಸಸಿಯಿಂದ ೩೦ ಕೌಲುಗಳೊಡೆಯುವದುಂಟು. ಒಂದು ಎಕರೆಗೆ ೨೦ ಪೌಂಡು ಒಟ್ಟೇ ಬಿತ್ತ ಸಾಕಾಗುವದಾಗಿ ತಿಳಿಯಬರುತ್ತದೆ. ಪಾಲೂರಿನಲ್ಲಿ ಬಾಂಕು ಬತ್ತವನ್ನು ಒಂದೊಂದು ಸಸಿಯಂತೆ ನಾಟಿ ಹಾಕಿ ಬೆಳೆ ಮಾಡಿದ್ದರಲ್ಲಿ ಎಕರೆಗೆ ೧೧೦೧ ಮದರಾಸು ಸೇರು ಬತ್ತ ಉತ್ಪತ್ತಿಯಾಗಿರುತ್ತಂತೆ. ಅಗ್ರಿಕಲ್ಚರಲ್ ಅಂಡ್ ಇಂಡಸ್ಟ್ರಿಯಲ್ ಪ್ರೋಗ್ರೆಸ್, ಜನವರಿ—೧೯೦೯.

---

V. B. Soobbiah & Sons, Printers, Bangalore.—1909.

THE MYSORE

# REVENUE & AGRICULTURAL GAZETTE.

ವಾಲ್ಯುಂ ೩.] ಸೋಮವಾರ, ೧೫ನೆ ಮಾರ್ಚಿ ೧೯೦೯. [ನಂ. ೧೦.

## Contents.



## ಅನುಕ್ರಮಣಿಕೆ.



## Co-operative Societies.

## ಪರಸ್ಪರ ಸಹಾಯುಕ ಸಂಘಗಳು.

(೧) ೧೯೦೮ನೆ ಜುಲೈ ಲಾಗಾಯಿತು ಕಳೆದ ಫೆಬ್ರವರಿ ಆಖೈರು

ವರಿಗೆ ಈ ಕೆಳಗೆ ನಮೂದಿಸಿರುವ ಸೊಸೈಟಿಗಳು ಕೋ ಆಪರೇಟಿವ್ ಸೊಸೈಟಿಗಳ ರೆಗ್ಯುಲೇಷನ್ ೬ನೇ ಸೆಕ್ಷನ್ ೨ನೆ ಒಳಪ್ರಕರಣಕ್ಕನುಸಾರವಾಗಿ ರಿಜಸ್ಟರು ಮಾಡಲ್ಪಟ್ಟಿರುತ್ತವೆ.

| | ರಿಜಸ್ಟರಾದ ತಾರೀಖು. |
|---|---|
| ೧. ಶಿವಮೊಗ್ಗಾ ಕೋ ಆಪರೇಟಿವ್ ಸೊಸೈಟಿ ಲಿಮಿಟೆಡ್. | ೨೭ನೆ ಆಗಸ್ಟು ೧೯೦೮. |
| ೨. ಹಿರೇಹಳ್ಳಿ ಕೃಷಿಕರ ಸಹಾಯ ಸಂಘ, ಹಿರೇಹಳ್ಳಿ, ಚಳ್ಳಕೆರೆ ತಾ॥ | ೨೮ನೆ ಡಿಟೊ |
| ೩. ಕೃಷಿ ಶಿಲ್ಪಾಭಿವರ್ಧಕ ಸಮಾಜ, ಚಿತ್ರದುರ್ಗ ಡಿಸ್ಟ್ರಿಕ್ಟ್. | ೧ನೆ ಸೆಪ್ಟೆಂಬರು ೧೯೦೮. |
| ೪. ಶಿವಗಂಗಾ ಅಥವಾ ಅಬ್ಬನಾಯಕನಹಳ್ಳಿ ಗ್ರೇನ್ ಬ್ಯಾಂಕು, ಹೊಳಲ್ಕೆರೆ ತಾಲ್ಲೂಕು. | ೨೪ನೆ ಡಿಟೊ |
| ೫. ಹಿಣಕಲ್ ನನ್ನೇಶ್ವರ ಸಹಾಯ ಸಂಘ, ಮೈಸೂರು ತಾಲ್ಲೂಕು. | ೧೭ನೆ ನವಂಬರು ೧೯೦೮. |
| ೬. ಗುಳಿಪುರದ ಗ್ರೇನ್ ಬ್ಯಾಂಕು, ಚಾಮರಾಜನಗರ ತಾಲ್ಲೂಕು. | ೧೮ನೆ ಡಿಟೊ |
| ೭. ಯಡೇಹಳ್ಳಿ ಶ್ರೀರಾಮಚಂದ್ರ ಸುಬ್ರಹ್ಮಣ್ಯ ಸ್ವಾಮಿ ಕಾರುಣ್ಯೋದ್ಭವ ಸಹಾಯ ಸಂಘ, ಲಿಮಿಟೆಡ್. | ೨೪ನೆ ಡಿಟೊ |
| ೮. ಹಾಸನದ ಸೆಂಟ್ರಲ್ ಕೋ ಆಪರೇಟೀವ್ ಸೊಸೈಟಿ, ಲಿಮಿಟೆಡ್. | ೨೬ನೆ ಡಿಟೊ |
| ೯. ಬೆಂಗಳೂರು ಸೆಂಟ್ರಲ್ ಕೋ ಆಪರೇಟಿವ್ ಬ್ಯಾಂಕ್, ಲಿಮಿಟೆಡ್, ಬೆಂಗಳೂರು. | ೧೭ನೆ ಡಿಶಂಬರು ೧೯೦೮. |

| | ರಿಜಸ್ಟರಾದ ತಾರೀಖು. |
|---|---|
| ೧೦. ಹಲಗೋನಹಳ್ಳಿ ಕೋ ಆಪರೇಟಿವ್ ಸೊಸೈಟಿ, ಲಿಮಿಟೆಡ್, ಕುಣಿಗಲ್ ತಾಲ್ಲೂಕು. | ೧೪ನೆ ಜನವರಿ ೧೯೧೯. |
| ೧೧. ಶ್ರೀ ಹರಿಹರೇಶ್ವರ ಕೋ ಆಪರೇಟಿವ್ ಸೊಸೈಟಿ ಲಿಮಿಟೆಡ್, ಹರಿಹರ. | ೧೦ನೆ ಫೆಬ್ರವರಿ ೧೯೧೯. |
| ೧೨. ಕೋಲಾರದ ಕೋ ಆಪರೇಟಿವ್ ಸೊಸೈಟಿ, ಲಿಮಿಟೆಡ್, ಕೋಲಾರ. | ಡಿಟೊ |

ಇವುಗಳ ಪೈಕಿ ಹಿರೇಹಳ್ಳಿ, ಚಿತ್ರದುರ್ಗ, ಶಿವಗಂಗಾ, ಹಿಣಕಲ್, ಗುಳಿಪುರ ಮತ್ತು ಹಲಗೋನಹಳ್ಳಿ ಸೊಸೈಟಿಗಳು ವ್ಯವಸಾಯುವೇ ಮುಖ್ಯೋದ್ದೇಶವಾಗಿ ಉಳ್ಳವುಗಳಾಗಿರುತ್ತವೆ. ಶಿವಮೊಗ್ಗ, ಯಡೇಹಳ್ಳಿ ಹಾಸನ ಮತ್ತು ಕೋಲಾರದ ಸೊಸೈಟಿಗಳು ಜಿನಸಿ ಮುಂತಾದ ಆಹಾರ ಪದಾರ್ಥಗಳನ್ನು ಒದಗಿಸಿ ಮಾರಾಟ ಮಾಡತಕ್ಕ ಉದ್ದೇಶವುಳ್ಳವು. ಹರಿಹರದ ಸೊಸೈಟಿಯು ನೇಯಿಗೆ ಕಸಬಿಗೆ ಸಹಾಯ ಮಾಡುವವರಿಗೋಸ್ಕರ ಸ್ಥಾಪಿತವಾಗಿದೆ. ಬೆಂಗಳೂರು ಸೆಂಟ್ರಲ್ ಕೋ ಆಪರೇಟೀವ್ ಬ್ಯಾಂಕು ಇತರ ಎಲ್ಲಾ ಸೊಸೈಟಿಗಳಿಗೂ ಬೇಕಾದಾಗ ಬಂಡವಾಳವನ್ನು ಸಾಲ ಕೊಡುವದಕ್ಕಾಗಿ ಏರ್ಪಡಿಸಲ್ಪಟ್ಟಿದೆ.

(೨) ತಿರುಮಕೂಡ್ಲುನರಸೀಪುರದಲ್ಲಿ ರೇಷ್ಮೆ ತಯಾರುಮಾಡಿ ಹೊರಗೆ ರಫ್ತು ಮಾಡುವದಕ್ಕೋಸ್ಕರ ಹೊಸದಾಗಿ ಒಂದು ಕೋಆಪರೇಟಿವ್ ಸೊಸೈಟಿಯು ಏರ್ಪಟ್ಟು ರಿಜಿಸ್ಟರಾಗಿರುತ್ತೆಂದು ಹಿಂದೆಯೇ ತಿಳಿಸಿತ್ತಷ್ಟೆ. ಕಳೆದ ಫೆಬ್ರುವರಿ ತಿಂಗಳಲ್ಲಿ ರಿಜಿಸ್ಟ್ರಾರವರು ಈ ಸೊಸೈಟಿಯನ್ನು ತನಿಖೆ ಮಾಡಿದರು. ಡೈರೆಕ್ಟರುಗಳು ಬಹಳ ಜಾಗರೂಕರಾಗಿ ಸೊಸೈಟಿ ಕೆಲಸಗಳನ್ನು ನಿರ್ವಹಿಸುತ್ತಿರುವದಲ್ಲದೆ ಹೊರಗೆ ರಫ್ತಾಗಬೇಕಾದ ರೇಷ್ಮೆಯು ಬಹಳವಾಗಿ ಜಮಾಯಿಸಿದ್ದದ್ದು ಅವರಿಗೆ ತಿಳಿಯುಬಂತು. ಈ ಸೊಸೈಟಿಯು ರೇಷ್ಮೆಯನ್ನು ಇತರ ಕಡೆಗಳಲ್ಲಿ ಮಾರಾಟ ಮಾಡಿಸಿ ಕೊಡುವ ಉದ್ದೇಶದಿಂದ ರಿಜಸ್ಟ್ರಾರವರು ಇಂಡಿಯಾ ದೇಶದಲ್ಲಿ ಇತರ ಪ್ರಾವಿನ್ಸುಗಳ ರಿಜಸ್ಟ್ರಾರುಗಳಿಗೆ ಬರೆಸಿರುತ್ತಾರೆ. ಈ ಮೂಲಕ ತಿರುಮಕೂಡ್ಲುನರಸೀಪುರದ ಸೊಸೈಟಿಗೆ ಸಹಾಯುವಾಗಬಹುದು.

---

## Hand-Loom Weaving in India. *
## ಇಂಡಿಯಾ ದೇಶದ ಕೈಮಗ್ಗಗಳು.

ಕಳೆದ ಡಿಶಂಬರು ತಿಂಗಳು ಮದರಾಸಿನಲ್ಲಿ ನಡೆದ ಇಂಡಿಯನ್ ಇ
ಸ್ಟ್ರಿಯಲ್ ಕಾನ್ಫರೆನ್ಸ್ ಸಭೆಯ ಪ್ರೆಸಿಡೆಂಟರು ಈ ದೇಶದ ನೇಗೆ ಕ
ಬಿನ ವಿಷಯವಾಗಿ ಹೇಳಿದ್ದೇನೆಂದರೆ.—

ಕೈಮಗ್ಗದ ಕಸಬನ್ನು ಉತ್ತಮಪಡಿಸುವದು ಅತ್ಯವಶ್ಯಕವೆನ
ವದಕ್ಕೆ ಅನೇಕ ಕಾರಣಗಳುಂಟು. ಸುಮಾರು ೫೦-೬೦ ಲಕ್ಷ ಪ್ರಜೆಗಳ
ಇದನ್ನೇ ನಂಬಿ ಬಹಳ ಪ್ರಯಾಸದಿಂದ ತಮ್ಮ ಜೀವನವನ್ನು ಸಂಪಾದಿ
ಕೊಳ್ಳುತ್ತಿದಾರೆ. ಪವರ್(Power)ಅಂದರೆ ಯಂತ್ರಶಕ್ತಿಯಿಂದ ನ
ಯುವ ಮಗ್ಗಗಳನ್ನು ಈಗಿರುವದಕ್ಕಿಂತ ಎರಡರಷ್ಟು ಹೆಚ್ಚಿಸಿದರ
ಕೂಡ ಇಷ್ಟು ಜನಕ್ಕೂ ಕ್ಷಿಪ್ರದಲ್ಲಿಯೇ ಕೆಲಸ ದೊರಿಯುವದು ಅನ
ಮಾನ. ಈಗಿರುವ ಯಂತ್ರಶಕ್ತಿಯ ಮಗ್ಗಗಳು ಸುಮಾರು ೨೧,೨,೦
ಜನಗಳಿಗೆ ಕೆಲಸ ಮಡಗಿಸುತ್ತಿವೆ. ಸುಮಾರು ೨೭ ಲಕ್ಷ ಜನರು ಕೈಮ
ಗ್ಗದ ನೇಗೆ ಕೆಲಸದವರು. ಅನಾರೋಗ್ಯಕರವಾದ ಕಟ್ಟಡಗಳಲ್ಲಿ ಸಾವಿರ
ರು ಮಂದಿ ಕಾರ್ಯಗಾರರು ಗಿಜಿಬಿಜಿಯಾಗಿ ಸೇರಿಕೊಂಡು ಕೆಲಸ ಮಾಡು
ದರಲ್ಲಿ ಎಷ್ಟು ಅನುಕೂಲಗಳನ್ನು ಕಲ್ಪಿಸಿಕೊಟ್ಟಾಗ್ಯೂ ಕೂಡ ಇದ
ಗ್ರಾಮಾಂತರಗಳಲ್ಲಿ ಸ್ವತಂತ್ರವಾಗಿ ಶುಚಿಯಾಗಿರುವ ತಮ್ಮ ತಮ್ಮ ಮ
ನೆಗಳಲ್ಲಿಯೇ ಈ ಕಸಬನ್ನು ನಡೆಸುವದಕ್ಕೆ ಸಮಾನವಾಗಲಾರದು. ನ
ಣ್ಯವಾದ ಮತ್ತು ಚಿತ್ರವಿಚಿತ್ರವಾದ ಬಟ್ಟೆಗಳ ತಯಾರಿಗೆ ಉತ್ತಮ
ತರಹೆ ಕೈಮಗ್ಗಗಳಿಗಿಂತಲೂ ಯಂತ್ರಶಕ್ತಿಯ ಮಗ್ಗಗಳು ಹೆಚ್ಚು ಲ
ಯಖಾಗಿರುವದಿಲ್ಲ. ಕೈ ಮಗ್ಗಗಳನ್ನು ಹೆಚ್ಚು ಕೆಲಸ ಮಾಡುವಂತೆ ಕ
ಗಾದರೂ ಉತ್ತಮ ಪಡಿಸುವದರಲ್ಲಿ ಶಾಸ್ತ್ರೀಯವಾದ ಸರ್ವ ಪ್ರಯತ್
ಮಾಡುವದು ಪ್ರಜಾಹಿತಕರವಾಗಿಯೂ ನೀತಿ ಸಮ್ಮತವಾಗಿಯೂ ಇ
ತ್ತೆ. ಈವಿಧವಾದ ಪ್ರಯತ್ನಗಳು ಸಿದ್ಧಿಯಾಗಬಹುದೆಂದು ಈಚೆಗೆ ಅನೆ
ಕ ಕಡೆಗಳಲ್ಲಿ ನಡೆದಿರುವ ಉತ್ತಮ ತರಹೆ ಕೈಮಗ್ಗಗಳ ಪ್ರದರ್ಶನಗಳ
ಮತ್ತು ಪ್ರೋಟಾಪ್ರೋಟಿಗಳಲ್ಲಿ ನಿದರ್ಶಿಸಲ್ಪಟ್ಟಿರುತ್ತೆ. ಆದರೆ ಸಾಮ

* ಇಂಡಿಯನ್ ಅಗ್ರಿಕಲ್ಚರಿಸ್ಟ್,—೧—೧—೦೯.

ನ್ಯವಾಗಿ ನಮ್ಮ ನೇಗೆಯುವರು ನೂತನ ಪದ್ಧತಿಗಳನ್ನು ಅವಲಂಬಿಸುವದರ
ಲ್ಲಿ ಹಿಂತೆಗೆಯುವ ಸ್ವಭಾವವುಳ್ಳವರು. ಪ್ರದರ್ಶನಗಳು ಮತ್ತು ಪ್ರೋಟೊ
ಪ್ರೋಟಿಗಳನ್ನು ನಡೆಸುವ ಮೂಲಕದಿಂದಲೇ ನಮ್ಮ ನೇಗೆಯುವರು ಉತ್ತ
ಮ ತರದ ಮಾರ್ಗಗಳ ಯೋಗ್ಯತೆಯನ್ನು ಮನದಟ್ಟುಮಾಡಿಕೊಂಡು ಅವು
ಗಳನ್ನು ಸ್ವತಃ ರೂಢಿಗೆ ತರುವರೆಂದು ಹೇಳಲಿಕ್ಕಾಗುವದಿಲ್ಲ. ರೈತರಂತೆ
ಯೇ ಇವರಿಗೂ ಈ ಹೊಸ ಸಂಗತಿಗಳು ಮೇಲೆ ಮೇಲೆ ತಿಳಿಸಿದ್ದಲ್ಲದೆ ಗೊ
ತ್ತಾಗುವದಿಲ್ಲ. ಈ ಸಭೆ ಮತ್ತು ಇದಕ್ಕೆ ಸೇರಿದ ಉಪಸಭೆಯವರು ನೇಗೆ
ಕಸಬು ವಿಶೇಷವಾಗಿ ನಡೆಯುತ್ತಿರುವ ಪ್ರದೇಶಗಳಿಂದ ಒಬ್ಬೊಬ್ಬರು ಬು
ದ್ಧಿವಂತರಾದ ನೇಗೆಯುವರಿಗೆ ಸ್ಕಾಲರ್‌ಶಿಪ್ ವೇತನಗಳನ್ನು ಕೊಟ್ಟು ಅವ
ರ ಯೋಗ್ಯತೆಗೊಳಪಟ್ಟು ಬೆಲೆಬಾಳುವ ಯಾವದಾದರೂ ಒಂದು ಹೊಸ
ಮಾರ್ಗದಲ್ಲಿ ಅವರಿಗೆ ರೂಢಿಯಾಗಿರುವ ತರಹೆ ಬಟ್ಟೆಯನ್ನು ನೇಯುವದಕ್ಕೆ
ಕಲಿಸುವದರ ಮೂಲಕ ಅವುಗಳ ಪ್ರಯೋಜನಗಳನ್ನು ಇವರ ತಿಳುವಳಿ
ಕೆಗೆ ತರಬೇಕು. ನಂತರ ಇವರು ತಮ್ಮ ಜನಗಳಿಗೆ ಈ ಮಾರ್ಗದ ಕೆಲಸವ
ನ್ನು ತೋರಿಸಿ ಕಲಿಯಪೇಕ್ಷಿಸುವವರನ್ನು ತರಬೇತು ಮಾಡುವ ಷರತ್ತಿ
ನ ಮೇಲೆ ಇವರಿಗೆ "ಸಮೂಜೆ ಕಾಟಿಜುಲೂಮ್" ಅಂಥ ಯಾವದಾದರೂ
ಒಂದು ಮಗ್ಗವನ್ನು ಇನಾಮಾಗಿ ಕೊಡಬೇಕು.

---

## Lime Cultivation.*

## ನಿಂಬೆ ಸಾಗುವಳಿ.

ನಿಂಬೆಯನ್ನು ತಂಜಾವೂರು ಸಮೀಪದ ಅಯ್ಯಂಪೇಟೆ ಗ್ರಾಮದಲ್ಲಿ
ವಿಶೇಷವಾಗಿ ಬೆಳೆಯುತ್ತಾರೆ. ಇದಕ್ಕೆ ಚೆನ್ನಾಗಿ ನೀರು ಬಸಿದು ಹೋ
ಗುವ ಒಂದು ಭೂಮಿಯು ಲಾಯಖಾದದ್ದು. ಭೂಮಿಯನ್ನು ಸುಮಾ
ರು ಎರಡು ಅಡಿ ಪಟ್ಟಕ್ಕೆ ಅಗೆದು ಮಣ್ಣನ್ನು ಚೆನ್ನಾಗಿ ಪುಡಿಮಾಡಿ ಕೊ
ಳೆತ ದನವಿನ ಗೊಬ್ಬರವನ್ನು ಬಹಳವಾಗಿ ಹಾಕಿ ಮಣ್ಣಿನಲ್ಲಿ ಚನ್ನಾಗಿ ಕ
ಲಿಸಿಬಿಡಬೇಕು. ಗಿಡಗಳಿಂದ ಫೆಬ್ರವರಿ ಮಾರ್ಚಿ ತಿಂಗಳುಗಳಲ್ಲಿ ಉದು
ರುವ ಚನ್ನಾಗಿ ಮಾಗಿದ ಹಣ್ಣುಗಳನ್ನು ಆದುಕೊಂಡು, ಕೊಯಿದು, ಒಳ

---

* ಅಗ್ರಿಕಲ್ಚರಲ್ ಅಂಡ್ ಇಂಡಸ್ಟ್ರಿಯಲ್ ಪ್ರೋಗ್ರೆಸ್.-ಫೆಬ್ರುವರಿ ೧೯೧೫.

ಗಿನ ಬೀಜಗಳನ್ನು ಸ್ವಲ್ಪವೂ ಪೆಟ್ಟು ತಗಲಿಸದಂತೆ ತೆಗದುಕೊಳ್ಳಬೇಕು
ಬೀಜಗಳು ಕೈಗೆ ಅಂಟದಂತೆ ಅವುಗಳಿಗೆ ಬೂದಿಯನ್ನು ಸವರಿ, ಒಣಗುವ
ದಕ್ಕೆ ಮೊದಲೇ ಬಿತ್ತನೆಗಾಗಿ ತಯಾರಿಸಿರುವ ಜಮೀನಿನಲ್ಲಿ ಅವುಗನ್ನು
೮ ಅಂಗುಲಕ್ಕೆ ಒಂದರಂತೆ ಬಿತ್ತಿ ಮೇಲೆ ಒಣಗಿದ ಬಾಳೆ ಸುರುಗನ್ನು
ಹಾಕಿ ಯಾವಾಗ್ಯೂ ತೆಂಪು ಆರದ ರೀತಿ ನೀರು ಹಾಕುತ್ತಿರುವುದು. ಅ
ನಂತರ ಕಳೆ ಕಸರನ್ನು ಕೈಯಿಂದ ಕಿತ್ತುಹಾಕಿ ನವಂಬರು ಡಿಶಂಬರು ತಿ
ಗಳಲ್ಲಿ ಸಸಿಗಳು ಒಂದೆರಡು ಅಡಿ ಉದ್ದ ಬೆಳೆದಾಗ ಅವುಗಳಪೈಕಿ ಎರಡ
ಅಡಿ ದೂರದೂರವಾಗಿ ಬೆಳೆದಿರುವಗಳನ್ನು ಹಾಗೇ ಬಿಟ್ಟು ಉಳಿದವು
ಗಳನ್ನು ಕಿತ್ತು ಇದಕ್ಕಾಗಿ ತಯಾರು ಮಾಡಿರುವ ಮತ್ತೊಂದು ಭೂಮಿ
ಯಲ್ಲಿ ೨ ಅಡಿಗೆ ಒಂದರಂತೆ ನಾಟಿ ಬೇಸಿಗೆಯಲ್ಲಿ ಗಿಡಗಳು ಒಣಗಿ ಹೋ
ಗದಂತೆ ನೀರು ಹಾಕುತ್ತಿರಬೇಕು. ಮೂರು ವರುಷದ ನಂತರ ಸಸಿಗ
ಳನ್ನು ಕಿತ್ತು ಆಳವಾಗಿ ಉಕ್ಕೆ ಮಾಡಿ ಚೆನ್ನಾಗಿ ಗೊಬ್ಬರ ಹಾಕಿದ ಜ
ಮೀನಿನಲ್ಲಿ ಒಂದೊಂದಕ್ಕೆ ೧೫ ಅಡಿ ಬಿಟ್ಟು ಸಾಲು ಸಾಲಾಗಿ ನಾಟಬೇಕು
ಸಸಿಗಳು ಬೆಳೆದು ಮರಗಳಾಗುವ ಪರ್ಯಂತರ ಜಮೀನಿನಲ್ಲಿ ಮಧ್ಯೆ ಮಧ್ಯೆ
ಬಾಳೆ ಗಿಡಗಳನ್ನು ಬೆಳೆಯಬಹುದು. ಹೀಗೆ ನಾಟಿದ ಮೂರು ವರುಷ
ಗಳ ನಂತರ ನಿಂಬೆಗಿಡಗಳು ಫಲಿಸಲಾರಂಭಿಸುತ್ತವೆ. ಪ್ರತಿ ವರುಷವೂ
ತೋಟದಲ್ಲಿ ಗಿಡಗಳ ಕೆಳಗೆ ಅಗತೆ ಮಾಡಿ ಚೆನ್ನಾಗಿ ಮಾಗಿದ ಗೊಬ್ಬರವ
ನ್ನು ಹಾಕಬೇಕು. ದನವಿನ ಗೊಬ್ಬರ ಸರ್ವೋತ್ಕೃಷ್ಟ. ಎಲಬಿನ ಪುಡಿ
ಹುಟ್ಟುವಳಿಯನ್ನು ಹೆಚ್ಚಿಸುತ್ತದೆ. ಗಿಡಗಳಲ್ಲಿ ಒಣಗಿದ ರೆಂಬೆಗಳನ್ನು
ಆಗಾಗ್ಯೆ ಹುಷಾರಿಯಿಂದ ಕತ್ತರಿಸಿ ಮೇಲ್ಗಡೆ ಒಂದೆರಡು ದೊಡ್ಡ ದೊ
ಡ್ಡ ರೆಂಬೆಗಳನ್ನು ಬಿಟ್ಟು ಉಳಿದವುಗಳನ್ನೆಲ್ಲಾ ಸವರಿಬಿಡಬೇಕು. ಸುಲ
ಭವಾಗಿ ಹರತೆ ಹೊಡಿಯುವದಕ್ಕೂ, ಹಣ್ಣುಗಳನ್ನು ಆರಿಸುವದಕ್ಕೂ
ಮತ್ತು ಸಲೀಸಾಗಿ ಗಾಳಿಯಾಡುವದಕ್ಕೂ ಆಸ್ಪದ ಉಂಟಾಗುವ ರೀತಿ
ಕೆಳಗಿನ ಕೊಂಬೆಗಳನ್ನು ಕತ್ತರಿಸುತ್ತಾರೆ. ಬೇಸಿಗೆ ಮುಗಿಯುವ
ತನಕ ಗಿಡಗಳಿಗೆ ನೀರು ಕಟ್ಟುತ್ತಿರಬೇಕು. ಮೇಲೆ ಕಂಡ ರೀತಿ ನಿಂಬೆ
ತೋಟವನ್ನು ಹುಷಾರಿಯಿಂದ ಕಾಪಾಡುತ್ತಾ ಬಂದರೆ ಒಂದೊಂದು
ಗಿಡವು ೧೫೦೦-೬೦೦೦ ಹಣ್ಣುಗಳನ್ನು ಬಿಡುತ್ತದೆ.

## The Cotton Boll-Worm. *
## ಹತ್ತಿಗೆ ಬೀಳುವ ಹುಳ.

ಹತ್ತಿಕಾಯಿಗಳ ಒಳಗೆ ಬೀಳುವ ಹುಳವನ್ನು ಸಾಮಾನ್ಯವಾಗಿ ಎಲ್ಲರೂ ಬಲ್ಲರು. ಇದು ಪೈರನ್ನು ವಿಶೇಷ ನಷ್ಟಪಡಿಸುತ್ತದೆ. ಈಗ ಎರಡು ವರುಷದ ಕೆಳಗೆ ಈ ಹುಳದಿಂದ ಸಿಂಧ್ ಪ್ರಾಂತ್ಯ ಹತ್ತಿ ಬೆಳೆಯು ಸುಮಾರು ಅರ್ಧಕ್ಕಿಂತ ಹೆಚ್ಚಾಗಿ ನಷ್ಟವಾಯಿತು. ಈ ಹುಳದಿಂದ ಅನೇಕವರಿಯಾದ ನಷ್ಟ ಉಂಟು. ಹತ್ತಿಯನ್ನು ಬಿಡಿಸಿಕೊಳ್ಳುವ ಕಾಲಗಳಲ್ಲಿ ಕೆಲವು ಬುಡ್ಡೆಗಳು ಸರಿಯಾಗಿ ಅರಳದೆ ಇರುವದು, ಮತ್ತೆ ಕೆಲವು ಅರಳುವ ಚಿಹ್ನೆಯೇ ಇಲ್ಲದಿರುವದು, ಕೆಲವು ಕೆಳಗೆ ಉದುರಿ ಬಿದ್ದಿರುವದು, ಇನ್ನೂ ಕೆಲವು ಗಿಡಗಳಲ್ಲಿಯೇ ಒಣಗಿಹೋಗಿರುವದು, ಇಂಥಾವುಗಳನ್ನು ಸಾಧಾರಣವಾಗಿ ನೋಡಿರಬಹುದು. ಈ ಬುಡ್ಡೆಗಳನ್ನು ಕಿತ್ತು ಪರೀಕ್ಷಿಸಿ ನೋಡಿದರೆ ಒಳಗಿನ ಬೀಜಗಳನ್ನು ಅರ್ಧ ಅಂಗುಲಿ ಉದ್ದವಿರುವ ಒಂದು ಬಗೆಯ ಹುಳವು ತಿಂದು ಬುಡ್ಡೆಗಳಿಂದ ಹೊರಗೆ ಬರುತ್ತಿರುವದು ಗೋಚರವಾಗುತ್ತದೆ. ಒಂದು ಹುಳವು ಯಾವಜ್ಜೀವವೂ ಒಂದೇ ಬುಡ್ಡೆಯಲ್ಲಿ ಕಾಲಹರಣ ಮಾಡುವದಿಲ್ಲ. ಹುಳವು ದೊಡ್ಡದಾಗುವದರೊಳಗಾಗಿ ಸುಮಾರು ೬ ಬುಡ್ಡೆಗಳಲ್ಲಿ ಪ್ರವೇಶಿಸಿರಬಹುದು. ಗಿಡಗಳಲ್ಲಿ ಬುಡ್ಡೆಗಳಿಲ್ಲದಿದ್ದರೆ ಹುಳವು ಹತ್ತಿ ಗಿಡದ ಎಳೆ ಚಿಗರುಗಳನ್ನು ತಿನ್ನುವುದು. ಆದಕಾರಣ ರೈತರು ಹತ್ತಿ ಪೈರಿಗೆ ಈ ಹುಳದಿಂದಾಗುವ ಕೆಡಕನ್ನು ತಪ್ಪಿಸಲು ಈ ಕೆಳಗೆ ಕಂಡ ಕೆಲವು ಸುಲಭೋಪಾಯಗಳನ್ನು ಮಾಡಬೇಕು.—

(೧) ಗಿಡದ ಎಳೆ ಚಿಗರುಗಳು ಸೊರಗುವ ಚಿಹ್ನೆ ಕಂಡುಬಂದರೆ ಗಿಡದಲ್ಲಿ ಹುಳುವಿದೆಯೆಂದು ಗೊತ್ತು ಮಾಡಿಕೊಳ್ಳಬೇಕು. ಕೂಡಲೆ ಈ ಚಿಗರುಗಳನ್ನು ಕೊಯಿದುಹಾಕಿ ಸುಟ್ಟುಬಿಡಬೇಕು. ಯಾಕೆಂದರೆ, ಗಿಡವು ಇನ್ನೂ ಎಳೇದಾಗಿರುವ ಕಾಲದಲ್ಲಿ ಒಂದೇ ಹುಳವಿದ್ದರೂ ಕೂಡ ಇದರಿಂದ ಸಾವಿರಾರು ಹುಳಗಳು ಹುಟ್ಟಿ ಬಹಳ ಜಾಗ್ರತೆ ವೃದ್ಧಿಹೊಂದುವವು.

---

* ಬೊಂಬಾಯಿ ವ್ಯವಸಾಯ ಇಲಾಖೆಯ ಲೀಫ್ಲೆಟ್ ನಂ ೩, ೧೯೦೮.

(೨) ಈ ಹುಳವು ಬೆಂಡೆಗಿಡಕ್ಕೆ ವಿಶೇಷವಾಗಿ ಹತ್ತುವಕಾರಣ ಹತ್ತಿ ಹೊಲಗಳಲ್ಲಿ ಅಲ್ಲಲ್ಲಿ ಬೆಂಡೆಗಿಡ ಹಾಕುವದು ಒಳ್ಳೇದು. ಬೆಂಡೆ ಬೀಜವನ್ನು ಹತ್ತಿ ಬೀಜದ ಜತೆಯಲ್ಲೊ ಅಥವಾ ತತ್ಪೂರ್ವವ್ವೋ ಹಾಕಬಹುದು. ಬೆಂಡೆ ಗಿಡದಲ್ಲಿ ಹೀಚುಗಳು ಕಾಣಿಸಿಕೊಳ್ಳುತ್ತಲೆ ಇವುಗಳಿಗೆ ಹುಳುಗಳು ಮುತ್ತಿರುವದು ನೋಡಬಹುದು. ಇಂಥಾ ಕಾಯಿಗಳನ್ನು ಕಿತ್ತು ಸುಟ್ಟುಬಿಡಬೇಕು. ಒಳ್ಳೆ ಕಾಯಿಗಳನ್ನು ಮಾರಬಹುದು ಅಥವಾ ದನಕ್ಕೆ ಹಾಕಬಹುದು. ಇದರಲ್ಲಿ ಮುಖ್ಯವಾದ ಅಂಶವೇನೆಂದರೆ, ಹತ್ತಿ ಗಿಡಗಳಲ್ಲಿ ಕಾಯಿಗಳು ಕಾಣಿಸಿಕೊಳ್ಳುತ್ತಲೆ ಬೆಂಡೆ ಗಿಡವನ್ನು ಬೇರು ಸಹಿತ ಕಿತ್ತು ಸುಡಬೇಕು. ಇಲ್ಲವಾದರೆ ಹುಳುವು ಬೆಂಡೆಗಿಡದಿಂದ ಹತ್ತಿಗಿಡಕ್ಕೂ ಹರಡಿಕೊಳ್ಳುವದು.

## The Mysore Exhibition, 1908.

## ಮೈಸೂರು ದಸರಾ ಕೈಗಾರಿಕೆ ಮತ್ತು ವ್ಯವಸಾಯಿಕ ಪ್ರದರ್ಶನ, ೧೯೦೮.

ಈ ಪ್ರದರ್ಶನದಲ್ಲಿ ಪ್ರದರ್ಶಿಸಲ್ಪಟ್ಟ ಸಾಮಾನುಗಳ ವಿವರವನ್ನು ಈ ಮೊದಲೇ ತಿಳಿಸಿತ್ತಷ್ಟೆ. ಪ್ರೆಸಿಡೆಂಟರವರ ರಿಪೋರ್ಟಿನಲ್ಲಡಗಿರುವ ಮುಖ್ಯವಾದ ಇತರ ಸಂಗತಿಗಳನ್ನು ಇಲ್ಲಿ ವಾಚಕರ ತಿಳುವಳಿಕೆಗೆ ತರುತ್ತೇವೆ.

ಈ ವರುಷ ದೊಡ್ಡರೋಗ ಮತ್ತು ಇತರ ಸಾಂಕ್ರಾಮಿಕ ಜಾಡ್ಯಗಳಿಂದಲೂ, ಕಾಲಸ್ಥಿತಿ ಛೆನ್ನಾಗಿಲ್ಲದೇ ಇದ್ದದ್ದರಿಂದಲೂ ರೈತರು ಬಹಳ ನಷ್ಟ ಹೊಂದಿದ ಕಾರಣ ಹೋದ ಸಾಲಿನ ಅನುಭವದ ಮೇಲೆ ನಿರೀಕ್ಷಿಸಿದಷ್ಟು ದನಗಳು ಬರಲಿಲ್ಲ. ಅನೇಕ ಒಳ್ಳೆ ಗೂಳಿಗಳೂ ಆಕಳುಗಳೂ ಪ್ರದರ್ಶಿಸಲ್ಪಟ್ಟಿದ್ದವು. ಪಾವಗಡ ತಾಲ್ಲೂಕಿನಿಂದ ಒಂದು ಉತ್ಕೃಷ್ಟವಾದ ಗೂಳಿಯನ್ನು ರೈಲ್ ಮೇಲೆ ತಂದಿದ್ದರು. 'ಕ್ಯಾಟಲ್ ಡಿಸೀಸ್ ಇನ್ಸ್ಪೆಕ್ಟರು' ರೈತರ ಎದುರಿಗೆ ಕೆಲವು ದನಗಳಿಗೆ ಶಿಡುಬು ಹಾಕಿದ್ದಲ್ಲದೆ ದನಗಳಿಗೆ ರೋಗ ತಗಲಿದಾಗ ಚಿಕಿತ್ಸೆಮಾಡತಕ್ಕ ವಿಧಾನವನ್ನು ಅವರಿಗೆ ತಿಳಿಸಿದರು. ಅಲ್ಲಿ ನೆರದಿದ್ದ ನೋಟಕರು ಕೆಲವು ಅಮೃತಮಹಲ್ ದನಗಳ

ನ್ನು ಹರಾಜುಹಾಕಿಸಬೇಕಾಗಿ ಸೂಚಿಸಿದರು. ಆದರೆ ಈ ರಾಸುಗಳ ಪೈಕಿ ಕೆಲವಕ್ಕೆ ದೊಡ್ಡರೋಗದ ಚಿನ್ಹೆಗಳು ಕಾಣಿಸಿಕೊಂಡಿದ್ದರ ಮೇಲೆ ಮುಂದೆಯನ್ನು ಚಪರಿಸಬೇಕಾಯಿತಲ್ಲದೆ ದನಗಳ ಪ್ರದರ್ಶನವನ್ನು ಹಟಾತ್ ನಿಲ್ಲಿಸಬೇಕಾಯಿತು. ಪರಂತು ಶ್ರೀಮನ್ಮಹಾರಾಣಿಗಳವರು ಮತ್ತು ರಾಜಕುಮಾರ್ತಿಯವರುಗಳೂ ದಯಮಾಡಿಸಿ ರಾಸುಗಳನ್ನು ಪರಾಂಬರಿಸಿದ್ದಲ್ಲದೆ ತಮ್ಮ ಎದುರಿಗೆ ಬಹುಮಾನಗಳನ್ನು ಹಂಚಿಸಿ ರಾಸುಗಳ ಮಾಲೀಕರಿಗೆ ಸಂತೋಷಾಧಿಕ್ಯವನ್ನುಂಟುಮಾಡಿದರು.

ಈ ವರುಷವೂ ಜನಾನುಕೂಲವಾದ ಉಪನ್ಯಾಸ ನಡೆಸುವ ಪದ್ಧತಿಯನ್ನನುಸರಿಸಲಾಯಿತು. ವ್ಯವಸಾಯ, ಕೈಗಾರಿಕೆ, ಆರೋಗ್ಯ ಮುಂತಾದ ವಿಷಯಗಳಿಗೆ ಸಂಬಂಧಪಟ್ಟ ಇದರಡಿ ಕಂಡ ಸುಮಾರು ೧೭ ಉಪನ್ಯಾಸಗಳು ಪ್ರದರ್ಶನ ಮೈದಾನದೊಳಗೆ ನಡೆದವು. ಈ ಪೈಕಿ ಅನೇಕ ಉಪನ್ಯಾಸಗಳು ಈ ಪತ್ರಿಕೆಗೆ ಸಪ್ಲಿಮೆಂಟಾಗಿ ಕನ್ನಡದಲ್ಲಿ ಫಾಯಿಷ್ ಮಾಡಲ್ಪಡುತ್ತವೆ.

೧. ಸೊಪ್ಪಿನ ಗೊಬ್ಬರ.

೨. ಕಾಗದದ ತಯಾರಿ.

೩. ಆರೋಗ್ಯ ವಿಚಾರ.

೪. ಗೊಬ್ಬರಗಳು—ಇವುಗಳ ಉಪಯೋಗ ಮತ್ತು ಇವುಗಳನ್ನು ರೂಢಿಯಲ್ಲಿ ತರುವಿಕೆ.

೫. ನೊಣಗಳು, ಚಿಗಟಗಳು, ಸೊಳ್ಳೆಗಳು ಮತ್ತು ಅಂಟುಜಾಡ್ಯ.

೬. ಕಂಬಳಿ ಕೈಗಾರಿಕೆ.

೭. ವ್ಯವಸಾಯ ಮತ್ತು ಕೈಗಾರಿಕೆಯಲ್ಲಿ ಎಂತ್ರಗಳ ಉಪಯೋಗ.

೮. ಪಶುರೋಗಗಳು ಮತ್ತು ಇವುಗಳಿಗೆ ಚಿಕಿತ್ಸೆ.

೯. ಪ್ಲೇಗ್ ಇನಾಕ್ಯುಲೇಷನ್.

೧೦. ಕಬ್ಬು ಮತ್ತು ಬೆಲ್ಲದ ತಯಾರಿಯಲ್ಲಿ ಯಂತ್ರಗಳ ಉಪಯೋಗ.

೧೧. ಗರಡಿ ಸಾಧಕ.
೧೨. ನೇಗೆ ಪ್ರೋಟಾ ಪ್ರೋಟಿ.
೧೩. ಮೇವು ಮತ್ತು ಗೋವಾಳ.
೧೪. ಮನೆ ಕೈಗಾರಿಕೆಗಳು.
೧೫. ಮೈಸೂರು ದೇಶದ ಕೆರೆಗಳು.
೧೬. ಭೂ ರಚನಾಶಾಸ್ತ್ರ ಸಂಬಂಧವಾದ ಕೆಲಸದ ನಿರ್ವಾಹ ಕ್ರಮ.
೧೭. ಕ್ಷೀರ ಮತ್ತು ಕ್ಷೀರೋತ್ಪನ್ನಗಳು.

ಪ್ರದರ್ಶಕರಿಗೆ ಬಹುಮಾನ ಕೊಡುವ ಬಗ್ಗೆ ಹಿಂದಿನ ಸಾಲಿನಲ್ಲಿ ೨,೪೬೫ ರೂಪಾಯಿ ಅವಕಾಶವಿದ್ದ ಪ್ರಸಕ್ತ ವರ್ಷ ಒಟ್ಟು ೪,೧೫೬ ರೂಪಾಯಿ ಗಳು ಇದ್ದಿತು.

ಎಗ್ಜಿಬಿಷನ್ ಖರ್ಚಿಗಾಗಿ ಮಂಜೂರಾದ ೧೪,೦೦೦ ರೂಪಾಯಿ ಪೈಕಿ ಖಾಯಂ ಬಡಾವಣೆಗಳ ಮೇಲೆ ೩,೦೦೦ ರೂಪಾಯಿ ಖರ್ಚು ಆಗಿರುತ್ತದೆ. ವರಮಾನವು ೧,೫೦೦ ರೂಪಾಯಿ ಅಂದಾಜಾಗಿದ್ದರೂ ೨,೫೦೦ ರೂಪಾಯಿಗೆ ಕಡಮೆಯಾಗಿರಲಾರದು. ಅಂತು ಫಕ್ತ ಖರ್ಚು ೧೨,೫೦೦ ರೂಪಾಯಿಗೆ ಮೀರಿರಲಾರದು.

ಆಬ್ಬೈರಿನಲ್ಲಿ ಪ್ರದರ್ಶನವನ್ನು ನಿರ್ವಿಘ್ನವಾಗಿ ನಡಿಸುವದರಲ್ಲಿ ಕಮಿಟಿಯ ಮೆಂಬರುಗಳೂ, ಇಲಾಖಾಧ್ಯಕ್ಷರುಗಳೂ, ಪ್ರದರ್ಶಕರೂ, ಪರೀಕ್ಷಕರೂ, ಎಗ್ಜಿಬಿಷನ್ ಶಿಬ್ಬಂದಿಯವರೂ ಮುತವರ್ಜಿ ವಹಿಸಿದುದಕ್ಕಾಗಿಯೂ ಮತ್ತು ಬ್ರಿಟಿಷ್ ಇಂಡಿಯಾ ಸರ್ಕಾರದವರು, ರೈಲ್ವೆ ಇಲಾಖಾದವರು ಮನಃಪೂರ್ವಕವಾಗಿ ಸಹಾಯಮಾಡಿದುದಕ್ಕಾಗಿಯೂ ಅವರುಗಳಿಗೆಲ್ಲಾ ಪ್ರೆಸಿಡೆಂಟರವರು ತಮ್ಮ ವಂದನೆಯನ್ನು ಸೂಚಿಸಿರುತ್ತಾರೆ.

---

## Ground-nut in rotation with Cereals. *

## ನೆಲಗಡ್ಲೆಯನ್ನು ಕಾಳುಗಳೊಂದಿಗೆ ಪರಿವರ್ತನೆಯಿಂದ ಬೆಳೆಯುವಿಕೆ.

ನೆಲಗಡ್ಲೆ ಪೈರನ್ನು ಇದುವರೆಗೆ ಇದ್ದ ಪ್ರದೇಶಗಳಲ್ಲೂ ಕೂಡ ಈಗ

* ಮದರಾಸ್ ಅಗ್ರಿಕಲ್ಚರಲ್ ಕ್ಯಾಲೆಂಡರ್, ೧೯೦೯.

ಈ ಪೈರು ವಿಶೇಷವಾಗಿ ಹರಡುತ್ತಿರುವದರಿಂದ ಅವರೆ, ಅಲಸಂದಿ, ಮುಂ ತಾದ ಆಹಾರಕ್ಕೆ ಯೋಗ್ಯವಾದ ಕಾಳು ಪೈರುಗಳ ವಿಸ್ತೀರ್ಣವು ಬಹಳ ಕಡಿಮೆಯಾಗಿರುತ್ತದೆ. ರೈತನಾದರೊ ಈ ಬೆಳೆಗೆ ತಾತ್ಕಾಲದಲ್ಲಿ ದೊರೆ ಯುವ ಬೆಲೆಯಿಂದ ತೃಪ್ತನಾಗಿ ಸ್ವಲ್ಪವೂ ಮುಂದಾಲೋಚನೆ ಮಾಡುವ ದಿಲ್ಲ. ಹೇಗಂದರೆ, ಪೈರು ಬೆಳೆಯುವದರಲ್ಲಿ ಪರಿವರ್ತನಾ ಕ್ರಮವನ್ನು ಲಕ್ಷಿಸದೆ ಒಂದೇ ಜಮೀನಿನಲ್ಲಿ ಪ್ರತಿವರುಷವೂ ನೆಲಗಡ್ಲೆಯನ್ನೇ ಬೆಳೆಯು ತ್ತೊಡಗುತ್ತಾನೆ. ಇದರ ಪರಿಮಾಣ ವೇನಂದರೆ, ಸ್ಥಳೀಯ ಮರಿಷಸ್ ರಖಂ ನೆಲಗಡ್ಲೆ ರೂಢಿಗೆ ಬರುವದಕ್ಕೆ ಮುಂಚೆ ದಕ್ಷಿಣ ಆರ್ಕಾಟ್ ಡಿಸ್ಟ್ರಿಕ್ಟಿ ನಲ್ಲಿ ಆದಂತೆ ಕೆಲವು ವರುಷಗಳಲ್ಲೇ ಪೈರು ಕೆಡುತ್ತಾಬಂದು ಮೊದಲು ಇಡುತ್ತಿದ್ದ ಪೈರುಗಳನ್ನೇ ಇಡಬೇಕಾದೀತು. ಇದು ಒಂದೇ ಪ್ರತಿಕೂಲ ವಲ್ಲ. ನೆಲಗಡ್ಲೆಯು ಕನಿಷ್ಟಪಕ್ಷ ೪ ತಿಂಗಳ ಬೆಳೆ ಮತ್ತು ಜುಲೈ ತಿಂಗಳಲ್ಲಿ ಬಿತ್ತಿದರೆ ಡಿಶಂಬರು ತನಕ ಫಸಲು ಕೈಗೆ ಬರುವದಿಲ್ಲ. ಹಿಂಗಾರು ಮಳೆ ಗಳು ಹಿಂತೆಗೆದರೆ ಪೈರು ನಷ್ಟವಾಗುವದು. ಆದಕಾರಣ ನೆಲಗಡ್ಲೆಯ ನ್ನು ಯಾವದಾದರೂ ಒಂದು ಕಾಳು ಪೈರಿನೊಂದಿಗೆ ಪರಿವರ್ತನೆಯಿಂದ ಬೆಳೆದರೆ ಅನುಕೂಲ. ಅಂದರೆ ಒಂದುವರುಷ ನೆಲಗಡ್ಲೆ, ಇನ್ನೊಂದು ವರ್ಷ ಕಂಬು, ಸಾಮೆ, ಮುಂತಾದ ಯಾವದಾದರೊಂದು ಕಾಳು ಪೈರು ಇಡ ಬೇಕು. ಧಾರಾಳವಾಗಿ ಗೊಬ್ಬರ ಹಾಕುವದಕ್ಕೆ ರೈತನಿಗೆ ಶಕ್ತಿಯಿದ್ದರೆ ನೆಲಗಡ್ಲೆಯನ್ನು ಕಾಳನ್ನು ಬೆರಿಸಿ ಬೆಳೆಯಬಹುದು. ದಕ್ಷಿಣ ಆರ್ಕಾ ಟು ಡಿಸ್ಟ್ರಿಕ್ಟಿನಲ್ಲಿ ಮೂರು ತಿಂಗಳಲ್ಲಾಗುವ ರಖಂ ಕಂಬು ಧಾನ್ಯವನ್ನು ನೆಲಗಡ್ಲೆಯೊಂದಿಗೆ ಬೆಳೆಯುತ್ತಾರೆ. ಈರೀತಿ ಬೆಳೆಯುವದರಿಂದ ನೆಲ ಗಡ್ಲೆ ಹುಟ್ಟುವಳಿಯು ಹೆಚ್ಚುತ್ತದೆ. ಕಂಬು ಪೈರನ್ನು ಜೂನ್ ಜುಲೈ ತಿಂಗಳುಗಳಲ್ಲಿ ಮೊದಲನೇ ಬಿತ್ತನೆ ಮಳೆ ಯಾಗುತ್ತಲೆ ಇಟ್ಟು ಪೈರು ದೃ ಢವಾಗಿ ನಿಂತು ಮತ್ತೊಂದು ಮಳೆ ಆದನಂತರ ಪೈರನ್ನು ವಿರಳ ಪಡಿಸಿ ಹರತೆ ಹೊಡೆದು ಕಳೆ ಕೀಳುತ್ತಾರೆ. ಜುಲೈ ಆಗಸ್ಟು ತಿಂಗಳಲ್ಲಿ ನೆಲಗಡ್ಲೆ ಬೀಜವನ್ನು ಕಂಬು ಪೈರು ನಡುವೆ ಒಂದೊಂದಾಗಿ ಹಾಕಿ ಹಲಿಗೆಯಿಂದ ಮೇಲೆ ಮಣ್ಣು ಮುಚ್ಚುತ್ತಾರೆ. ಕಂಬು ಬೆಳೆಗೆ ಎರಡನೇ ಸಲ ಹರತೆ ಹೊಡೆದಂತಾಗಿ ಸರ್ವೋತ್ತಮವಾದ ಫಸಲು ಬರಲು ಕಾರಣವಾಗುತ್ತ

ದೆ. ಸಪ್ಟಂಬರು ಅಕ್ಟೋಬರು ತಿಂಗಳುಗಳಲ್ಲಿ ಕಂಬು ಫಸಲು ಕಟಾವಾದ ನಂತರ ಹುಲ್ಲನ್ನು ಹೊಲದುವ ಸಾಗಿಸಿ ನಂತರ ನೇಗತ್ಲೆ ಬಾವನ್ನು ಕೃಷಿ ಮಾಡುತ್ತಾರೆ. ಈ ಮೂಲಕ ಎರಡು ಬೆಳೆಗಳಿಗೂ ಅನುಕೂಲವಾಗುತ್ತದೆ. ಕಂಬು ಪೈರಿಗೆ ಎರಡುಸಲ ಹರತೆ ಹೊಡೆದಂತಾಗಿ ಮುಂದೆ ನೆಲಗಡ್ಲೆ ಬೆಳೆಗೆ ಜಮೀನು ಪಾಕಾಗುತ್ತದೆ. ಮತ್ತು ಎರಡು ನೆಲಗಡ್ಲೆ ಪೈರು ನಡುವೆ ಪೈರು ಬದಲಾಯಿಸುವದರಿಂದ ನೆಲಗಡ್ಲೆಗೂ ವಿಶೇಷ ಅನುಕೂಲವುಂಟು.

---

## Government Proceedings.

## ಸರ್ಕಾರಿ ಹುಕುಂಗಳು.

### I

ಗೌ. ಪ್ರೊ). ನಂ. ರೆ. ೫೬೮೭-೮೬—ಲ್ಯಾಂಡ್ ರೆವಿನ್ಯೂ.

೨೨೧-೦೮-೧. ತಾ||೧-೨-೦೯.

ಅರ್ಜಿದಾರರು ತಾಲ್ಲೂಕು ಕಚೇರಿಗಳಿಗೆ ಅರ್ಜಿಗಳನ್ನು ಕಳುಹಿಸಿ ಕೊಡುವ ಸಂದರ್ಭಗಳಲ್ಲಿ ಅಂಥಾ ಅರ್ಜಿಗಳು ತಾಲ್ಲೂಕು ಆಫೀಸರವರ ಕೈಸೇರಿತೆಂಬ ಬಗ್ಗೆ ಒಂದು ರಶೀತಿಯನ್ನು ಅರ್ಜಿದಾರರಿಗೆ ತಾಲ್ಲೂಕಿನಿಂದ ಕಳುಹಿಸಬೇಕೆಂದು ೧೯೦೮ ನೆ ಇಸವಿಯ ಪ್ರಜಾಪ್ರತಿನಿಧಿ ಸಭೆಯಲ್ಲಿ ಚರ್ಚೆ ನಡೆದದ್ದರ ಮೇಲೆ ಸರ್ಕಾರದವರು ಹುಕುಂ ಮಾಡಿರುವದೇನಂದರೆ.—ಮೇಲ್ಕಂಡಂತೆ ನೆರವೇರಿಸಿ ಕೊಡತಕ್ಕ ವಿಷಯದಲ್ಲಿ ಯಾವ ಆಕ್ಷೇಪಣೆಯೂ ಕಂಡು ಬರುವದಿಲ್ಲವಾದಕಾರಣ ತಾಲ್ಲೂಕು ಮತ್ತು ಇತರ ಆಫೀಸರುಗಳಿಗೆ ಟಪ್ಪಾಲು ಮೂಲಕ ಕಳುಹಿಸಲ್ಪಡುವ ಅರ್ಜಿಗಳ ಜತೆಯಲ್ಲಿ ಒಂದಾಣೆ ಕೋರ್ಟುಫೀಸ್ ಸ್ಟಾಂಪನ್ನು ಅಂಟಿಸಿ ಇರುವ ಒಂದು ರಶೀತಿಯನ್ನು ಸಹಾ ಕಳುಹಿಸಿದಲ್ಲಿ ಅಂಥಾ ಅರ್ಜಿಯು ಯಾವ ಆಫೀಸರಿಗೆ ಕಳುಹಿಸಲ್ಪಟ್ಟು ಇರುತ್ತೊ ಅಂಥಾ ಆಫೀಸರವರಿಂದಾಗಲಿ ಅಥವಾ ಅವರಿಂದ ಅಪ್ಪಣೆ ಪಡೆದಿರುವ ಆ ಆಫೀಸಿನ ತಾಬೇದಾರಿ ನೌಕರರಿಂದಲಾಗಲಿ ಸದರಿ ರಶೀತಿಯು ರುಜು ಮಾಡಲ್ಪಟ್ಟು ಅರ್ಜಿದಾರನಿಗೆ ವಾಪಸು ಕಳುಹಿಸಲ್ಪಡಬೇಕು.

II

ನಂ. ೫೮೬೫ -ಫಾ. ೧೪೬-೦೮-೧. ತಾರೀಖು ೯ನೇ ಫೆಬ್ರವರಿ ೧೯೦೯.

ಸಾಲೀಯಾನಾ ಫಾರೆಸ್ಟು ಇಲಾಖೆಯವರು ಕಡಿಯುವ ಕೂಪುಗಳ ಪೈಕಿ ಹೊನ್ನೇಮರಗಳ ತುದಿಗಳನ್ನೂ ಕೊಂಬೆಗಳನ್ನೂ ಶಿಕಾರಿಪುರ, ಸೊರಬ ಮತ್ತು ಸಾಗರ ತಾಲ್ಲೂಕುಗಳಲ್ಲಿ ನೇಗಿಲುಗಳಿಗಾಗಿಯೂ ವ್ಯವಸಾಯದ ಮುಟ್ಟುಗಳಿಗಾಗಿಯೂ ಮುಫತ್ತಾಗಿ ಕೊಡಲಾಗುವುದೆಂದು ಸರ್ಕಾರದವರು ಹುಕುಂ ಮಾಡಿರುತ್ತಾರೆ.

III

ಗೌ. ಪ್ರೊ. ನಂ. ರೆ. ೫೮೨೮-೯-ಫಾರೆಸ್ಟು ೧೪೩-೦೮-೧.

ತಾ|| ೬—೨—೦೯.

ಕರಡಿಬೆಟ್ಟ ಮತ್ತು ಬೆಳ್ಳಂಮೂರು ಜಂಗಲಿಗಳಿಂದ ಬೆಲ್ಲವನ್ನು ತಯಾರು ಮಾಡುವದಕ್ಕಾಗಿ ತೆಗದುಕೊಂಡು ಹೋಗುವ ಸೌದೆ ಮೇಲಿನ ತೆರಿಗೆಯ ದರವನ್ನು ಭಂಡಿ ಒಂದಕ್ಕೆ ೨ ಆಣೆಗೆ ತಗ್ಗಿಸಿ ಇರುತ್ತೆ.

IV

ಗೌ. ಪ್ರೊ. ನಂ. ರೆ. ೫೯೯೭-೯ ವ್ಯವಸಾಯ ೩೧-೦೮-೨೬

ತಾ|| ೧೧—೨—೦೯.

ತತ್ಕಾಲದ ಕಾಲಸ್ಥಿತಿಗಾಗಿ ಸಂಸ್ಥಾನದ ಉಕ್ಕಡಗಳಲ್ಲಿ ಕಾವಲು ಇರುವ ತೋಟಿಗಳ ಮತ್ತು ತಳವಾರಗಳ ಮೇಲೆ ಹೆಚ್ಚು ಕೆಲಸ ಹಾಕಿರುತ್ತದೆಂಬ ಅಂಶವನ್ನು ಮತ್ತು ಈರೀತಿ ನೇಮಿಸಿರುವದರಿಂದ ಅವರುಗಳಿಗೆ ಮಾಹೇಯಾನ ಸಲ್ಲತಕ್ಕ ತಲಬು ಜೀವನಕ್ಕೆ ಸಾಲದೆ ಅದರ ಜತೆಗೆ ಇತರವಿಧದಲ್ಲಿ ಸಂಪಾದನೆ ಮಾಡಿಕೊಳ್ಳುವದು ತುಂಬಾ ಪ್ರಯಾಸವಾಗಿ ಕಂಡು ಬರುವದರಿಂದ ಉಕ್ಕಡಗಳಲ್ಲಿ ಕಾವಲು ಇರುವಂಥಾ ತೋಟಿಗಳಿಗೂ ತಳವಾರಿಗಳಿಗೂ ೧೯೦೯ನೆ ಜನವರಿ ೧ನೇ ತಾರೀಖು ಲಾಗಾಯಿತು ಮೂರು ತಿಂಗಳುಗಳ ಕಾಲ ಪರಿಯಂತರ ಮಾಹೆಯಾನಾ ಒಂದು ರೂಪಾಯಿನಂತೆ ಅಲೋಯನ್ಸನ್ನು ಕೊಡಬೇಕೆಂದು ಸರ್ಕಾರದವರು ಹುಕುಂ ಮಾಡಿರುತ್ತಾರೆ.

## V

ಗೌ. ಪ್ರೊ. ನಂ. ರೆ. ೬೬೪೮೭-೯೩—ಅಗ್ರಿ. ೧೭೨-೦೯-೨,
ತಾ|| ೨೭—೨—೦೯.

ಸಂಸ್ಥಾನದ ಕೆಲವು ಕಡೆಗಳಲ್ಲಿ ದನಗಳ ಮೇವಿಗೂ ನೀರಿಗೂ ತೊಂದರೆ ಯುಂಟಾಗಿರುವ ಪ್ರಯುಕ್ತ ಈ ಕೆಳಗೆ ಕಂಡ ಅಮೃತಮಹಲ್ ಕಾವಲುಗಳಲ್ಲಿ ದನಗಳನ್ನು ಮೇಯಿಸಲಿಕ್ಕೆ ಸರ್ಕಾರದವರು ಹುಂಗಾಮಿಯಾಗಿ ಅವಕಾಶ ಕೊಟ್ಟಿರುತ್ತಾರೆ.

| ಡಿಸ್ಟ್ರಿಕ್ಟು. | ತಾಲ್ಲೂಕು. | ಕಾವಲುಗಳು. |
|---|---|---|
| ತುಮಕೂರು ... | ತುಮಕೂರು. ... | (೧) ಕರಡಗೆರೆ. |
| | ... | (೨) ಪುರಂಡಕಟ್ಟೆ. |
| | ಶಿರಾ. ... | (೩) ಮುಖಿಗೆರೆ. |
| | ತಿಪ್ಟೂರು. ... | (೪) ಬಿದರೆ. |
| | ಗುಬ್ಬಿ. ... | (೫) ಬಿಕ್ಕೆ ಗುಡ್ಡ. |
| | ಮಧುಗಿರಿ. ... | (೬) ಖಡ್ಕಾಂಗಿ. |
| | ಕುಣಿಗಲು. ... | (೭) ಕೆಂಪಾಂಬುಧಿ |
| ಕಡೂರು | ಕಡೂರು. ... | (೮) ದೊಡ್ಡನಗುತ್ತಿ |
| | ... | (೯) ಕೆನಕಟ್ಟೆ ಕೆರೆಹಿಂದೆ. |
| | ... | (೧೦) ತಂತ್ರಿಬೋರೆ. |
| | ... | (೧೧) ಬೀರೂರು. |
| | ... | (೧೨) ತಗ್ಗಹಳ್ಳಿ. |
| | ಚಿಕ್ಕಮಗಳೂರು ... | (೧೩) ತಿರ್ಥೆಗುತ್ತಿ |
| | ... | (೧೪) ಜಕ್ಕೇರಿ. |
| | ... | (೧೫) ಲಕ್ಕಮ್ಮನಹಳ್ಳಿ. |
| ಹಾಸನ. | ಹಾಸನ. ... | (೧೬) ರಂಗಾಪುರ. |
| | ... | (೧೭) ರಾಮದೇವರ ಹಳ್ಳ. |
| | ಚೆನ್ನರಾಯಪಟ್ಟಣ | (೧೮) ಕೆಂಬಿ ಕಾವಲು. |
| | ಅರಸೀಕೆರೆ ... | (೧೯) ಬೂದೇನಹಳ್ಳಿ. |
| | ... | (೨೦) ಹಬ್ಬನಗಟ್ಟ. |
| | ... | (೨೧) ಅತ್ತಿಗುತ್ತಿ. |
| | ಹೊಳೆ ನರಸೀಪುರ. | (೨೨) ಕಲ್ಲಹಳ್ಳಿ. |

| ಡಿಸ್ಟ್ರಿಕ್ಟು. | ತಾಲ್ಲೂಕು. | | ಕಾವಲುಗಳು. |
|---|---|---|---|
| ಚಿತ್ರದುರ್ಗ. | ಚಳ್ಳಕೆರೆ. | ... | (೨೩) ಕೋಣಿಗರ ಹಳ್ಳಿ. |
| | | ... | (೨೪) ಪಗಡಲಬಂಡೆ. |
| | | ... | (೨೫) ಬೆಳ್ಳಗೆರೆ. |
| | | ... | (೨೬) ಹೊಸಕಂಟಿ. |
| | | ... | (೨೭) ನಾಣಿಕೆರೆ. |

## Occasional Notes.
## ವಿವಿಧ ವೃತ್ತಾಂತಗಳು.

೧. ೧೯೦೮—೦೯ನೆ ಸಾಲಿನಲ್ಲಿ ಬ್ರಿಟಿಷ್ ಇಂಡಿಯಾದಲ್ಲಿ ೯೮೯,೦೦೦ ಎಕರೆ ವಿಸ್ತೀರ್ಣದಲ್ಲಿ ನೆಲಗಡ್ಲೆ ಫಸಲು ಇಟ್ಟಿರುತ್ತೆ. ಹೋದಸಾಲಿನಲ್ಲಿ ೮೪೮,೭೦೦ ಎಕರೆಯಲ್ಲಿ ಈ ಫಸಲಿಟ್ಟಿತ್ತು. ೧೯೦೮-೦೯ ರಲ್ಲಿ ಸುಮಾರು ೪೪೨,೦೦೦ ಟನ್ ಕಾಯಿ ಒಟ್ಟು ಹುಟ್ಟುವಳಿ ಆಗಬಹುದೆಂದು ಅಂದಾಜಾಗಿರುತ್ತೆ.

೨. ಇಂಡಿಯಾ ದೇಶದಲ್ಲಿ ಚಾಲ್ತಿ ಸಾಲ್ ಫೆಬ್ರವರಿ ಮಾಹೆ ವರೆಗೆ ಒಟ್ಟು ೧೯,೭೩೯,೦೦೦ ಎಕರೆಗಳಲ್ಲಿ ಹತ್ತಿ ಬೆಳೆ ಇಟ್ಟಿತ್ತು. ಈ ವಿಸ್ತೀರ್ಣವು ಹೋದ ವರ್ಷಕ್ಕಿಂತ ೧,೮೯೧,೦೦೦ ಎಕರೆಗಳಷ್ಟು ಕಡಿಮೆಯಾಗಿರುತ್ತೆ. ಹುಟ್ಟುವಳಿಯು ಸುಮಾರು ೩,೭೪೩,೦೦೦ ಬೇಲುಗಳು (ಬೇಲು ಒಂದಕ್ಕೆ ೪೦೦ ಪೌಂಡುಗಳು) ಆಗಬಹುದೆಂದು ಅಂದಾಜು ಆಗಿರುತ್ತೆ. ಹೋದ ವರುಷ ೩,೧೨೨,೦೦೦ ಬೇಲುಗಳಾಗಿತ್ತು.

೩. ಇಂಡಿಯಾದೇಶದಲ್ಲಿ ಹುಚ್ಚು ನಾಯಿಯು ಕಡಿತದಿಂದ ಉಂಟಾಗುವ ರೋಗಕ್ಕೆ ಚಿಕಿತ್ಸೆ ವಿಷಯವಾಗಿ ಒಂದು ಸಣ್ಣ ಪುಸ್ತಕವನ್ನು ಪ್ರತಿ ಹೋಬಳಿ ಶೇಕದಾರರಿಗೂ ಈ ಸೂಚಿಕೆಯೊಂದಿಗೆ ಕಳುಹಿಸಿ ಕೊಟ್ಟಿರುತ್ತೆ. ಈ ಚಿಕಿತ್ಸಾ ಕ್ರಮವನ್ನು ಎಲ್ಲರೂ ತಿಳಿದುಕೊಳ್ಳುವದು ಅವಶ್ಯಕವಾಗಿರುವ ಕಾರಣ ಈ ಪುಸ್ತಕವನ್ನು ರೆವಿನ್ಯೂ ಗೆಜೆಟ್ಟಿನಂತೆಯೇ ಶೇಕದಾರರು ಮುಖಂಡರಾದ ಪಟೇಲ ಶ್ಯಾನುಭೋಗರುಗಳಿಂದ ಗ್ರಾಮ ಚಾವಡಿಗಳಲ್ಲಿ ಬಹಿರಂಗವಾಗಿ ಓದಿಸಿ ಅದರಲ್ಲಿರುವ ಸಂಗತಿಗಳನ್ನು ಜನಗಳ ತಿಳುವಳಿಕೆಗೆ ತರುತ್ತಾರೆಂದು ನಂಬಿರುತ್ತೆ.

೪. ಮೈಸೂರು ಡಿಸ್ಟ್ರಿಕ್ಟ್ ಕೃಷ್ಣರಾಜಪೇಟೆ ತಾಲ್ಲೂಕು ರೆಕಾರ್ಡಿ
ನಲ್ಲಿ ತಹಲ್‌ನರಿವಿಗೂ ಛಪ್ರಸಡಿಸಿದ್ದ ೧೮೧೭ನೆ ಸಾಲಿಗಾಯಿತು ೧೮೮೭ನೆ
ಸಾಲ್‌ನರಿವಿಗಿನ ಕುಳವಾರ್ ಚಿಟ್ಟಿಗಳನ್ನು ಮಾರ್ಚಿ ಮಾಹೆ ೫ನೆ ತಾಗ
ಯಿತು ಮೂರು ತಿಂಗಳು ಕಳೆದನಂತರ ರೂಲ್ಸು ಪ್ರಕಾರ ನಾಶಪಡಿಸ
ಲ್ಪಡುತ್ತವೆಯಾದ್ದರಿಂದ ಇವುಗಳ ಕಾಪಿಯನ್ನು ಅಪೇಕ್ಷಿಸುವವರು ಮಾ
ದೆ ಅಂದರ್ ಅರ್ಜಿ ಕೊಟ್ಟು ಕಾಪಿ ಪಡೆಯಬಹುದಾಗಿರುತ್ತೆಂದು ಮೈ
ಸೂರು ಡಿ|| ಡೆಪ್ಯೂಟಿ ಕಮೀಷನರವರು ೧೯೦೯ನೆ ಮಾರ್ಚಿ ಮಾಹೆ ೧೧ನೆ
ತಾರೀಖಿನ ಮೈಸೂರು ಸರ್ಕಾರಿ ಗೆಜೆಟ್ಟಿನಲ್ಲಿ ಪ್ರಕಟಪಡಿಸಿರುತ್ತಾರೆ.

---

೫. ಇಂಡಿಯಾ ದೇಶದಲ್ಲಿ ತೆಂಗು ವಿಶೇಷವಾಗಿ ಆಗುತ್ತೆ ಮತ್ತು ಮಟ್ಟೆ
ಸುಲಿದು ಕಾಯಿಗಳನ್ನು ಅನ್ಯದೇಶಗಳಿಗೆ ಬಹಳವಾಗಿ ರಫ್ತು ಮಾಡುತ್ತಾ
ರೆ. ಆದಾಗ್ಯೂ ಕೂಡ ಮಟ್ಟೆಯಿಂದ ನಾರು ತೆಗೆಯುವ ಕಸಬನ್ನು
ಸ್ಥಾಪಿಸಲು ಯಾರೂ ಮುಂದಾಗಿಲ್ಲ. ತಕ್ಕ ಯಂತ್ರೋಪಕರಣವನ್ನಿ
ಟ್ಟುಕೊಂಡು ತಯಾರಾದ ಸರಕಿಗೆ ಒಳ್ಳೆ ಗಿರಾಕಿಯನ್ನು ಒದಗಿಸಿಕೊಂ
ಡರೆ ತಪ್ಪಾಪಿ ಮಟ್ಟೆಯು ಅತ್ಯಲ್ಪ ಖರೀದಿಗೆ ದೊರೆಯುತ್ತಾದ್ದರಿಂದ ಈ
ಕಸಬಿನಿಂದ ಒಳ್ಳೇ ಲಾಭವನ್ನು ಹೊಂದಬಹುದು. ೧೯೦೮ನೆ ಇಸವಿಯ
ಲ್ಲಿ ಬೊಂಬಾಯಿ ಪಟ್ಟಣದಲ್ಲಿ ಈ ಕಸಬನ್ನು ಸ್ಥಾಪಿಸಲು ಸನ್ನಾಹವೇ
ನೋ ನಡೆಯಿತು. ಆದರೆ ಯಾವ ಕಾರಣದಿಂದಲೋ ಅದಕ್ಕೆ ತಕ್ಕ ಪ್ರೋ
ತ್ಸಾಹ ದೊರೆತಂತೆ ಕಂಡು ಬರುವದಿಲ್ಲ. ಸ್ವಲ್ಪ ಬಂಡವಾಳದಿಂದ ಈ ಕ
ಸಬನ್ನು ನಡೆಸಬಹುದಾದ್ದರಿಂದಲೂ ಮತ್ತು ಸ್ಥಳದಿಂದ ಸ್ಥಳಕ್ಕೆ ಸಾಗಿ
ಸಲು ಬೇಕಾದ ಅನುಕೂಲಗಳಿರುವ ಪಶ್ಚಿಮತೀರದಲ್ಲಿ ಸಧ್ಯದಲ್ಲಿ ಈ ಕಸ
ಬನ್ನು ಯಾರೂ ನಡೆಸುತ್ತಿರುವದಿಲ್ಲವಾದ್ದರಿಂದಲೂ ಒಟ್ಟಾಗಿಯಾಗಲೀ
ಒಬ್ಬೊಬ್ಬರೇ ಆಗಲಿ ಲಾಭಕರವಾದ ಈ ಉದ್ಯೋಗವನ್ನು ಸ್ಥಾಪಿಸಲು
ಸುಲಭ ಸಾಧ್ಯವಾಗುತ್ತದೆ.—ಇಂಡಿಯನ್ ಟ್ರೇಡ್ ಜರ್ನಲ್.-೧೧—೨—೦೯.

---

V. B. Soobbiah & Sons, Printers, Bangalore.—1909.

THE MYSORE

# REVENUE & AGRICULTURAL GAZETTE.

ವಾಲ್ಯುಂ ೩.] ಗುರುವಾರ, ೧ನೆ ಏಪ್ರಿಲ್ ೧೯೦೯. [ನಂ. ೧೧.

## Contents.



## ಅನುಕ್ರಮಣಿಕೆ.



## Benares Co-operative Society. *

## ಬೆನಾರಸ್ ಪರಸ್ಪರ ಸಹಾಯಕ ಸಂಘ.

ಬನಾರಸ್ ಪಟ್ಟಣದಲ್ಲಿ ಈಚೆಗೆ ಒಂದು ಪರಸ್ಪರ ಸಹಾಯಕ ಸಂ

* ಹಿಂದೂ ಪತ್ರಿಕೆ, ೪—೩—೦೯.

ಘವು ಸ್ಥಾಪಿಸಲ್ಪಟ್ಟಿರುತ್ತೆ. ಇತರ ಸಂಘಗಳಲ್ಲಿರುವ ನ್ಯೂನತೆಗಳು ಇ
ದರಲ್ಲಿರುವದಿಲ್ಲ. ಈ ಸಂಘದವರು ಸಾಲ ಕೊಡುವದೊಂದೇ ಅಲ್ಲದೆ ಇತರ
ಭಾಗಗಳಲ್ಲಿಯೂ ವಿಶೇಷ ಉತ್ಸಾಹದಿಂದ ಕಾರ್ಯ ನಿರ್ವಾಹ ಮಾಡುತ್ತಾ
ರೆ. ಈ ಸಂಘವನ್ನು ಬಹಳ ಪ್ರಯೋಜನಕರವಾಗಿ ಮಾಡುವ ಉದ್ದೇ
ಶದಿಂದ ಸಂಘದ ಮೆಂಬರುಗಳೆಲ್ಲರೂ ತಿಂಗಳಿಗೆರಡಾವರ್ತಿ ಸಭೆ ಸೇರಿ ಈ
ಸಭೆಗೆ ಎಲ್ಲರೂ ತಪ್ಪದೆ ಹಾಜರಾಗಬೇಕೆಂಬುವ ಏರ್ಪಾಡಿಟ್ಟದೆ. ಈ ಸ
ಭೆಗಳಲ್ಲಿ ಗ್ರಾಮದ ವ್ಯವಹಾರಗಳನ್ನು ವ್ಯವಸ್ಥೆ ಮಾಡುತ್ತಾರಲ್ಲದೆ ಮ
ತ ಸಂಬಂಧವಾದ ಪುಸ್ತಕಗಳು ಮತ್ತು ವ್ಯವಸಾಯಕ ಪುಸ್ತಕಗಳ
ನ್ನು ಓದಿಸುತ್ತಾರೆ. ಈವರೆಗೆ ಪಂಚಾಯತ ಕಮಿಟಿಯು ಏರ್ಪ
ಟ್ಟದ ಲಾಗಾಯಿತು ಯಾರೂ ಕೋರ್ಟಿಗೆ ಹೋಗಿರುವದಿಲ್ಲ. ಈ ಸಂಘ
ಕ್ಕೆ ಸಂಬಂಧಪಟ್ಟಹಾಗೆ ಪರಸ್ಪರ ಸಹಾಯಕವಾಗಿರುವ ರೀತಿ ಒಂದು ಗ್ರಾ
ಮ ಲೈಬ್ರರಿ ಅಂದರೆ ಪುಸ್ತಕ ಭಾಂಡಾರವನ್ನು ಏರ್ಪಡಿಸಬಹುದಾಗಿರು
ತ್ತದೆ. ಇಷ್ಟೆ ಅಲ್ಲದೆ ಈ ಸಂಘದವರು ಇನ್ನೊಂದು ಶ್ಲಾಘನೀಯವಾದ
ಕೆಲಸವನ್ನು ಮಾಡಿರುತ್ತಾರೆ. ಹೂತುಹೋಗಿ ಬೇಸಿಗೆಯಲ್ಲಿ ನೀರು
ಬತ್ತಿಹೋಗುತ್ತಿರುವ ಒಂದು ಕೆರೆಯನ್ನು ದುರಸ್ತುಮಾಡಲು ಪ್ರಯತ್ನ
ಪಟ್ಟಿರುತ್ತಾರೆ. ಈ ಕಾರ್ಯವನ್ನು ನಿರ್ವಹಿಸುವಷ್ಟು ಯೋಗ್ಯತೆ ಉಳ್ಳ
ವರು ಗ್ರಾಮದಲ್ಲಿ ಯಾರು ಇಲ್ಲವಾದಕಾರಣ ಸಂಘದವರು ತಕ್ಕಷ್ಟು ರಿಸ
ರ್ವ್ ಫಂಡನ್ನು ಶೇಖರಿಸಿ, ಈ ಹಣವನ್ನು ಮೆಂಬರುಗಳಿಗೆಲ್ಲಾ ಉಪಯು
ಕ್ತವಾಗುವ ರೀತಿ ತಲಾವ್ ರಿಪೇರಿಗಾಗಿ ವೆಚ್ಚ ಮಾಡಬೇಕೆಂದು ನಿರ್ಧರಿಸಿ
ರುತ್ತಾರೆ. ಈ ಫಂಡನ್ನು ಜಾಗ್ರತೆ ಒದಗಿಸುವದಕ್ಕಾಗಿ ಸಂಘದವರು
ಸಂಘದಪರವಾಗಿ ಒಂದು ಜಮೀನಿನಲ್ಲಿ ಕಬ್ಬು ಪೈರು ಇಟ್ಟು ವ್ಯವಸಾಯ
ಕ್ಕೆ ಬೇಕಾಗುವ ಆಳುಗಳನ್ನು ತಾವುಗಳೇ ಸರ್ತಿಮೇರೆ ಮುಫತ್ತಾಗಿ
ಒದಗಿಸಿಕೊಡುತ್ತಾರೆ. ಇದರಿಂದ ಬರುವ ಲಾಭವು ಮೇಲ್ಕಂಡ ರಿಸರ್ವ್
ಫಂಡಿಗೆ ಸೇರುತ್ತದೆ. ಮತ್ತೊಂದು ವಿಶೇಷವೇನಂದರೆ, ಕ್ಷಾಮ ಬಂದಿದ್ದ
ಕಾಲದಲ್ಲಿ ಸರ್ಕಾರದವರು ಉಚಿತವಾಗಿ ಸಹಾಯವನ್ನು ಹಂಚುತ್ತಿದ್ದಾಗ
ಈ ಗ್ರಾಮದಲ್ಲಿ ಜರೂರಾಗಿ ಸಹಾಯವನ್ನು ಪಡೆಯಲು ಅರ್ಹರಾಗಿದ್ದ
ಅನೇಕ ನಿರ್ಗತಿಕರಿದ್ದರೂ ಕೂಡ, ಅಲ್ಲಿನ ಸೂಪರ್ವೈಜರುಗಳು ಒಬ್ಬ

ನನ್ನೆ ಶಿಫಾರಸು ಮಾಡಿದರು. ಸೊಸೈಟಿಯು ಮೆಂಬರುಗಳು ಚಂದಾ ಮೂಲಕ ಹಣವನ್ನು ಎತ್ತಿ ಮೂವರನ್ನು ಮೂರುತಿಂಗಳವರಿಗೆ ಸಂರಕ್ಷಿಸಿದರು. ಇದರಲ್ಲಿನ ಮುಖ್ಯಾಂಶವೇನಂದರೆ, ಕಮಿಟಿಯುವರು ಈ ಚಂದಾ ಹಣವನ್ನು ಸಂಘದಲ್ಲೇ ಡಿಪಾಜಿಟ್ ಇಟ್ಟಿದ್ದರು. ಇದರಿಂದ ಮೇಲ್ಕಂಡಂತೆ ಸಹಾಯವನ್ನು ಪಡಿಯುತ್ತಿದ್ದವರಿಗೂ ಮತ್ತು ಇತರರಿಗೂ ಸಹ ಈ ಸಂಘವು ವಿಶೇಷ ಜನೋಪಕಾರಿಯಾದದ್ದೆಂಬುದು ಮನಸ್ಸಿಗೆ ಚೆನ್ನಾಗಿ ನಾಟಿತು.

---

## Manuring Wet Lands.*

## ತರೀಜಮೀನುಗಳಿಗೆ ಗೊಬ್ಬರವನ್ನು ಒದಗಿಸುವದು.

ತರೀಜಮೀನುಗಳಿಗೆ ಸಾಕಾದಷ್ಟು ಗೊಬ್ಬರ ಸಿಕ್ಕುವದಿಲ್ಲವೆಂದು ಸಾಮಾನ್ಯವಾಗಿ ಹೇಳುವದುಂಟು. ಪರಂತು ರೈತನು ಬಂಡವಾಳಸ್ಥನಾಗಿದ್ದರೆ ಈ ಭಾಗದಲ್ಲಿ ವಿಚಾರ ಪಡಬೇಕಾದ್ದೇ ಇಲ್ಲ. ಕಡೆಗೆ ಬಡರೈತನೂ ಕೂಡ ಈ ನ್ಯೂನತೆಯನ್ನು ಹೋಗಲಾಡಿಸುವ ವಿಷಯದಲ್ಲಿ ತಕ್ಕ ಪರಿಹಾರವನ್ನು ಯೋಚಿಸಬಹುದು. ಬೇಸಾಯಕ್ಕೆ ಆರಂಭದಲ್ಲಿ ತಗಲುವ ಖರ್ಚನ್ನು ತಡಿಯಲು ಶಕ್ತನಾಗಿರುವವನಿಗೆ ತನ್ನಲ್ಲಿ ಒದಗುವ ಗೊಬ್ಬರದ ಜೊತೆಗೆ ನೆಲಗಡ್ಲೆ, ಹರಳು, ಬೇವು ಮತ್ತು ಹಿಪ್ಪೆಹಿಂಡಿಗಳು, ಮೀನುಗೊಬ್ಬರ ಮತ್ತು ಹಾಲಿ ಅನ್ಯದೇಶಗಳಿಗೆ ಗೊಬ್ಬರಕ್ಕಾಗಿ ವಿಶೇಷ ಸಾಗಿಹೋಗುತ್ತಿರುವ ಇನ್ನೂ ಅನೇಕ ಪದಾರ್ಥಗಳನ್ನು ಒದಗಿಸಿಕೊಳ್ಳುವದು ಒಂದು ದೊಡ್ಡ ವಿಷಯವಲ್ಲ. ದೊಡ್ಡವರಾಗಲಿ ಬಡವರಾಗಲಿ ಗದ್ದೆಗಳಲ್ಲಿ ಪೈರಿಡದೆ ಇರುವ ಕಾಲಗಳಲ್ಲಿ ಹಸುರು ಗೊಬ್ಬರಕ್ಕಾಗಿ ಯಾವದಾದರೂ ಒಂದು ಪೈರನ್ನು ಇಡಬಹುದು. ಬತ್ತದ ಪೈರು ಕಟಾವಾದ ನಂತರ ಪುನಃ ಅದೇ ಪೈರಿಡುವದಕ್ಕೆ ಮುಂಚೆ ತರೀಜಮೀನುಗಳಲ್ಲಿ ಖುಷ್ಕಿ ಬೆಳೆ ಇಟ್ಟರೆ ಭೂಮಿ ಕೆಟ್ಟು ಹೋಗುತ್ತೆಂದು ಕೆಲವರು ಹೇಳುವದುಂಟು. ಆದರೆ ಇದು ಸೋಮಾರಿ ರೈತನು ಹೇಳುವ ಮಾತಾಗಿರುತ್ತದೆ. ಏಕೆಂದರೆ, ಭಾರಿ ವಿಸ್ತೀರ್ಣದಲ್ಲಿ ಬತ್ತದ ಪೈರು ಕಟಾವಾದ ಕೂಡಲೆ ಜೋಳ ಮುಂತಾದ

* ಮದರಾಸ್ ಅಗ್ರಿಕಲ್ಚರಲ್ ಕ್ಯಾಲೆಂಡರ್, ೧೯೦೯.

ಖುಷ್ಕಿ ಪೈರುಗಳನ್ನೂ, ಹಸರು ಗೊಬ್ಬರಕ್ಕೆ ಉಪಯೋಗಪಡುವ ಪೈ
ರುಗಳನ್ನೂ ಮಾಡಿ ನಂತರ ಪುನಃ ಅದೇ ಜಮೀನಿನಲ್ಲಿ ಒಳ್ಳೆ ಬತ್ತದ ಬೆ
ತೆಗೆಯುತ್ತಿರುವದನ್ನು ಎಲ್ಲರೂ ನೋಡಿರಬಹುದು. ಗುಂಡಿಗಳಲ್ಲಿ ಗೊಬ್ಬ
ರವನ್ನು ಕೂಡಿಹಾಕಿ ಅದನ್ನು ಸರಿಯಾಗಿ ಕಾಪಾಡುವ ಭಾಗದಲ್ಲಿ ಐಶ್ವ
ನಂತರೂ ಹಾಗೂ ಬಡವರೂ ಕೂಡ ವಿಶೇಷ ಶ್ರಮವಿಲ್ಲದೆ ಹೆಚ್ಚು ಗಮ
ಕೊಡಬಹುದು. ಗೊಬ್ಬರವನ್ನು ರಾಶಿಹಾಕದೆ ಗುಂಡಿಗಳಲ್ಲಿ ಜಮಾ
ಯಿಸಿಡಬೇಕು. ನಂತರ ಇದರಲ್ಲಿ ಪ್ರತಿದಿನವೂ ಸೇರುವ ದನದ ಸಗ
ಯೊಂದಿಗೆ ಹೊಲಗಳಿಂದ ಕೊಳೆಯುವ ಮತ್ತು ಒಲೆಗೆ ಸೌದೆಯಾಗಿ ಉ
ಯೋಗ ಪಡದಿರುವ ಕಸಕಡ್ಡಿಗಳನ್ನೂ ಮತ್ತು ಮನೆಯಲ್ಲಿನ ಬೂದಿ
ಕಸ, ಎಲೆ ಮುಂತಾದವುಗಳನ್ನು ಈ ಗುಂಡಿಯಲ್ಲಿ ಹಾಕಬೇಕು. ಹೊ
ಗದ್ದೆಗಳಲ್ಲಿ ಕಿತ್ತ ಕಳೆ, ಮನೆಗಳಿಗೆ ಹೊದ್ದಿಸಿದ್ದ ಹಳೇಹುಲ್ಲು, ಹೊಟ್ಟು
ಮತ್ತು ಹೊಗೆಸೊಪ್ಪು, ಮೆಣಸಿನಕಾಯಿ, ಬದನೇಕಾಯಿ, ಅಕ್ಕ
ಮುಂತಾದ ಗಿಡಗಳ ಒಣಗಿದ ದಂಟುಗಳು, ಇವೇ ಮೊದಲಾದ ಪದಾರ್ಥ
ಗಳು ಹಾಳಿ ಹಲಾಕಾಗುತ್ತಿವೆ. ಇವುಗಳನ್ನು ಬಿಸಾಡುವದಕ್ಕೆ ಬದಲಾ
ಗೊಬ್ಬರ ಗುಂಡಿಗಳಲ್ಲಿ ಕೂಡಿಟ್ಟರೆ ಉತ್ಕೃಷ್ಟವಾದ ಗೊಬ್ಬರವಾಗ
ತ್ತವೆ. ಗುಂಡಿಗಳಲ್ಲಿನ ಕಸ ಕಡ್ಡಿಗಳು ಶುದ್ಧಾಂಗವಾಗಿ ಒಣಗದಂ
ಆಗಾಗ್ಯೆ ನೋಡಬೇಕು. ಇವು ಪೂರ್ತಿಯಾಗಿ ಒಣಗಲಾದರೆ ಕೊಳೆಯ
ದೇ ಗೊಬ್ಬರವು ಸರಿಯಾಗಿ ಮಾಗುವದಿಲ್ಲ. ಆದಕಾರಣ ಆವಶ್ಯಬಿದ್ದಾ
ಗೆಲ್ಲ ಗೊಬ್ಬರಕ್ಕೆ ನೀರು ಹಾಕುತ್ತಿರಬೇಕು. ಗುಂಡಿಗಳಲ್ಲಿನ ಗೊಬ್ಬ
ರದ ಮೇಲೆ ಸ್ವಲ್ಪ ಮಣ್ಣನ್ನು ಪದೇ ಪದೇ ತೆಳ್ಳಗೆ ಹರಡುತ್ತಿದ್ದ
ಗೊಬ್ಬರವೆಲ್ಲ ಚೆನ್ನಾಗಿ ಕೂತು ಅದರಲ್ಲಿನ ತನುವೂ ಆರುವದಿಲ್ಲ.

ದನದಗೊಬ್ಬರ, ಹಸರು ಸೊಪ್ಪುಗಳು ಮತ್ತು ಹಸರು ಪೈ
ಗಳನ್ನು ಭೂಮಿಯಲ್ಲಿ ಉತ್ತು ಬಿಡುವದರಿಂದ ಎರಡು ಅನುಕೂಲವುಂ
ಗುತ್ತದೆ. ಇವು ಭೂಗುಣವನ್ನು ಉತ್ತಮಪಡಿಸಿ ಪೈರು ಸಲೀಸ
ಬೇರು ಬಿಟ್ಟು ಸುಲಭವಾಗಿ ಬೆಳೆಯಲು ಅವಕಾಶ ಕೊಡುತ್ತವಲ್ಲದೆ ಪೈ
ಗೆ ಬೇಕಾಗುವ ಆಹಾರವನ್ನೂ ಒದಗಿಸುತ್ತವೆ. ಹಿಂಡಿ, ಮೀನುಗ
ಬ್ಬರ, ಇವುಗಳನ್ನು ಸ್ವಲ್ಪಸ್ವಲ್ಪವಾಗಿ ಉಪಯೋಗಿಸುವದರಿಂದ ಭೂ

ಣವೇನೂ ಉತ್ತಮವಾಪಡುವದಿಲ್ಲ. ಇವು ಸಸ್ಯಾಹಾರವನ್ನು ಮಾತ್ರ ಒದಗಿಸುತ್ತವೆ. ಸಾಮಾನ್ಯವಾಗಿ ಇವನ್ನು ಹೆಚ್ಚು ಪ್ರಮಾಣದಲ್ಲಿ ಹಾಕುವ ದನದ ಗೊಬ್ಬರ, ಹಸಿರು ಸೊಪ್ಪು ಮತ್ತು ಹಸುರು ಪೈರುಗಳೊಂದಿಗೆ ಬೆರೆಸಿ ಹಾಕಿದರೆ ಒಳ್ಳೇದು. ನೀರು ಚೆನ್ನಾಗಿ ಬಸಿದು ಹೋಗುವಂತಿರುವ ಜಮೀನುಗಳಿಗೆ ಬರಿ ಹಿಂಡಿಗಳನ್ನೇ ಹಾಕಿದರೆ ಅದಾಯಕರವಾಗಬಹುದು. ಆದರೆ ನೀರುನಿಲ್ಲುವ ಅಥವಾ ಹಳ್ಳದಲ್ಲಿರುವ ಜಮೀನುಗಳಿಗೆ ಮಾತ್ರ ಇವನ್ನು ಇತರಗೊಬ್ಬರಗಳೊಂದಿಗೆ ಬೆರಸಿ ಉಪಯೋಗಿಸಬೇಕು.

---

## Oil and Oil Seeds in India. *

## ಇಂಡಿಯಾ ದೇಶದ ಎಣ್ಣೆ ಮತ್ತು ಎಣ್ಣೆ ಬೀಜಗಳು.

ಕಳೆದ ಇಂಡಿಯನ್ ಇಂಡಸ್ಟ್ರಿಯಲ್ ಕಾನ್ಫರೆನ್ಸ್ ಸಭೆಯ ಪ್ರೆಸಿಡೆಂಟರಾದ ಮಿ|| ಮುಧೋಳ್ಕರವರು ಮೇಲ್ಕಂಡ ವಿಷಯವಾಗಿ ಹೇಳುವದೇನೆಂದರೆ—ಈಗ ಕೆಲವು ವರುಷಗಳಿಂದಲೂ ಎಣ್ಣೆ ಬೀಜಗಳು ವಿಶೇಷವಾಗಿ ಅನ್ಯದೇಶಗಳಿಗೆ ರಫ್ತಾಗುತ್ತಿವೆ. ೧೯೦೩-೦೪ನೆ ಸಾಲಿನಲ್ಲಿ ೧೪½ ಕೋಟಿ ರೂಪಾಯಿನ ಬೀಜಗಳು ರಫ್ತಾದವು. ೧೯೦೭-೦೮ರಲ್ಲಿ ರಫ್ತಾದುದರ ಬೆಲೆ ೧೬·೮ ಕೋಟಿ ರೂಪಾಯಿಗಳು. ಎಣ್ಣೆಯ ರಫ್ತು ವ್ಯಾಪಾರವಾದರೋ ಏಕಪ್ರಕಾರವಾಗಿ ಕ್ಷೀಣವಾಗುತ್ತಾ ಬಂದು, ಈಗ ೫ ವರುಷಗಳಲ್ಲಿ ೮೩½ ಲಕ್ಷ ರೂಪಾಯಿಂದ ೫೧·೮ ಲಕ್ಷಕ್ಕೆ ಇಳಿದಿರುತ್ತದೆ. ಆದರೆ ಇದರ ಆಮದುವ್ಯಾಪಾರವು ೯¼ ಲಕ್ಷದಿಂದ ೩೭⅓ ಲಕ್ಷಕ್ಕೆ ಏರಿರುತ್ತದೆ. ಪಶ್ಚಿಮಾತ್ಯ ಜನಾಂಗದವರು ಶಾಸ್ತ್ರಬಲದಿಂದ, ಇಲ್ಲಿನ ಕಚ್ಚಾ ಪದಾರ್ಥವನ್ನು ೬,೦೦೦ ಮೈಲಿಗಳ ಫಾಸಲೆ ಸಾಗಿಸಿ ಅಲ್ಲಿ ಸಾಮಾನುಗಳನ್ನು ತಯಾರಿಸಿ ಪುನಃ ಈ ಸಾಮಾನುಗಳನ್ನು ಈ ದೇಶದಲ್ಲೇ ಮಾರಿ ವಿಶೇಷ ಲಾಭ ಪಡೆಯುವಷ್ಟು ಸಮರ್ಥರಾಗಿರುತ್ತಾರೆ. ಇವರು ವಿಶೇಷ ಶ್ರಮವಿಲ್ಲದೆ ಜಾಗ್ರತೆಯಾಗಿ ಕೆಲಸ ನಡೆಯುವಂತೆ ಒಳ್ಳೆ ಯಂತ್ರೋಪಕರಣಗಳನ್ನು ಉಪಯೋಗಿಸಿ ಮತ್ತು ಬೀಜದಿಂದ ಹೆಚ್ಚು ಎಣ್ಣೆಯನ್ನು ಹಿಡುವ ವಿಧಾನವನ್ನು ಕಂಡು ಹಿಡಿದು ಹಳ್ಳಿಗಾಣಿಗರು ಮತ್ತು ಯಂತ್ರಶಕ್ತಿಯಿಂ

---

* ಇಂಡಿಯನ್ ಅಗ್ರಿಕಲ್ಚರಿಸ್ಟ್. —೧-೧೦-೦೯.

ದ ಎಣ್ಣೆ ತೆಗೆಯುವವರೂ ಕೂಡ ಮಾಡುವದಕ್ಕಿಂತಲೂ ಅಗ್ಗವಾಗಿ ಮಾ
ಬಲ್ಲವರಾಗಿರುತ್ತಾರೆ. ಈ ದೇಶದ ಅನೇಕ ಕಡೆಗಳಲ್ಲಿ ಎಣ್ಣೆ ಕಾರ್ಖಾನೆ
ಗಳಿವೆ. ಆದರೆ ಇವು ಮೊದಲಿನ ಹಾಗೆ ಈಗ ಒಳ್ಳೆ ಸ್ಥಿತಿಯಲ್ಲಿಲ್ಲ. ಈ
ಬೀಜದ ಉತ್ಪತ್ತಿಯು ಕಡಮೆಯಾಗಿರುತ್ತದೆ ಮತ್ತು ಇದರ ರಖಂ ಸ
ಕಿರಿದಾಗಿರುತ್ತೆ. ಅಲ್ಲದೆ ಈ ವಿಚಾರದಲ್ಲಿ ಇಲ್ಲಿನ ಜನರು ಶಾಸ್ತ್ರಜ್ಞಾನ
ಮತ್ತು ಶಿಕ್ಷೆ ಹೊಂದಿದವರಲ್ಲ. ಈ ಕಾರಣಗಳಿಂದ ಈ ಕಸಬಿನಲ್ಲಿದ್ದ ಆದ
ಯವು ಬಹಳವಾಗಿ ಕುಗ್ಗಿರುತ್ತದೆ. ಈಗಿನ ಎಣ್ಣೆ ತೆಗೆಯುವ ಕ್ರಮ
ಗಳನ್ನು ಉತ್ತಮಪಡಿಸಿ ಈ ಕಸಬಿಗೆ ಸಂಬಂಧಪಟ್ಟ ಹಾಗೆ ವಿಧವಿಧವಾದ
ಬಣ್ಣಗಳು, ವಾರ್ನಿಷು, ಮೇಣದಬತ್ತಿ, ಸಾಬೂನು ಮುಂತಾದವುಗಳನ್ನು
ತಯಾರಿಸುವ ಉದ್ಯೋಗಗಳನ್ನು ಏರ್ಪಡಿಸಿದ್ದಾದರೆ ಈ ಕಸಬನ್ನು ಚಿ
ಸ್ಥಾಯಿಯಾಗಿ ಸ್ಥಾಪಿಸಲು ಸಾಧ್ಯವಾಗುತ್ತದೆ. ಎಣ್ಣೆ ಬೀಜಗಳು ಹಾ
ವಿಶೇಷವಾಗಿ ರಫ್ತಾಗುತ್ತಿರುವದರಿಂದ ಎರಡು ತರದ ಅನಾನುಕೂಲಗಳುಂ
ಟಾಗಿರುತ್ತವೆ. ದನಕರುಗಳಿಗೆ ಆಹಾರವಾಗಿಯೂ ಜಮೀನಿಗೆ ಸರ್ವೋ
ತ್ಕೃಷ್ಟವಾದ ಗೊಬ್ಬರವಾಗಿಯೂ ಇರುವ ಎಣ್ಣೆ ಹಿಂಡಿಯು ಸರಬರಾಯಿ
ಕಡಮೆಯಾಗಿರುತ್ತೆ. ಈ ಕಸಬನ್ನು ವೃದ್ಧಿಪಡಿಸುವದರಿಂದ ವ್ಯವಸಾ
ಯದ ಅಭಿವೃದ್ಧಿಗೂ ಪ್ರೋತ್ಸಾಹ ಕೊಟ್ಟಂತಾಗುತ್ತೆ.

———o———

## Tobacco. *

## ಹೊಗೆಸೊಪ್ಪು.

ಬ್ರಿಟಿಷ್ ಇಂಡಿಯಾ ಮತ್ತು ನೇಟಿವ್ ಸಂಸ್ಥಾನಗಳಲ್ಲಿ ಸಾಗುವಳಿ
ಯಲ್ಲಿರುವ ಒಟ್ಟು ೨,೦೦೦ ಲಕ್ಷ ಎಕರೆಗಳ ಪೈಕಿ ೧೦ ಲಕ್ಷಕ್ಕಿಂತ ಹೆ
ಚ್ಚಾಗಿ ಹೊಗೆಸೊಪ್ಪಿನ ಸಾಗುವಳಿಯಲ್ಲಿರುತ್ತೆ. ಎಕರೆಗೆ ೭೫ ರೂಪಾ
ಯಿ ಉತ್ಪತ್ತಿಯಂತೆ ಅಂದಾಜು ಕಟ್ಟಿದರೂ ಈ ದೇಶದಲ್ಲಿ ಸುಮಾರು ೭೫
ಲಕ್ಷ ರೂಪಾಯಿ ಹೊಗೆಸೊಪ್ಪಿನ ವ್ಯಾಪಾರ ಆಗುತ್ತೆಂದು ಹೇಳಬಹುದು
ಹಾಲಿ ಇಲ್ಲಿ ಆಗುವ ಸೊಪ್ಪೆಲ್ಲ ಸ್ಥಳೀಯ ರಖಂಗಳು. ಅನ್ಯದೇಶಗಳಲ್ಲಿ ಚ
ಟ್ಟಾವಿಗೂ ಮತ್ತು ಚುಂಗಾನಿ ಸೇದುವದಕ್ಕೂ ಉಪಯೋಗಿಸುವ ಸೊಪ್ಪ

* ಅಗ್ರಿಕಲ್ಚರಲ್ ಜರ್ನಲ್ ಆಫ್ ಇಂಡಿಯ, ಅಕ್ಟೋಬರ್ ೧೯೦೪.

ನ ದರ್ಜೆಗೆ ಇದು ಸೇರುವದಿಲ್ಲ. ಯೂರೋಪಿಯನ್ ದೇಶಗಳ ಗಿರಾಕಿಗೆ ಲಾಯಖಾಗಿರುವ ರೀತಿ ಇಂಡಿಯಾದೇಶದಲ್ಲಿ ಉತ್ತಮ ರಖಂ ಹೊಗೆಸೊಪ್ಪನ್ನು ಕ್ರಮವಾಗಿ ಬೆಳೆದು ಹದಗೊಳಿಸಿದ್ದೇ ಆದರೆ ಸೊಪ್ಪಿನ ಧಾರಣೆಯು ವಿಶೇಷ ಹೆಚ್ಚಿ, ಇದರ ರಫ್ತು ವ್ಯಾಪಾರವು ಪ್ರಬಲವಾಗುತ್ತದೆ. ಈದೇಶದ ಅನೇಕ ಕಡೆಗಳಲ್ಲಿನ ಭೂಮಿ ಮತ್ತು ಹವಾ ಈಬೆಳೆಗೆ ಬಹಳ ಅನುಕೂಲವಾಗಿರುತ್ತವೆ. ವ್ಯವಸಾಯಕ್ರಮದಲ್ಲಿಯೂ ನ್ಯೂನತೆ ಇರುವದಿಲ್ಲ. ಆದರೂ ಉತ್ತಮತರಹ ಸೊಪ್ಪು ಇಲ್ಲಿ ಬೆಳೆಯದೆ ಇರುವದಕ್ಕೆ ಎರಡು ಕಾರಣಗಳುಂಟು. ಮೊದಲನೇದು, ಈದೇಶದಲ್ಲಿ ಹಾಲಿ ಸಾಮಾನ್ಯವಾಗಿ ಬೆಳೆಯುವ ಸೊಪ್ಪು ಬಹಳ ಕಿರದು ಮತ್ತು ಯೂರೋಪಿಯನ್ ದೇಶಗಳಲ್ಲಿ ವ್ಯಾಪಾರವಾಗುವದಕ್ಕೆ ಬಹಳ ವರಟಾಗಿರುತ್ತೆ. ಎರಡನೇದು, ಇಲ್ಲಿನ ಹದಗೊಳಿಸುವ ವಿಧಾನವು ಒಳ್ಳೆ ಎಲೆಯಿಂದಲೂ ಕೂಡ ಲಾಯಖಾದ ಸೊಪ್ಪನ್ನು ತಯಾರಿಸಲಿಕ್ಕೆ ಆಗದಷ್ಟು ಇನ್ನೂ ಕೇವಲ ಅನಾಗರೀಕ ಸ್ಥಿತಿಯಲ್ಲಿರುತ್ತದೆ. ಉತ್ತಮತರಹ ಸೊಪ್ಪುಗಳನ್ನು ಈ ದೇಶದಲ್ಲಿ ಬೆಳೆಯಬಹುದಾದಕಾರಣ ಮೊದಲನೇ ಪ್ರತಿಕೂಲವನ್ನು ಸುಲಭವಾಗಿ ಹೋಗಲಾಡಿಸಬಹುದು. ಎರಡನೇ ಪ್ರತಿಕೂಲವಾದ ಹದಗೊಳಿಸುವದನ್ನು ಉತ್ತಮಪಡಿಸುವ ವಿಚಾರದಲ್ಲಿ ಹೆಚ್ಚು ಗಮನ ಕೊಡಬೇಕಾಗಿರುತ್ತದೆ. ಈ ಪೈರನ್ನು ಲಾಭಕರವಾಗಿ ಬೆಳೆಯುವ ಅನ್ಯದೇಶಗಳಲ್ಲಿನ ಹವಾ ಹದಗೊಳಿಸುವದಕ್ಕೂ ಸಹ ಅನುಕೂಲವಾಗಿರುತ್ತೆ. ಇಂಡಿಯಾದಲ್ಲಾದರೋ ಈ ಅನುಕೂಲತೆ ಇರುವದಿಲ್ಲ. ಅನ್ಯದೇಶಗಳಲ್ಲಿನ ಹವಾದಲ್ಲಿ ತಕ್ಕಷ್ಟು ಶಾಖವು ಮತ್ತು ತನುವು ರಾತ್ರಿ ಹಗಲು ಏಕಪ್ರಕಾರವಾಗಿರುತ್ತಾದಕಾರಣ ಹದಗೊಳಿಸುವ ಕೆಲಸವನ್ನು ಉತ್ಕೃಷ್ಟವಾಗಿಯೂ ಅನುಕೂಲವಾಗಿಯೂ ನಡೆಸಬಹುದು. ಈ ದೇಶದಲ್ಲಾದರೊ ಹವಾದಲ್ಲಿ ತನುವು ಬಹಳ ಕಡಮೆಯಾದಕಾರಣ ಸೊಪ್ಪು ಚನ್ನಾಗಿ ಮಾಗುವದಕ್ಕೆ ಆಸ್ಪದವಿಲ್ಲ. ಆದ್ದರಿಂದ ಈ ಕೆಲಸಕ್ಕೆ ಬೇಕಾಗುವಷ್ಟು ಉಷ್ಣವನ್ನು ತನುವನ್ನು ಒದಗಿಸಿ ಕೊಡುವಂಥಾ ಯಾವದಾದರೂ ಒಂದು ಸಲಹೆಯನ್ನು ಕಲ್ಪಿಸಿಕೊಳ್ಳಬೇಕು. ಹೀಗೆ ಮಾಡಿದ್ದೇ ಆದರೆ ಇಂಡಿಯಾದೇಶವು ಹೊಗೆಸೊಪ್ಪು ಬೆಳೆಯುವ ಇತರ ದೇಶಗಳೊಂದಿಗೆ ಸಮಸ್ಪರ್ಧಿಯಾಗಿ ನಿಲ್ಲ

ಬಹುದು. ನ್ಯೂಸಾ ಮತ್ತು ದಾಲ್‌ಹಿಂಗ್ ಸರಾಯಿ ಪಟ್ಟಣಗಳಲ್ಲಿ ಅನೇಕ ರಖಂ ಸೊಪ್ಪುಗಳನ್ನು ಅಜಮಾಯಿಷಿ ಮಾಡಲಾಯಿತು. ಸುಮಾರು ೨೫ ತರಹೆ ಹೊರಗಿನ ಹೊಗೆಸೊಪ್ಪುಗಳನ್ನು ಬೆಳೆದು ನೋಡಿದ್ದರಲ್ಲಿ ಈಪೈಕಿ ಅನೇಕ ಇಲ್ಲಿನ ಹವಾಕ್ಕೆ ಸರಿಬೀಳಲಿಲ್ಲ. ಉಳಿದ ಆರು ರಖಂ ಪೈಕಿ "ಜಿಮ್ಮರ್ಸ್ ಸ್ಪಾನಿಷ್" (Zimmer's Spanish) ಎಂಬುದು ಮಿಕ್ಕವು ಗಳಿಗಿಂತ ಶ್ರೇಷ್ಠವಾಗಿ ಕಂಡುಬಂದದ್ದಲ್ಲದೆ, ಇದನ್ನು ಸಾಮಾನ್ಯ ವ್ಯವ ಸಾಯಗಾರರು ಸಹ ಪಸಂದು ಮಾಡಿರುತ್ತಾರೆ. ಇದು ಬೆಹಾರುದೇಶದ ಭೂಮಿಗೂ ಹವಾಕ್ಕೂ ಬಹಳ ಲಾಯಖಾಗಿರುತ್ತದೆ, ಮತ್ತು ಇದೇರೀತಿ ಇಂಡಿಯಾದ ಇತರ ಪ್ರಾಂತ್ಯಗಳಿಗೂ ಬಹುಶಃ ಅನುಕೂಲ ಪಡಬಹುದು. ೧೯೦೭ನೆ ಇಸವಿಯಲ್ಲಿ ಈ ಪೈರಿನಿಂದ ದಾಲ್‌ಹಿಂಗ್ ಸರಾಯಿನಲ್ಲಿ ಎಕರೆಗೆ ೧,೪೫೦ ಪೌಂಡು ಒಣಗಿದ ಎಲೆಗಳು ಹುಟ್ಟುವಳಿಯಾಗಿರುತ್ತೆ.

---

## Revenue Appeals.

## ರೆವಿನ್ಯೂ ಅಪೀಲುಗಳು.

ಮೈಸೂರು ಸಂಸ್ಥಾನದ ಶ್ರೀಮತ್ ಮಹಾರಾಜ ರಾಜಾ ಸಾಹೇಬ್ ಬಹದ್ದೂರವರ ಸರ್ಕಾರಿ ಹುಕುಂ.

1903—09ನೆ ಸಾಲಿನ 4ನೆ ನಂಬರ್ ಅಪೀಲು ಮೊಕದ್ದಮೆ.

| ಅಪ್ಪೀಲುವಾದಿ. | ಅಪ್ಪೀಲು ಪ್ರತಿವಾದಿ. |
|---|---|
| ಗೋಪಾಲಯ್ಯ. | ಮಾಗಡಿ ರಾಮಪ್ಪ. |

ತೀರ್ಮಾನ.—೧೮೭೯-೮೦ನೆ ಇಸವಿಯ ಸರ್ವೆ ಮತ್ತು ಸೆಟಲ್ ಮೆಂಟ್ ಕಾಲದಲ್ಲಿ ದೊಡ್ಡಮುದಿಗೆರೆ, ಚಿಕ್ಕಮುದಿಗೆರೆ, ಮಲ್ಲಸಂದ್ರ, ಬಗಿನ ಕೆರೆ ಎಂಬೀ ನಾಲ್ಕು ಗ್ರಾಮಗಳನ್ನು ಒಂದು ಶ್ಯಾನುಭೋಗಿ ಫಿರ್ಕಾವಾಗಿ ಏರ್ಪಡಿಸಿರುತ್ತೆ. ಅಲ್ಲದೆ ಪ್ರೋಟಗಿ ಸೆಟಲ್‌ಮೆಂಟ್ ರಿವೈಜಾದಾಗ ಈ ಫಿ ರ್ಕಾದ ಪ್ರೋಟಗಿಯನ್ನು ೧೦೦ ರೂಪಾಯಿಗಳಿಗೆ ಮಾತ್ರ ಠರಾಯಿಸಿರು ತ್ತಾರೆ. ಈ ಗ್ರಾಮಗಳನ್ನು ಬೇರೆ ಬೇರೆ ನಾಲ್ಕು ಜನಗಳ ಹೆಸರಿನಲ್ಲಿ ಪ್ರತ್ಯೇಕವಾಗಿ ಬರಾವರ್ದಿನಲ್ಲಿ ರಿಜಸ್ಟರು ಮಾಡಿಕೊಳ್ಳೋಣದರಿಂದ ಕ್ರ ಮವಾಗಿ ಏರ್ಪಡಿಸಲ್ಪಟ್ಟ ಫಿರ್ಕಾವನ್ನು ಒಡೆದಹಾಗೆ ಆಗುವದಲ್ಲದೆ, ಪ್ರೋ

ಟಗಿ ನಿಬಂಧನೆಗಳಿಗೂ ಮತ್ತು ಸರ್ಕಾರದವರ ಹುಕುಮುಗಳಿಗೂ ವಿರೋಧವಾಗಿಯೂ ಇರುತ್ತೆ. ಪ್ರೋಟಗಿ ನಿಬಂಧನೆಗಳಿಗೆ ವಿರೋಧವಾಗುವಹಾಗೆ ತಂದೆಮಕ್ಕಳು ಈ ಫಿರ್ಕಾಕ್ಕೆ ಸೇರಿದ ಗ್ರಾಮಗಳನ್ನು ತಮ್ಮ ಸಂಸಾರಕ್ಕೆ ಸೇರಿದ ಸ್ವತ್ತಿನಂತೆ ಹಂಚಿಕೆ ಮಾಡಿಕೊಂಡಿರುವದನ್ನು ಸ್ಥಳೀಯ ರೆವಿನ್ಯೂ ಅಧಿಕಾರಿಗಳು ಅಂಗೀಕರಿಸಬಾರದಾಗಿಯೂ ಮತ್ತು ಜಾರಿಗೆ ತರಬಾರದಾಗಿಯೂ ಇತ್ತು. ರೆವಿನ್ಯೂ ಅಧಿಕಾರಿಗಳ ಇಂಥಾ ನಡವಳಿಕೆಯನ್ನು ಸರ್ಕಾರದವರು ಅನೇಕ ಸಂದರ್ಭಗಳಲ್ಲಿ ಆಕ್ಷೇಪಿಸಿ ಇರುತ್ತಾರೆ. ರಾಜ್ಯಾಡಳಿತ ಕೆಲಸಗಳ ಅನುಕೂಲಕ್ಕಾಗಿಯೂ ಅಥವಾ ಇತರ ಕಾರಣಗಳ ಮೇಲೂ ಒಂದು ಫಿರ್ಕಾವನ್ನು ಒಡೆಯಬೇಕಾಗಿಬಂದಾಗ, ಸರ್ಕಾರದವರ ಮಂಜೂರಾತಿ ವಿನಹಾ ಆ ರೀತಿ ಒಡಿಯತಕ್ಕ ಬಗ್ಗೆ ಹುಕುಂ ಕೊಡಬಾರದು. ಪ್ರಕೃತ ಸಂದರ್ಭದಲ್ಲಿ ಈ ಪ್ರೋಟಿ ಫಿರ್ಕಾಕ್ಕೆ ಒಬ್ಬ ರಿಜಸ್ಟರಾದ ಶ್ಯಾನುಭೋಗನು ಮಾತ್ರ ಇರಬೇಕಾಗಿ ಇರುತ್ತೆ. ಈ ರೀತಿ ರಿಜಸ್ಟರ್ ಮಾಡಿಕೊಳ್ಳಬೇಕಾದರೆ ಯಾರು ಇದಕ್ಕೆ ಅರ್ಹರಾಗಿರುತ್ತಾರೆಂಬದನ್ನು ಈಗ ನಿರ್ಧರಿಸಬೇಕಾಗಿರುತ್ತೆ.

ಈ ಗ್ರಾಮಗಳನ್ನು ಮಕ್ಕಳುಗಳಿಗೆ ಹಂಚಿಕೆಮಾಡಿಕೊಟ್ಟಾಗ ಚಿಕ್ಕಮುದಿಗೆರೆ ಗ್ರಾಮವನ್ನು ಅಪೀಲು ಪ್ರತಿವಾದಿಯ ಭಾಗಕ್ಕೆ ಕೊಟ್ಟು, ತಂದೆಯಾದ ರಂಗಪ್ಪನು ದೊಡ್ಡಮುದಿಗೆರೆ ಗ್ರಾಮವನ್ನು ತನ್ನ ಭಾಗಕ್ಕೆ ಇಟ್ಟುಕೊಂಡು, ಅಪೀಲು ಪ್ರತಿವಾದಿಯನ್ನು ತನ್ನ ಗುಮಾಸ್ತೆಯಂತೆ ಹಂಗಾಮಿಯಾಗಿ ಕೆಲಸ ನೋಡತಕ್ಕ ಬಗ್ಗೆ ಏರ್ಪಾಡು ಮಾಡಿಕೊಂಡನು. ತಂದೆಯ ಮರಣಾನಂತರ ಈ ಏರ್ಪಾಡಿಗೆ ಇತರ ಅಣ್ಣತಮ್ಮಂದಿರು ಒಪ್ಪಲಿಲ್ಲವಾದ್ದರಿಂದ ೧೮೦೦ಂಶಿನೆ ಇಸವಿಯಲ್ಲಿ ಅಪೀಲು ಪ್ರತಿವಾದಿಯ ಹೆಸರನ್ನು ದೊಡ್ಡಮುದಿಗೆರೆ ಗ್ರಾಮಕ್ಕೆ ರಿಜಸ್ಟರಾದ ಬರಾವರ್ದಾರನಂತೆ ದಾಖಲ್ಮಾಡಿಕೊಳ್ಳತಕ್ಕದ್ದೆಂದು ಹುಕುಂ ಆಯಿತು. ಆದರೆ ಈ ಬದಲಾವಣೆಗೆ ಅಪೀಲು ವಾದಿಯು ಒಪ್ಪಲಿಲ್ಲ. ತಮ್ಮ ಸಾಂಸಾರಿಕ ಏರ್ಪಾಡಿಗೆ ಅನುಸಾರವಾಗಿಯೂ ಕೂಡಾ ಅಪೀಲು ಪ್ರತಿವಾದಿಗೆ ಒಂದು ಗ್ರಾಮ ಮಾತ್ರ ಅಂದರೆ ಚಿಕ್ಕಮುದಗೆರೆ ಗ್ರಾಮ ಮಾತ್ರ ಆತನ ಸ್ವಂತ ಹಕ್ಕಿಗೆ ಸೇರಿ ಬಂದಿರುತ್ತೆ. ತನ್ನ ತಂದೆಗೆ ಗುಮಾಸ್ತೆಯಾಗಿ ಬಹುಕಾಲ ದೊಡ್ಡಮುದಗೆರೆ ಗ್ರಾಮದ ಕೆಲಸವನ್ನು ಆಕ್ಟಿಂಗ್ ತರೀಕಾ ನೋ

ದಿನ ಮಾತ್ರಕ್ಕೇನೆ ಸದರಿ ಗ್ರಾಮದ ನೌಕರಿ ಬಾಯಿವಾಗಿ ಬಲಿದ್ದಾಗ
ಸದರಿ ಕೆಲಸಕ್ಕೆ ಈತನಿಗೆ ಇತರರಿಗಿಂತಲೂ ಹೆಚ್ಚಾದ ಹಕ್ಕು ಉಂಟಾಯಿ
ತೆಂದು ಹೇಳುವದಕ್ಕಾಗದು. ಯಾಕೆಂದರೆ, ಸುಮಾರು ತೇಕು ಈ
ಗ್ರಾಮು ಈತನ ಸ್ವಾಧೀನದಲ್ಲಿದ್ದದ್ದರಿಂದ ಅಂಥಾ ಸ್ವಾಧೀನವು ಈತನ
ಅಣನಾದ ಅಪೀಲು ವಾದಿಯು ಹಕ್ಕಿಗೆ ವಿರೋಧವಾಗಿದ್ದಂತೆ ಭಾವಿಸ
ತಕ್ಕದ್ದಲ್ಲ. ಆದ್ದರಿಂದ ಈ ಫಿರ್ಯಾದೈಕಿ ಅತ್ಯಂತ ವಿಶೇಷಾಂಶಕ್ಕೆ ಅಪೀ
ಲು ಪ್ರತಿವಾದಿಯು ಹಕ್ಕುದಾರನೆಂದು ರೆವಿನ್ಯೂ ಕಮಿಷನರವರು ಹೇಳಿ
ವದನ್ನು ಅಂಗೀಕರಿಸತಕ್ಕದ್ದಲ್ಲವಾಗಿದೆ. ಯಾವ ಹುಕ್ಕುಮಿನಮೇಲೆ ಈ
ಅಪೀಲು ದಾಖಲಾಗಿರುತ್ತದೆಯೋ ಅಂಥಾ ಹುಕುಮನ್ನು ಬದಲಾಯಿಸಿ
ಈ ಒಟ್ಟು ಫಿರ್ಯಾದಿನ ಬರಾವರ್ದನ್ನು ಅಪೀಲು ವಾದಿಯ ಹೆಸರಿನಲ್ಲಿ ರಿಜಿ
ಸ್ಟರು ಮಾಡಿಕೊಂಡು ಈತನಿಂದ ದೊಡ್ಡಮುದಿಗೆರೆ ಮತ್ತು ಬಗಿನಗೆರೆ
ಗ್ರಾಮುಗಳ ಕೆಲಸವನ್ನು ಮಾತ್ರ ತೆಗದುಕೊಳ್ಳಬೇಕೆಂದು ಸರ್ಕಾರದವ
ರು ಹುಕುಮು ಮಾಡಿರುತ್ತಾರೆ. ಉಳಿದ ಎರಡು ಗ್ರಾಮುಗಳ ನೌಕರಿ ವಿ
ಷಯದಲ್ಲಿ ಹಾಲಿ ಇರುವ ಏರ್ಪಾಡೇ ಮುಂದೆಯೂ ಇರಬಹುದೆಂದು ಅಪೀ
ಲು ವಾದಿ ಒಪ್ಪಿ ಇರುವದರಿಂದಲೂ ಈ ಜನಗಳು ಪರಸ್ಪರ ಒಪ್ಪಿ ಮಾಡಿ
ಕೊಂಡ ಏರ್ಪಾಡು ಬಹುಕಾಲದಿಂದ ಜಾರಿಯಲ್ಲಿರುವದರಿಂದ ಇದನ್ನು ಈಗ
ಬದಲಾಯಿಸಿದರೆ ಅವರಿಗೆ ಬಹಳ ತೊಂದರೆಯಾಗುವದರಿಂದಲೂ ಸಹಾ
ಮಲ್ಲಸಂದ್ರ ಮತ್ತು ಚಿಕ್ಕಮುದಿಗೆರೆ ಗ್ರಾಮುಗಳ ಕೆಲಸದ ವಿಷಯದಲ್ಲಿ
ಹಾಲಿ ಇರತಕ್ಕ ಏರ್ಪಾಡೇ ಮುಂದೆಯೂ ಜಾರಿಯಲ್ಲಿರಬೇಕೆಂದು ಸರ್ಕಾ
ರದವರು ಹುಕುಮು ಮಾಡಿರುತ್ತಾರೆ.

[ ಈ ಮೊಕದ್ದಮೆಯಲ್ಲಿ ರೆವಿನ್ಯೂ ಕಮಿಷನರ್ ಸಾಹೇಬರವರು ಮಾಡಿರುವ ಹು
ಕುಮಿನ ಸಾರಾಂಶವನ್ನು ಈ ಮೊದಲೇ ಅಂದರೆ ೧೯೦೭ನೆ ಸೆಪ್ಟಂಬರು ೧೫ನೆ ತಾರೀಖಿ
ನ ಸಂಚಿಕೆಯಲ್ಲಿ ಪ್ರಕಟಿಸಿರುತ್ತೆ.]

## Lime Cultivation.*
## ನಿಂಬೆಗಿಡದ ವ್ಯವಸಾಯ.

ಈ ವಿಷಯವಾಗಿ ಹಿಂದಿನ ಸಂಚಿಕೆಯಲ್ಲಿ ಸ್ವಲ್ಪ ಪ್ರಸ್ತಾಪಿಸಿತ್ತು

* ಅಗ್ರಿಕಲ್ಚರಲ್ ಅಂಡ್ ಇಂಡಸ್ಟ್ರಿಯಲ್ ಪ್ರೋಗ್ರೆಸ್.—ಫೆಬ್ರವರಿ ೧೯೦೮

ಷ್ಟು. ಈಗ ಈ ವಿಚಾರದಲ್ಲಿ ಇನ್ನೂ ಕೆಲವು ಸಂಗತಿಗಳನ್ನು ತಿಳಿಸು ವೆವು. ನಿಂಬೆಗಿಡಗಳನ್ನು ಹಾಕುವದಕ್ಕೆ ಜೂನ್‌ನಿಂದ ಡಿಶಂಬರು ತಿಂಗಳ ವರೆಗೆ ಒಳ್ಳೆಸಮಯ. ಪರಂತು ಈಮಧ್ಯೆ ಎಷ್ಟು ಜಾಗ್ರತೆಯಾಗಿ ಹಾಕಿ ದರೆ ಅಷ್ಟು ಅನುಕೂಲ. ನೆಲವನ್ನು ಚೆನ್ನಾಗಿ ಅಗೆದು ಸುತ್ತಲ ಜಮೀ ನಿಗಿಂತ ಸ್ವಲ್ಪ ಎತ್ತರವಾಗಿ ಸಣ್ಣ ಸಣ್ಣ ಪಾತಿಗಳನ್ನು ಮಾಡಿಕೊಳ್ಳಬೇ ಕು. ಸಸಿಗಳು $1\frac{1}{4}$ ಅಥವಾ $1\frac{1}{2}$ ಅಡಿ ಉದ್ದ ಬೆಳೆದಮೇಲೆ ಅವುಗಳನ್ನು ಕಿತ್ತು ಬೇರೆ ಸ್ಥಳಗಳಲ್ಲಿ ನಾಟಬಹುದು. ಅವುಗಳನ್ನು ಅಗೆಗಳಿಂದ ಬ ಹಳ ಹುಷಾರಾಗಿ ಎಬ್ಬಿಸಿ ನೆಲದಲ್ಲಿಡುವವರಿಗೂ ಬೇರುಗಳಿಗೆ ನೀರು ಹಾಕುತ್ತಿದ್ದು ಅವು ಒಣಗದಂತೆ ನೋಡಿಕೊಳ್ಳಬೇಕು. ಸಸಿಗಳನ್ನು ನೆಡುವದರಲ್ಲಿ ಅವು ಅಗೆಗಳಲ್ಲಿ ಎಷ್ಟು ಆಳಬೇರು ಬಿಟ್ಟಿದ್ದವೋ ಅಷ್ಟು ಆಳ ದಲ್ಲಿ ಅಥವಾ ಇನ್ನೂ ಸ್ವಲ್ಪ ಆಳವಾಗಿ ನಾಟಿ ಪಕ್ಕಗಳಲ್ಲಿನ ಸಣ್ಣ ಬೇರು ಗಳನ್ನು ನೆಲದಲ್ಲಿ ಹರಡಿ ಮಣ್ಣು ಮುಚ್ಚಿ ಚೆನ್ನಾಗಿ ಕೆಳಕ್ಕೆ ಅದಮಬೇ ಕು. ನಂತರ ಪಾತಿಗಳಲ್ಲಿ ಗಿಡದ ಸುತ್ತಲೂ ಮಣ್ಣನ್ನು ಹಾಕಿ ಪಕ್ಕದ ಜಮೀನಿನಗಿಂತಲೂ ಎತ್ತರವಾಗಿ ಮಾಡಬೇಕು. ಸಾಧಾರಣವಾಗಿ ಗಿಡದಿಂ ದ ಗಿಡಕ್ಕೆ ೧೫-೧೬ ಅಡಿ ಬಿಟ್ಟಿರಬೇಕು. ಈರೀತಿ ಎಕರೆಗೆ ೧೯೩ ಗಿಡಗ ಳನ್ನು ನಾಟಬಹುದು. ಎಷ್ಟು ದೂರದೂರವಾಗಿ ನಾಟಿದರೆ ಅಷ್ಟು ಒ ಳ್ಳೇದು.

ನಿಂಬೆತೋಟವು ೮-೧೦ ವರುಷಗಳಲ್ಲಿ ಪೂರ್ತಿಯಾಗಿ ಫಲಕ್ಕೆ ಬರು ತ್ತದೆ.

ನಿಂಬೆ ಮರಗಳಿಗೆ ವಿಶೇಷ ಕಶೀಮಾಡುವದು ಅವಶ್ಯವಿಲ್ಲ. ಆದರೆ ಬೇರುಗಳಲ್ಲಿ ಒಡೆಯುವ ಕಾಲುಗಳನ್ನು ಮತ್ತು ಒಣಗಿದ ಕೊಂಬೆಗಳನ್ನೆ ಲ್ಲಾ ತೆಗದು ಹಾಕಬೇಕು. ಮೇಲಿನ ಕೊಂಬೆಗಳು ಚೆನ್ನಾಗಿ ಬಲಿತಕೂ ಡಲೆ ಕೆಳಗಿನ ಎಲೆ ರೆಂಬೆಗಳನ್ನು ಕತ್ತರಿಸಿ ಗೊಬ್ಬರವಾಗಿ ಉಪಯೋಗಿ ಸಬಹುದು. ನಿಂಬೆಹಣ್ಣುಗಳ ಸಿಪ್ಪೆಯನ್ನು ದನಕ್ಕೆ ತಿನ್ನಲಿಕ್ಕೂ ಅ ಥವಾ ಜಮೀನಿಗೆ ಗೊಬ್ಬರಕ್ಕೂ ಹಾಕಬಹುದು. ಈ ವ್ಯವಸಾಯದಲ್ಲಿ ಮರದ ಬೂದಿಯನ್ನು ಗೊಬ್ಬರವಾಗಿ ಉಪಯೋಗಿಸಬಹುದು.

## Cocoanut. *

## ತೆಂಗು.

ಅಗೆಗಳಲ್ಲಿ ಸಸಿಗಳನ್ನು ತಯಾರುಮಾಡುವ ಸಂದರ್ಭಗಳಲ್ಲಿ ಬೀಜದ ಕಾಯಿಗಳನ್ನು ಎತ್ತರವಾಗಿರುವ ಮಣ್ಣು ಗುಡ್ಡೆಗಳಲ್ಲಿ ಒಂದೊಕ್ಕೊಂದು ಸಮೀಪವಾಗಿಡಬೇಕು. ನಾಲ್ಕೈದು ತಿಂಗಳಲ್ಲಿ ಮೊಳಕೆ ಬರುವುದು. ಸಸಿಗಳಲ್ಲಿ ೩-೪ ಗರಿಗಳು ಬಂದ ನಂತರ ಅವನ್ನು ತೆಗದು ಬೇರೆ ಜಾಗದಲ್ಲಿ ನಾಟಬಹುದು. ಸಸಿಗಳನ್ನು ೨೩ ರಿಂದ ೨೮ ಅಡಿ ಬಿಟ್ಟು ಹಾಕಬೇಕು. ಜಮೀನು ಹುಲುಸಾಗಿದ್ದ ಹಾಗೆಲ್ಲಾ ಸಸಿಗಳ ಬೆಳವಣಿಕೆಯೂ ಕೂಡ ಜಾಗ್ರತೆ ಯಾಗುವದರಿಂದ ಅವುಗಳನ್ನು ಎಷ್ಟು ದೂರ ದೂರವಾಗಿ ಹಾಕಿದರೆ ಅಷ್ಟು ಅನುಕೂಲ. ಸಸಿಗಳಿಡುವ ಗುಣಿಗಳು ೩ ಅಡಿ ಅಗಲವಾಗಿರಬೇಕು. ಗುಣಿಯಲ್ಲಿ ಅರ್ಧಕ್ಕೆ ಒಳ್ಳೆ ಗೊಬ್ಬರವನ್ನೊ ಅಥವ ಬೂದಿ ಮಿಶ್ರವಾದ ಮಣ್ಣನ್ನೊ ಭರ್ತಿಮಾಡಿದರೆ ಅನುಕೂಲ. ಪುದಿ ಮಣ್ಣಿನ ಜಮೀನಿನಲ್ಲಿ ಗಿಡದ ಬೆಳವಣಿಕೆ ಅತಿ ಜಾಗ್ರತೆ. ಬೇಸಿಗೆಯಲ್ಲಿ ಅಥವ ಉಷ್ಣಪ್ರದೇಶಗಳಲ್ಲಿ ಗಿಡಗಳಿಗೆ ಕ್ರಮವಾಗಿ ನೀರು ಹಾಕುತ್ತಿರಬೇಕು. ಮತ್ತು ಈ ವೃಕ್ಷವು ಸರಿಯಾಗಿ ನೀರು ಹಾಕಿ ಸಂರಕ್ಷಿಸಿದಹಾಗೆಲ್ಲಾ ಹೆಚ್ಚು ಫಲ ಕೊಡುತ್ತದೆ. ಜಮೀನಿನಲ್ಲಿ ಅಡಿ ಮಣ್ಣು ಮೃದುವಾಗಿದ್ದಷ್ಟೂ ತೆಂಗು ಹುಲುಸಾಗಿ ಬೆಳೆಯುತ್ತದೆ. ಸಸಿ ಹಾಕಿದ ೨-೩ ವರುಷಗಳವರೆಗೂ ತೋಟದಲ್ಲಿ ಮುಸುಕಿನಜೋಳ, ಮರಗೆಣಸು, ನೆಲಗಡ್ಲೆ ಮೊದಲಾದ ಪೈರುಗಳನ್ನು ಧಾರಾಳವಾಗಿ ಬೆಳೆಯಬಹುದು. ನೆಲಗಡ್ಲೆ ಪೈರನ್ನು ಹಾಕಿ ಜಮೀನಿನಲ್ಲಿಯೇ ಉತ್ತುಬಿಟ್ಟರೆ ಜಮೀನು ವಿಶೇಷ ರಸವತ್ತಾಗುತ್ತದೆ. ಸಸಿಗಳು ಶೀಘ್ರದಲ್ಲಿಯೇ ಅಭಿವೃದ್ಧಿಗೆ ಬರುವ ಉದ್ದಿಶ್ಯ ಸಸಿಗಳು ಹಾಕಿದ ತರುಣದಲ್ಲಿ ಜಮೀನನ್ನ ಕ್ರಮವಾಗಿ ವ್ಯವಸಾಯಮಾಡಬೇಕು.

---

* ಅಗ್ರಿಕಲ್ಚರಲ್ ಅಂಡ್ ಇಂಡಸ್ಟ್ರಿಯಲ್ ಪ್ರೋಗ್ರೆಸ್, ಜನವರಿ.—೧೯೧೯.

## Occasional Notes.

## ವಿವಿಧ ವೃತ್ತಾಂತಗಳು.

೧. ವ್ಯವಸಾಯ ಸಂಘಗಳ ವಿಚಾರವಾದ ಒಂದು ಸಣ್ಣ ಪುಸ್ತಕವನ್ನು ಈ ಸಂಚಿಕೆಯೊಂದಿಗೆ ಸಪ್ಲಿಮೆಂಟಾಗಿ ರವಾನಿಸಿರುತ್ತೇವೆ.

———o———

೨. ತರೀಜಮೀನುಗಳಲ್ಲಿ ಕಬ್ಬಿಗೆ ರೋಗ ತಗುಲುವದಕ್ಕೆ, ನೀರು ಹೆಚ್ಚಾಗಿ, ಬಸೆದುಹೋಗದೇ ಅಲ್ಲಿಯೇ ಉಳಿಯುವದೇ ಕಾರಣ.— ಮದರಾಸು ಅಗ್ರಿಕಲ್ಚರಲ್ ಕ್ಯಾಲೆಂಡರ್, ೧೯೦೯.

———o———

೩. ಬತ್ತದ ಪೈರಿಗೆ ನೆಲಗಡ್ಲೆಸೊಪ್ಪು ಮತ್ತು ಇದರ ದಂಟು ಒಳ್ಳೆ ಗೊಬ್ಬರವಾಗುತ್ತವೆ. ಗೊಬ್ಬರದ ಖರ್ಚಿನಸಹ ಕಡಮೆ.— ಮುಂಬಾಯಿ ವ್ಯವಸಾಯ ಇಲಾಖೆಯ ರಿಪೋರ್ಟ್, ೧೯೦೭-೦೮.

———o———

೪. ೧೯೦೮—೦೯ನೆ ಸಾಲ್‌ನಲ್ಲಿ ಇಂಡಿಯಾ ದೇಶದಲ್ಲಿ ಒಟ್ಟು ೪,೫೧೧,೩೦೦ ಎಕರೆ ಜಮೀನಿನಲ್ಲಿ ಎಳ್ಳು ಪೈರು ಇಟ್ಟಿತ್ತು. ಹಿಂದಿನಸಾಲ್‌ನಲ್ಲಿ ಈ ವಿಸ್ತೀರ್ಣವು ೪,೪೪೭,೨೦೦ ಎಕರೆಗಳು. ಚಾಲ್ತಿಸಾಲಿನ ಹುಟ್ಟುವಳಿಯು ಒಟ್ಟು ೩೮೯,೨೦೦ ಟನ್ ಎಳ್ಳು ಆಗಬಹುದೆಂದು ಅಂದಾಜಾ ಆಗಿರುತ್ತೆ. ಹೋದವರುಷ ೨೧೬,೦೦೦ ಟನ್‌ಗಳಷ್ಟು ಹುಟ್ಟುವಳಿಯಾಗಿತ್ತು.

———o———

೫. ಬತ್ತ, ಅಲಸಂದಿ ಮತ್ತು ಕೆಲವು ಖುಷ್ಕಿಪೈರುಗಳಿಗೆ ಆಗಾಗ್ಯೆ ಹುಳಗಳು ಬಿದ್ದು ಹೊಲದಿಂದ ಹೊಲಕ್ಕೆ ಹರಡಿ ವಿಶೇಷ ನಷ್ಟ ಪಡಿಸುವದುಂಟು. ಹೊಲಗಳ ಸುತ್ತಲೂ ಕಡಗುಗಳನ್ನು ಕಡೆದು ಅವುಗಳ ಪಕ್ಕಗಳನ್ನು ನಾಸರೆಯಾಗಿ ಮಾಡಿದರೆ ಇವು ಈ ರೀತಿ ಚಲಿಸುವದಕ್ಕೆ ಅಡ್ಡಿಯಾಗುತ್ತದೆ. ಹುಳುಗಳು ಕಡಗುಗಳಲ್ಲಿ ಬಿದ್ದು ಹಾಗೆಲ್ಲಾ ಅವುಗ

ಳನ್ನು ಸುಲಭವಾಗಿ ಕೊಲ್ಲಬಹುದು.—ಮದರಾಸು ಅಗ್ರಿಕಲ್ಚರಲ್ ಕ್ಯಾಲಂಡರ್, ೧೯೦೯.

---

೬. ಕಳೆದವಾರ ೧೪ನೆ ತಾರೀಖಿನಲ್ಲಿ ಕೋ ಆಪರೇಟೀವ್ ಸೊಸೈಟಿಗಳ ರಿಜಿಸ್ಟ್ರಾರವರು ಗುಬ್ಬಿಗೆ ಹೋಗಿದ್ದಾಗ ಅಲ್ಲಿನ ಕೆಲವು ದೊಡ್ಡಮನುಷ್ಯರು ಒಂದು ಕೋ ಆಪರೇಟೀವ್ ಸೊಸೈಟಿಯನ್ನು ಸ್ಥಾಪಿಸಬೇಕೆಂಬ ಕುತೂಹಲದಿಂದ ರಿಜಿಸ್ಟ್ರಾರವರನ್ನು ಸೊಸೈಟಿಗಳ ಪ್ರಯೋಜನದ ವಿಷಯವಾಗಿ ಉಪನ್ಯಾಸ ಮಾಡಬೇಕೆಂದು ಅಪೇಕ್ಷಿಸಿದ್ದರಮೇಲೆ, ೧೫ನೆ ತಾರೀಖಿನ ಸಾಯಂಕಾಲ ವಿ.ರ್ಸ ಎ. ವಿ. ಸ್ಕೂಲ್ ಹಾಲಿನಲ್ಲಿ ರಿಜಿಸ್ಟ್ರಾರವರು ಒಂದು ಉಪನ್ಯಾಸವನ್ನು ಮಾಡಿದರು. ರಿಜಿಸ್ಟ್ರಾರವರು ಹೇಳಿದ ವಿಷಯಗಳನ್ನೆಲ್ಲಾ ತಿಳಿದನಂತರ ಆ ಊರಿನಲ್ಲಿ ಒಂದು ಸೊಸೈಟಿಯನ್ನು ಸ್ಥಾಪಿಸುವದು ಅವಶ್ಯವೆಂದು ಸಭಿಕರಿಗೆ ತಿಳಿದು ರಿಜಿಸ್ಟ್ರಾರವರ ಸಲಹೆ ಪ್ರಕಾರ ಷೇರು, ಮೆಂಬರು, ಮುಂತಾದ್ದನ್ನು ಗೊತ್ತುಮಾಡಿ ಕೊಂಡಿರುತ್ತಾರೆ.

---

೭. ಹೊಗೆಸೊಪ್ಪಿನ ವ್ಯವಸಾಯದಲ್ಲಿ ಒಂದು ವಿಶೇಷ ಸಂಗತಿಯು ಹೊರಪಟ್ಟಿದೆ. ಅದೇನಂದರೆ, ಹೊಗೆಸೊಪ್ಪು ಬೆಳೆಯುವವರು ಜಮೀನು ಮೇಲೆ ಕನಾತುಗಳನ್ನು ಕಟ್ಟಿ ನೆರಳಿನಲ್ಲಿ ಬೆಳೆಯುವದರ ಮೂಲಕ ಇದರ ಉತ್ಪತ್ತಿಯನ್ನು ಎರಡರಷ್ಟು ಹೆಚ್ಚಿಸಿರುತ್ತಾರೆ. ಅಮೇರಿಕಾ ದೇಶೀಯರು ಪೋರ್ಟೋರೀಕೋವನ್ನು ಸ್ವಾಧೀನ ಪಡಿಸಿಕೊಂಡಾರಭ್ಯ ಇಲ್ಲಿ ಹೊಗೆಸೊಪ್ಪನ್ನು ಕನಾತುಗಳ ನೆರಳಿನಲ್ಲಿ ಬೆಳದು ಇದರ ಮೂಲಕ ರಫ್ತು ವ್ಯಾಪಾರವನ್ನು ೫ ರಷ್ಟು ಹೆಚ್ಚಿಸಿರುತ್ತಾರೆ. ೫ ವರುಷಗಳ ಕೆಳಗೆ ಸಿಗಾರ್ ಅಂದರೆ ಚುಟ್ಟಾಗಳನ್ನು ಸುತ್ತುವದಕ್ಕೆ ಲಾಯಖಾದ ಎಲೆಯನ್ನು (wrappers) ಬೆಳೆಯಲು ಸಾಧ್ಯವಾಗಿರಲಿಲ್ಲ. ಈಗ ಅಮೇರಿಕಾ ದೇಶೀಯರು ತೆಳ್ಳಗಿರುವ ಕನಾತುಗಳ ಕೆಳಗೆ ಇದನ್ನು ಬೆಳೆಯಲು ಸಾಧ್ಯವೆಂದು ತೋರಿಸಿರುತ್ತಾರೆ. ಈಗ ಪೋರ್ಟೋರೀಕೊ ದ್ವೀಪದಲ್ಲಿ

ಹೊಗೆಸೊಪ್ಪಿನ ಹೊಲಗಳು ನೂರಾರು ಎಕರೆ ವಿಸ್ತೀರ್ಣವನ್ನು ಆಕ್ರಮಿಸಿಕೊಂಡಿರುವ ದೊಡ್ಡ ಸರ್ಕಸ್ ಡೇರಾವಿನಂತೆ ಕಾಣುತ್ತವೆ.
ಇಂಡಿಯನ್ ಅಗ್ರಿಕಲ್ಚರಿಸ್ಟ್.—೧—೧೨—೦೮.

———o———

೮. ಗೆಣಸು ಸಾಮಾನ್ಯಫಲವತ್ತಾಗಿ ಮರಳು ಮಿಶ್ರವಾದ ಒಂದು ಭೂಮಿಯಲ್ಲಿ ಚೆನ್ನಾಗಿ ಆಗುತ್ತದೆ. ಈ ಭೂಮಿಯಲ್ಲಿ ವಿಶೇಷ ಧಾತುಪದಾರ್ಥಗಳಿರಕೂಡದು. ಈ ಪೈರಿಗೆ ಜಮೀನು ನೀರು ಚೆನ್ನಾಗಿ ಬಸಿದು ಹೋಗುವಂತಿರಬೇಕಾದಕಾರಣ ಇವನ್ನು ಎತ್ತರವಾದ ಸಾಲು ಗಡ್ಡೆಗಳ ಮೇಲೆ ಹಾಕುತ್ತಾರೆ. ಈ ಪೈರಿಗೆ ಜಮೀನನ್ನು ಆಳವಾಗಿ ಉಳುವದು ಅತ್ಯವಶ್ಯಕ. ಎಕರೆಗೆ ೧೨೦೦ ರಿಂದ ೨೦೦೦ ಪೌಂಡುಗಳಂತೆ ಮರದ ಬೂದಿಯನ್ನು ಹಾಕಬಹುದು. ಬಳ್ಳಿಗಳನ್ನೋ ಅಥವಾ ಗೆಣಸಿನ ಗಡ್ಡೆಯನ್ನು ಕತ್ತರಿಸಿ ಹೋಳುಗಳನ್ನೋ ಹಾಕಿ ಪೈರು ಮಾಡುತ್ತಾರೆ. ಯಾವಾಗಲೂ ಗಡ್ಡೆಗಳನ್ನು ಅಗೆದುಕೊಳ್ಳುವ ಕಾಲದಲ್ಲಿ ಬೀಜಕ್ಕಾಗಿ ವಿಶೇಷ ಗಾತ್ರವಿಲ್ಲದ ಗಡ್ಡೆಗಳನ್ನು ತೆಗದಿಟ್ಟುಕೊಳ್ಳಬೇಕು. ಬೀಜದ ಗಡ್ಡೆ ಮಾತ್ರ ಪೆಟ್ಟು ತಗಲಿಯಾಗಲಿ ಕೊಳೆತದ್ದಾಗಿಯಾಗಲಿ ಅಥವಾ ರೋಗ ತಗಲಿದ್ದಾಗಿಯಾಗಲಿ ಇರಬಾರದು. ಹಂಬುಗಳಿಂದ ಬಳ್ಳಿಗಳನ್ನು ಕತ್ತರಿಸಿಕೊಂಡು ಪೈರು ಮಾಡುವದೇ ಸರ್ವೋತ್ತಮವಾದದ್ದು.
ಅಗ್ರಿಕಲ್ಚರಲ್ ಅಂಡ್ ಇಂಡಸ್ಟ್ರಿಯಲ್ ಪ್ರೋಗ್ರೆಸ್, ಫೆಬ್ರವರಿ ೧೯೦೯.

———o———

೯. ಲಂಡನ್ ಪಟ್ಟಣದ ಒಬ್ಬ ಭಾರಿ ವ್ಯಾಪಾರಿಯು ಒಣಗಿದ ಕಾರಿ ಕರಳಿಗೆ ಪೌಂಡು ಒಂದಕ್ಕೆ ೧೦.೧೨ ಶಿಲಿಂಗುಗಳಂತೆ (ರೂ. ೭—೮—೦ ಯಿಂದ ೯ ರೂಪಾಯಿವರಿಗೆ) ಕೊಟ್ಟು ಕೊಂಡುಕೊಳ್ಳಲು ಸಿದ್ಧರಾಗಿರುತ್ತಾರೆ. ಉದ್ದವಾದ ಕರಳುಗಳನ್ನು ಚೆನ್ನಾಗಿ ತೊಳೆದು ಅಗಲವಾಗಿ ಶೀಳಿ ಚಾಪೆಬಟ್ಟೆಗಳಮೇಲೆ ಒಣಗಿಸಬೇಕು. ಈ ಉದ್ಯೋಗದಲ್ಲಿ ವಿಶೇಷ ಶ್ರಮಪಡಬೇಕಾದ್ದಿಲ್ಲ. ಈ ಕರಳನ್ನು ಹಾಲಿ ಈ ದೇಶದಲ್ಲಿ ಪ್ರಾಯಶಃ ಬಿಸಾಟುಬಿಡುತ್ತಾರೆ. ಇವಕ್ಕೆ ಲಂಡನ್ನವನು ಕೊಡುತ್ತೇನೆನ್ನುವ

THE MYSORE

# REVENUE & AGRICULTURAL GAZETTE.

ವಾಲ್ಯೂಂ ೭.] ಗುರುವಾರ, ೧೫ನೆ ಏಪ್ರಿಲ ೧೯೧೯. [ನಂ. ೧೨.

## Contents.



## ಅನುಕ್ರಮಣಿಕೆ.



## Weeding in Wet Lands. *

## ಗದ್ದೆಗಳಲ್ಲಿ ಕಳೆ ತೆಗೆಯುವದು.

ಸಾಗುವಳಿಗೆ ತಗಲುವ ಲಾಗವಾಡಿನಲ್ಲಿ ಗದ್ದೆಯಲ್ಲಿನ ಕಳೆ ತೆಗೆಯುವದು ಸೇರತಕ್ಕ ಅಂಶವಾಗಿರುತ್ತದೆ. ಕ್ರಮವಾಗಿ ಕೆಸರುಮಾಡಿ ನಾಟಿ ಹಾಕಿದ ಗದ್ದೆಗಳಲ್ಲಿ ಸಾಮಾನ್ಯವಾಗಿ ಕಳೆ ವಿಶೇಷ ಬೆಳೆಯುವದಿಲ್ಲ. ಈ

* ಮದರಾಸು ಅಗ್ರಿಕಲ್ಚರಲ್ ಕ್ಯಾಲೆಂಡರ್, ೧೯೦೯.

ಕಾರಣದಿಂದಲೇ ಕೆಲವು ಗದ್ದೆಗಳಲ್ಲಿ ಮಾತ್ರ ಬತ್ತವನ್ನು ನಾಟಿ ಹಾಕ
ತ್ತಾರೆ. ಕೆಲವು ಗದ್ದೆಗಳಲ್ಲಿ ಈರೀತಿ ಮಾಡುವದಿಲ್ಲ. ಅಂಥಾ ನಾಟಿ ಗದ್ದೆ
ಗಳಲ್ಲಿಯೂ ಕೂಡ ಕಳೆ ಅಲ್ಪಸ್ವಲ್ಪ ಬೆಳೆಯುವದರಿಂದ ಫಸಲು ಉತ್ಪ
ತ್ತಿಯು ಕಡಮೆಯಾಗುತ್ತದೆ. ಈ ಕಳೆಗಳು ಅನೇಕವಾಗಿ ಬತ್ತದ
ಸಸಿಗಳೊಂದಿಗೆ ಸೇರಿಕೊಂಡು ಬೆಳೆಯುತ್ತವೆ. ಮತ್ತು ಒಂದಕ್ಕೊಂದ
ಕ್ಕೆ ವ್ಯತ್ಯಾಸವೇ ತಿಳಿಯುವದಿಲ್ಲ. ಕಳೆ ಬೆಳೆಯುವದನ್ನು ತಪ್ಪಿಸಬೇ
ಕಾದರೆ ಒಂದು ಉಪಾಯವನ್ನು ಮಾಡಬಹುದು. ಫಸಲು ಕಟಾವು ಮಾ
ಡಿದನಂತರ ಒಳ್ಳೆ ತೆನೆಗಳನ್ನೇ ಕತ್ತರಿಸಿ ಮುಂದಿನ ವರ್ಷದ ಬೀಜಕ್ಕೆ
ವುಗಳನ್ನು ಪ್ರತ್ಯೇಕವಾಗಿ ಇಟ್ಟಿರಬೇಕು. ನಂತರ ಬೀಜಗಳು ಬೇ
ಯಾಗದ ರೀತಿ ಶುಚಿಯಾಗಿರುವ ಕಣದ ಒಂದು ಭಾಗದಲ್ಲಿ ಬಡಿದು ಬೀಜ
ನ್ನು ಕೂಡಿಡಬೇಕು. ಹೀಗೆ ಮಾಡುವದರಿಂದ ಕಳೆ ಬೆಳೆಯುವದನ್ನು ತಪ್ಪಿ
ಸಬಹುದಲ್ಲದೆ ಬಿತ್ತನೆ ಕೆಲಸಕ್ಕೆ ಸರ್ವೋತ್ತಮವಾದ ಬೀಜ ಒದಗಿ ಫ
ಲು ಉತ್ಪತ್ತಿಯೂ ಸಹಾ ಹೆಚ್ಚುತ್ತದೆ. ಗದ್ದೆಗಳಲ್ಲಿ ಸಸಿಗಳನ್ನು ಗುತ್ತಿ
ಗುತ್ತಿಯಾಗಿ ನಾಟದೆ ಒಂದೊಂದಾಗಿಯೇ ನಾಟುವ ವಿಧಾನವನ್ನು ಅನು
ಸರಿಸಿದರೂ ಕಳೆ ಬೆಳೆಯುವದು ಬಹಳ ಕಡಮೆಯಾಗುತ್ತದೆ. ನಾಟಿ ಮಾ
ಡದೆ ಬೀಜ ಚೆಲ್ಲಿ ಪೈರುಮಾಡುವ ಗದ್ದೆಗಳಲ್ಲಂತು ಕಳೆ ಕಸರು ಬೆಳೆಯು
ದು ಹೆಚ್ಚು. ಇವು ಬತ್ತದ ಸಸಿಗಳಿಗಿಂತಲೂ ಜಾಗ್ರತೆ ಬೆಳೆಯುವದರಿ
ದ ಬತ್ತದ ಸಸಿಗಳ ಬೆಳವಳಿಕೆಗೆ ತಡೆಯುಂಟಾಗುತ್ತದೆ. ಕೆರೆಗಳು ತ
ಬುವದಕ್ಕೆ ಪೂರ್ವ ಬತ್ತವನ್ನು ಎರಡು ಮೂರು ತಿಂಗಳುಕಾಲ ಕಾಪಿ
ಪೈರಿನಂತೆ ಬೆಳೆಯುವ ಸಂದರ್ಭಗಳಲ್ಲಿ ಕೆಲವುಕಡೆ ಬಿತ್ತವನ್ನು ಕೂರಿ
ಗಳಲ್ಲಿ ಚೆಲ್ಲುತ್ತಾರಾದವ್ರಯುಕ್ತ ಪೈರು ಸಾಲು ಸಾಲಾಗಿ ಬಂದು ಕ
ಕೀಳುವ ಕೆಲಸವು ಬಹಳ ಸುಲಭವಾಗುತ್ತದೆ. ಹೀಗೆ ಕೂರಿಗೆಗಳಲ್ಲಿ
ತ್ತುವ ವಾಡಿಕೆ ಇಲ್ಲದಿರುವ ಪ್ರದೇಶಗಳಲ್ಲೂ ಕೂಡ ನೇಗಿಲು ಸಾಲುಗ
ಲ್ಲಿ ಬೀಜವನ್ನು ಗೇಣಿಗೆ ೩-೪ರಂತೆ ಉದುರಿಸಿ ಬಿತ್ತನೆ ಮಾಡಿದರೆ ಕ
ತೆಗೆಯುವ ಕೆಲಸವು ಸುಲಭವಾಗುವದು. ಈರೀತಿ ಚೆಲ್ಲಬೇಕಾದರೆ ಬೀಜ
ನ್ನು ಪುಡಿಮಣ್ಣಿನೊಂದಿಗೆ ಬೆರೆಸಿ ಹಾಕಿದಲ್ಲಿ ಒಂದೇಕಡೆ ಬೀಜಗಳು
ಚ್ಚಾಗಿ ಬೀಳುವದಿಲ್ಲ. ಸಾಗುವಳಿಗೆ ನೀರು ಸರಬರಾಜು ಆಗುವದಕ್ಕೆ
ವಾರ ಅಥವಾ ಒಂದು ತಿಂಗಳಿಗೆ ಮುಂಚೆಯೇ ಬತ್ತದ ಬಿತ್ತನೆ ಮಾಡು
ಪ್ರದೇಶಗಳಲ್ಲಿ ದಕ್ಷಿಣಕನ್ನಡಾ ಪ್ರಾಂತ್ಯದಲ್ಲಿ ರೂಢಿಯಲ್ಲಿರುವ ಕ್ರಮವು

ರ್ಣೀತವಾದದ್ದಾದಕಾರಣ ಅದನ್ನು ಅನುಸರಿಸಿದರೆ ಒಳ್ಳೇದು. ಅ
ದೇನೆಂದರೆ, ಬೀಜದ ಬತ್ತವನ್ನು ಚೆನ್ನಾಗಿ ಕೊಳೆತ ಸೊಪ್ಪು ಮತ್ತು ದ
ನದ ಗೊಬ್ಬರದೊಂದಿಗೆ ಬೆರಸಿ ಹಿಡಿಗೆ ೪-೫ ಬೀಜ ಇರುವಂತೆ ಚೆನ್ನಾಗಿ
ಕಲಿಸುತ್ತಾರೆ. ನಂತರ ಇದನ್ನು ಹೆಂಗಸರು ಮಕ್ಕರಿಗಳಲ್ಲಿ ತುಂಬಿಕೊಂಡು
ಕೆಸರುಮಾಡದೆ ಒಣಗಲಾಗಿರುವಾಗಲೆ ಉಳಲ್ಪಟ್ಟ ಜಮೀನಿನಲ್ಲಿ ನೇಗಿಲು
ಸಾಲುಗಳಲ್ಲಿ ಗೇಣಿಗೆ ಒಂದು ಹಿಡಿಯಂತೆ ಈ ಸೊಪ್ಪು ಸಗಣಿ ಬೆರತ ಬಿ
ತ್ತವನ್ನು ಹಾಕುತ್ತಾರೆ. ಇದರಿಂದ ಪೈರು ನಾಟಿ ಮಾಡಿದ ಗದ್ದೆಗಳಲ್ಲಿ
ಹೊರಡುವಂತೆಯೇ ಹುಲುಸಾಗಿ ಬೆಳೆಯುತ್ತದೆ. ಎಳೆ ಸಸಿಗಳು ವಿಶೇಷ
ಎತ್ತಾಗಿರುವದಿಲ್ಲವಾದಕಾರಣ ನಡುವೆ ಕಳೆ ತೆಗೆಯುವದು ಬೀಜ ಚೆಲ್ಲಿ ಪೈ
ರು ಮಾಡುವ ಗದ್ದೆಗಳಲ್ಲಾಗುವದಕ್ಕಿಂತಲೂ ಸುಲಭವಾಗಿರುತ್ತದೆ. ಆ
ದರೆ ಈ ಕ್ರಮವು ಬಿತ್ತ ಹಾಕಿದ ಒಂದು ತಿಂಗಳೊಳಗೆ ಮಳೆ ಬಾರದೇ
ಹೋದರೆ ಅಷ್ಟು ಪ್ರಯೋಜನಕರವಾಗುವದು ಸಂದೇಹ. ಹೇಗಂದರೆ, ಸ
ಸಿಗಳ ಸುತ್ತಲೂ ವಿಶೇಷ ಗೊಬ್ಬರವಿರುತ್ತದೆಯಾಗಿ ಅವು ಗೊಬ್ಬರ
ದಲ್ಲಿ ಮಾತ್ರ ಬೇರು ಬಿಡುತ್ತವೆ. ಇವು ಮೊದಲುಮೊದಲು ಬಹಳ ಹು
ಲುಸಾಗಿ ಬೆಳೆಯುತ್ತವೆ; ಆದರೆ ಒಂದು ತಿಂಗಳವರಿಗೂ ಮಳೆ ಬಾರದೆ ಇ
ದ್ದರೆ ಅಥವಾ ನೀರು ಹಾಯಿಸದೆ ಇದ್ದರೆ ತಡೆಯಲಾರವು.

---

## Palmyra Palm Disease. *
## ತಾಳೆಮರಕ್ಕೆ ತಗಲುವ ರೋಗ.

ಪ್ರಸಕ್ತ ಸಾಲ್‌ನಲ್ಲಿ ಗೋದಾವರಿ ಡಿಸ್ಟ್ರಿಕ್ಟಿನಲ್ಲಿ ತಾಳೆಮರಗಳಿಗೆ
ತಗಲುವ ರೋಗವನ್ನು ಪರಿಹರಿಸುವ ಕೆಲಸವು ತಡೆಯಿಲ್ಲದೆ ಬಹಳ ಉಪಾ
ಯವಾಗಿ ಜರಗಿತು. ಮರದ ಮಧ್ಯದ ಕಾಡಿಯು ಒಣಗಿ ಬೆಳ್ಳಗಾದ
ನಂತರವೇ ಈ ಜಾಡ್ಯವಿರುವದು ಗೊತ್ತಾಗುತ್ತಾದ್ದರಿಂದ ರೋಗ ತಗ
ಲಿದ ಗಿಡಗಳನ್ನು ಮಾತ್ರವೇ ಕತ್ತರಿಸಿಹಾಕಿದರೆ ಸಾಲದು. ರೋಗವು
ಮಿಕ್ಕ ಮರಗಳಲ್ಲಿಯೂ ಕೂಡ ಮೊದಲನೇ ಅಜಮಾಯಿಷಿಯಲ್ಲಿ ಗೋಚ
ರವಾಗದೇ ಒಳಗೆ ಅಡಗಿರುವದೂ ಉಂಟು. ಆದಕಾರಣ ರೋಗಗ್ರಸ್ತ
ವಾದ ಪ್ರದೇಶವನ್ನು ಎರಡು, ಮೂರು, ನಾಲ್ಕುವರ್ತಿ ಹೋಗಿ ನೋಡುವ
ದು ಅತ್ಯವಶ್ಯಕ. ಮಳೆಗಾಲದಲ್ಲಿ ಗರಿಗಳು ಇಬ್ಬನಿ ಬಿದ್ದು ನೆನೆದಿರುವಾ
ಗ ಜಾಡ್ಯವು ಬಹಳ ಹೆಚ್ಚಿ ಹರಡುತ್ತದೆಂದು ಸಾಮಾನ್ಯವಾಗಿ ಹೇಳು

---

* ಮದರಾಸು ಸರ್ಕಾರಿ ವ್ಯವಸಾಯ ಇಲಾಖೆಯ, ೧೯೦೭—೦೮ನೆ ಸಾಲ್ ರಿಪೋರ್ಟು.

ತ್ತಾರೆ. ಆದರೆ ಈ ಪ್ರಾಂತ್ಯದಲ್ಲಿ ಈ ಕ್ರಮವನ್ನು ಅನುಸರಿಸದೇ ಬಿ
ಟ್ಟರೆ ಇದು ಈಗಿನದಕ್ಕಿಂತಲೂ ಅತಿ ಜಾಗ್ರತೆಯಾಗಿ ಹರಡುತ್ತಿತ್ತೆಂದು ಧ
ರಾಳವಾಗಿ ಹೇಳಬಹುದು. ಡಾಕ್ಟರ್ ಬಟ್ಲರ್ ಯವರು (Dr. Butle
ಕ್ರಮವನ್ನು ಆರಂಭಿಸುವದಕ್ಕೆ ಮೊದಲು ರೋಗದ ಸ್ವಭಾವ ಮತ್ತು
ಇದನ್ನು ಹೋಗಲಾಡಿಸುವದಕ್ಕೆ ಅನುಸರಿಸಿರುವ ಕ್ರಮದ ಉದ್ದೇಶ
ವುಗಳನ್ನು ಕುರಿತು ಒಂದು ಸಣ್ಣ ಲೇಖನವನ್ನು ದೇಶಭಾಷೆಯಲ್ಲಿ ಛಾಪಿ
ಎಲ್ಲೆಲ್ಲಿಯೂ ರೈತರಿಗೆ ಹಂಚಿದರು. ಪ್ರಾಯಶಃ ಈ ಸಂಗತಿಯನ್ನೆಲ್ಲಾ
ರೈತರ ತಿಳುವಳಿಕೆಗೆ ತಂದಿದ್ದರಿಂದಲೇ ಈ ಕ್ರಮವನ್ನನುಸರಿಸುವದರ
೨ ಲಕ್ಷ ಮರಗಳನ್ನು ಕಡೆದುಹಾಕಿದಾಗ್ಯೂ ಕೂಡ ರೈತರು ತಮಗಾದ
ಷ್ಟಕ್ಕಾಗಿ ಪರಿಹಾರ ದ್ರವ್ಯವನ್ನು ವಿಶೇಷ ಅಪೇಕ್ಷಿಸಲಿಲ್ಲ. ಈ ಕಾ
ವು ಸಫಲವಾಗುವದಕ್ಕೆ ರೈತರು ಎಷ್ಟು ತಿಳುವಳಿಕೆ ಕೊಟ್ಟಾಗ್ಯೂ ತಕ
ಸಹಾಯ ಮಾಡದೇ ಉದಾಸೀನ ಮನಸ್ಕರಾಗಿರುವದು ಒಂದು ಬಲವಾ
ಅಡ್ಡಿಯಾಗಿರುತ್ತೆ.

## Revenue Appeals.

## ರೆವಿನ್ಯೂ ಅಪೀಲುಗಳು.

ಮೈಸೂರು ಶ್ರೀಮನ್ ಮಹಾರಾಜ ರಾಜಾಸಾಹೇಬ್ ಬಹದ್ದೂರ್‌ರವ
ಸರ್ಕಾರದಲ್ಲಿ.

೧೯೦೮—೦೯ನೆ ಇಸವಿಯ ಅಪೀಲ್ ನಂ. ೬.

ಅಪೀಲು ವಾದಿಗಳು.

೧. ವೆಂಕಟಕೃಷ್ಣಯ್ಯ, ಲಕ್ಷ್ಮಯ್ಯನ ಮಗ. ೨. ಸೀನಪ್ಪ, ಲಕ್ಷ್ಮಣಯ್ಯನಮ

ಅಪೀಲು ಪ್ರತಿವಾದಿಗಳು.

೧. ಗುಂಡಪ್ಪ.
೨. ಶ್ಯಾಮರಾವು.
೩. ಕೃಷ್ಣಪ್ಪ. } ವೆಂಕಟರಮಣಯ್ಯನ ಮಕ್ಕಳು.
೪. ವೆಂಕಟದಾಸಪ್ಪ, ಗುಂಡಪ್ಪನ ಅಣ್ಣ ವೆಂಕಟರಾಮಯ್ಯನ ಮಗ.
೫. ವೆಂಕಟರಮಣಯ್ಯ, ಗುಂಡಪ್ಪನ ತಮ್ಮ ಪುಟ್ಟಣ್ಣನ ಮೈನರು ಮಗ, ಇವನಿಗೆ ಗಾರ್ಡಿಯನ್ ಇವನ ಚಿಕ್ಕಪ್ಪ ೩ನೇ ಪ್ರತಿವಾದಿ ಕೃಷ್ಣಪ್ಪ.
೬. ಹರಿಯಪ್ಪ, ಲಕ್ಷ್ಮಣಯ್ಯನ ಮ
ಮತ್ತು ೨ನೆ ವಾದಿ ಸೀನಪ್ಪನ ಅಣ್ಣ
೭. ವೆಂಕಟರಾಮಯ್ಯ, ಹರಿಯಪ್ಪನ
ಣ್ಣ ಕೃಷ್ಣಪ್ಪನ ಮೈನರು ಮ
ಗಾರ್ಡಿಯನ್ ಹರಿಯಪ್ಪ.
೮. ವೆಂಕಟರಾಮಯ್ಯ, ೪ನೆ ಪ್ರತಿವಾ
ದಿ ವೆಂಕಟದಾಸಪ್ಪನ ತಮ್ಮ.

ಮೊಕದ್ದಮೆಯ ವಿದ್ಯಮಾನಗಳು.—ಕನ್ನಿಗಾರರು ಈ ಕೆ

ಈಕೆಳಗೆ ಕಾಣಿಸಿರುವ ಮೇರಿಗೆ ಮೂರೇ ಜನರ ಬರಾವರ್ದಿ ಸಲ್ಲಿಸ್ಪು(?).

| ಗ್ರಾಮಗಳು. | ಹೆಸರು. |
|---|---|
| ನಿಜ್ಗೂರು ಅಮಾನಿಕೆರೆ. | ವೆಂಕಟದಾಸಪ್ಪ (೩ನೆ ಪ್ರತಿವಾದಿ) |
| ೧. ನಿಜ್ಗೂರು. ೨. ಬಾಬಿನಹಳ್ಳಿ. ೩. ಕಾರೆಹಳ್ಳಿ. ೪. ಹರಿಶನಹಳ್ಳಿ. ೫. ಕೆಂಚನಹಳ್ಳಿ. | ಸೀನಪ್ಪ. (೨ನೆ ವಾದಿ) |
| ೧. ಮತ್ತಿಗಟ್ಟ. ೨. ಅಮ್ಮನಹಳ್ಳಿ. ೩. ಬಂಡಿಹಳ್ಳಿ. ೪. ಪುರ. ೫. ನಂದಿಹಳ್ಳಿ. | ವೆಂಕಟರಮಣಯ್ಯ (೫ನೆ ಪ್ರತಿವಾದಿ) ಮೈನರು, ಇವನ ಗಾರ್ಡಿಯನ್ ಗುಂಡಪ್ಪ. |

೧೮೯೫ನೆ ಡಿಶಂಬರು ತಿಂಗಳಲ್ಲಿ ವೆಂಕಟಕೃಷ್ಣಯ್ಯನು (೧ನೆ ವಾದಿ) ಈ ೧೧ ಗ್ರಾಮಗಳ ಒಟ್ಟು ಶ್ಯಾನಭೋಗಿ ಹಕ್ಕಿನಲ್ಲಿ ¼ ಹಿಸ್ಸೆಗೆ ತನ್ನ ಹಕ್ಕನ್ನು ಸ್ಥಾಪಿಸಿ ಕೊಟ್ಟು, ಒಟ್ಟು ಪ್ರೋಟಗಿಯಲ್ಲಿ ನಾಲ್ಕರಲ್ಲಿ ಒಂದು ಭಾಗ ಹುಟ್ಟುವಳಿಯಾಗುವಷ್ಟು ಗ್ರಾಮಗಳನ್ನು ತನ್ನ ಸ್ವಾಧೀನ ಪಡಿಸಬೇಕೆಂದು ದಾವೆ ಮಾಡಿದನು.

ಅಪೀಲಿನಲ್ಲಿ ಗೌರ್ನ್ಮೆಂಟಿನವರು ವೆಂಕಟಕೃಷ್ಣಯ್ಯನ ದಾವೆಯು ಕಾಲಾತೀತವಾದ್ದಲ್ಲವೆಂತಲೂ ಪ್ರೋಟಿಗಿ ಸೆಟಲ್‌ಮೆಂಟಿಗೆ ವಿರೋಧವಾಗಿ ಈ ಹನ್ನೊಂದು ಗ್ರಾಮಗಳನ್ನು ೩ ಭಾಗಗಳಾಗಿ ಮಾಡಿದ್ದು ಪ್ರೋಟಿಗಿ ರೂಲುಗಳಿಗೆ ಸಮ್ಮತವಾದದ್ದಲ್ಲವಾಗಿ ಈ ಗ್ರಾಮಗಳನ್ನು ಪುನಃ ಹಂಚಿಕೆ ಮಾಡಿ ಈಪೈಕಿ ಚಿಕ್ಕದಾದ ಫಿರ್ಕಾವನ್ನು ವೆಂಕಟಕೃಷ್ಣಯ್ಯನಿಗೆ ಕೊಡಬೇಕೆಂದು ಹುಕುಂ ಮಾಡಿದರು. ತರುವಾಯ ಈ ಹುಕ್ಕುಂ ಅನುಸರಿಸಿ ಡೆಪ್ಯುಟಿ ಕಮಿಷನರವರು ಪ್ರೋಟಿಗಿ ಸೆಟಲ್‌ಮೆಂಟನಲ್ಲಿ ಠರಾವಾದ ೪ ಭಾರ್ಜುಗಳ ಪೈಕಿ I ಮತ್ತು IIIನೆ ಭಾರ್ಜುಗಳನ್ನು ಸೀನಪ್ಪನಿಗೆ IVನೇದನ್ನು ವೆಂಕಟದಾಸಪ್ಪ ಮತ್ತು ವೆಂಕಟರಮಣಯ್ಯ ಇವರ ಹೆಸರಿನಲ್ಲಿ ಜಾಯಿಂಟಾಗಿಯೂ, IIನೇ ಭಾರ್ಜನ್ನು ವೆಂಕಟಕೃಷ್ಣಯ್ಯನಿಗೆ, ಈ ಮೇರೆ ಮೊಕರರೂರು ಮಾಡಿದರು. ಇದರ ಮೇಲೆ ಗುಂಡಪ್ಪನು ಗೌರ್ನ್ಮೆಂಟಿನವರಲ್ಲಿ ಅರ್ಜಿ ಮಾಡಿದನು.

ಗೌರ್ನ್ಮೆಂಟಿನವರ ತೀರ್ಮಾನ.—ಈ ದಾವೆಯಲ್ಲಿ ವೆಂಕಟಕೃಷ್ಣಯ್ಯನ ಹಕ್ಕಿನ ವಿಚಾರವಾಗಿ ೧೮೯೮ನೆ ನವಂಬರು ೨ನೆ ತಾರೀಖು ಗೌರ್ನ

ಮೆಂಟ್ ಹುಕುಂ ಹುಟ್ಟಿನಾಗ್ಯೆ ಯಾವ ಯಾವ ಆಧಾರಗಳು ಆಲೋಚನೆ
ಗೆ ತೆಗದುಕೊಳ್ಳಲ್ಪಟ್ಟವೊ ಅದೇ ಆಧಾರಗಳ ಮೇಲೆ ಪುನಃ ಇವನ ಹಕ್ಕು
ಈಗ ಚರ್ಚಾಸ್ಪದವಾಗಿ ಮಾಡಲ್ಪಟ್ಟಿರುತ್ತೆ. ಈ ಹುಕುಮಿಗೆ ವಿರುದ್ಧ
ವಾಗಿಯೂ ಮತ್ತು ಇದರ ಹಿಂದಿನ ನಡವಳಿಕೆಗಳನ್ನು ಆಲೋಚನೆಗೆ ತೆಗ
ದುಕೊಂಡು ವೆಂಕಟಕೃಷ್ಣಯ್ಯನ ವಯಸ್ಸು ಮತ್ತು ಜಾತಕದ ವಿಷ
ಯದಲ್ಲೂ ಮತ್ತು ೧೮೯೮ರಲ್ಲಿ ಗೌರ್ನ್ಮೆಂಟಿನವರು ತೀರ್ಮಾನಿಸಿದ ಇವ
ನ ದಾವೆಯು ಆಗ್ಯೆ ಕಾಲಾತೀತವಾಗಿತ್ತೆ ಇಲ್ಲವೆ ಎಂಬ ಅಂಶದಲ್ಲೂ ತತ್ರಾ
ಪಿ ಗುಂಡಪ್ಪನು ಮೈನರು ವೆಂಕಟರಮಣಯ್ಯನ ಪರವಾಗಿ ವ್ಯವಹರಿಸಿ
ದಾಗ್ಯೆ ಈ ವಿಷಯಗಳನ್ನು ವಾದಿಸಬಹುದಾಗಿತ್ತಾಗಿ ಈಗ [illegible]ಸುವ
ದಕ್ಕೆ ರೆವಿನ್ಯೂ ಕಮಿಷನರವರಿಗೆ ಆಸ್ಪದವಿರುವದಿಲ್ಲ. ಅಲ್ಲದೆ ಜಾತಕ ಮ
ತ್ತು ಇದಕ್ಕೆ ಸಂಬಂಧಪಟ್ಟ ಲಿಮಿಟೇಷನ್ ಸಂಗತಿಗಳಲ್ಲಿ ರೆವಿನ್ಯೂ ಕಮಿ
ಷನರವರು ಪಡುವ ಅಭಿಪ್ರಾಯವು ಈ ವಿಚಾರದಲ್ಲಿ ಕೆಳಗಿನ ಎರಡು ಕೋ
ರ್ಟುಗಳ ತೀರ್ಮಾನಕ್ಕೂ ವಿರೋಧವಾಗಿರುತ್ತದೆ. ಮತ್ತು ಮೇಲ್ಕಂಡ
ಗೌರ್ನ್ಮೆಂಟ್ ಹುಕುಂ ಹುಟ್ಟಿದನಂತರ ಪುನಃ ಪ್ರಸಕ್ತ ಗ್ರಾಮಗಳ
ಶ್ಯಾನುಭೋಗಿಕೆಯು ಪ್ರೋಟಿಗಿ ರೂಲುಗಳಿಗೆ ವಿರೋಧವಾಗಿ ಮುಂದಿನ
ರಿವಿಜನ್ ಸೆಟ್ಲ್ಮೆಂಟ್ವರೆಗೂ ಹಕ್ಕುದಾರರ ಒಳ ಏರ್ಪಾಟಿನ ಮೇರೆಗೇನೇ
ಅನುಭವದಲ್ಲಿರತಕ್ಕದ್ದೆಂದು ರೆವಿನ್ಯೂ ಕಮಿಷನರವರು ಅಪ್ಪಣೆ ಮಾಡುವ
ದಕ್ಕೂ ಆಸ್ಪದವಿರುವದಿಲ್ಲ.

ಈ ಮೊಕದ್ದಮೆಯಲ್ಲಿ ಅನವಶ್ಯಕವಾದ ವ್ಯವಹಾರ ನಡೆದಿರುತ್ತಲ್ಲದೆ
ಸರ್ಕಾರದವರಿಗೆ ವೃಥಾ ಕಾಲಹರಣ ಮತ್ತು ಕಕ್ಷಿಗಾರರಿಗೆ ದ್ರವ್ಯ ನಷ್ಟ
ವೂ ಉಂಟಾಗಿರುತ್ತೆಂದು ಗೌರ್ನ್ಮೆಂಟಿನವರು ಅಭಿಪ್ರಾಯಪಡುತ್ತಾರೆ.
ಪ್ರೋಟಿಗಿ ಸೆಟ್ಲ್ಮೆಂಟಿನಂತೆ ಏರ್ಪಟ್ಟ ಛಾರ್ಜುಗಳನ್ನು ಜಾರಿಯಲ್ಲಿ ತರ
ಬೇಕೆಂದು ಮತ್ತು ಈ ಛಾರ್ಜುಗಳನ್ನು ಹಕ್ಕುದಾರರಿಗೆ ಹಂಚುವದರಲ್ಲಿ ಆ
ಗಿನ ರಿಜಿಸ್ಟರ್ಡ್ ಬರಾವರ್ದಾರರ ಹಕ್ಕನ್ನೂ ಗಣನೆಗೆ ತೆಗದುಕೊಳ್ಳಬೇ
ಕೆಂಬುವದೇ ೧೮೯೮ನೆ ನವಂಬರು ೨ನೆ ತಾರೀಖಿನ ಗೌರ್ನ್ಮೆಂಟು ಹು
ಕುಮಿನ ತಾತ್ಪರ್ಯವಾಗಿರುತ್ತದೆ. ಈ ಹುಕುಮನ್ನು ಜಾರಿಯಲ್ಲಿ ತರು

ವದು ಅತಿ ಸುಲಭವಾಗಿತ್ತು ಮತ್ತು ಈ ಕೆಳಗೆ* ಕಾಣಿಸಿರುವಂತೆ ೨ಲ್ಲಿ ಒಂದು ಏರ್ಪಾಡನ್ನು ಮಾಡಬಹುದಾಗಿತ್ತು. ಈಗಲೂ ಇದರಂತೆ ಏರ್ಪಾಟು ಮಾಡತಕ್ಕದ್ದು. ಮತ್ತು ಇದು ಕಕ್ಷಿಗಾರರಿಗೆ ಸಮ್ಮತವಾದ್ದೆಂತ ತೋರುತ್ತೆ. ಸೀನಪ್ಪನು ಹಕ್ಕುದಾರ ವಂಶದಲ್ಲಿ ಜೇಷ್ಠಸಂತತಿಯುವನಾದಕಾರಣ ಇವರ ಇಷ್ಟಾನುಸಾರ Iನೇ ಭಾಗ ಮತ್ತು IVನೇ ಭಾಗಗಳಲ್ಲಿ ಯಾವದಾದರೊಂದನ್ನು ಇವನಿಗೆ ಕೊಡಬೇಕು. ಉಳಿದ ಏರ್ಪಾಟುಗಳನ್ನು ಬಹಳ ಸುಲಭವಾಗಿ ಮಾಡಬಹುದು. ಹರಿಯಪ್ಪನನ್ನು ಈ ಏರ್ಪಾಟುಗಳಲ್ಲಿ ಸೇರಿಸಲಿಕ್ಕೆ ಸರಿಯಾದ ಕಾರಣಗಳೇ ಇಲ್ಲ. ಮೇಲ್ಕಂಡ ಏರ್ಪಾಟು ಎಲ್ಲಾ ಕಕ್ಷಿಗಾರರಿಗೂ ತೃಪ್ತಿಕರವಾಗಿರಬೇಕಲ್ಲದೆ ಪೋಟಿಗಿ ಸೆಟ್ಲಮೆಂಟಿಗೆ ಅನುಸಾರವಾಗಿಯೂ ಮತ್ತು ಕೂಡಿಪಟ್ಟಿಗೂ ಹಕ್ಕುದಾರರ ಒಳ ಏರ್ಪಾಟಿಗೂ ಸಮ್ಮತ ವಾಗಿಯೇ ಇರುತ್ತದೆ.

ಡೆಪ್ಯುಟಿ ಕಮಿಷನರವರ ೧೮೯೯ನೇ ಇಸವಿಯ ಜುಲೈ ೨೦ನೆ ತಾರೀಖಿನ ೪೭ನೇ ನಂಬರು ರಿಪೋರ್ಟಿನಲ್ಲಿ ಗುಂಡಪ್ಪನ ಮತ್ತು ವೆಂಕಟರಮಣಯ್ಯನ ತಂಡೆ ಪುಟ್ಟಣ್ಣನ ಮೊಕರರೂರಾತಿಯು „ ಹಂಗಾಮಿ ತರೀಖು ” ಅಂತ ನಮೂದು ಇರುತ್ತೆ. ಇದು ತಪ್ಪು. ಇದು ಪರೀಕ್ಷಾರ್ಥವಾದ ಏರ್ಪಾಟೆಂದು ೧೮೮೨ನೇ ಸಾಲ್ ಅಸಲ್ ರಿಕಾರ್ಡುಗಳಿಂದ ತೋರುತ್ತೆ.

---

| * ಫಿರ್ಕಾ | ಗ್ರಾಮಗಳು. | ಪೋಟಿಗಿ. | ಬರಾವರ್ದಾರರ ಹೆಸರು. |
|---|---|---|---|
| I. | ೧. ನಿಟ್ಟೂರು<br>೨. ಬಾಬಿಗನಹಳ್ಳಿ. | ೮೩-೧೧-೦ | ವೆಂಕಟದಾಸಪ್ಪ ಅಥವಾ ಸೀನಪ್ಪ. |
| II. | ೧. ಕೆಂಪನಹಳ್ಳಿ<br>೨. ಅಮ್ಮನಹಳ್ಳಿ<br>೩. ಬಂಡಹಳ್ಳಿ<br>೪. ಕಾರೆಹಳ್ಳಿ | ೬೭-೪-೦ | ವೆಂಕಟಕೃಷ್ಣಯ್ಯ. |
| III. | ೧. ಮತ್ತಿಗಟ್ಟ<br>೨. ನಂದಿಹಳ್ಳಿ<br>೩. ಪರಶನಹಳ್ಳಿ<br>೪. ಪುರ | ೮೯-೧೨-೦ | ಸೀನಪ್ಪ ಅಥವಾ ವೆಂಕಟದಾಸಪ್ಪ. |
| IV. | ನಿಟ್ಟೂರು ಅಮಾನಿಕೆರೆ. | ೧೧೫-೪-೦ | ಗುಂಡಪ್ಪ ಮತ್ತು ಮೈನರ್ ವೆಂಕಟರಮಣಯ್ಯ ಜಾಯಿಂಟಾಗಿ. |

ಈ ಸಂದರ್ಭಗಳಲ್ಲಿ ರೆವಿನ್ಯೂ ಕಮಿಾಷನರವರ ಹುಕುಮನ್ನು ಬದಲಾಯಿಸಿ ಮೇಲೆ ಸೂಚಿಸಿರುವ ಮೇರೆ ಯಾವದಾದರೊಂದು ಏರ್ಪಾಟನ್ನು ಜಾರಿಯಲ್ಲಿ ತರಬೇಕೆಂತಲೂ ಮತ್ತು ೨ನೇ ವಾದಿ ಸೀನಪ್ಪನಿಗೆ Iನೇ ಛಾರ್ಜ್ ಮತ್ತು IIIನೇ ಛಾರ್ಜುಗಳ ಪೈಕಿ ಇವನ ಇಷ್ಟಾನುಸಾರ ಒಂದನ್ನು ಕೊಡಬೇಕೆಂತಲೂ ಗೌರ್ನಮೆಂಟಿನವರು ಹುಕುಂ ಮಾಡಿರುತ್ತಾರೆ.

---

## Agricultural Experiments in Madras Presidency.

## ಮದರಾಸು ಅಧಿಪತ್ಯದಲ್ಲಿ ನಡೆದ ವ್ಯವಸಾಯಕ ಅಜಮಾಯಿಷಿಗಳು.

ಮದರಾಸು ಸರ್ಕಾರಿ ವ್ಯವಸಾಯ ಇಲಾಖೆಯ ೧೯೦೭-೦೮ನೆ ಸಾಲಿನ ರಿಪೋರ್ಟಿನಲ್ಲಡಗಿರುವ ಕೆಲವು ಮುಖ್ಯಾಂಶಗಳನ್ನು ನಮ್ಮ ವಾಚಕರ ತಿಳುವಳಿಕೆ ಬಗ್ಗೆ ಇಲ್ಲಿ ನಮೂದಿಸಿರುತ್ತೇವೆ.

೧. ಬತ್ತ.—ಬತ್ತದ ಪೈರಿಗೆ ಬೀಳುವ ದಂಟು ಕೊರೆಯುವ ಹುಳುಗಳಿಗೆ ಅತಿ ಸಾಮಾನ್ಯವಾದ ಪರಿಹಾರವೇನಂದರೆ, ಫಸಲು ಕಟಾವು ಮಾಡಿದನಂತರ ನೆಲವನ್ನು ಉತ್ತು ಕೂಳೆಗಳನ್ನು ಬುಡಸಹಿತ ಎಬ್ಬಿಸುವದರ ಮೂಲಕ ಹುಳುಗಳು ಸೇರಿಕೊಂಡಿರುವ ಗೂಡುಗಳನ್ನು ನಾಶಪಡಿಸಬೇಕು.

೨. ಕಬ್ಬು.—ದಕ್ಷಿಣ ಆರ್ಕಾಟಿನಲ್ಲಿ ಹಿಂದಿನ ವರುಷ ೬೦ ಎಕರೆ ಜಮಿಾನಿನಲ್ಲಿ ಮೊರೀಷಸ್ ಕಬ್ಬನ್ನು ಹಾಕಿತ್ತು. ಆಲೆ ಆಡಿದ್ದರಲ್ಲಿ ಊರು ಕಬ್ಬಿನ ಹಾಲಿನಲ್ಲಿ ಹೆಚ್ಚು ಬೆಲ್ಲವೂ ಮತ್ತು ಹೆಚ್ಚು ಸಕ್ಕರೆಯೂ ಇಳಿಯುವದಾಗಿ ಕಂಡುಬಂತು. ಈ ವರುಷ ಈ ಪ್ರಾಂತ್ಯದಲ್ಲಿ ಈ ಕಬ್ಬಿನ ಬೆಳೆ ಇಟ್ಟಿದ್ದ ವಿಸ್ತೀರ್ಣವು ಹೋದವರುಷಕ್ಕಿಂತ ಮೂರರಷ್ಟು ಹೆಚ್ಚಾಗಿರುತ್ತೆ. ಇದರಿಂದ ರೈತರು ಸ್ಥಳೀಯ ರಕಂಗಿಂತ ಇದು ಉತ್ತಮವಾದದ್ದೆಂದು ತಿಳಿದುಕೊಂಡಿರುತ್ತಾರೆ. ಈ ಕಬ್ಬಿನ ಬೀಜವನ್ನು ಕುಂಭಕೋಣದ ವ್ಯವಸಾಯ ಸಂಘದವರು ತರಿಸಿ ತಮ್ಮ ಫಾರಂನಲ್ಲಿ ಬೆಳೆ ಮಾಡಿದ್ದರಲ್ಲಿ ಬಹಳ ಹುಲುಸಾದ ಫಸಲಾಯಿತು. ಇದರ ವ್ಯವಸಾಯವು ಅಲ್ಲಲ್ಲಿ ವೃದ್ಧಿಹೊಂದುತ್ತಿದೆ.

೩. ಗೊಬ್ಬರ.—ಕಬ್ಬಿಗೆ ಕ್ರಮವಾಗಿ ಕೊಡಿಟ್ಟ ದನದ ಗೊ

ತೆಗೆಯುವ ಖರ್ಚು ಕಡಿಮ್ಮೆಯಾಗುವದಲ್ಲದೆ ನೀರಿನ ಖರ್ಚನ್ನು ಮಿತಪಡಿಸಬಹುದು. ಕೆಲವುಕಡೆ ಎಕರೆಗೆ ಸುಮಾರು ೭೫ ಸೇರು ಬೀಜವನ್ನು ಉಪಯೋಗಿಸುತ್ತಾರೆ. ಮತ್ತು ಕೆಲವು ಪ್ರಾಂತ್ಯ ಸರಾಸರಿ ೪೦-೫೦ ಸೇರು ಬೀಜ ತಗಲುವದುಂಟು. ಆದರೆ ಎಕರೆಗೆ ೧೦ ಸೇರು ಒಳ್ಳೇ ಬೀಜವಾದರೆ ಯಥೇಷ್ಟವಾಗುವದೆಂದು ತಿಳಿದುಬರುತ್ತೆ. ಸೈದಾಪೇಟೆ ಫಾರಂನಲ್ಲಿ ಸುಮಾರು ೪ ಎಕರೆಗಳಿಗೆ ಎಕರೆಗೆ ೬ ಸೇರು ಮೇರೆ ಬಿತ್ತಿ ಹಾಕಿದ್ದಕ್ಕೆ ಸರಿಯಾದ ಉತ್ಪತ್ತಿಯೇ ಆಯಿತು. ಇದೇರೀತಿ ಬೀಜದ ಖರ್ಚನ್ನು ಕಡಮೆ ಮಾಡಿ ಸರಿಯಾದ ಅಥವಾ ಹೆಚ್ಚು ಬೆಳೆಯನ್ನು ತೆಗೆಯಲಿಕ್ಕೆ ಸಾಧ್ಯವಾಗುವದರಿಂದ ಎಕರೆಯೊಂದಕ್ಕೆ ಹಾಳಿ ಹಳಾಕಾಗುತ್ತಿರುವ ೩೦ ಸೇರಿನಷ್ಟು ಬೀಜ ಕೂಡಿಬರುವದು. ಇದು ಈಗ ದೇಶದಲ್ಲಿ ಆಹಾರದ ಉಪಯೋಗದ ಬಗ್ಯೆ ಒದಗಿ ಎಷ್ಟೋ ಪ್ರಜಾನೆಮ್ಮದಿಯುಂಟಾಗುತ್ತದೆ.

ಈ ಆಧಿಪತ್ಯದಲ್ಲಿ ೨,೪೦೦,೦೦೦ ಎಕರೆಗಳು ಬತ್ತದ ಸಾಗುವಳಿಯಲ್ಲಿರುವವಾಗಿ ಅಂದಾಜಾಗಿರುತ್ತೆ.

---

## Government Orders.

## ಸರ್ಕಾರಿ ಹುಕುಂಗಳು.

### I

ನಂ. ರೆ. ೭೭೧೦—ಲ್ಯಾ. ರೆ. ೩೧೯-೦೮-೧.

ತಾರೀಖು ೨೫ನೇ ಮಾರ್ಚಿ ೧೯೦೯.

ಲ್ಯಾಂಡು ರೆವಿನ್ಯೂ ರೂಲ್ಸ್ ಯಾ ನಿಬಂಧನೆಗಳ ೪೧ನೇ ನಿಬಂಧನೆಯ ನಂತರ ಈ ಕೆಳಗಣ ನಿಬಂಧನೆಯನ್ನು ಸೇರಿಸಿಕೊಳ್ಳಬೇಕು:—

೧. ನಿಬಂಧನೆ ೪೧. ಎ.—ಗಂಧದ ಮರಗಳಿರುವ ಜಮೀನುಗಳನ್ನು ಖಾತುವಳಿಯಾಗಿ ಕೊಡಬೇಕಾದರೆ ಅವುಗಳನ್ನು ಯಾವಾಗಲೂ ಹರಾಜಿನ ಮೂಲಕ ಮಾಡಬೇಕಲ್ಲದೆ, ಆಗ್ಯೂ ಈ ವಿಚಾರವಾಗಿ ಜಾರಿಯಲ್ಲಿರುವ ಸರ್ಕಾರ ಹುಕುಂಗಳ ಮೇರಿಗೆ ಸದರಿ ಜಮೀನುಗಳಲ್ಲಿ ಗಂಧದ ಮರಗಳು ಇರುವ ಪ್ರಯುಕ್ತ ದರಖಾಸ್ತುದಾರನು ಆ ಜಮೀನುಗಳ ಮಾಲೀಕನಾದರೆ ತತ್ಕಾಲದಲ್ಲಿ ಎಷ್ಟು ಪರಿಹಾರ ದ್ರವ್ಯಕ್ಕೆ ಅರ್ಹನಾಗುತ್ತಾ

ನೆಯೋ ಅಷ್ಟು ಮೊಬಲಗನ್ನು ಸದರಿ ಜಮೀನುಗಳಿಗೆ ಸರ್ಕಾರದವ
ಗೊತ್ತು ಮಾಡುವ ಪ್ರಥಮ ಸವಾಲಿನಲ್ಲಿ ಲೆಕ್ಕಮಾಡಬೇಕು.

೨. ಯಾವ ಜಮೀನಿನಲ್ಲಿ ಅನೇಕ ಗಂಧದ ಮರಗಳಿರುತ್ತವೆಯೋ
ಅಂಥಾ ಜಮೀನನ್ನು ಸಾಗುವಳಿಗಾಗಿ ಕೊಡುವುದಕ್ಕೆ ಮುಂಚಿತವಾಗಿ ಜ
ಗ್ಲಿ ಇಲಾಖೆಯವರ ಅಭಿಪ್ರಾಯವನ್ನು ಕೇಳಬೇಕು. ಆ ಸರ್ವೆ ನಂಬ
ನಲ್ಲೆಲ್ಲಾ ಗಂಧದ ಮರಗಳು ಬಹಳ ಒತ್ತಾಗಿ ಬೆಳದಿದ್ದರೆ, ಅಂಥಾ ನಂಬ
ನ್ನು ಸರ್ಕಾರಕ್ಕೆ ಉಳಿಸಿಟ್ಟುಕೊಳ್ಳಬೇಕು. ಸದರಿ ಸರ್ವೆ ನಂಬರಿ
ಒಂದು ಭಾಗದಲ್ಲಿ ಮಾತ್ರ ಗಂಧದ ಮರಗಳು ಬೆಳದಿದ್ದು ಮಿಕ್ಕ ಭಾಗದ
ಅಷ್ಟುಮರಗಳಿಲ್ಲದೆ ಇದ್ದರೆ, ಈ ಮಿಕ್ಕ ಭಾಗವನ್ನು ಬೇರೆ ಸರ್ವೆ ನಂ
ರಾಗಿ ಮಾಡಿ ಅದನ್ನು ಸಾಗುವಳಿಗೆ ಕೊಡಬಹುದು. ಪರಂತು ಇದರ
ಸ್ತೀರ್ಣವು ಆಯಾ ಪ್ರದೇಶದ ಕನಿಷ್ಟ ವಿಸ್ತೀರ್ಣಕ್ಕಿಂತ ಕಮ್ಮಿಯಾ
ರಕೂಡದು. ಗಂಧದ ಮರಗಳುಳ್ಳ ಭಾಗವನ್ನು ಗುರ್ತುಮಾಡಿ ಅದನ್ನು
ಸರ್ಕಾರಕ್ಕೆ ಉಳಿಸಿಕೊಳ್ಳುವುದು ಸಾಧ್ಯವಾಗಿರುವ ವಿಶೇಷ ಸಂದರ್ಭ
ಳಲ್ಲಿ, ಅಂಥಾ ಭಾಗವು ವಿಧಿಸಲ್ಪಟ್ಟಿರುವ ಕನಿಷ್ಟ ವಿಸ್ತೀರ್ಣಕ್ಕಿಂತ
ಮ್ಮಿಯಾಗಿದ್ದರೂ, ಅದನ್ನು ರೆವಿನ್ಯೂ ಕಮಿಷನರವರ ಮಂಜೂರಾತಿಯಿ
ದ ಪ್ರೂಪ್ ಖರಾಬಾಗಿ ಎಣಿಸಿ ಸರ್ಕಾರಕ್ಕೆ ಉಳಿಸಿಕೊಳ್ಳಬೇಕು. ಸದರಿ
ರ್ವೆ ನಂಬರಿನ ಮಿಕ್ಕ ಭಾಗವನ್ನು ಮಾತ್ರ ದಾಮಾಷಾ ಮೇರೆಗೆ ಕಂದ
ಯವನ್ನು ಕಮ್ಮಿ ಮಾಡಿ ಸಾಗುವಳಿಗೆ ಕೊಡಬೇಕು.

---

## II

ನಂ. ರೆ. ೭೭೫೯-೬೮—ವ್ಯವ. ೬೯-೦೮-೬೫.

ತಾರೀಖು ೨೭ನೆ ಮಾರ್ಚಿ ೧೯೦೯.

ಕುಡಿಯುವ ನೀರಿನ ಭಾವಿಗಳಿಗಾಗಿ ಮಂಜೂರ್ಮಾಡಿರುವ ಹಣವನ್ನು
ಈ ಕಾಲದಲ್ಲಿ ಕುಡಿಯುವ ನೀರಿಗೆ ಎಲ್ಲೆಲ್ಲಿ ದುರ್ಭಿಕ್ಷ ವುಂಟಾಗಿರುತ್ತ
ಯೋ ಆ ಸ್ಥಳಗಳಲ್ಲೆಲ್ಲಾ ಭಾವಿಗಳನ್ನು ತೆಗಿಯುವದಕ್ಕಾಗಿಯೇ ವಿ
ಯೋಗಿಸಬೇಕೆಂತ ಸರ್ಕಾರದವರು ಅಭಿಪ್ರಾಯಪಡುತ್ತಾರೆ. ಆದಕ
ರಣ ಭಾರೀಲಾಗವತು ಮುಟ್ಟುವ ಭಾವಿಗಳು ಎಲ್ಲೆಲ್ಲಿ ಈ ಕಾಲದಲ್ಲಿ ಅ
ಶ್ಯಕವಾಗಿಲ್ಲವೋ ಅಂಥಾ ಸ್ಥಳಗಳಲ್ಲಿ ಈ ಹಣದಿಂದ ಅಂಥಾ ಭಾವಿಗ

ನ್ನು ತೆಗೆಯುವುದಕ್ಕೆ ಉಪಕ್ರಮಿಸುವುದು ಯುಕ್ತವಲ್ಲ. ಆದರೆ, ಭೂಮಿಯು ಸ್ವಾಭಾವಿಕವಾಗಿ ಗಟ್ಟಿಯಾಗಿಲ್ಲದೆ ಇರುವುದರಿಂದಲಾಗಲೀ ಅಥವಾ ನೀರುಬರಬೇಕಾದರೆ ಬಹಳ ಆಳವಾಗಿ ತೋಡಬೇಕಾದುದರಿಂದಲಾಗಲಿ ಭಾವಿಯು ಜರಿಯದಂತೆ ಕಲ್ಲುಕಟ್ಟಬೇಕಾದ ವಿಶೇಷ ಸಂದರ್ಭಗಳಲ್ಲಿ ಮಾತ್ರ ಈ ಹಣವನ್ನು ಉಪಯೋಗಿಸಿಕೊಳ್ಳುವ ವಿಷಯದಲ್ಲಿ ಆಕ್ಷೇಪಣೆಯಿಲ್ಲ.

೬. ಭಾವಿ ತೆಗೆಯುವುದಕ್ಕೆ ಸ್ಥಳಗಳನ್ನು ಚುನಾಯಿಸುವುದರಲ್ಲಿ ಮುಂದೆ ಅವಶ್ಯಬಿದ್ದರೆ ಶಾಶ್ವತವಾದ ಉಪಯೋಗಕ್ಕೆ ಅನುಕೂಲಿಸಬಹುದಾದಂಥಾ ಭಾವಿಗಳಿಗೆ ಪ್ರಾಶಸ್ತ್ಯವನ್ನು ಕೊಡಬೇಕು.

## Bonemeal and Saltpetre as Manure. *

## ಎಲಬಿನ ಪುಡಿ ಮತ್ತು ಪೆಟ್ಲುಪ್ಪು.

ನಾಟಿ ಮಾಡಿದ ಹಿಂಗಾರು ಬತ್ತದ ಪೈರಿಗೆ ಎಕರೆಗೆ ೩ ಬಂಗಾಳೆ ಮಣ ಎಲಬಿನ ಪುಡಿ ಮತ್ತು ೩೦ ಸೇರು ಪೆಟ್ಲುಪ್ಪು ಹಾಕಿದರೆ ಬಹಳ ಪ್ರಯೋಜನ ಉಂಟೆಂದು ಈಗ ಅನೇಕ ವರ್ಷಗಳಿಂದಲೂ ಬರ್ದ್ವಾನ್ ಎಕ್ಸ್ಪೆರಿಮೆಂಟಲ್ ಫಾರಂನಲ್ಲಿ ನಡೆದಿರುವ ಅಜಮಾಯಿಷಿಗಳಿಂದ ಗೊತ್ತಾಗುತ್ತೆ. ಎಲಬಿನ ಪುಡಿ ಮತ್ತು ಪೆಟ್ಲುಪ್ಪು ಹಾಕದೆ ಇದ್ದ ಒಂದು ಎಕರೆ ಜಮೀನಿನಲ್ಲಿ ಸರಾಸರಿ ೧೮ ಮಣ ೩೩ ಸೇರು (ಬಂಗಾಳೆ ಮಣ) ಬತ್ತ, ೩೦ ಮಣ, ೩೪ ಸೇರು ಹುಲ್ಲು ಆಯಿತು. ಎಲಬು ಪುಡಿ ಪೆಟ್ಲುಪ್ಪು ಹಾಕಿದ್ದರಲ್ಲಿ ೪೩ ಮಣ ೧೪ ಸೇರು ಬತ್ತ ಮತ್ತು ೭೪ ಮಣ ೩ ಸೇರು ಹುಲ್ಲು ಹುಟ್ಟುವಳಿಯಾಯಿತು. ಈ ಜಾಸ್ತಿ ಉತ್ಪತ್ತಿಯ ಖರೀದಿಯು ೮೩-೧೧-೦ ರೂಪಾಯಿ ಆಗುತ್ತೆ. ಈಪೈಕಿ ಎಲಬು ಪುಡಿ ಮತ್ತು ಪೆಟ್ಲುಪ್ಪಿನ ಖರೀದಿ ೯-೪-೦ ರೂಪಾಯಿ ಜಾತ ಬಾಕಿ ೭೪-೭-೦ ರೂಪಾಯಿ ನಿವಳ ಆದಾಯ್ತ ತೇಲುತ್ತದೆ. ಈ ಎರಡು ಪದಾರ್ಥಗಳನ್ನು ಜಮೀನಿಗೆ ಹಾಕುವದು ಹೇಗಂದರೆ, ಮೊದಲನೇ ಎರಡನೇ ಉಳಮೆ ಕಾಲದಲ್ಲಿ ಎಲಬಿನ ಪುಡಿಯನ್ನು ಜಮೀನು ಮೇಲ್ಗಡೆ ಸಮನಾಗಿ ಹರಡಬೇಕು. ಇದು

* ಇಂಡಸ್ಟ್ರಿಯಲ್ ಇಂಡಿಯಾ—ಫೆಬ್ರವರಿ, ೧೯೧೯.

ಮುಂದೆ ಆಗುವ ಉಳುಮೆಗಳಿಂದ ಮಣ್ಣಿನಲ್ಲಿ ಚನ್ನಾಗಿ ಬೆರತು ಪೈರಿಡುವದಕ್ಕೆ ಮುಂಚೆಯೇ ಸರಿಯಾಗಿ ಕೊಳೆಯುತ್ತದೆ. ಈ ಗೊಬ್ಬರ ಮಳೆಯಲ್ಲಿ ಸುಲಭವಾಗಿ ಕೊಚ್ಚಿ ಹೋಗುವದಿಲ್ಲ. ಪೆಟ್ಲುಪ್ಪು ನೀರಿನಲ್ಲಿ ಕರಗುವದಾದ್ದರಿಂದ ಬಹಳ ಜಾಗ್ರತೆ ಕೊಚ್ಚಿ ಹೋಗುತ್ತದೆ. ಆದಕಾರಣ ಪೆಟ್ಲುಪ್ಪನ್ನು ನಾಟಿ ಹಾಕಿದನಂತರ ಸಸಿಗಳು ಚನ್ನಾಗಿ ಬೇರೂರಿ ಗೊಬ್ಬರವನ್ನು ತೆಗೆದುಕೊಳ್ಳುವಷ್ಟು ದೃಢವಾದಮೇಲೆ ಹಾಕಬೇಕು. ಈ ಉಪ್ಪನ್ನು ೪-೫ ಪಾಲು ಮಣ್ಣಿನೊಂದಿಗೆ ಕಲಿಸಿ ಬೆಳವಳಿಕೆಯುಳ್ಳರುವ ಪೈರುಗಳಮೇಲೆ ಎರಚಬೇಕು. ಇದನ್ನು ೨-೩ ವಾರಗಳ ಅವಕಾಶ ಬಿಟ್ಟುಕೊಂಡು ಎರಡಾವರ್ತಿ ಹಾಕಿದರೆ ಒಳ್ಳೇದು. ಹೇಗಂದರೆ, ಭಾರಿ ಮಳೆ ಬಿದ್ದು ಹಾಕಿದ ಗೊಬ್ಬರ ಕೊಚ್ಚಿ ಹೋಗುವ ಸಂಭವವು ಕಡಮೆಯಾಗುತ್ತದೆ. ಎಲುಬಿನ ಪುಡಿಯು ಎಲ್ಲಾ ತರದ ಜಮೀನುಗಳಿಗೂ ಅನುಕೂಲಪಡುವದಿಲ್ಲ. ಕೆಲವು ಜಮೀನುಗಳಿಗೆ ಇದರಿಂದ ಪ್ರಯೋಜನ ಉಂಟು. ಮತ್ತೆ ಕೆಲವಕ್ಕೆ ಇದರಿಂದ ಗುಣ ತೋರುವದಿಲ್ಲ. ಆದಕಾರಣ ಇದು ಯಾವ ಜಮೀನಿಗೆ ಉಪಯೋಗಪಟ್ಟೀತೆಂಬುದನ್ನು ಅಜಮಾಯಿಷಿ ಮಾಡಲು ಮೊದಲು ಸ್ವಲ್ಪವಾಗಿ ಹಾಕಿ ನೋಡಬೇಕು. ಇಂಥಾ ಪರೀಕ್ಷೆಗೆ ಇದನ್ನು ಪೆಟ್ಲುಪ್ಪಿನೊಂದಿಗೆ ಕಲಿಸದೇನೇ ಪ್ರತ್ಯೇಕವಾಗಿಯೇ ಹಾಕಿ ನೋಡಬಹುದು. ಸಾಮಾನ್ಯವಾಗಿ ಇದು ಕೆಮ್ಮಣ್ಣಿನ ಭೂಮಿಗೆ ಅನುಕೂಲವಾದೀತೆಂದು ತೋರುತ್ತೆ.

ಪೆಟ್ಲುಪ್ಪನ್ನು ಹುಲುಸು ಕಮ್ಮಿಯಾದ ಹಳೇ ಬತ್ತದ ಗದ್ದೆಗಳಿಗೆ ಪ್ರತ್ಯೇಕವಾಗಿಯೇ ಉಪಯೋಗಿಸಿದರೆ ಅನುಕೂಲ ಕಂಡುಬರಬಹುದು. ಪ್ರತ್ಯೇಕವಾಗಿ ಉಪಯೋಗಿಸುವದರಲ್ಲಿ ಎಲುಬಿನ ಪುಡಿ ಜೊತೆಗೆ ಉಪಯೋಗಿಸುವ ಪ್ರಮಾಣ ಮತ್ತು ವಿಧಾನದಲ್ಲಿಯೇ ಹಾಕಬೇಕು.

---

## Notifications.

## ಇಸ್ತಿಹಾರ್‌ನಾಮೆಗಳು.

ನಂ. ೧೦೦೬೮—ತಾ|| ೨೫-೩-೧೯.

ಅಕ್ಕಲಗೂಡು ತಾ|| ಅಮಲ್ದಾರ್ ಮೆ|| ಯು. ಕೃಷ್ಣರಾಯರಿಗೆ

೧೯೧೯ನೆ ಫೆಬ್ರವರಿ ೧೫ನೆ ತಾ|| ನ ೮೨೫೫ನೆ ನಂ. ಇಶ್ತಿಹಾರ್‌ನಾಮೆಯಲ್ಲಿ ಕೊಟ್ಟಿದ್ದ ೧೫ ದಿನಗಳ ಪ್ರಿವಿಲೇಜ್ ರಜಾವನ್ನು ಅವರು ಉಪಯೋಗಿಸಿಕೊಳ್ಳದ ಸಬಬು ರದ್ದುಮಾಡಿರುತ್ತೆ.

---

ನಂ. ೧೫೨೯. ತಾ|| ೧೪—೪—೧೯.

ಮೈಸೂರು ಸರ್ವಿಸ್ ರೆಗ್ಯುಲೇಷನ್ಸ್ ೧೭೭ನೇ ಪ್ರಕರಣದ ಮೇರೆ ಬಾರಿಂಗ್‌ಪೇಟೆ ತಾ|| ಅಮಲ್‌ದಾರ್ ಮೆ|| ಮಹಮದ್ ಒಬೇದುಲ್ಲಾ ಯವರಿಗೆ ೧೯೧೮ನೇ ಆಗಸ್ಟು ತಾ|| ೬ರ ಲಾಗಾಯ್ತು ೧೫ ದಿನಗಳ ಪ್ರಿವಿಲೇಜ್ ರಜಾ ಕೊಟ್ಟಿತ್ತು.

ಅವರ ಗೈರ್‌ಹಾಜರಿಯಲ್ಲಿ ಶಿರಸ್ತೇದಾರ್ ಯಂ. ಲಕ್ಷ್ಮೀನಾರಣಯ್ಯನವರು ತಾ|| ಛಾರ್ಜಿನಲ್ಲಿದ್ದರು.

---

## Occasional Notes.

## ವಿವಿಧ ವೃತ್ತಾಂತಗಳು.

೧. ಮೈಸೂರು ಲ್ಯಾಂಡ್ ಇಂಪ್ರೂವ್‌ಮೆಂಟು ಲೋನ್ಸ್ ರೆಗ್ಯುಲೇಷನ್ಸ್ ಅನುಸಾರವಾಗಿ ಏರ್ಪಟ್ಟ ಸಾಮಾನ್ಯ ನಿಬಂಧನೆಗಳ ಒಂದು ಪುಸ್ತಕವನ್ನು ಪಟೇಲ್ ಶಾನುಭೋಗರಿಗಾಗಿ ಮಾತ್ರ ಈ ಸಂಚಿಕೆಯೊಂದಿಗೆ ರವಾನಿಸಿರುತ್ತೆ.

---

೨. ಗ್ರೇಟ್‌ಬ್ರಿಟನ್ ಮತ್ತು ಐರ್ಲೆಂಡ್ ದೇಶಗಳಲ್ಲಿ ಆಹಾರಕ್ಕಾಗಿ ಬೇಕಾಗುವ ಒಟ್ಟು ಗೋಧಿಯ ಪೈಕಿ ಶೇಕಡಾ 14½ ಯಷ್ಟು ಇಂಡಿಯಾದಿಂದ ಆ ದೇಶಗಳಿಗೆ ರಫ್ತಾಗುತ್ತಿದೆ —ಇಂಡಿಯನ್ ಟ್ರೇಡ್ ಜರ್ನಲ್ ೧೮-೩-೧೯.

---

೩. ಈ ಪತ್ರಿಕೆಯ ಹಿಂದಿನ ಸಂಚಿಕೆಗಳಲ್ಲಿ „ಫೈನ್ ಆಸ್,” „ಬಾಂಕು,” „ಚಾಲಿಫಾನ್” ಮುಂತಾದ ಜಾಗ್ರತೆ ಬೆಳೆಯುವ ಬತ್ತದ ರಖಂಗಳು ಮತ್ತು ಇವುಗಳ ಸಾಗುವಳಿ ಕ್ರಮದ ವಿಚಾರನಾಗಿ ಸಂಕ್ಷೇಪವಾಗಿ ತಿಳಿಸಿರುವದು ಸರಿಯಷ್ಟೆ. ಈ ಸಂವತ್ಸರದಲ್ಲಿ ಫೈನ್ ಆಸ್ ಬತ್ತ (Fine Aus) ಮತ್ತು ಚಾಲಿಫಾನ್ ಬತ್ತ ಈ ಎರಡು ರಖಂ ಬತ್ತಗಳನ್ನು ತರಿಸಿರುತ್ತೆ.

ಇವುಗಳನ್ನು ಸಾಗುವಳಿ ಮಾಡಿ ಅಜಮಾಯಿಷಿ ಮಾಡಲಪೇಕ್ಷಿಸುವವರ
ಆಯಾಯ ಡಿಸ್ಟ್ರಿಕ್ಟ್ ಡೆಪ್ಯುಟಿ ಕಮಿಷನರವರಲ್ಲಿ ತಮಗೆ ಯಾವಯಾವ
ರಖಂ ಬತ್ತ ಎಷ್ಟು ಬೇಕೆಂಬುವ ವಿಚಾರದಲ್ಲಿ ಕೇಳಿಕೊಳ್ಳ ಬಹುದು.

---

೪. ಇಂಡಿಯಾದಲ್ಲಿ ಹಾಲಿ ರೂಢಿಯಲ್ಲಿರುವ ಮೇರೆಗೆ ಬೆಲ್ಲದಿಂದ ಸಕ್ಕರೆ
ಯನ್ನು ತೆಗೆಯುವ ಕಬ್ಬಿನಿಂದಲೇ ನೇರಾಗಿ ಸಕ್ಕರೆ ತೆಗೆಯುವ ವಿಧಾನವ
ನ್ನು ಬೆಂಗಳೂರು ಸಮೀಪದಲ್ಲಿರುವ ಹೆಬ್ಬಾಳು ಎಕ್ಸ್ಪೆರಿಮೆಂಟಲ್ ಫಾರಂ
ನಲ್ಲಿ ಬರುವ ಮೇ ತಿಂಗಳು ೩ನೆ ತಾರೀಖು ಸೋಮವಾರದಾರಭ್ಯ ೧೫ ದಿನ
ಗಳ ಪರ್ಯಂತರ ಪ್ರತಿನಿತ್ಯವೂ ಬೆಳಿಗ್ಯೆ ೬ ಘಂಟೆ ಲಾಗಾಯಿತು ಸಾಯಂಕಾ
ಲ ೬ ಘಂಟೆ ವರೆಗೆ ನಿದರ್ಶನಪೂರ್ವಕವಾಗಿ ತೋರಿಸುವ ಏರ್ಪಾಟಿಟ್ಟಿದೆ
ಯಾಗಿ ಸಕ್ಕರೆ ತಯಾರಿಯಲ್ಲಿ ಆಸಕ್ತಿ ಉಳ್ಳವರು ಬಂದು ನೋಡಬಹು
ದು. ನಿದರ್ಶನಕಾಲದಲ್ಲಿ ಫಾರಂ ಮ್ಯಾನೇಜರು ಹಾಜರಿದ್ದು ಬಂದವರಿಗೆ
ಕ್ರಮಗಳನ್ನು ತಿಳಿಹೇಳುತ್ತಾರೆ.

---

೫. ಇಂಡಿಯಾ ದೇಶದಲ್ಲಿ ೭ ಉಣ್ಣೆ ನೇಗೆ ಕಾರ್ಖಾನೆಗಳಿರುತ್ತವೆ. ಈ
ಪೈಕಿ ಕಾನ್‌ಪುರ ಮತ್ತು ಧಾರಿವಾಲ್ ಎಂಬ ಸ್ಥಳಗಳಲ್ಲಿರತಕ್ಕ ಮಿಲ್ಲುಗಳು
ಮುಖ್ಯವಾದವುಗಳು. ಇವುಗಳಲ್ಲಿ ಸೈನಿಕರಿಗೂ, ಪೋಲೀಸು ನೌಕರ
ರಿಗೂ ಬೇಕಾಗುವ ಬಟ್ಟೆ ಬರೆಗಳನ್ನೂ ಮತ್ತು ಸಾಮಾನ್ಯವಾಗಿ ನಾಜೂಕ
ವಾದ ಇತರ ಸರಕುಗಳನ್ನೂ ತಯಾರು ಮಾಡುತ್ತಾರೆ. ನಾಜೂಕಾದ ಸಾ
ಮಾನುಗಳ ತಯಾರಿಗೆ ಆಸ್ಟ್ರೇಲಿಯಾದೇಶದ ಉಣ್ಣೆಯನ್ನು ಅಪ್ಪಟವಾ
ಗಿಯೋ ಅಥವಾ ಇಲ್ಲಿನ ಉಣ್ಣೆಯೊಂದಿಗೆ ಬೆರೆಸಿ ಉಪಯೋಗ ಮಾಡುವ
ದುಂಟು. ಇಲ್ಲಿನ ಮಿಲ್ಲುಗಳಲ್ಲಿ ತಯಾರು ಆಗುವ ಸರಕಿಗಿಂತಲೂ ಹೊರ
ಗಿನಿಂದ ಬಹಳ ಸರಕು ಆಮದಾಗುತ್ತೆ. ಹೀಗೆ ಆಮದಾಗುವ ಸರಕುಗಳ
ಪೈಕಿ ಇಂಗ್ಲೆಂಡು ಮತ್ತು ಜರ್ಮನಿ ದೇಶಗಳಿಂದ ಬರುವ ಜವಳಿ ಮತ್ತು ಷಾ
ಲುಗಳೇ ವಿಶೇಷ. ೧೯೦೬ನೆ ಇಸವಿಯಲ್ಲಿ ಈದೇಶದಲ್ಲಿ ೩೬,೮೧,೮೦೮ ರೂ
ಬೆಲೆ ಬಾಳುವ ಸರಕುಗಳು ತಯಾರಾದವು. ಇತರ ದೇಶಗಳಿಂದ ಈ
ದೇಶಕ್ಕೆ ೨,೦೦,೦೮,೫೩೫ ರೂಪಾಯಿ ಬಾಳುವ ಸರಕುಗಳು ಆಮದಾ
ದವು.—ಇಂಡಸ್ಟ್ರಿಯಲ್ ಇಂಡಿಯಾ, ನವಂಬರು ೧೯೦೮.

V. B. Soobbiah & Sons, Printers, Bangalore.—1909.

THE MYSORE

# REVENUE & AGRICULTURAL GAZETTE.

ವಾಲ್ಯುಂ ೩.] ಶನಿವಾರ, ೧ನೆ ಮೇ ೧೯೦೯. [ನಂ. ೧೩.

## Contents.



## ಅನುಕ್ರಮಣಿಕೆ.

## Citrus Industry. *

## ಸಿಟ್ರಸ್ ಎಂಬ ಹುಳಿಯನ್ನು ತಯಾರುಮಾಡುವ ಉದ್ಯೋಗ.

ಇಟಲಿ ದೇಶದಲ್ಲಿ ನಿಂಬೆಹುಳಿಯು ವಿಶೇಷವಾಗಿ ತಯಾರಾಗಿ ಅನ್ಯ ದೇಶಗಳಿಗೆ ರಫ್ತಾಗುತ್ತದೆ. ಹೋದವರುಷ ಆ ಸರ್ಕಾರದವರು ಹೀಗೆ ರ ಫ್ತಾಗುವ ಸರಕಿನಮೇಲೆ ತೆರಿಗೆಯನ್ನು ಹಾಕಿದರು. ಇದರಿಂದ ಇದರ ಧಾರಣೆಯು ಬಹಳ ಏರುವಕಾರಣ ಇತರ ಕಡೆಗಳಲ್ಲೂ ಈ ಕಸಬನ್ನು ಸ್ಥಾಪಿಸಿ ರಫ್ತು ವ್ಯಾಪಾರವನ್ನು ಫಾಯಿದೆಕರವಾಗಿ ನಡೆಸಲು ಸಾಧ್ಯವಾಗಿ ರುತ್ತದೆ. ೧೯೦೭ನೆ ಇಸವಿಯಲ್ಲಿ ಆದೇಶದಲ್ಲಿ ೨೩,೦೦೦ ಪೈಪುಗಳನ್ನು (೧ ಪೈಪಿಗೆ ೬೭೨ ಪೌಂಡು ತೂಕ) ಸಿಟ್ರೇಟು ಅಂದರೆ ಈ ಹುಳಿಯು ತ ಯಾರು ಆಯಿತು. ಒಂದು ಪೈಪು ಸಿಟ್ರೇಟು ಕೂಡಬೇಕಾದರೆ ಒಂದು ಲಕ್ಷ ನಿಂಬೆಹಣ್ಣುಗಳು ಬೇಕಾಗುತ್ತೆ. ಇದರಿಂದ ಆ ರಾಜ್ಯದಲ್ಲಿ ಇದರ ವ್ಯಾಪಾರವು ಎಷ್ಟು ಪ್ರಬಲವಾಗಿದೆ ಎಂಬುದು ವೇದ್ಯವಾಗುತ್ತೆ. ಈ ವ್ಯಾಪಾರದಲ್ಲಿ ಒಳ್ಳೆ ನಫೆಯೂ ಉಂಟು. ಹೇಗಂದರೆ, ಸುಮಾರು ೨೪ ಎಕರೆ ಒಳ್ಳೆ ನಿಂಬೆ ತೋಟದಲ್ಲಿ ೧,೫೦೦ ರೂಪಾಯಿನ ಹಣ್ಣುಗಳು ಬಿಡು ತ್ತವೆ. ಇಂಡಿಯಾದೇಶವು ನಿಂಬೆಹಣ್ಣಿಗೆ ತೌರುಮನೆಯಾಗಿರುವದರಿಂದ ಇಲ್ಲಿ ಇದರ ಸಂಬಂಧವಾದ ವ್ಯಾಪಾರವನ್ನು ನಡೆಸಲು ತಕ್ಕ ಸಮಯವಾಗಿ ರುತ್ತದೆ. ಈ ವ್ಯಾಪಾರದಲ್ಲಿ ಮಾಡಬೇಕಾದ ಕೆಲಸಗಳು ಅನೇಕ ಇರು ತ್ತವೆ. ಮತ್ತು ಇಲ್ಲಿನ ಹವಾ ಮುಂತಾದ ಸೌಕರ್ಯಗಳು ಇತರ ದೇಶಗ ಳಲ್ಲಿರುವದಿಲ್ಲವಾದಕಾರಣ ಈಭಾಗದಲ್ಲಿ ಈದೇಶದೊಂದಿಗೆ ಅನ್ಯದೇಶಗಳು ಪ್ರೈಪೋಟಿ ಮಾಡಲು ಸಾಧ್ಯವಲ್ಲ. ಸರ್‌ಜಾರ್ಜ್‌ವಾಟ್ (Sir George Watt) ಎಂಬ ವ್ಯವಸಾಯ ಶಾಸ್ತ್ರಜ್ಞರು ಈ ವಿಚಾರದಲ್ಲಿ ಹೇಳುವದೇ ನೆಂದರೆ, ಇಂಡಿಯಾದೇಶದಲ್ಲಿ ನಿಂಬೆ ವ್ಯವಸಾಯವನ್ನು ವ್ಯಾಪಾರಕ್ಕೆ ಲಾ ಯಖಾಗುವರೀತಿ ಹೊಂದಿಸಿಕೊಳ್ಳಬೇಕಾದರೆ ಹಣ್ಣುಗಳನ್ನು ತಾಜಾವಾ ಗಿಯಾಗಲಿ ಅಥವಾ ಕೆಡದಹಾಗೆ ಸಕ್ಕರೆ ಪಾಕದಲ್ಲಿಡುವದರಮೂಲಕವಾಗ ಲಿ ಕಾಪಾಡುವದು, ನಿಂಬೆರಸವನ್ನು ತೆಗೆಯುವದು ಮತ್ತು ಇದರಿಂದ ಅ ತ್ತರು, ಎಣ್ಣೆಗಳನ್ನು ತಯಾರಿಸುವದು, ಇವೆ ಮೊದಲಾದ ಅನೇಕ ಲಾಭ

* ಇಂಡಿಯನ್ ಟ್ರೇಡ್ ಜರ್ನಲ್, ೧೮-೨-೦೯.

ಕರವಾದ ಕಸಬುಗಳನ್ನು ಸ್ಥಾಪಿಸಬೇಕಾಗುತ್ತೆ. ನಿಂಬೆಗಿಡವು ೫ ವರುಷದಲ್ಲಿ ಫಲ ಬಿಡಲು ಶುರುವಾಗುತ್ತದೆ. ೧೫—೨೦ ವರುಷದ ಮರ ಸುಮಾರು ೧,೦೦೦ ಹಣ್ಣು ಬಿಡುತ್ತದೆ ಮತ್ತು ಒಳ್ಳೆ ಬಲಿತ ಮರ ಸುಮಾರು ೩,೦೦೦ ದಿಂದ ೪,೦೦೦ ಹಣ್ಣುಗಳವರೆಗೂ ಬಿಡುವದುಂಟು. ಸಾಮಾನ್ಯವಾಗಿ ಒಂದು ಎಕರೆಗೆ ೧೫೦ರಿಂದ ೨೦೦ ಬ್ಯಾರಲ್ಲು (Barrel) ಹಣ್ಣು ಉತ್ಪತ್ತಿಯಾಗುತ್ತೆ. ಒಂದು ಬ್ಯಾರಲ್ಲಿನಲ್ಲಿ ಹಣ್ಣಿನ ಗಾತ್ರದಮೇಲೆ ೧೪೦೦ರಿಂದ ೧೬೦೦ ಹಣ್ಣುಗಳು ಹಿಡಿಸುತ್ತವೆ. ಈ ಕಸಬನ್ನು ನಡೆಸುವದು ಸುಲಭ ಮತ್ತು ಈದೇಶದಲ್ಲಿ ಒದಗುವ ಕೂಲಿ ಕರಣೆಗೆ ತಕ್ಕದ್ದಾಗಿರುತ್ತೆ. ನಿಂಬೆ ಎಣ್ಣೆಯನ್ನು ತೆಗೆಯಬೇಕಾದರೆ, ಸಿಪ್ಪೆಯನ್ನು ನೀರಿನಲ್ಲಿ ಒಂದೆರಡು ಘಂಟೆ ಹೊತ್ತು ನೆನೆಹಾಕಿ ಎಣ್ಣೆಯನ್ನು ಪ್ರತ್ಯೇಕಿಸುವದಕ್ಕಾಗಿ ಒಂದು ಸ್ಪಂಜಿನ (Sponge) ಮೇಲೆ ಕೈಯಿಂದ ಹಿಂಡಬೇಕು. ಸಿಪ್ಪೆಯನ್ನು ಸಕ್ಕರೆ ಪಾಕದಲ್ಲಿಡಬೇಕಾದರೆ, ಅದರಲ್ಲಿನ ಅರ್ಧ ಎಣ್ಣೆಯನ್ನು ಮಾತ್ರ ಹಿಂಡಬೇಕು. ಇಲ್ಲವಾದರೆ ಸಾಧ್ಯವಾದಷ್ಟು ಹಿಂಡಿ ಉಳಿದ ಸಿಪ್ಪೆಯನ್ನು ದನಕ್ಕೆ ಹಾಕಬಹುದು. ಹವಾದಲ್ಲಿ ತನುವು ಹೆಚ್ಚು ಕಡಿಮೆಯಾದಹಾಗೆಲ್ಲ ಎಣ್ಣೆ ಬರುವದೂ ವ್ಯತ್ಯಾಸ ಹೊಂದುತ್ತದೆ. ಸಾಲಿಯಾನ ೬ರಿಂದ ೧೦ ಅಂಗುಲ ಮಳೆ ಬೀಳುವ ಪ್ರದೇಶಗಳಲ್ಲಿ ಹಣ್ಣಿನ ರಸದಲ್ಲಿ ಸಿಟ್ರಿಕ್ ಆಸಿಡ್ ಹುಳಿಯು ಹೆಚ್ಚಾಗಿದ್ದು ಎಣ್ಣೆ ಇಳಿಯುವದು ಕಮ್ಮಿ. ಮಳೆ ಹೆಚ್ಚಾಗಿ ಅಂದರೆ ೧೬ರಿಂದ ೨೦೦ ಅಂಗುಲದಷ್ಟು ಆಗುವ ಕಡೆ ಸಿಟ್ರಿಕ್ ಆಸಿಡ್ ಕಮ್ಮಿಯಾಗಿದ್ದು ಎಣ್ಣೆ ಬರುವದು ಹೆಚ್ಚು. ಸಾಮಾನ್ಯವಾಗಿ ೧೦೦೦ ಹಣ್ಣುಗಳ ಸಿಪ್ಪೆಯಿಂದ ೦.೭ರಿಂದ ೧.೫ ಪೌಂಡು ಎಣ್ಣೆ ಹಿಂಡಬಹುದು.

ನಿಂಬೆಹುಳಿಯನ್ನು ತಯಾರಿಸುವದು ಹೇಗಂದರೆ, ಸಿಪ್ಪೆ ಸುಲಿದ ನಂತರ ಒಳಗಿನ ತಿರುಳನ್ನು ಲಟ್ಟಣಿಗೆಗಳಲ್ಲಿ ಹಿಂಡಿ ರಸವನ್ನು ಒಂದು ಹದಕ್ಕೆ ಕಾಯಿಸುತ್ತಾರೆ. ಈ ಹುಳಿಯ ರಸದಿಂದಲೇ ಕೆಲವು ಸುಲಭ ಕ್ರಮಗಳನ್ನನುಸರಿಸಿ ಸಿಟ್ರಿಕ್ ಆಸಿಡ್ ಹುಳಿಯನ್ನು ತಯಾರ್ಮಾಡುತ್ತಾರೆ. ಈ ಆಸಿಡ್ ಪುಡಿಯು ಬಟ್ಟೆಗಳಿಗೆ ಬಣ್ಣ ಹಾಕುವದರಲ್ಲಿ ಉಪಯೋಗವಡುತ್ತದೆ. ಸೋಡ ವೊದಲಾದ ಉಕ್ಕಿಬರುವ ಪಾನಗಳ ತಯಾರಿಯಲ್ಲಯೂ ಮತ್ತು ಔಷಧಗಳಲ್ಲಿಯೂ ಕೂಡ ಉಪಯೋಗವಡುತ್ತದೆ. ಇ

ಡಿಯಾಪ್ರದೇಶದ ಎಲ್ಲಾ ಕಡೆಗಳಲ್ಲಿಯೂ ನಿಂಬೆ, ಗಜನಿಂಬೆ, ಮೊದಲಾದ ಹಣ್ಣುಗಳು ವಿಶೇಷವಾಗಿ ಬೆಳೆಯುತ್ತವೆ. ಈ ಹಣ್ಣುಗಳಿಂದ ಈದೇಶದಲ್ಲಿಯೇ ನಿಂಬೆಎಣ್ಣೆ, ಹುಳಿ ಮತ್ತು ಸಿಟ್ರೇಟ್‌ಪುಡಿ, ಇವುಗಳನ್ನು ತಯಾರಿಸುವ ಕಸಬನ್ನು ಸ್ಥಾಪಿಸಿದರೆ ಅನುಕೂಲ. ಇದಕ್ಕೆ ಬೇಕಾಗುವ ಯಂತ್ರಗಳನ್ನೂ ಕಟ್ಟಡಗಳನ್ನೂ ಒದಗಿಸಿಕೊಳ್ಳಬೇಕಾದರೆ ಒಟ್ಟು ೪,೬೦೦ ರೂಪಾಯಿಗಳು ಮಾತ್ರ ಖರ್ಚು ತಗಲುತ್ತದೆ.

---

## Power Crusher.

## ಎಂತ್ರ ಶಕ್ತಿಯಿಂದ ನಡೆಯುವ ಗಾಣ.

ಬೊಂಬಾಯಿ ಆಧಿಪತ್ಯದ ಮಾಂಜರಿ ಎಕ್ಸ್‌ಪೆರಿಮೆಂಟಲ್ ಫಾರಂನಲ್ಲಿ ಕಬ್ಬನ್ನು ಎಂತ್ರ ಶಕ್ತಿಯಿಂದ ನಡೆಯುವ ಗಾಣದಲ್ಲಿ ಆಲೆಯಾಡುತ್ತಿದ್ದಾರೆ. ಈ ಗಾಣವನ್ನು ತರಿಸುವದಕ್ಕೆ ಪೂರ್ವ ಫಾರಮಿನ ಕಬ್ಬನ್ನೆಲ್ಲಾ ಆಲೆಯಾಡುವದು ಸಾಧ್ಯವಾಗುತ್ತಿರಲಿಲ್ಲ. ಎತ್ತು ಕಟ್ಟಿ ಆಲೆಯಾಡಿ ಅಜಮಾಯಿಷಿ ನಡೆಸುವದು ಕಷ್ಟವಾಯಿತಲ್ಲದೆ ಆಳು ಮತ್ತು ಎತ್ತುಗಳ ಮಜೂರಿಯು ದರ ದಿನಕ್ರಮೇಣ ಹೆಚ್ಚಿದ್ದರಿಂದ ಕಷ್ಟವು ಇನ್ನೂ ಜಾಸ್ತಿಯಾಯಿತು. ಸಾಮಾನ್ಯವಾದ ಎತ್ತಿನ ಗಾಣದಲ್ಲಿ ದಿನಕ್ಕೆ ೩ ಗುಂಟೆ ಕಬ್ಬನ್ನು ಆಡಬಹುದು. ಎತ್ತಿನ ಗಾಣದಲ್ಲಿ ಆಡುವದರಲ್ಲಿಯೂ ಮತ್ತು ಎಂತ್ರ ಶಕ್ತಿಯಿಂದ ನಡೆಯುವ ಗಾಣದಲ್ಲಿ ಆಡುವದರಲ್ಲಿಯೂ ತಗಲುವ ಖರ್ಚಿನ ತಖ್ತೆಯನ್ನು ಮುಂದಿನ ಪಾರಂಗಳಲ್ಲಿ ತಿಳಿಸುತ್ತೇವೆ.

ಮಾಂಜರಿ ಫಾರಂನಲ್ಲಿ ಉಪಯೋಗದಲ್ಲಿರುವ ಗಾಣವು ಮೂರು ಕಣಿಗಳುಳ್ಳದ್ದು. ಇದಕ್ಕೆ ೨,೨೪೪ ರೂಪಾಯಿ ಬೆಲೆಯಾಗುತ್ತೆ. ಕಣಿಗಳು ೨೦ ಇಂಚು ಉದ್ದವೂ ೧೪ ಇಂಚು ದಪ್ಪವೂ ಇದ್ದು ಅಡ್ಡಲಾಗಿ ತಿರುಗುತ್ತವೆ. ಇದನ್ನು ನಡೆಸುವ ಎಂತ್ರವು ೧೨ ಬ್ರೇಕ್ ಹಾರ್ಸ್ ಪವರಿನ ಬಲವುಳ್ಳ ಒಂದು ಆಯಿಲ್ ಎಂಜಿನ್. ಇದಕ್ಕೆ ೨,೯೮೨ ರೂಪಾಯಿ ಆಗುತ್ತದೆ. ಇವುಗಳನ್ನು ಸಾಗಿಸಿ ಒಂದು ಕಡೆ ಸ್ಥಾಪಿಸುವದಕ್ಕೂ ಮತ್ತು ಇವುಗಳಿಗೆ ಬೇಕಾದ ಕಟ್ಟಡಕ್ಕೂ ಒಟ್ಟು ೨,೧೦೦ ರೂಪಾಯಿ ಖರ್ಚು ತಗಲಿತು.

ಇದನ್ನು ನಡೆಸುವದಕ್ಕೆ ಆಲೆಗೆ ಕಬ್ಬು ಕೊಡುವದಕ್ಕೆ ಇಬ್ಬರು

ಗಂಡಾಳುಗಳು, ಗಾಣದ ಬಳಿ ಕಬ್ಬನ್ನು ತಂದುಕೊಡುವದಕ್ಕೆ ೨ ಹೆಣ್ಣಾಳುಗಳು, ಶಿಪ್ಪೆಯನ್ನು ದೂರ ಹಾಕುವದಕ್ಕೆ ಮೂವರು ಹೆಣ್ಣಾಳುಗಳು, ಹಾಲನ್ನು ಕೊಪ್ಪರಿಗೆ ಮನೆಗೆ ತೆಗದುಕೊಂಡುಹೋಗುವದಕ್ಕೆ ಇಬ್ಬರು ಗಂಡಾಳುಗಳು ಈರೀತಿ ಒಟ್ಟು ನಾಲ್ವರು ಗಂಡಾಳುಗಳು ೫ ಮಂದಿ ಹೆಣ್ಣಾಳುಗಳು ಮತ್ತು ಎಂಜಿನ್ ಮೇಲುಸ್ತುವಾರಿಗೆ ಒಬ್ಬ ಮೇಸ್ತ್ರಿ ಸಹ ಬೇಕಾಗುತ್ತೆ.

ಕಬ್ಬು ಗಾಣದೊಳಗೆ ತಾನೇ ಹೋಗುವರೀತಿ ಗಾಣಕ್ಕೆ ಒಂದು ಭಾಗವನ್ನು ಜೋಡಿಸಿದ್ದೇಆದರೆ, ಇದನ್ನು ಕೊಡುವದಕ್ಕೆ ಬೇಕಾಗುವ ಇಬ್ಬರು ಗಂಡಾಳುಗಳನ್ನು ಲೆಖ್ಖದಿಂದ ತೆಗೆಯಬಹುದು. ಇದೇಪ್ರಕಾರವಾಗಿ ಹಾಲನ್ನು ಕೊಪ್ಪರಿಗೆಗಳಿಗೆ ಆಳುಗಳ ಮೂಲಕ ಸಾಗಿಸುವದಕ್ಕೆ ಬದಲಾಗಿ ಪಂಪು ಉಪಯೋಗಿಸಿ ಈಕೆಲಸ ನಡೆಸಿದರೆ ೩ ಹೆಣ್ಣಾಳುಗಳೂ ಬೇಕಾಗುವದಿಲ್ಲ. ಗಾಣವು ಘಂಟೆಗೆ ೪೦೦೦ ಪೌಂಡು ಕಬ್ಬನ್ನು ಹಿಂಡಬಲ್ಲದು. ಅಂದರೆ ಗಾಣವು ಒಂದು ಘಂಟೆ ಕಾಲ ಕೆಲಸಮಾಡಿದಲ್ಲಿ ಮೂರು ಕೊಪ್ಪರಿಗೆಗಳಿಗೆ ಸಾಕಾದಷ್ಟು ಹಾಲು ಒದಗುತ್ತದೆ. ದಿನವಹಿ ಗಾಣವು ೧೦ ಘಂಟೆ ಕಾಲ ಕೆಲಸಮಾಡಿದರೆ ಏಳುಒಲೆಗಳ ಮೇಲೆ ಕಾಸಬಹುದಾದಷ್ಟು ಹಾಲು ಒದಗುತ್ತದೆ. ನಮ್ಮ ನಾಡು ತರಹದಲ್ಲಿ ಇಷ್ಟು ಹಾಲು ಹಿಂಡಬೇಕಾದರೆ ಏಳು ಎತ್ತಿನಗಾಣಗಳು ಬೇಕು. ಇವೆರಡಕ್ಕೂ ತಗಲುವ ಲಾಗವಡಿನ ತಪ್ಸೀಲು.

## ಯಂತ್ರದ ಗಾಣ.

| | ರೂ. ಆ. ಪೈ. |
|---|---|
| ೫ ಹೆಣ್ಣಾಳುಗಳ ಕೂಲಿ ಆಳಿಗೆ ದಿನಕ್ಕೆ ೨॥ ಅಣೆಯಂತೆ | ೦—೧೨—೬ |
| ೧ ಫಿಟ್ಟರ್ ದಿನಕ್ಕೆ ೧ ರೂಪಾಯಿನಂತೆ ... | ೧— ೦—೦ |
| ಕೆರೋಸಿಯನ್ ಎಣ್ಣೆ ... ... | ೬— ೬—೪½ |
| ಮಿಷನ್ ಕೀಲುಗಳಿಗೆ ಹಾಕಲಿಕ್ಕೆ ಎಣ್ಣೆ ... | ೨— ೦—೦ |
| ಅಸಲ್ ಬಂಡವಾಳದಮೇಲೆ ಶೇಕಡಾ ೬ ರಂತೆ ಆಗುವ ಬಡ್ಡಿ | ೩—೧೨—೦ |
| ಉಪಯೋಗದಿಂದ ಯಂತ್ರ ಸವೆಯುವಲ್ಲಿ ಕಮ್ಮಿ ಬೀಳುವ ಬಗ್ಗೆ ಶೇಕಡ ೧೦ರಂತೆ ... ... | ೬— ೪—೦ |
| ಜುಮ್ಲಾ ... | ೨೦— ೨—೧೦½ |

೭ ಎತ್ತಿನ ಗಾಣ.

| | ರೂ. ಆ. ಪೈ. |
|---|---|
| ೨೮ ಆಳುಗಳ ಕೂಲಿ ಆಳಿಗೆ ದಿನಕ್ಕೆ ೫ ಆಣೆ ಮೇರೆ | ೮—೧೨—೦ |
| ೫೬ ಎತ್ತುಗಳ ಬಾಡಿಗೆ, ಎತ್ತಿಗೆ ದಿನಕ್ಕೆ ೪ ಆಣೆಯಂತೆ | ೧೪— ೦—೦ |
| ಕೀಲುಗಳಿಗೆ ಹಾಕುವ ಎಣ್ಣೆ ... | ೦— ೮—೦ |
| ೮೦೦ ರೂಪಾಯಿಗಳಮೇಲೆ ಬಡ್ಡಿ ಶೇಕಡ ೬ರಂತೆ ... | ೦— ೬—೫ |
| ಉಪಯೋಗದಿಂದ ಗಾಣಗಳ ಪರೀಪಿಯಲ್ಲಿ ಕಮ್ಮಿ ಬೀಳುವ ಬಗ್ಯೆ ಶೇಕಡ ೧೦ರಂತೆ ... ... | ೦—೧೨—೮ |
| ಜುಮ್ಲಾ ... | ೨೪— ೫—೧ |

ಅಂದರೆ ಯಂತ್ರಗಾಣದಿಂದ ದಿನಕ್ಕೆ ೪-೨-೧೫ ರೂಪಾಯಿ ನಿವಳ ಆದಾಯ ವುಂಟು. ಆದರೆ ಇದರಲ್ಲಿ ಗಾಣಕ್ಕೆ ಕಬ್ಬು ಕೊಡುವ ೨ ಹೆಣ್ಣಾಳುಗಳೂ ಮತ್ತು ಹಾಲನ್ನು ಕೊಪ್ಪರಿಗೆ ತೆಗದುಕೊಂಡು ಹೋಗುವ ೨ ಗಂಡಾಳುಗಳನ್ನೂ ಬಿಟ್ಟು ಅಂದಾಜುಮಾಡಿರುತ್ತೆ. ಈ ನಾಲ್ವರನ್ನು ಸೇರಿಸಿಕೊಂಡರೆ ದಿನಕ್ಕೆ ೩-೩-೧೫ ರೂಪಾಯಿ ನಿವಳ ಆದಾಯ ತೋಲುತ್ತೆ.

## Agricultural Experiments in Madras Presidency. *

## ಮದರಾಸು ಆಧಿಪತ್ಯದಲ್ಲಿ ನಡೆದ ವ್ಯವಸಾಯಕ ಅಜಮಾಯಿಷಿಗಳು.

ಹೋದ ಸಂಚಿಕೆಯಲ್ಲಿ ಈ ವಿಷಯದಲ್ಲಿ ಕೆಲವು ಸಂಗತಿಗಳನ್ನು ತಿಳಿಸಿದ್ದೆವಷ್ಟೆ. ಪ್ರಕೃತ ಇನ್ನೂ ಕೆಲವು ಅಂಶಗಳನ್ನು ಇಲ್ಲಿ ನಮೂದಿಸಿರುತ್ತೇವೆ.

೧. ಹತ್ತಿ.—ಕೊಯಿಲ್‌ಪಟ್ಟಿ ಫಾರಂನಲ್ಲಿ ನಡೆದ ಅಜಮಾಯಿಷಿಯಲ್ಲಿ ಹತ್ತಿ ಬೆಳೆಗೆ ಕ್ರಮವಾಗಿ ಕೊಳಸಿಟ್ಟ ದನದ ಗೊಬ್ಬರವನ್ನು ಮಿತವಾಗಿ ಹಾಕಿದರೆ ವಿಶೇಷ ಪ್ರಯೋಜನ ಉಂಟೆಂಬ ಅಂಶವು ನಿರ್ಧಾರಪಟ್ಟಿರುತ್ತೆ. ಪ್ರಸಕ್ತ ಸಾಲಿನಲ್ಲಿ ಫಾರಮಿನ ಹತ್ತಿ ಪೈರು ಬಹಳ ಚ

* ಮದರಾಸು ಸರ್ಕಾರಿ ವ್ಯವಸಾಯ ಇಲಾಖೆಯ ೧೯೦೭-೦೮ನೇ ಸಾಲ್ ರಿಪೋರ್ಟ್.

ನ್ನಾಗಿತ್ತು. ಎಕರೆಗೆ ಸುಮಾರು ೧೦೦೦ ಪೌಂಡುಗಿಂತ ಹೆಚ್ಚಾಗಿ ಅರಳೆ ಉತ್ಪತ್ತಿಯಾಗಬಹುದಾಗಿ ನಿರೀಕ್ಷಿಸಿರುತ್ತೆ. ಹೀಗೆ ಫಸಲುತ್ಪತ್ತಿಯು ಹೆಚ್ಚುವುದಕ್ಕೆ ರೈತರ ಶಕ್ತಿಗೆ ಮೀರಿದ ಯಾವ ನೂತನ ಕ್ರಮಗಳೂ ಕಾರಣವಲ್ಲ. ಕೂರಿಗೆಗಳಲ್ಲಿ ಬಿತ್ತಿ ಬೆಳೆಯುವ ಪೈರುಗಳಿಗೆ ಕೊಡುವ ವ್ಯವಸಾಯವನ್ನು ಅನುಸರಿಸುವದರಿಂದಲೂ ಮತ್ತು ಒಳ್ಳೇಬೀಜವನ್ನು ಉಪಯೋಗಿಸುವದರಿಂದಲೂ ಇದು ಸಾಧ್ಯವಾಗಿರುತ್ತೆ. ಈ ಅಂಶಗಳನ್ನು ರೈತರು ಈಗ ತಿಳಿದುಕೊಂಡಿರುತ್ತಾರೆ. ಈ ಫಾರವಿನ ಬಾಜಾ ಹೊಲದ ರೈತನು ಈ ಕ್ರಮಗಳನ್ನನುಸರಿಸಿ ವ್ಯವಸಾಯ ಮಾಡಿದ್ದರಿಂದ ಇವನಿಗೂ ಒಳ್ಳೆ ಫಸಲಾಯಿತು. ಸಾಮಾನ್ಯವಾಗಿ ಒಂದು ಗಿಡದಲ್ಲಿ ಶೇಕಡ ೨೫-೨೭ರಷ್ಟು ಅರಳೆ ಹೊರಡುತ್ತೆ. ಫಾರವಿನ ಒಂದೊಂದು ಗಿಡದಲ್ಲಿ ಶೇಕಡ ೩೩ರಷ್ಟು ಅರಳೆ ಹೊರಟಿರುತ್ತೆ. ಶುದ್ಧಜಾತಿ ಹತ್ತಿಯನ್ನು ಬೆಳೆದ ರೈತರಿಗೆ ಎಕರೆಯೊಂದಕ್ಕೆ ೨ ಆಣೆಯಂತೆ ೧೦೭೪ ಎಕರೆಗಳಿಗೆ ಇನಾಮು ಹಂಚಿರುತ್ತೆ.

೨. ಕತ್ತಾಳೆ.—ಸಿಸಲ್ ನಾರಿನ ಅಜಮಾಯಿಷಿಗಳು ನಡೆದವು. ಶೇಕಡ ೩ರಷ್ಟು ನಾರು ಹೊರಟಿತು. ಮತ್ತು ಎಕರೆಗೆ ಸರಾಸರಿ ೮೯೪ ಪೌಂಡು ನಾರು ಉತ್ಪತ್ತಿಯಾಗಬಹುದು. ಸ್ವಲ್ಪ ನಾರನ್ನು ಕೈಯಿಂದ ತಯಾರು ಮಾಡಿ ಲಂಡನ್ ಪಟ್ಟಣಕ್ಕೆ ಕಳುಹಿಸಿದ್ದರಲ್ಲಿ ಟನ್ನಿಗೆ ೩೦—೩೮ ಪೌನುಗಳೂ ಮೆಕ್ಸಿಕೋ ದೇಶದ ಸಿಸಲ್ ನಾರಿಗೆ ಟನ್ನಿಗೆ ೩೬ ಪೌನುಗಳೂ ಬೆಲೆ ಕಟ್ಟಿರುತ್ತಾರೆ. ಅಲ್ಪಸ್ವಲ್ಪ ಮಾದರಿಗೆ ಕಟ್ಟುವ ಅಂದಾಜು ಬೆಲೆಯನ್ನು ನೆಚ್ಚಲಾಗುವದಿಲ್ಲ. ಆದರೂ ಇದರ ಅಜಮಾಯಿಷಿ ಪ್ರೋತ್ಸೈಸುವದಕ್ಕೂ ಮತ್ತು ಜನರಿಗೆ ಬೇಲಿಗಾಗಿ ಸಸಿಗಳನ್ನು ಸರಬರಾಯಿ ಮಾಡುವದಕ್ಕೂ, ಇದನ್ನು ವಿಶೇಷವಾಗಿ ಬೆಳೆಯುತ್ತಲಿದ್ದಾರೆ. ಸಾಮಾನ್ಯ ಪೈರುಗಳಿಗೆ ನಾಲಾಯಖಾದ ಜಮೀನುಗಳಲ್ಲಿ ಕತ್ತಾಳೆಯನ್ನು ಬೆಳೆದು ತಮ್ಮೂರಿನ ಹಳ್ಳಿಗಾಡುಗಳಲ್ಲಿ ಒಂದು ಕಸಬನ್ನು ಸ್ಥಾಪಿಸಬೇಕೆಂಬುವದೇ ಫಾರಂನವರ ಉದ್ದೇಶವಾಗಿರುತ್ತೆ.

೩. ವ್ಯವಸಾಯಕ ಸಂಘಗಳು.—ಅಧಿಪತ್ಯದಲ್ಲಿರುವ ವ್ಯವಸಾಯ ಸಂಘಗಳ ಪೈಕಿ ಅನೇಕವು ಹೆಸರಿಗೆ ಮಾತ್ರ ಸಂಘಗಳಾಗಿರುತ್ತವೆಯೇ ಶಿವಾಯಿ ಪ್ರಯೋಜನಕರವಾದ ಯಾವದೊಂದು ಕೆಲಸವನ್ನೂ ಮಾ

" viii. ದಾಖಲೆ ಪರಿಶೋಧನಕ್ಕೆ ಅಥವಾ ನೋಡುವದಕ್ಕೆ ಪ್ರ
ರೂ. ೧—೮ ಆಣೆ."

೧೯೨೮ನೆ ಇಸವಿ ಆಗಸ್ಟ್ ೧೨ನೆ ತಾರೀಖಿನ ೧೩೧ನೆ ನಂಬರ್ ಎ
ಸ್ಟ್ರಾಆರ್ಡಿನರಿಯಲ್ಲಿ ಪ್ರಕಟವಾಗಿರುವ ಫೀಜುಗಳ ಪಟ್ಟಿಯನ್ನು ಇದಕ್ಕೆ
ಅನುಸಾರವಾಗಿ ತಿದ್ದಿಕೊಳ್ಳಬೇಕು.

II

ನಂ. ಆರ್. ೮೦೭೨-೮೧. ಎಲ್. ಆರ್. ೨೫೬-೨೮-೬, ತಾ|| ೧೬.೭.೧೯.

ಸಂಸ್ಥಾನದ ಪಟೇಲ್ ಮತ್ತು ಶ್ಯಾನುಭೋಗರುಗಳು ಲೋಕಲ್ ಸರ್ವಿಸ್
ರೆವಿನ್ಯೂ ಮತ್ತು ಕ್ರಿಮಿನಲ್ ಲೋಯರ್ ಸ್ಟ್ಯಾಂಡರ್ಡ್ ಪರೀಕ್ಷೆಗಳಿಗೆ ಹೋ
ಗಲಿಕ್ಕೂ, ಮತ್ತು ಶೀಕದಾರಿ ಸ್ಕೂಲಿನಲ್ಲಿ ತರಬೇತುಹೊಂದಿ ಅಲ್ಲಿನ ಪ
ರೀಕ್ಷೆಗಳನ್ನು ಕೊಡುವದಕ್ಕೂ ಅವಕಾಶಕೊಡಬೇಕೆಂದು ಕಳೆದ ದಸರಾ
ಪ್ರಜಾಪ್ರತಿನಿಧಿ ಸಭೆಯಲ್ಲಿ ಚರ್ಚಿಸಿದುದು ಕಡೆಗೆ ಈ ಭಾಗದಲ್ಲಿ ಸರ್ಕಾ
ದವರು ಹಾಲಿ ಜಾರಿಯಲ್ಲಿರುವ ರೂಲುಗಳನ್ನು ಪಟೇಲ್ ಶ್ಯಾನುಭೋಗರು
ಗಳಿಗೋಸ್ಕರ ಬದಲಾಯಿಸುವದಕ್ಕಾಗುವದಿಲ್ಲವೆಂತಲೂ, ಅವರು ಸದರಿ ಪ
ರೀಕ್ಷೆಗಳಿಗೆ ಇತರರಂತೆಯೇ ಹೋಗಬಹುದಾಗಿರುತ್ತದೆಯೇ ಶಿವಾ
ಗ್ರಾಮ ಆಫೀಸರುಗಳಾಗಿರುವ ಮಾತ್ರಕ್ಕೇನೆ ಪ್ರವೇಶಿಸಲು ಅರ್ಹರಾಗ
ವಿಲ್ಲವೆಂತಲೂ ಹುಕುಂ ಮಾಡಿರುತ್ತಾರೆ.

---

## Weeding in Dry Lands.*

## ಖುಷ್ಕಿ ಜಮೀನುಗಳಲ್ಲಿ ಕಳೆ ತೆಗೆಯುವದು.

ಖುಷ್ಕಿ ಜಮೀನುಗಳಲ್ಲಿ ಕಳೆ ತೆಗೆಯುವದು ಪ್ರತ್ಯೇಕ ಕೆಲಸ
ದು ಭಾವಿಸತಕ್ಕದ್ದಲ್ಲ. ಹೇಗೆಂದರೆ, ಪೈರುಗಳ ನಡುವೆ ಉಳುವದು, ಕ
ಆಗತೆ, ಎತ್ತುಕಟ್ಟಿ ಕುಂಟೆ ಹೊಡೆಯುವದು ಇವೇ ಮೊದಲಾದ ಪೈರಿ
ನಂತರ ಮಾಡುವ ವ್ಯವಸಾಯದಲ್ಲಿ ಕಳೆ ತೆಗೆಯುವದೂ ಒಂದು ಮುಖ್ಯ
ದ್ದೇಶ. ಒಂದೊಂದು ಸ್ಥಳದಲ್ಲಿನ ಕ್ರಮಗಳು ಅಲ್ಲಲ್ಲಿನ ಸಂದರ್ಭಾ
ಸಾರ ಭಿನ್ನವಾಗಿರುತ್ತವೆ. ಹತ್ತಿ, ನೆಲಗಡ್ಲೆ ಮೊದಲಾದ ಕೈಗಾರಿಕ

* ಮದರಾಸು ಅಗ್ರಿಕಲ್ಚರಲ್ ಕ್ಯಾಲೆಂಡರ್, ೧೯೨೯.

ಂಬುವವರು ಪೈರುಗಳನ್ನೇ ವಿಶೇಷವಾಗಿ ಬೆಳೆಯುತಕ್ಕ ಪ್ರಾಂತ್ಯಗಳ
ಲ್ಲಿ ರೈತರು ಜಮೀನಿನ ಒಂದು ಸ್ವಲ್ಪ ಭಾಗದಲ್ಲಿ ತಮ್ಮ ಸ್ವಂತ ಉಪ
ಯೋಗಕ್ಕೆ ಎಷ್ಟುಬೇಕೋ ಅಷ್ಟು ಧಾನ್ಯವನ್ನು ಮಾತ್ರ ಬೆಳೆದು ಮಿಕ್ಕ
ರುವ ಎಲ್ಲಭಾಗದಲ್ಲಿ ಇತರ ಪೈರುಗಳನ್ನಿಡುತ್ತಾರೆ. ಇಲ್ಲವಾದರೆ ತಮಗೆ
ಯೋಗಕ್ಕೆ ಬೇಕಾಗುವಷ್ಟು ಕಾಳು ಕಡಿಗಳನ್ನು ಕೊಂಡುಕೊಳ್ಳುವದ
ಕ್ಕಾಗಿ ತಾವು ಕಷ್ಟಪಟ್ಟು ಸಂಪಾದಿಸಿದ ಹಣವನ್ನೆಲ್ಲಾ ವೆಚ್ಚಮಾಡಬೇ
ಕಾಗುವದು. ಇಂಥಾ ಕಡೆಗಳಲ್ಲಿ ಕಾಳುರಂಬವು ಇತರ ಪ್ರಾಂತ್ಯಗಳಿಗಿಂತ
ಉತ್ತಮವಾಗಿಯಲ್ಲಿರುತ್ತದೆ. ಈ ಪ್ರಾಂತ್ಯಗಳಲ್ಲಿ ರೈತರು ಪೈರುಗಳ ಮ
ಧ್ಯೆ ಉಳುಮೆ ಮಾಡುವದೊಂದೇ ಅಲ್ಲದೆ ಸಸಿಗಳಲ್ಲಿ ಕಾಲುಗಳಿಂದೆಡೆಯುವ
ರು ಅನುಕೂಲಿಸುವಂತೆ ಅವನ್ನು ವಿರಳ ಪಡಿಸುವದೂ ಉಂಟು. ಮತ್ತು
ಸ್ವಲ್ಪಮಟ್ಟಿಗೆ ಕೈಯಿಂದ ಕಳೆ ತೆಗೆಯುವದೂ ಕುಂಟೆ ಹೊಡೆಯುವದೂ
ವಾಡಿಕೆಯಲ್ಲಿದೆ. ಕೆಲವುಕಡೆ ಪೈರುಗಳ ಮಧ್ಯೆ ಉಳುವದಕ್ಕೆ ಬದಲಾಗಿ
ಕೈಅಗತೆ ಮಾಡುತ್ತಾರೆ. ಇದರಿಂದ ಕಳೆ ನಾಶವಾಗುತ್ತದಲ್ಲದೆ ಜಮೀನಿ
ನ ಮೇಲ್ಮಣ್ಣು ಸಡಲುತ್ತದೆ. ಆದರೆ ಇದಕ್ಕೆ ಶ್ರಮವೂ ಖರ್ಚೂ ಜಾಸ್ತಿ
ಯಾಗುವ ಪ್ರಯುಕ್ತ ಇದು ಎಲ್ಲಾ ರೈತರಿಗೂ ಸಾಧ್ಯವಲ್ಲ. ಸಾಮಾ
ನ್ಯವಾಗಿ ಪೈರುಗಳ ಮಧ್ಯೆ ಕುಂಟೆ ಹೊಡೆದು ಜಮೀನಿನ ಮೇಲ್ಮಣ್ಣನ್ನು
ಸಡಲಿಸಲು ಸಾಧ್ಯವಾಗುತ್ತದೆ. ಕುಂಟೆಯಿಂದ ಮಳೆ ಬಿದ್ದನಂತರ ಜ
ಮೀನಿನ ಮೇಲೆ ಕಟ್ಟುವ ಹೆಪ್ಪನ್ನು ಒಡೆಯಬಹುದು. ಒಂದು ಜೊತೆ
ಎತ್ತಿನ ಕುಂಟೆ ಜೋಡಿ ಒಂದು ದಿವಸದಲ್ಲಿ ಅನೇಕ ಎಕರೆಗಳನ್ನು ಕೆರೆಯ ಬ
ಹುದು. ಕುಂಟೆ ಹೊಡೆದ ನಂತರ ಕಳೆ ತೆಗೆಯುವದು ಒಂದು ಕೆಲಸ. ಪುನಃ
ಹೆಪ್ಪು ಕಟ್ಟಿದರೆ ಮತ್ತೊಂದಾವರ್ತಿ ಹರತೆ ಹೊಡೆಯಬೇಕಾದೀತು. ಬಿ
ತ್ತನ್ನು ಸಾಲುಸಾಲಾಗಿ ಕೂರಿಗೆಗಳಲ್ಲಿ ಹಾಕುವ ಕಡೆಗಳಲ್ಲಿ ದಂತುಲು *
ರುಂಬ ಎಡೆಕುಂಟೆಗಿಂತಲೂ ಉತ್ತಮವಾದದ್ದು ಮಾತ್ರವದೂ ತೋರು
ವದಿಲ್ಲ. ಇದು ಆಳವಾಗಿ ಬೇರೂರಿರುವ ಕಳೆಗಳನ್ನು ತೆಗೆಯುವದಿಲ್ಲ. ಆದರೆ
ಪೈರಿಟ್ಟನಂತರ ಅರೀಕಿ ಮಾಡುವದೂ ಸಾಧ್ಯವಾಗುವದಿಲ್ಲ. ಕಳೆಯು ಬೆಳೆ
ದ ಹಿಕ್ಕೆಯನ್ನು ಸ್ವಲ್ಪಮಟ್ಟಿಗೆ ತಡೆದು ಬೇಸಿಗೆಯಲ್ಲಿ ಜಮೀನಿನಲ್ಲಿ ಆರ

---

* ಇದರ ವಿವರವನ್ನು ಈ ಗೆಜೆಟ್ಟಿನ ೧೯೦೮ ನೆ ಜುಲೈ ಗುರ್ತು ತಾರೀಖಿನ
ಸಂಚಿಕೆಯ ...ನೆ ಪುಟದಲ್ಲಿ ಕಾಣಿಸುತ್ತೇವೆ.

ವಾಗಿ ಹೆಂಟೆಗಳನ್ನು ಎಬ್ಬಿಸಿ ಬಿಸಲಿನಲ್ಲಿ ಚನ್ನಾಗಿ ಒಣಗಿಸಿದರೇನೇ ಕಳ
ಳು ನಾಶವಾಗುತ್ತವೆ. ಕೆಲವುಜಾತಿ ಹುಲ್ಲುಗಳು ಬಹಳ ತೊಂದರೆ ಕೆ
ಡತಕ್ಕವು. ಆದರೆ ಜಮೀನನ್ನೆಲ್ಲಾ ಆವರಿಸುವಂಥಾ ಯಾವದಾದರೊಂ
ಪೈರು ಇಡುವ ಮೂಲಕ ಈ ಹುಲ್ಲುಗಳು ಬೆಳೆದು ವೃದ್ಧಿ ಹೊಂದುವ
ನ್ನು ತಪ್ಪಿಸಬಹುದು. ಈ ಕೆಲಸಕ್ಕೆ ದನದ ಮೇವಿಗೆ ಅನುಕೂಲಪಡು
ಜೋಳವು ಬಹಳ ಒಳ್ಳೇ ಪೈರೆಂದು ತಿನ್ನವಳ್ಳಿ ರೈತರು ಹೇಳುತ್ತಾ
ಇದನ್ನು ಬಹಳ ಒತ್ತಾಗಿ (ಅಂದರೆ ಎಕರೆಗೆ ೬೦ ಮದರಾಸು ಸೇರಿನಂತೆ)
ತ್ತಿದರೆ ಸಸಿಗಳು ಬಹಳ ಗುಂಪಾಗಿ ಬೆಳೆದು ಜಮೀನನ್ನು ನೆರಳು ಮಾ
ಹುಲ್ಲು ತಲೆಯೆತ್ತುವದಕ್ಕೆ ಆಸ್ಪದ ಕೊಡುವದಿಲ್ಲ. ಇದೇರೀತಿ ಬಾಗ
ಯತು ಜಮೀನುಗಳಿಗೆ ಗೆಣಸುಪೈರು ಒಳ್ಳೇದು.

———o———

## Hints on Sugar-Cane.
## ಕಬ್ಬು—ಕೆಲವು ಸೂಚನೆಗಳು.

ಕಬ್ಬಿನ ಪೈರಿಗೆ ಪ್ರತ್ಯೇಕ ತಯಾರಿಸಿ ಗೊಬ್ಬರಗಳನ್ನು ಹಾಕ
ವದರಿಂದ ಬೆಲ್ಲದ ಗುಣದಲ್ಲಿ ವೆತ್ಯಾಸ ಬಂದೀತೆ ಎಂದು ಅಜಮಾಯಿಷಿಮ
ಡಲಾಯಿತು. ಸಲ್ಫೇಟ್ ಆಫ್ ಅಮೋನಿಯಾ (Sulphate of Ammoni
ಪದಾರ್ಥವನ್ನು ಪ್ರತ್ಯೇಕವಾಗಿಯೇ ಆಗಲೀ ಅಥವಾ ಮರದ ಬೂ
(Potash) ಜೊತೆಗೆ ಬೆರಸಿಯಾಗಲಿ ಹಾಕಿದರೆ ಬೆಲ್ಲವು ಬಣ್ಣಾಕಟ್ಟಾಗಿ
ವದಿಲ್ಲ. ಕುಸಿಬೆ ಹಿಂಡಿಯಿಂದ ಬೆಲ್ಲವು ಮರಳು ಮರಳಾಗಿ ಆಗುವದಲ್ಲ
ಘಟ್ಟಿಯಾಗಿಯೂ, ಒಳ್ಳೇ ಬಣ್ಣ ವುಳ್ಳದಾಗಿಯೂ ಆಗುತ್ತೆ. ಮಿಾನ
ಗೊಬ್ಬರದಿಂದ ಬೆಲ್ಲವು ಘಟ್ಟಿಯಾಗಿಯೂ ಒಳ್ಳೇ ಬಣ್ಣದ್ದಾಗಿಯೂ
ಗುತ್ತದೆ. ಅದರೆ ಮರಳು ಮರಳಾಗಿರುವದಿಲ್ಲ. ಕಬ್ಬಿನಹಾಲು ಕಾಯ
ಸುವಾಗ ಮೇಲೆ ಮಡ್ಡಿ ತೇಲುತ್ತದೆ. ಇದನ್ನು ಸಾಮಾನ್ಯವಾಗಿ ಬಿಸಾ
ವದುಂಟು. ಪರಂತು ಈ ಮಡ್ಡಿಯಲ್ಲಿ ಪುಷ್ಟಿಕರವಾದ ಪದಾರ್ಥಗಳೆಲ
ಉಳಿಯುವದರಿಂದ ಇದು ದನಕ್ಕೆ ಆಹಾರವಾಗಿ ಉಪಯೋಗವಡಬಹುದು
ಕಬ್ಬಿನ ಸಿಪ್ಪೆಯನ್ನು ಈ ಮಡ್ಡಿಯಲ್ಲಿ ನೆನೆಯಿಸಿ ಒಣಗಿಸಿ ದನಕ್ಕೆ
ಹಾಕಿ ನೋಡಲಾಗಿ ಮೊದಲು ಮೊದಲು ಅವು ತಿನ್ನಲಿಲ್ಲ. ಕ್ರಮೇ
ಇದರ ರುಚಿ ಗೊತ್ತಾದಮೇಲೆ ತಿನ್ನಲಾರಂಭಿಸಿದವು. ಈವಿಚಾರದ

ನಿರ್ದಿಷ್ಟವಾಗಿ ಹೇಳಬೇಕಾದರೆ ಇನ್ನೂ ಅಜಮಾಯಿಷಿಗಳನ್ನು ನಡೆಸು ವದು ಅವಶ್ಯಕವಾಗಿರುತ್ತೆ. ಇದರಲ್ಲಿ ಪುಷ್ಟಿಕರವಾದ ಪ್ರೋಟೀಡ್ (Protied) ಅಂಶವು ಕಡಲೆ ಆದರೂ ಹುಲ್ಲಿನಲ್ಲಿರುವದಕ್ಕಿಂತಲೂ ಎರ ಡರಷ್ಟು ಹೆಚ್ಚಾಗಿರುತ್ತೆ.

## Picking Cotton. *
## ಹತ್ತಿಯನ್ನು ಆರಿಸುವದು.

ಚೆನ್ನಾಗಿ ಬಲಿತ ಹತ್ತಿಯನ್ನು ಗಿಡದಿಂದ ಬಿಡಿಸಿಕೊಳ್ಳುವದು ಅ ಷ್ಟು ಪ್ರಯಾಸವಲ್ಲ. ಆದರೆ ಇದರಲ್ಲೂ ಸ್ವಲ್ಪ ಬುದ್ಧಿ ಉಪಯೋಗಿಸ ಬೇಕು. ಹತ್ತಿ ಬಿಡಿಸುವದಕ್ಕೆ ತೂಕದಪ್ರಕಾರ ಕೂಲಿ ಆಳುಗಳನ್ನು ಗೊತ್ತುಮಾಡಿದರೆ ಇವರು ಸ್ವಪ್ರಯೋಜನವನ್ನೇ ಮುಂದಾಗಿಟ್ಟುಕೊಂ ಡು ಇದು ಎಳೇದು ಇದು ಬಲಿತದ್ದು ಎಂಬ ವಿವೇಚನೆಯಿಲ್ಲದೆ ಕೈಗೆ ಸಿಕ್ಕಿ ದ ಬತ್ತಿಗಳನ್ನೆಲ್ಲಾ ಆತುರದಿಂದ ಬಿಡಿಸುತ್ತಾರೆ. ಹೀಗೆ ಫಸಲು ಬಿಡಿಸಿ ಕೊಳ್ಳುವ ಕಾಲದಲ್ಲಿ ಒಳ್ಳೆ ಹತ್ತಿಯನ್ನು ಡಾಗುಬಿದ್ದಿರುವ ಹತ್ತಿಯ ನ್ನು ಬೇರೆ ಬೇರೆಯಾಗಿ ಇಡದೇ ಇದ್ದರೆ ಮುಂದೆ ಇದನ್ನು ರಾಟೆಯಾಡು ವಾಗ ಪ್ರತ್ಯೇಕಿಸಿಕೊಳ್ಳಬೇಕಾಗುವದರಿಂದ ಬೆಳೆಯುವವನಿಗೂ ರಾಟೆಯಾ ಡುವವನಿಗೂ ವೃಥಾ ಕಾಲಹರಣವೂ ದ್ರವ್ಯನಷ್ಟವೂ ಉಂಟಾಗುತ್ತದೆ. ಇಂಥಾ ಅನಾನುಕೂಲವನ್ನು ಅತಿಸುಲಭವಾಗಿ ತಪ್ಪಿಸಬಹುದು. ಸಾಮಾ ನ್ಯವಾಗಿ ಹತ್ತಿ ಬಿಡಿಸುವವರು ಜೋಳಿಗೆಗಳನ್ನು ಮಾಡಿಕೊಂಡು ಬಿಡಿಸಿ ದ ಹತ್ತಿಯನ್ನು ಅವುಗಳಲ್ಲಿ ಹಾಕಿಕೊಳ್ಳುತ್ತಾರೆಯಷ್ಟೆ. ಜೋಳಿಗೆಗ ಳಲ್ಲಿ ಎರಡು ಪದರಮಾಡಿಕೊಂಡು ಒಂದರಲ್ಲಿ ಶುದ್ಧ ಹತ್ತಿ ಮತ್ತೊಂದರಲ್ಲಿ ಡಾಗು ಆದ ಹತ್ತಿಯನ್ನು ಪ್ರತ್ಯೇಕವಾಗಿ ಹಾಕಿದರೆ ಒಳ್ಳೇದು. ಹತ್ತಿ ಯನ್ನು ಸ್ವಲ್ಪಕಾಲ ಆರುವದಕ್ಕೆ ಬಿಡದೇ ರಾಟೆಮಾಡುವದರಿಂದ ಕೊಂ ಡುಕೊಳ್ಳುವವರಿಗೆ ಬಹಳ ನಷ್ಟವಾಗುತ್ತದೆ. ಹತ್ತಿಯನ್ನು ೩-೪ ವಾರ ಗಳು ಪದೇಪದೆ ಕೈಯಾಡುತ್ತಾ ಚೆನ್ನಾಗಿ ಒಣಗಿಸಿ ನಂತರ ರಾಟೆಯಾಡ ಬೇಕು. ಹಲ್ಲಿನಿಂದ ಕಡಿದರೆ ಬೀಜ ಒಡೆಯುವಂತಿದ್ದರೆ ಹತ್ತಿ ಹದವಾಗಿ ಒ ಣಗಿದೆಯೆಂದು ಗೊತ್ತುಮಾಡಬಹುದು.

* ಸೆಂಟ್ರಲ್ ಪ್ರಾವಿನ್ಸಸ್ ಅಗ್ರಿಕಲ್ಚರಲ್ ಗೆಜೆಟ್, ಏಪ್ರಿಲ್ ೧೯೧೯.

ಹತ್ತಿ ಬೆಳೆಯುವವರ ಆಚರಣೆ ಬಗ್ಗೆ ಕೆಲವು ಸಲಹೆಗಳನ್ನು
ಕೆಳಗೆ ನಮೂದಿಸಿದೆ.

ಹತ್ತಿಯನ್ನು ಸರಿಯಾಗಿ ಬಲಿತಕೂಡಲೆ ಬಿಡಿಸಿಕೊಳ್ಳಬೇಕೇ
ಯು ಬಲಿತಮೇಲೆ ಬಹಳಕಾಲ ಗಿಡದಲ್ಲಿ ಬಿಡಬಾರದು.

ಬಿಡಿಸುವವರನ್ನೆಲ್ಲಾ ಒಂದೇ ಹೊಲಕ್ಕೆ ಒಟ್ಟಿಗೆ ಕಳುಹಿಸಬೇಕು
ಇದರಿಂದ ಆಳುಗಳ ಕೆಲಸದಮೇಲೆ ನಿಗಾ ಇಡುವದಕ್ಕೆ ಸಾಧ್ಯವಾಗುತ್ತೆ.

ಹಾಗಾಗಿರುವ ಹತ್ತಿಯನ್ನು ಗಿಡದಿಂದ ಬಿಡಿಸಿಕೊಂಡ ಕೂಡಲೆ
ತ್ಯೇಕವಾಗಿಡಬೇಕು. ಕನ್ಧವಾದ ಹತ್ತಿಯೊಂದಿಗೆ ಬೆರಸಬಾರದು.
ದಕ್ಕಾಗಿ ಈ ಮೊದಲೇ ಹೇಳಿರುವಂತೆ ಬೇರೆ ಬೇರೆ ಪದರಗಳ
ಕು. ಹಾಗಾದ ಹತ್ತಿಯನ್ನು ಗಿಡದಿಂದ ಬಿಡಿಸುವಾಗಲೆ ಪ್ರತ್ಯೇಕಿಸು
ದು ಸುಲಭ.

ಹತ್ತಿಯನ್ನು ಶೋಧಿಸಿ ಒಣಗಿಸಿದನಂತರ ೩ರಿಂದ ೬ ವಾರಗಳವ
ಗೂ ಕೂಡಿಟ್ಟು ನಂತರ ರಾಟಿಗೆ ಕಳುಹಿಸಬೇಕು. ಬೇರೆ ಬೇರೆ ರ
ಹತ್ತಿಗಳನ್ನು ಬೆರೆಸಬಾರದು.

---

## Notifications.

## ಇಸ್ತಿಹಾರ್‌ನಾಮೆಗಳು.

ನಂ. ೧೬೬೫೭ ತಾ|| ೧೪—೮—೦೯.

ಪಾವಗಡದ ತಾಲ್ಲೂಕು ಆಕ್ಟಿಂಗ್ ಅಮಲ್ದಾರ್ ಮೆ|| ಸ್ಮೈಮ್
ಬೆಕ್ ಯವರಿಗೆ ೧೯೦೯ನೆ ಇಸವಿ ಆಗಸ್ಟು ೧೩ನೆ ತಾ|| ಲಾಗಾಯತು
ದಿನಗಳ ರಜಾ ಮಂಜೂರ್ಮಾಡಿರುತ್ತೆ.

---

ನಂ. ೧೧೬೬೧ ತಾ|| ೧೪—೮—೦೯.

ಹಾಸನದ ಡಿಸ್ಟ್ರಿಕ್ಟ್‌ನಲ್ಲಿ ಕೆಲಸ ಮಾಡುತ್ತಿರುವ ರೆವಿನ್ಯೂ ಸ
ಬೇಷನರ್ ಬಿ. ಮೊಹದೀನ್ ಷರೀಫರಿಗೆ ಅವರು ಉಪಯೋಗಿಸಿಕೊಳ್ಳ
ತಾರೀಖು ಲಾಗಾಯ್ತು ಒಂದು ತಿಂಗಳ ಪ್ರಿವಿಲೇಜ್ ರಜಾ ಮಂಜೂರ
ಡಿರುತ್ತೆ.

---

## Occasional Notes.

## ವಿವಿಧ ವೃತ್ತಾಂತಗಳು.

೧. ಇತ್ತೀಚೆಗೆ ಮುದರಾಸು ಪಟ್ಟಣದಲ್ಲಿ ಗಾಜಿನ ಹೆಂಚು, ಇಟ್ಟಿಗೆ, ಸೋಡಾವಾಟರ್ ಬುದ್ದಿಗಳು ತಯಾರಾಗುವ ಒಂದು ಕಾರ್ಖಾನೆಯು ಏರ್ಪಡಿಸಲ್ಪಟ್ಟಿದೆ. ಇದಕ್ಕೆ ಬೇಕಾಗುವ ಬಂಡವಾಳವೆಲ್ಲ ಪ್ರೈವೇಟು ಜನರಿಂದಲೇ ಒದಗಿಸುತ್ತಾರೆ.—ಇಂಡಿಯನ್ ಟ್ರೇಡ್ ಜರ್ನಲ್.—೨೨—೪—೧೯.

———o———

೨. ಗ್ರೇಟ್‌ಬ್ರಿಟನ್ ಮತ್ತು ಐರ್ಲಾಂಡು ದೇಶಗಳಲ್ಲಿ ಸಾಗುವಳಿಗೆ ಲಾಯಕ್ಕಾಗಿರುವ ವಿಸ್ತೀರ್ಣದ ಪೈಕಿ ಸುಮಾರು ೩ರಲ್ಲಿ ೧ ಭಾಗವೂ, ಆಸ್ಟ್ರೇಲಿಯಾ ದೇಶದಲ್ಲಿ ೨೦ರಲ್ಲಿ ೧ ಭಾಗವೂ, ಕನಡಾ ದೇಶದಲ್ಲಿ ೧೦೦ರಲ್ಲಿ ೧ ಭಾಗವೂ, ನ್ಯೂಜೀಲೆಂಡ್ ದೇಶದಲ್ಲಿ ೩೩ರಲ್ಲಿ ೧ ಭಾಗವೂ, ಇಂಡಿಯಾ ದೇಶದಲ್ಲಿ ೫ರಲ್ಲಿ ೨ ಭಾಗವೂ ಈಗ ನೀರೆರೆ ಸಾಗುವಳಿಯಲ್ಲಿರುತ್ತೆ.—ಇಂಡಿಯನ್ ಟ್ರೇಡ್ ಜರ್ನಲ್, ೧೮-೨-೧೯.

———o———

೩. ಈಚೆಗೆ ಲಂಡನ್ ಪಟ್ಟಣದಲ್ಲಿ ಒಂದು ಹೊಸ ವಿಧಾನದಿಂದ ಚರ್ಮವನ್ನು ಹದಗೊಳಿಸುತ್ತಾರೆ. ಮೊದಲು ಚರ್ಮವನ್ನು ಕ್ರೋಂ ವಿಧಾನದಿಂದ ಹದಮಾಡಿ ನಂತರ ಚರ್ಮದ ಸಂದುಗಳಲ್ಲಿ ರಬ್ಬರು ಹಾಲನ್ನು ತುಂಬುತ್ತಾರೆ. ಇದರಿಂದ ತೊಗಲು ನೀರು ಹೀರದಂತಾಗುತ್ತದೆ. ಈರೀತಿ ಹದಗೊಳಿಸಿದ ಚರ್ಮವು ಮೋಟಾರುಗಾಡಿಗಳ ಪಟ್ಟಿಗಳು, ಮೋಜಾ ಮತ್ತು ಜೋಡುಗಳ ಅಟ್ಟೆ, ಯಂತ್ರಗಳ ಪಟ್ಟಿಗಳು ಇವೇ ಮೊದಲಾದ ಅನೇಕ ಕೆಲಸಗಳಿಗೆ ಉಪಯೋಗ ಪಡುತ್ತದೆ.—ಇಂಡಸ್ಟ್ರಿಯಲ್ ಇಂಡಿಯಾ, ಡಿಸೆಂಬರು ೧೮.

———o———

೪. ಆನೇಕಲ್ಲು ತಾಲ್ಲೂಕಿಗೆ ಸಂಬಂಧಪಟ್ಟ ೧೮೪೬—೪೭ನೇ ಇಸವಿ ಲಾಗಾಯಿತು ೧೮೭೩-೭೪ನೆ ಇಸವಿ ವರಿಗೆ ಕುಳವಾರ ಚಿಟ್ಟಾಗಳನ್ನೂ ಮತ್ತು ನಾಗಮಂಗಲ ತಾಲ್ಲೂಕಿಗೆ ಸಂಬಂಧಪಟ್ಟ ೧೮೫೬ರಿಂದ ೧೮೮೩ವರಿಗೆ ಕುಳವಾರ ಚಿಟ್ಟಾಗಳನ್ನೂ ಹಾಲಿ ಜಾರಿಯಲ್ಲಿರುವ ರೂಲುಗಳಿಗನುಸರಿಸಿ ನಾಶಮಾಡಿಸಲ್ಪಡುತ್ತವೆಂತಲೂ, ಇವುಗಳ ದಾಖಲೆಗಳನ್ನು ಅಪೇಕ್ಷಿಸತಕ್ಕವರು ಇಸ್ಟಾಂಪ್ ಕೊಟ್ಟು ಮೂರುತಿಂಗಳ ಒಳಗಾಗಿ ದರಖಾಸ್ತು ಕೊಟ್ಟು

ಕಾಪಿಗಳನ್ನು ಪಡೆಯಬಹುದೆಂದೂ ೧೯೦೯ನೇ ಇಸವಿ ಎಪ್ರೈಲ್ ಮಾ
೨೯ನೇ ತಾರೀಖಿನ ಮೈಸೂರು ಗೆಜೆಟ್ಟಿನಲ್ಲಿ ಪ್ರಕಟಿಸಲ್ಪಟ್ಟಿರುತ್ತೆ.

---

೫. ವ್ಯವಸಾಯಾಭಿವೃದ್ಧಿಗೆ ವಿದ್ಯಾಭ್ಯಾಸವು ಅತ್ಯವಶ್ಯಕ. ಸಿಲೋನ್
ದ್ವೀಪದಲ್ಲಿ ಪಾಠಶಾಲೆಗಳಿಗೆ ಸೇರಿದ ಹಾಗೆ ಕೈತೋಟಗಳನ್ನು ಸ್ಥಾಪಿಸಿ
ವ್ಯವಸಾಯ ವಿಷಯವಾದ ಬೋಧೆಯನ್ನು ಅಲ್ಲಿ ಕೊಡುತ್ತಿರುವದು ಸ
ರಿಯಷ್ಟೆ. ಈ ಪ್ರಾಂತ್ಯಗಳಲ್ಲಿ ಸಂಚಾರವಾದಿ ವ್ಯವಸಾಯಾಭಿವೃದ್ಧಿಯ
ನ್ನು ಮತ್ತು ಅಲ್ಲಿ ಇಡುತ್ತಿರುವ ಹೊಸ ಪೈರುಗಳನ್ನು ಪರೀಕ್ಷಿಸಿ ವಿಚಾ
ರ ಮಾಡಿದಲ್ಲಿ ಸಾಮಾನ್ಯವಾಗಿ ಇದಕ್ಕೆಲ್ಲಾ ಪಾಠಶಾಲೆಯಲ್ಲಿ ಕೊಟ್ಟ
ಬೋಧೆಯೇ ಕಾರಣವಾಗಿರುವದು ವ್ಯಕ್ತವಾಗುತ್ತದೆ. ಮತ್ತು ಇಂಥ
ಪೈರುಗಳನ್ನು ಪಾಠಶಾಲೆಯಲ್ಲಿ ತರಬೇತು ಹೊಂದಿದ ಒಬ್ಬ ಹುಡುಗನೇ
ಸಾಗುಮಾಡುತ್ತಿರುವದನ್ನು ಅನೇಕವಾಗಿ ನೋಡಬಹುದು.—ಅಗ್ರಿಕಲ್ಚರ
ಲ್ ಅಂಡ್ ಇಂಡಸ್ಟ್ರಿಯಲ್ ಪ್ರೋಗ್ರೆಸ್, ಎಪ್ರಿಲ್ ೧೯೦೯.

---

೬. ಬತ್ತದ ಸಸಿಗಳನ್ನು ದೂರದೂರವಾಗಿ ನಾಟುವುದರ ಫಲಿತಾಂಶವ
ನ್ನು ಈ ಕೆಳಗೆ ತೋರಿಸಿರುತ್ತೆ.—

ಬಾಂಕು ಬತ್ತವನ್ನು ಗುತ್ತಿಗುತ್ತಿಯಾಗಿ ೬ರಿಂದ ೯ ಇಂಚು ಅವ
ಕಾಶ ಬಿಟ್ಟು ನಾಟಿದ್ದಕ್ಕೆ ಒಂದು ಅಜಮಾಯಿಷಿಯಲ್ಲಿ ಎಕರೆಗೆ ೩,೧೩೩
ಪೌಂಡಿನಂತೆಯೂ ಮತ್ತೊಂದು ಅಜಮಾಯಿಷಿಯಲ್ಲಿ ೨,೪೬೯ ಪೌಂಡಿನಂ
ತೆಯೂ, ಒಂದೊಂದೆ ಸಸಿಯಂತೆ ೯ಇಂಚು ಅವಕಾಶ ಬಿಟ್ಟು ಹಾಕಿದ್ದಕ್ಕೆ
ಒಂದು ಅಜಮಾಯಿಷಿಯಲ್ಲಿ ೨,೫೬೭ ಪೌಂಡಿನಂತೆಯೂ, ಮತ್ತೊಂದು ಅ
ಜಮಾಯಿಷಿಯಲ್ಲಿ ೨,೬೯೮ ಪೌಂಡಿನಂತೆಯೂ ಈಪ್ರಕಾರ ಉತ್ಪತ್ತಿಯಾ
ಗಿರುತ್ತೆ.

ಕೊನಮಣಿ ಬತ್ತದ ಸಸಿಗಳನ್ನು ಒಂದೊಂದಾಗಿ ೯ ಇಂಚು ಬಿಟ್ಟು
ಹಾಕಿದ್ದಕ್ಕೆ ೨,೮೮೦ ಪೌಂಡು, ಗುತ್ತಿಗುತ್ತಿಯಾಗಿ ೬-೯ಅಂಗುಲ ಬಿಟ್ಟು
ಹಾಕಿದ್ದಕ್ಕೆ ೨,೭೭೬ಪೌಂಡು ಹುಟ್ಟುವಳಿಯಾಗಿರುತ್ತೆ. ಈ ಫಲಿತಾಂಶ
ಗಳೇ ಪ್ರಮಾಣವೆಂದು ಭಾವಿಸತಕ್ಕದ್ದಲ್ಲ. ಆದರೂ ಈ ವಿಚಾರದಲ್ಲಿ
ಇನ್ನೂ ಅಜಮಾಯಿಷಿಗಳನ್ನು ನಡೆಸುವದು ಅವಶ್ಯಕವೆಂಬುದು ಇವುಗ
ಳಿಂದ ವ್ಯಕ್ತಪಡುತ್ತೆ.—ಅಗ್ರಿಕಲ್ಚರಲ್ ಅಂಡ್ ಇಂಡಸ್ಟ್ರಿಯಲ್ ಪ್ರೋಗ್ರೆಸ್.—
ಎಪ್ರಿಲ್ ೧೯೦೯.

V, B. Soobbiah & Sons, Printers, Bangalore.—1909.

THE MYSORE

# REVENUE & AGRICULTURAL GAZETTE.

ವಾಲ್ಯೂಂ ೩.] ಶನಿವಾರ, ೧೫ನೆ ಮೇ ೧೯೦೯. [ನಂ. ೧೪.

## Contents.



## ಅನುಕ್ರಮಣಿಕೆ.



## Improvements in Paddy Cultivation. *

## ಬತ್ತದ ಸಾಗುವಳಿಯಲ್ಲಿ ನೂತನಕ್ರಮಗಳು.

ತಿನ್ನವಲ್ಲಿ ಡಿಸ್ಟ್ರಿಕ್ಟ್ ಶಿವಗಿರಿ ಹೋಂ ಫಾರಮಿನಲ್ಲಿ ಬತ್ತದ ಸಾಗು

* ಮದರಾಸು ಅಗ್ರಿಕಲ್ಚರಲ್ ಕ್ಯಾಲೆಂಡರ್, ೧೯೦೯.

ಮಳೆಯುಳ್ಳನುಸರಿಸಿರುವ ಅನೇಕ ನೂತನ ಕ್ರಮಗಳ ಪೈಕಿ ಮುಖ್ಯವಾದ
ವುಗಳ್ಯಾವವಂದರೆ—

ಕಾಡು ನೀಲಿ ಸೊಪ್ಪಿನ ಗೊಬ್ಬರ:—ಇದರ ಬೀಜವನ್ನು ಜುಲೈ
ತಿಂಗಳ ಸುಮಾರಿನಲ್ಲಿ ಒಂದು ಸೇರು ಬೀಜಕ್ಕೆ ಒಂದು ಸೇರು ಬತ್ತ ಕೂ
ಲಿ ಕೊಟ್ಟು ಬಂಜರು ಜಮೀನುಗಳಿಂದ ಆರಿಸಿ ಜಮಾಯಿಸುತ್ತಾರೆ. ಬೀ
ಜವನ್ನು ಫೆಬ್ರವರಿ, ಮಾರ್ಚಿವರೆಗೆ ಆಗಾಗ್ಯೆ ಬಿಸಲಿನಲ್ಲಿ ಒಣಗಿಸಿ ತಂಪೇ
ರದ ಪ್ರದೇಶದಲ್ಲಿಟ್ಟಿರುತ್ತಾರೆ. ಬತ್ತದ ಪೈರು ಕಟಾವಾದಕೂಡಲೆ ಜಮೀ
ನನ್ನು ಒಂದೆರಡುಸಲ ಉಳಬೇಕು. ಭೂಮಿಯು ಬಹಳ ಒಣಗಲಾಗಿ
ಗಟ್ಟಿಯಾಗಿದ್ದರೆ ಮೊದಲು ಮಳೆ ಬಿದ್ದಕೂಡಲೆ ಉಳಬಹುದು. ಅಂದರೆ
ಎಷ್ಟು ಜಾಗ್ರತೆ ಉತ್ತು ನೀಲಿ ಬೀಜವನ್ನು ಚೆಲ್ಲಿದರೆ ಅಷ್ಟು ಚೆನ್ನಾಗಿ
ಮೊಳೆಯುತ್ತದೆ. ನಂತರ ಎಕರೆ ೫ ಮದರಾಸು ಸೇರು ಬೀಜವನ್ನು ಚೆಲ್ಲಿ
ಒಂದೆರಡು ಸಾಲು ಉತ್ತು ಮಣ್ಣು ಮುಚ್ಚಿದರೆ ಸಾಕು. ಮುಂದೆ ಇದ
ಕ್ಕೆ ಇನ್ಯಾವ ವ್ಯವಸಾಯವೂ ಅವಶ್ಯಕವಿರುವದಿಲ್ಲ. ಇದಕ್ಕೆ ನೀರನ್ನು
ಹಾಯಿಸಬಾರದು. ಆಗಸ್ಟ್-ಸೆಪ್ಟಂಬರು ತಿಂಗಳುಗಳಲ್ಲಿ ಪುನಃ ಪೈರು
ನಡುವೆ ಉತ್ತು ಕಳೆ ಎಬ್ಬಿಸಿ ಜಮೀನಿನಲ್ಲಿ ಗಾಳಿಯಾಡುವಂತೆ ಮಾಡಬೇ
ಕು. ಈ ಗಿಡವು ಬಹಳ ಆಳವಾಗಿ ಬೇರೂರುವದರಿಂದ ಇದಕ್ಕೆ ಬಾಧಕ
ವೇನೂ ಆಗುವದಿಲ್ಲ. ಗಿಡ ಚೆನ್ನಾಗಿ ಬೆಳೆಯುವದಲ್ಲದೆ ಮೊಳೆಯದೆ ಇದ್ದ
ಬೀಜಗಳು ಮೊಳೆಯುತ್ತವೆ. ಅಕ್ಟೋಬರು ತಿಂಗಳಲ್ಲಿ ಜಮೀನಿಗೆ ನೀರುಕ
ಟ್ಟಿ ಗಿಡಗಳನ್ನು ಕೆಸರಿನಲ್ಲಿ ಉತ್ತುಬಿಡಬೇಕು. ಗಿಡಗಳು ಒತ್ತಾಗಿದ್ದು ಉ
ದ್ದವಾಗಿ ಬೆಳೆದಿದ್ದರೆ, ನೀರು ಕಟ್ಟಿದನಂತರ ಅವುಗಳನ್ನು ಬೇರು ಸಹಿತ ಕಿ
ತ್ತು ಜಮೀನಿನಮೇಲೆ ಒಂದೇ ಸಮನಾಗಿ ಹರಡಿ ನಂತರ ಉಕ್ಕೆ ಮಾಡುವದ
ರಿಂದ ಎತ್ತು ಮತ್ತು ಆಳುಗಳ ತುಳಿತಕ್ಕೆ ಸಿಕ್ಕಿ ಕೆಸರಿನಲ್ಲಿ ಬೆರತುಹೋಗು
ತ್ತೆ. ಹೀಗೆ ಆರು ಆಣೆ ಖರ್ಚು ಮಾಡಿ, ಬೇಸಿಗೆಯಲ್ಲಿ ರೈತರು ಆರಂಬ ಕೆ
ಲಸ ಇಲ್ಲದೆ ಇರುವಾಗ ಸ್ವಲ್ಪ ಶ್ರಮ ತೆಗೆದುಕೊಂಡರೆ, ಮುಂದೆ ಹಿಂಡಿ ಅ
ಥವಾ ಕಾಡು ಸೊಪ್ಪಿಗಾಗಿ ವೆಚ್ಚ ಮಾಡಬೇಕಾದ ಎಕರೆಗೆ ಸುಮಾರು ೧೦-
೧೫ ರೂಪಾಯಿ ಮಿಗುವದಲ್ಲದೆ ಕಾಲವೂ ಸಹ ಕೂಡಿಬರುತ್ತದೆ. ಕಾಡು ನೀ
ಲಿ ಒಂದು ಭೂಮಿಯಲ್ಲಿ ಬಹಳ ಚೆನ್ನಾಗಿ ಬೆಳೆಯುತ್ತೆ. ಜೌಗು ಪ್ರದೇಶ
ದಲ್ಲೂ, ಜೇಡು ಭೂಮಿಯಲ್ಲೂ ಆಗುವದಿಲ್ಲ.

ಬಿತ್ತನೆ ಕ್ರಮ.—ಬತ್ತದ ಸಸಿಗಳನ್ನು ಗುತ್ತಿಗುತ್ತಿಯಾಗಿ ಹಾಕವೆ ಒಂದೊಂದೇ ಹಾಕಿದರೆ ಬೀಜದ ಖರ್ಚು ಕಮ್ಮಿಯಾಗುವದಲ್ಲದೆ ಹುಟ್ಟುವಳಿಯಲ್ಲಿ ಏನೂ ಕಡಿಮೆಯಾಗುವದಿಲ್ಲ. ಹೇಗಂದರೆ, ಒಂದೊಂದೇ ಸಸಿ ಹಾಕುವದರಿಂದ ಸಸಿಯಲ್ಲಿ ಕವಲುಗಳು ಹೆಚ್ಚಾಗಿ ಒಡೆಯುತ್ತವೆ. ಮೊದಲು ಕೂಲಿಯವರಿಗೆ ಈ ಕ್ರಮವನ್ನು ಕಲಿಸುವದು ಪ್ರಯಾಸ. ಅವರು ಕಲಿತಮೇಲೆ ಉತ್ಪತ್ತಿ ಒಂದೇ ಸಮನಾಗಿದ್ದರೂ ಬೀಜದ ಖರ್ಚಿನಲ್ಲಿ ಕೊತಿ ಬರುವದೇನೋ ಖಂಡಿತ. ಅಗೆ ಹಾಕುವದರಲ್ಲಿ ಜಾಸ್ತಿ ಬೀಜವನ್ನು ಹಾಕಬಾರದು. ಏಕೆಂದರೆ ಸಸಿಗಳು ಒತ್ತಾಗಿ ಬೆಳೆದು ಬೇರುಗಳು ಒಂದಕ್ಕೊಂದು ಹೆಣಕೊಂಡುಹೋಗಿ ನಂತರ ಸಸಿಯನ್ನು ಬಿಡಿಸುವದು ಕಷ್ಟವಾಗುತ್ತೆ. ಎಕರೆಗೆ ೧೦೦ ಮದರಾಸು ಸೇರಿಗೆ ಮೀರದಂತೆ ಅಗೆಯುಲ್ಲಿ ಒಟ್ಟು ಹಾಕಬೇಕು. ಶಿವಗಿರಿ ಫಾರಂನಲ್ಲಿ ಎಕರೆಗೆ ಸುಮಾರು ೧೬ ಮದರಾಸು ಸೇರು ಬಿತ್ತವನ್ನು ಉಪಯೋಗಿಸಿರುತ್ತಾರೆ. ಆಳುಗಳು ಸರಿಯಾಗಿ ತರಬೇತು ಆದನಂತರ ಇದನ್ನು ೮ ಸೇರಿಗೆ ಇಳಿಸಬಹುದಂತೆ.

ಬೀಜದ ಚುನಾವಣೆ.—ಬಿತ್ತವನ್ನು ಉತ್ತಮವಾದ ಸ್ಥಳೀಯ ರಖಂ ಮತ್ತು ಸಾಗುವಳಿ ಮಾಡಿರುವ ಹೊಸ ರಖಂಗಳ ಪೈಕಿ ಚುನಾಯಿಸುತ್ತಾರೆ. ಫಸಲು ಕಟಾವು ಆದಕೂಡ್ಲೆ ಹುಲ್ಲಿನ ಕಂತೆಗಳು ಇನ್ನು ಗದ್ದೆಯಲ್ಲಿರುವಾಗಲೇ ಒಳ್ಳೆ ತೆನೆಗಳನ್ನು ಆರಿಸಿಕೊಂಡು ಬೇರೆಯಾಗಿ ಬಡಿದು ಬೀಜವನ್ನು ಬಿಸಲಿನಲ್ಲಿ ಚೆನ್ನಾಗಿ ಒಣಗಿಸಿ ಗುದಾಣಗಳಲ್ಲಿ ಕೂಡಿಡುತ್ತಾರೆ. ತೆನೆಗಳನ್ನು ಆರಿಸುವದರಲ್ಲೂ ರಖಮು ವ್ಯತ್ಯಾಸವಾಗದರೀತಿ ರೋಗ ತಗಲದಿರುವುಗಳನ್ನೆ ಚುನಾಯಿಸುತ್ತಾರೆ. ಕಾಳೆಲ್ಲಾ ಚೆನ್ನಾಗಿ ಬಲಿತಿರುವ ತೆನೆಗಳನ್ನೇ ಹುಡುಕುತ್ತಾರೆ. ಕಾಳು ಉದುರಿಹೋಗಿರುವ ಮತ್ತು ಜೊಳ್ಳಾಗಿರುವ ತೆನೆಗಳನ್ನು ಬಿಟ್ಟುಬಿಡುತ್ತಾರೆ. ನೀರು ಚೆನ್ನಾಗಿ ಬಸಿದು ಹೋಗದಿರುವ ತಾಕುಗಳಲ್ಲಿನ ತೆನೆಗಳನ್ನು ಚುನಾಯಿಸುವದಿಲ್ಲ. ಆದರೆ ಇವು ಜೌಗು ಭೂಮಿಗೆ ಅನುಕೂಲಿಸುವದಾದರೆ ಇಟ್ಟುಕೊಳ್ಳುತ್ತಾರೆ. ನೀರು ಕಮ್ಮಿ ಬಿದ್ದ ತಾಕುಗಳಲ್ಲಿ ಬೆಳೆದ ತೆನೆಗಳನ್ನು ಇತರ ಕಡೆ ಬೆಳೆದಿರುವದಕ್ಕಿಂತಲೂ ಅವು ಸಣ್ಣದಾಗಿಯೂ ಮತ್ತು ಒಳ್ಳೇದಾಗಿಲ್ಲದಿದ್ದರೂ ಕೂಡ ಅವನ್ನೇ ಚುನಾಯಿಸುತ್ತಾರೆ. ಈ ವಿಚಾರದಲ್ಲಿ ಮು

ಖ್ಯವಾದ ಅಂಶವೇನೆಂದರೆ, ಪೈರಿನಲ್ಲಿ ನೀರು ಕಮ್ಮಿಯಾದರೂ ತಡೆದು ಬ
ಳೆಯುವ ಗುಣವನ್ನು ಹೆಚ್ಚಿಸುವರೀತಿ ಬಿತ್ತದ ದಖಂ ಚುನಾಯಿಸಬೇಕು
ಹೀಗೆ ಮಾಡುವದರಲ್ಲಿ ಫಸಲುತ್ಪತ್ತಿಯು ಕೊಂಚ ಕಮ್ಮಿಯಾದರೂ
ಚಿಂತೆಯಿಲ್ಲ.

ಮರಳು ಜಮೀನು ವಿನಹ ಮಿಕ್ಕ ಗದ್ದೆಗಳಲ್ಲಿ ಖುಷ್ಕಿ ವ್ಯವಸಾ
ಯಮಾಡಿದರೆ ಬಹಳ ಅನುಕೂಲ. ಹೇಗಂದರೆ:—

(೧) ಇದರಿಂದ ಮುಂದೆ ಇಡುವಬೆಳೆಗೆ ಹೆಚ್ಚಾಗಿ ಸಸ್ಯಾಹಾರವು
ದಗುತ್ತದೆ.

(೨.) ಜಮೀನಿನಲ್ಲಿ ಚನ್ನಾಗಿ ಗಾಳಿಯಾಡಿ ಬತ್ತದ ಪೈರು ಆಳ
ವಾಗಿ ಬೇರೂರಲು ಅವಕಾಶವಾಗುವದರಿಂದ ನೀರು ಕಮ್ಮಿಯಾದರೂ ಪೈ
ರು ತಡಿಯುತ್ತದಲ್ಲದೆ ಸಸಿಗೆ ಆಹಾರ ಒದಗಿಸುವ ವಿಸ್ತೀರ್ಣವೂ ಹೆಚ್ಚು
ತ್ತದೆ.

(೩.) ಜಮೀನಿನಲ್ಲಿನ ಕಳೆಗಳು ನಾಶವಾಗುತ್ತವೆ.

---

## Co-operative Societies.

## ಪರಸ್ಪರ ಸಹಾಯಕ ಸಂಘಗಳು.

(೧) ಮೈಸೂರು ಸೀಮೆಯಲ್ಲಿ ಕೋಆಪರೇಟಿವ್ ಸೊಸೈಟಿಗಳ ಸಂಖ್ಯೆ
ಯು ದಿನೇದಿನೇ ಹೆಚ್ಚುತಲಿರುವದು. ಪೂರ್ವದಲ್ಲಿ ೪-೫ ಇದ್ದದ್ದು ಈಗ
ಎಂಟು ಡಿಸ್ಟ್ರಿಕ್ಟುಗಳಲ್ಲಿಯೂ ೫೦ರ ವರಿಗೆ ವ್ಯಾಪಿಸಿರುವವು. ಹೀಗೆ ಹೆ
ಚ್ಚುತಲಿರುವ ಸೊಸೈಟಿಗಳಮೇಲೆ ವಿಚಾರಣೆ ತೆಗದುಕೊಂಡು ಅವುಗಳ
ನ್ನು ಸರಿಯಾಗಿ ನಡಿಸುವ ಭಾರವು ರಿಜಿಸ್ಟ್ರಾರವರನ್ನು ಹೊಂದಿರುವ
ರಿಂದ ಸಂಘಗಳಿಗೆ ಪದೇ ಪದೇ ಹೋಗುವದಕ್ಕೂ, ಲೆಖ್ಖಪತ್ರಗಳನ್ನು
ತನಿಖೆ ಮಾಡುವದಕ್ಕೂ, ಮತ್ತು ಅನುಕೂಲವಾದ ಸ್ಥಳಗಳಲ್ಲಿ ಹೊಸ
ಸಂಘಗಳನ್ನು ಏರ್ಪಡಿಸುವದಕ್ಕೂ ಮತ್ತೊಬ್ಬರ ಸಹಾಯವು ರಿಜಿಸ್ಟ್ರಾ
ರ್‌ವರಿಗೆ ಕಂಡುಬಂದು ಗವರ್ನಮೆಂಟಿಗೆ ಬರೆದದ್ದರಮೇಲೆ ಕಳೆದ ಏಪ್ರಿ
ಲ್ ತಿಂಗಳಿಂದ ಒಬ್ಬ ಇನ್ಸ್ಪೆಕ್ಟರವರನ್ನು ಗವರ್ನಮೆಂಟಿನವರು ಹೊಸ
ದಾಗಿ ನಿಯಾಮಕಮಾಡಿರುತ್ತಾರೆ.

(೨) ತುಂಕೂರು ಡಿಸ್ಟ್ರಿಕ್ಟಿನಲ್ಲಿ ಕಳೆದ ತಿಂಗಳಲ್ಲಿ ತುಂಕೂರು ಡಿಸ್ಟ್ರಿಕ್ಟ್ ಕೋಆಪರೇಟಿವ್ ಸೊಸೈಟಿಗಳ ಆನರೆರಿ ಆರ್ಗನೈಸರ್ ಮೆ|| ಸಿ. ಡಿ. ರಾಮಸ್ವಾಮೈಯ್ಯನವರ ಏರ್ಪಾಡಿನಿಂದಲೂ ಮತ್ತು ಪ್ರೋತ್ಸಾಹದಿಂದಲೂ ಈ ಕೆಳಗೆ ನಮೂದಿಸಿರುವ ಕೋಆಪರೇಟಿವ್ ಸೊಸೈಟಿಗಳು ಸ್ಥಾಪಿಸಲ್ಪಟ್ಟು ಕೋಆಪರೇಟಿವ್ ಸೊಸೈಟಿಗಳ ಖಾನೂನ್ ಪ್ರಕಾರ ರಿಜಿಸ್ಟರು ಮಾಡಲ್ಪಟ್ಟಿರುತ್ತವೆ. ಈ ಸೊಸೈಟಿಗಳು ಸಾಧಾರಣವಾಗಿ ವ್ಯವಸಾಯಗಾರರಿಗೂ ಮತ್ತು ಸರ್ಕಾರದ ನೌಕರರಿಗೂ ಅನುಕೂಲವಾಗುವಂತೆ ಏರ್ಪಾಡಾಗಿರುತ್ತವೆ.

೧. ಗುಬ್ಬಿ ಶ್ರೀಕೃಷ್ಣರಾಜ ಪರಸ್ಪರ ಸಹಾಯಕ ಸಂಘ ಲಿಮಿಟೆಡ್.—ಗುಬ್ಬಿ.

೨. ಚಿಕ್ಕನಾಯಕನಹಳ್ಳಿ ಕೋಆಪರೇಟಿವ್ ಸೊಸೈಟಿ ಲಿಮಿಟೆಡ್.—ಚಿಕ್ಕನಾಯಕನಹಳ್ಳಿ.

೩. ಹೆಬ್ಬೂರು ಕೋಆಪರೇಟಿವ್ ಸೊಸೈಟಿ ಲಿಮಿಟೆಡ್.-ಹೆಬ್ಬೂರು, ತುಂಕೂರು ತಾಲ್ಲೂಕು.

ಇದಲ್ಲದೆ ಮೇಲುಕೋಟೆಯಲ್ಲಿ ವ್ಯವಸಾಯಗಾರರಿಗೂ ಮತ್ತು ವ್ಯಾಪಾರಸ್ಥರಿಗೂ ಉಪಯೋಗವಾಗುವಂತೆ ಏರ್ಪಾಡಾದ (೧) ಮೇಲುಕೋಟೆ ವ್ಯವಸಾಯವರ್ಧಿನಿ ಸೊಸೈಟಿ ಲಿಮಿಟೆಡ್ ಮತ್ತು (೨) ಮೇಲುಕೋಟೆ ಶ್ರೀಸಂಪತ್ಕುಮಾರ ವ್ಯಾಪಾರವರ್ಧಿನಿ ಸೊಸೈಟಿ ಲಿಮಿಟೆಡ್ ಎಂಬ ಈ ಎರಡು ಸೊಸೈಟಿಗಳೂ ಅದೇ ತಿಂಗಳಲ್ಲಿಯೇ ರಿಜಿಸ್ಟರು ಮಾಡಲ್ಪಟ್ಟವು.

(೩) ಕಳೆದ ಏಪ್ರಿಲ್ ತಿಂಗಳ ಕೊನೆಯಲ್ಲಿ ಕೋಆಪರೇಟಿವ್ ಸೊಸೈಟಿಗಳ ರಿಜಿಸ್ಟ್ರಾರವರು ಮೈಸೂರು ಪ್ರಾಂತ್ಯ ದಯಮಾಡಿಸಿದ್ದರು. ಮೈಸೂರಿಗೆ ಸಮೀಪದಲ್ಲಿರುವ ಕೆಲವು ಗ್ರಾಮಗಳಲ್ಲಿ ವ್ಯವಸಾಯಗಾರರಿಗೆ ಅನುಕೂಲವಾಗಿರುವಂತೆ ಕೆಲವು ಕೋಆಪರೇಟಿವ್ ಸೊಸೈಟಿಗಳನ್ನು ಏರ್ಪಡಿಸಲು ಪ್ರಯತ್ನ ನಡಿಯುತ್ತಲಿರುವದು.

## Revenue Appeals.

## ರೆವಿನ್ಯೂ ಅಪೀಲುಗಳು.

ನಂ. ಆರ್. ೯೩೬೩-ಎಲ್. ಆರ್. ೧೩೨-೦೮-೪.

ಅರ್ಜಿದಾರ—ಬವರಿಂಗ್‌ಪ್ಯಾಟೆ ತಾ॥ ಪೆದ್ದಪಳ್ಳಿ ಗ್ರಾಮದ ಶ್ಯಾನುಭೋಗ ಲಕ್ಷ್ಮೀನಾರಣಪ್ಪ.

ಅರ್ಜಿದಾರನು ಪೆದ್ದಪಲ್ಲಿ ಗ್ರಾಮದಲ್ಲಿರುವ ತನ್ನ ಬಾಬತು ವ್ಯವಸಾಯದ ಜಮೀನಿನಲ್ಲಿ ಒಂದು ಮಣ್ಣು ಮಾಳಿಗೆ ಮನೆಯನ್ನು ಬಗರು ಹುಕ್ಕುಂ ಕಟ್ಟಿಸಿದ ತಪ್ಪಿತಕ್ಕಾಗಿ ಇವನಿಂದ ೨೦ ರೂಪಾಯಿಗಳನ್ನು ವಸೂಲ್ ಮಾಡಬೇಕೆಂದು ಜಮಾಬಂದಿ ಆಫೀಸರು ೧೯೦೧ನೆ ಇಸವಿ ಮೇ ತಿಂಗಳಲ್ಲಿ ಮಾಡಿದ ಹುಕುಮನ್ನು ಅನುಸರಿಸಿ ನಡಸುತ್ತಿರುವ ವಸೂಲಿ ಕ್ರಮವನ್ನು ನಿಲ್ಲಿಸಿ ಸದರಿ ಮನೆಯನ್ನು ಕಿತ್ತುಹಾಕಿರುವದ್ದರಿಂದ ಮೊಬಲಗನ್ನು ವಸೂಲ್ ಮಾಡದಂತೆ ಮಾಫ್ ಮಾಡಿಸಬೇಕೆಂದು ರೆವಿನ್ಯೂ ಕಮಿಷನರವರಿಗೆ ಅಪ್ಪೀಲ್ ಗುಜರಾಯಿಸಿಕೊಂಡಿರಲು ಅವರು ಅಪ್ಪೀಲನ್ನು ವಾಯಿದೆ ಅಂದರ್‌ವಾರ್ ಬಂದಿರುವದಿಲ್ಲವೆಂಬ ಕಾರಣದಮೇಲೆ ತಿರಸ್ಕರಿಸಿದರು. ಈ ಹುಕ್ಕುಂನಮೇಲೆ ಅರ್ಜೀದಾರನು ಗವರ್ನಮೆಂಟಿಗೆ ಅಪ್ಪೀಲ್ ಮಾಡಿರಲು, ಗವರ್ನಮೆಂಟಿನವರು ರೆವಿನ್ಯೂ ಕಮಿಷನರವರು ಅಪ್ಪೀಲನ್ನು ತಿರಸ್ಕರಿಸಿರುವದು ಸರಿಯಾಗಿಧೆ ಯೆಂದೂ ಈ ವಿಷಯದಲ್ಲಿ ಸರ್ಕಾರದವರು ಪ್ರವರ್ತಿಸಲು ಸರಿಯಾದ ಕಾರಣ ಕಂಡುಬರುವದಿಲ್ಲವೆಂದೂ ಇವನ ಅಪ್ಪೀಲನ್ನು ತಿರಸ್ಕರಿಸಿರುತ್ತಾರೆ. ಅಲ್ಲದೆ ಅರ್ಜಿದಾರನು ಸದರಿ ಗ್ರಾಮದ ಶಾನುಭೋಗನಾಗಿ ಸಾಗುವಳಿ ಜಮೀನನ್ನು ಇತರ ಕೆಲಸಗಳಿಗೆ ಬಗರ್ ಹುಕ್ಕುಂ ಉಪಯೋಗಪಡಿಸಕೂಡದೆಂಬ ನಿರ್ಬಂಧವಿರುವದು ತಿಳಿದಿದ್ದೂ ಕೂಡ ರೂಲ್ಸಿಗೆ ವಿರೋಧವಾಗಿ ನಡದಿರುವದು ಬಹಳ ಅಕ್ರಮವೆಂದು ಸರ್ಕಾರದವರು ಅಭಿಪ್ರಾಯಪಟ್ಟಿರುತ್ತಾರೆ.

## Pruning. *
## ಕಸಿ ಮಾಡುವದು.

ಗಿಡಗಳನ್ನು ಕಸಿ ಮಾಡುವದರ ಉದ್ದೇಶವೇನೆಂದರೆ—

೧. ವೃಕ್ಷದ ರೂಪಿನಲ್ಲಿ ನಮಗೆ ಇಷ್ಟಬಂದ ಬದಲಾವಣೆಗಳುಂಟಾಗುವಂತೆ ಮಾಡಬಹುದು.

೨. ಗಿಡಕ್ಕೆ ಔಷಧ ನೀರುಗಳನ್ನು ಚುಮುಕಿಸುವದಕ್ಕೂ ಮತ್ತು ಹಣ್ಣು ಬಿಡಿಸಿಕೊಳ್ಳುವದಕ್ಕೂ ಹೆಚ್ಚು ಸೌಲಭ್ಯ ವುಂಟಾಗುತ್ತದೆ.

೩. ಗಿಡಗಳಲ್ಲಿ ಎಲೆಗಳು ಹಣ್ಣುಗಳು ಚನ್ನಾಗಿ ಹಿಡಿಯುವ ರೀತಿ ಗಾಳಿ ಬೆಳಕು ಸಲೀಸಾಗಿ ಆಡಲು ಅನುಕೂಲಿಸುತ್ತೆ. ಅಂದರೆ ವೃಕ್ಷದ ಫಲ ಬಿಡುವಿಕೆಯನ್ನು ಒಂದು ಕ್ರಮಕ್ಕೆ ತರುವದೂ ಮತ್ತು ವೃಕ್ಷದಲ್ಲಿನ ಮರದ ಅಂಶವನ್ನು ವೃದ್ಧಿಪಡಿಸುವದೇ ಈ ಕಸಿ ಮಾಡುವದರ ಮುಖ್ಯೋದ್ದೇಶವೆಂದು ಸಂಕ್ಷೇಪವಾಗಿ ಹೇಳಬಹುದು. ಫಲವೃಕ್ಷಗಳ ಬೆಳವಳಿಕೆಯಲ್ಲಿ ಸಮ್ಮತವಾದ ಕೆಲವು ತತ್ವಗಳಿರುತ್ತವೆ. ಅವನ್ನು ಈಕೆಳಗೆ ಸಂಕ್ಷೇಪವಾಗಿ ಸೂಚಿಸುತ್ತೇವೆ.

(೧) ಗಿಡ ಅಥವ ಮೊಳಿಕೆಯ ಎಲೆಗಳು ಅಗಲವಾಗಿದ್ದಹಾಗೆಲ್ಲಾ ಇದರ ಬೆಳವಳಿಕೆಯಲ್ಲಿ ಹುಲುಸು ಹೆಚ್ಚುತ್ತದೆ. ಹೇಗಂದರೆ, ಗಿಡಕ್ಕೆ ಎಲೆಗಳೇ ಶ್ವಾಸಕೋಶ ಮತ್ತು ಅನ್ನಕೋಶಗಳಾಗಿರುವಕಾರಣ ಯಾವ ಗಿಡಕ್ಕೆ ಆಹಾರ ಹೆಚ್ಚಾಗಿ ಒದಗಿ ಜೀರ್ಣಶಕ್ತಿಯೂ ಹೆಚ್ಚಾಗಿರುತ್ತದೆಯೋ ಆ ಗಿಡವು ಕೇವಲ ಹುಲುಸಾಗಿ ಬೆಳೆಯುತ್ತದೆ. ಗಿಡದ ಬೆಳವಳಿಕೆಯ ಕಾಲದಲ್ಲಿ ಕಸಿ ಮಾಡುವ ಕ್ರಮವನ್ನನುಸರಿಸುವಾಗ ಈ ಅಂಶವನ್ನು ನೆನಪಿನಲ್ಲಿಡಬೇಕು.

(೨) ಕುಡಿಯು ಡೊಂಕಾಗಿಲ್ಲದೆ ನೆಟ್ಟಗೆ ಇದ್ದಹಾಗೆಲ್ಲಾ ಗಿಡವು ಬೆಳವಳಿಕೆಯಲ್ಲಿ ಬಲವಾಗುತ್ತದೆ. ಹ್ಯಾಗಂದರೆ, ಗಿಡದಲ್ಲಿನ ರಸವು ಯಾವಾಗಲೂ ಕುಡಿಯ ಎತ್ತರವಾದ ಭಾಗಕ್ಕೆ ಏರುತ್ತದೆ.

(೩) ಕುಡಿಯು ಬಗ್ಗಿ ನೆಲಸಮನಾಗಿ ಬೆಳೆದಹಾಗೆಲ್ಲಾ ಇದರ ಬಲವು ಕುಂದುತ್ತದೆ. ಮೇಲೆ ಹೇಳಿದ ಕಾರಣವೇ ಇದಕ್ಕೂ ಅನ್ವಯಿಸು

* ಸೆಂಟ್ರಲ್ ಪ್ರಾವಿನ್ಸಸ್ ಅಗ್ರಿಕಲ್ಚರ್ ಗೆಜೆಟ್, ಮಾರ್ಚ್—೧೯೧೮.

ತ್ತದೆ. ಗಿಡವನ್ನು ಹಣ್ಣಿಗಾಗಿ ಬೆಳೆಸಬೇಕೇ ಅಥವಾ ಅದರಲ್ಲಿನ ಮರ ಬಲವಾಗುವಂತೆ ಬೆಳೆಸಬೇಕೇ ಎಂಬುವದನ್ನು ನಿರ್ಧರಿಸಿಕೊಂಡು ಅದಕ್ಕನುಸಾರವಾಗಿ ಮೇಲೆ ಹೇಳಿದ ಎರಡು ಅಂಶಗಳನ್ನು ನೆನಪಿನಲ್ಲಿಟ್ಟುಕೊಂಡು ತಕ್ಕ ಚಿಗುರುಗಳನ್ನು ಆರಿಸಬೇಕು. ಕುಡಿಗಳು ನೆಟ್ಟಗಿರುವ ಗಿಡಗಳು ಸಾಧಾರಣವಾಗಿ ಬಲವಾದ ಮರವಾಗಿ ಬೆಳೆಯುತ್ತದೆ. ಬಗ್ಗಿರುವವು ಹೆಚ್ಚು ಫಲ ಬಿಡುವವುಗಳಾಗುತ್ತವೆ. ಅಂದರೆ ಫಲ ಬಿಡುವದಕ್ಕೆ ಗಿಡದ ಸಾಮಾನ್ಯ ಬಲಹೀನತೆಯೇ ಕಾರಣವೆಂದು ಹೇಳಬಹುದು.

(೪) ಒಂದು ರೆಂಬೆಯಲ್ಲಿ ಕುಡಿಗಳು ಕಡಿಮೆಯಾಗಿದ್ದಹಾಗೆಲ್ಲಾ ಇದರಲ್ಲಿ ಹೊರಟ ಚಿಗರು ಬಲವಾಗಿರುತ್ತದೆ. ಗಿಡದ ತುದಿಗಳನ್ನು ಬಹಳ ಸವರುವದರಿಂದ ಇದರಲ್ಲಿನ ಮರದ ಅಂಶವು ಬಲವಾಗಿ ಬೆಳೆಯುತ್ತದೆ. ಸ್ವಾಭಾವಿಕವಾಗಿ ಗಿಡದ ತುದಿ ಮತ್ತು ಬೇರು ಒಂದಕ್ಕೊಂದು ಸಾರವನ್ನು ಒದಗಿಸುತ್ತೆ. ಇಂಥಾದ್ದರಲ್ಲಿ, ಇದ್ದಕ್ಕಿದ್ದಹಾಗೆ ಗಿಡದ ತಲೆಯನ್ನು ಸವರಿದರೆ ಉಳಿದ ಕುಡಿಗಳು ಬುಡದಿಂದ ಹೆಚ್ಚಾಗಿ ಬರುವ ರಸವನ್ನು ಉಪಯೋಗಿಸಿಕೊಳ್ಳುತ್ತವೆ. ಈ ಕಾರಣದಿಂದಲೇ ಹೊಸದಾಗಿಟ್ಟ ಗಿಡವನ್ನು ಕಸಿ ಮಾಡುವದರಲ್ಲಿ ಇದರ ತಲೆಯನ್ನು ಸವರುವ ಮೂಲಕ ಕುಡಿಗಳನ್ನು ಕಮ್ಮಿ ಮಾಡುತ್ತಾರೆ.

(೫) ಬೇರು ಹರಡಿಕೊಳ್ಳುವದನ್ನು ಕಮ್ಮಿ ಮಾಡಿದಹಾಗೆಲ್ಲಾ ಗಿಡದ ಮೇಲ್ಭಾಗದ ಬೆಳವಣಿಗೆಯು ಕಮ್ಮಿಯಾಗುತ್ತದೆ. ಈ ಕಾರಣದಿಂದಲೇ ವಿಶೇಷವಾಗಿ ಬೆಳೆದು ಫಲ ಬಿಡದಿರುವ ಗಿಡಗಳ ಬೇರುಗಳನ್ನು ಕತ್ತರಿಸುತ್ತಾರೆ. ಎಳೆ ಸಸಿಗಳನ್ನು ಬೇರೇಕಡೆ ಹಾಕುವದಕ್ಕಾಗಿ ಅಗೆದಿಂದ ತೆಗೆಯುವಾಗ ಅನೇಕವಾಗಿ ಬೇರುಗಳು ಅಲ್ಲಲ್ಲೇ ಮುರಿದುಹೋಗುತ್ತವೆ. ಇವಕ್ಕೆ ಸರಿಯಾಗಿ ಸಸಿಯ ತಲೆಯನ್ನು ಸವರದೇ ಹೋದರೆ ಮುಂದೆ ಗಿಡದ ಬೆಳವಣಿಗೆಯು ಕೆಡುತ್ತದೆ.

(೬) ಗಿಡಗಳಲ್ಲಿ ಒಂದೆ ಮಟ್ಟದಲ್ಲಿ ಚಿಗುರುಗಳೊಡೆಯದೆ ಮೇಲೆ ಕೆಳಗೆ ಒಡದಿದ್ದರೆ ಮೇಲಿನ ಕುಡಿಗಳು ಗಿಡದಿಂದ ರಸವನ್ನು ವಿಶೇಷವಾಗಿ ಹೀರಿ ಕೆಳಗಿನ ಕುಡಿಗಳಿಗಿಂತಲೂ ಜಾಗ್ರತೆ ವೃದ್ಧಿಹೊಂದುತ್ತವೆ. ಇಂಥಾ ಸಂದರ್ಭಗಳಲ್ಲಿ ಈರೀತಿ ಬೆಳೆಯುವ ಮೇಲಿನ ಕುಡಿಗಳನ್ನು ಜಿಗಟುವ

ವಾಡಿಕೆ ಇದೆ. ಹೀಗೆ ಮಾಡುವದರಿಂದ ಕೆಳಗಣ ಕುಡಿಗಳು ಬಲವಾಗಿ ಬೆಳೆಯುತ್ತವೆ.

(೭) ಗಿಡಗಳಲ್ಲಿ ಎಲೆಗಳು ಹೊರವಾಗಿ ಬೆಳೆದಹಾಗೆಲ್ಲಾ ಫಲ ಬಿಡುವದು ಕಮ್ಮಿ. ಅಂದರೆ ವೃಕ್ಷವು ಬಹಳ ಸೊಂಪಾಗಿ ಬೆಳೆಯುತ್ತಿದ್ದರೆ ಇದರಲ್ಲಿ ಹಣ್ಣು ಬಿಡುವದು ಕಮ್ಮಿ. ಇದರಿಂದ ಗಿಡದಲ್ಲಿ ಫಲ ಬಿಡುವ ಸ್ವಭಾವವು ಮೇಲೆ ಹೇಳಿದಂತೆ ಅದರ ಬಲಹೀನತೆಯಿಂದ ಉಂಟಾಗುತ್ತದೆಂಬುದು ವ್ಯಕ್ತವಾಗುತ್ತದೆ. ಈ ಅಂಶವನ್ನು ಸಾಮಾನ್ಯವಾಗಿ ಕಿತ್ತಲೆ ಗಿಡಗಳಲ್ಲಿ ನೋಡಬಹುದು. ಈ ಗಿಡದಲ್ಲಿ ಹಣ್ಣು ಅತಿಯಾಗಿ ಬಿಟ್ಟರೆ ಇದು ಗಿಡ ಕೆಡಲು ಶುರುವಾಗಿರುವದಕ್ಕೆ ಚಿಹ್ನೆಯೆಂದು ಸಾಮಾನ್ಯವಾಗಿ ತಿಳಿಯುತ್ತಾರೆ.

(೮) ಗಿಡದಲ್ಲಿ ಹಣ್ಣುಗಳು ಎಷ್ಟು ಕಮ್ಮಿ ಬಿಡುತ್ತವೋ ಅವು ಅಷ್ಟು ಗಾತ್ರವಾಗುತ್ತವೆ; ಮತ್ತು ಅವಕ್ಕೆ ಒಳ್ಳೇ ಬೆಲೆಯೂ ದೊರೆಯುವದುಂಟು. ಆದ್ದರಿಂದಲೆ ಹಣ್ಣು ಹಂಪಲು ಬೆಳೆಯತಕ್ಕವರು ಗಿಡದಲ್ಲಿ ವಿಶೇಷ ಹೀಚು ಬಿಟ್ಟಿದ್ದರೆ, ಅವು ಎಳೇದಾಗಿರುವಾಗಲೇ ಉದುರಿಸಿ ಕಮ್ಮಿ ಮಾಡುತ್ತಾರೆ. ಕಸಿ ಮಾಡುವ ಉದ್ದೇಶವೂ ಹೀಗೆಯೇ ಇರುತ್ತೆ. ಫಲ ಬಿಡುವ ಭಾಗಗಳನ್ನು ಕಡಿಮೆಮಾಡುವದರಿಂದ ಉಳಿದವುಗಳಿಗೆ ಸಸ್ಯಾಹಾರವು ಹೆಚ್ಚಾಗಿ ಒದಗುತ್ತದೆ.

---

## Government Orders.
## ಸರ್ಕಾರಿ ಹುಕುಂಗಳು.

ನಂ. ರೆ. 9058—67—ವ್ಯ. 175—08—11.

ತಾರೀಖು 1ನೆ ಮೇ 1909.

ಕೆರೆಯಲ್ಲಿ ನೀರು ಇಲ್ಲದೆ ಸುತ್ತಮುತ್ತಲೂ ಇರುವ ಜಮೀನಿನಲ್ಲಿ ತಂಪು ಆರಿಹೋದದ್ದರಿಂದ ಕೆರೆಯ ಜೌಗು ಆಸರೆಯ ಜಮೀನುಗಳಿಗೂ ಅರ್ಧ ತರೀ ಕಂದಾಯವನ್ನು ಸೋಡಿ ಬಿಡಬೇಕೇ ಎಂಬ ವಿಚಾರದಲ್ಲಿ ಗೌರ್ನಮೆಂಟಿನವರು ಹುಕುಂ ಮಾಡಿರುವದೇನಂದರೆ.—ಕೆರೆಯ

ಜಾಗಿನ ಆಸರೆಯ ಮೇಲೆ ಅಥವಾ ಜಮೀನಿನ ಒಳಗಿರುವ ತೇವಿನ ಆಧಾ
ದಮೇಲೆ ಸಾಗುವಳಿಯಾಗತಕ್ಕ ಜಮೀನುಗಳಲ್ಲಿ ತರಿ ಫಸಲನ್ನು ಇಡುತ್ತಾ
ಇದೆ ಎಂತಲೂ ಅಂಥಾ ಜಮೀನುಗಳನ್ನು ತರಿ ಜಮೀನುಗಳಾಗಿ ತರಗತಿ
ವಿಂಗಡಿಸಿದೆ ಯೆಂತಲೂ ಸರ್ಕಾರದವರು ಭಾವಿಸುತ್ತಾರೆ. ಸಮೃದ್ಧಿಯಾ
ಮಳೆಯಾದಾಗ್ಯೂ ಹೀಗೆ ತರಿ ಪೈರುಗಳನ್ನು ಇಡಬಹುದಾದಾಗ್ಯೂ ಕೆಲ
ಸಂದರ್ಭಗಳಲ್ಲಿ ಅವುಗಳನ್ನು ಖುಷ್ಕಿ ಜಮೀನುಗಳಾಗಿಯೇ ತರಗತಿ ವಿ
ಗಡಿಸಿ ಖುಷ್ಕಿ ಪೈರುಗಳನ್ನೆ ಇಡುತ್ತಾ ಇದೆ. ಪ್ರಕೃತ ಸಂದರ್ಭದಲ್ಲಿ
ಆಕಾರಬಂದಿನಲ್ಲಿ ಈ ಜಮೀನನ್ನು ಯಾವ ತರಗತಿಗೆ ಸೇರಿಸಿದೆಯೋ ಅ
ದಕ್ಕನುಸಾರವಾಗಿ ಈ ವಿಚಾರದಲ್ಲಿ ಜಾರೀಲಿರುವ ಸರ್ಕಾರಿ ಹುಕುಮಿನ
ತೆ ರಿಯಾಯಿತಿ ತೋರಿಸತಕ್ಕದ್ದು.

---

## Tobacco.

## ಹೊಗೇಸೊಪ್ಪು.

ನಿಯಾಡ್ ಅಗ್ರಿಕಲ್ಚರಲ್ ಸ್ಟೇಷನ್‌ನಲ್ಲಿ ಈ ಪೈರು ಇಟ್ಟು ಅ
ಮಾಯಿಷಿ ಮಾಡಲಾಯಿತು. ಇದರಲ್ಲಿ ಕಂಡು ಬಂದ ಫಲಿತಾಂಶಗಳನ್ನು
ಇಲ್ಲಿ ಸೂಚಿಸುತ್ತೇವೆ. ಹಸುರು ಗೊಬ್ಬರವನ್ನೆ ಸಂತತವಾಗಿ ಈ ಪೈರಿಗ
ಉಪಯೋಗಿಸಿದ್ದರಲ್ಲಿ ಹೊಗೇಸೊಪ್ಪು ಚನ್ನಾಗಿ ಆಗಲಿಲ್ಲ. ಇದರಿಂದ
ಈ ಗೊಬ್ಬರವನ್ನು ಪ್ರತಿ ವರ್ಷವೂ ಉಪಯೋಗಿಸಕೂಡದೆಂಬದು ವ್ಯ
ಕ್ತಪಡುತ್ತದೆ. ಹಿಂದಿನ ೨ ವರುಷಗಳು ಸಣಬಿನ ಪೈರನ್ನೇ ಗೊಬ್ಬರ
ವಾಗಿ ಬೆಳೆಸಿದ್ದರಲ್ಲಿ ಹೊಗೇಸೊಪ್ಪು ಉತ್ಪತ್ತಿ ಚನ್ನಾಯಿತು. ಆದರೆ
ಈವರುಷ ಉತ್ಪತ್ತಿ ಕಮ್ಮಿ. ಸಸಿಗಳು ನಾಟಿ ಹಾಕಿದಾಗ ಬಾಡಿಹೋ
ಗುವಹಾಗೆ ಕಂಡುಬಂತು. ಸ್ವಲ್ಪ ಪ್ರದೇಶಕ್ಕೆ ನೀರು ಹಾಯಿಸಿ ನೋ
ಡಿದ್ದರಲ್ಲಿ ಇದರಿಂದಲೂ ಏನೂ ಪ್ರಯೋಜನ ಕಂಡುಬರಲಿಲ್ಲ. ಇನ್ನ
ಪೈರು ಕೆಟ್ಟೇಹೋಯಿತು. ಹೀಗೆ ಹೊಗೇಸೊಪ್ಪು ಪೈರು ಕೆಡುವುದ
ಕ್ಕೆ ಮೂರು ಕಾರಣಗಳನ್ನು ಹೇಳಬಹುದು.

(೧) ಸಣಬಿನ ಹಸುರು ಗೊಬ್ಬರದಲ್ಲಿ ಹೊಗೇಸೊಪ್ಪಿನ ಸೊ
ಯು ಅಭಿವೃದ್ಧಿ ಹೊಂದಲು ಅವಶ್ಯವಾದ ಸಾರಪದಾರ್ಥವು ಕಮ್ಮಿಯಾ
ರಬೇಕು.

(೨) ಸಣಬಿನಿಂದ ಸೊಪ್ಪಿನ ಅಭಿವೃದ್ಧಿಗೆ ಪ್ರತಿಕೂಲವಾದ ಪದಾರ್ಥಗಳು ಭೂಮಿಯಲ್ಲಿ ಉಂಟಾಗಿರಬೇಕು.

(೩) ಸೊಪ್ಪಿನ ಗೊಬ್ಬರವನ್ನು ಪ್ರತಿ ಸಾಲಿನಲ್ಲಿಯೂ ಬೆಳೆಸುವದರಿಂದ ಭೂರಚನೆ (texture) ಬದಲಾಯಿಸಿ ಭೂಮಿಯಲ್ಲಿನ ತಂಪು ಅಥವಾ ಹಾಯಿಸಿದ ನೀರು ನಿಲ್ಲದೇ ಆರಿಹೋಗಿರಬೇಕು.

ಈವರೆಗೆ ಅನೇಕತರಹ ಗೊಬ್ಬರಗಳಿಟ್ಟು ಅಜಮಾಯಿಷಿ ಮಾಡಿದ್ದರಲ್ಲಿ ತಿಳಿದುಬಂದ ಅಂಶಗಳೇನೆಂದರೆ:—

(a) ಆಳವಾಗಿ ಉಳೋಣದರಿಂದ ಪ್ರತಿ ಅಜಮಾಯಿಷಿಯಲ್ಲಿಯೂ ಎಕರೆಗೆ ೧೨ ರಿಂದ ೨೧ ರೂಪಾಯಿವರಿಗೆ ಉತ್ಪತ್ತಿ ಜಾಸ್ತಿಯಾಯಿತು.

(b) ಬರೀ ಹರಳು ಹಿಂಡಿಯನ್ನೆ ಉಪಯೋಗಿಸಿದ್ದರಿಂದ ಎಕರೆ ಒಂದಕ್ಕೆ ೨೧ ರೂಪಾಯಿ ನಷ್ಟವೂ, ಅಮೋನಿಯಂ ಸಲ್ಫೇಟ್ ಉಪಯೋಗಿಸಿದ್ದರಿಂದ ಎಕರೆಗೆ ೪ ರೂಪಾಯಿ ನಷ್ಟವೂ ಉಂಟಾಯಿತು. ನೈಟರ್ (Nitre) ಗೊಬ್ಬರವನ್ನು ದನದ ಗೊಬ್ಬರದೊಂದಿಗೆ ಸೇರಿಸಿ ಉಪಯೋಗಿಸಿದ್ದರಲ್ಲಿ ಖರ್ಚು ಎದ್ದಿತು. ಹರಳು ಹಿಂಡಿಯೊಂದಿಗೆ ದನದ ಗೊಬ್ಬರವನ್ನು ಸೇರಿಸಿ ಉಪಯೋಗಿಸಿದಾಗ ಎಕರೆ ಒಂದಕ್ಕೆ ೨೩ ರೂಪಾಯಿ ಲಾಭವು, ಧನದ ಗೊಬ್ಬರದೊಂದಿಗೆ ಸೋಡಿಯಂ ನೈಟ್ರೇಟು ಸೇರಿಸಿ ಉಪಯೋಗಿಸಿದಾಗ ಎಕರೆ ಒಂದಕ್ಕೆ ೧ ರೂಪಾಯಿ ಲಾಭವು ಬಂತು.

(c) ಆಳವಾಗಿ ಉತ್ತ ತಾಕುಗಳಲ್ಲಿ ಫಸಲು ಅಧಿಕವಾದದ್ದಲ್ಲದೆ ಗೊಬ್ಬರವು ಅಧಿಕಪ್ರಯೋಜನವನ್ನು ಉಂಟುಮಾಡಿತು.

(d) ಸಾಮಾನ್ಯವಾಗಿ ಉತ್ತ ತಾಕಿನಲ್ಲಿ ವಿಧವಿಧವಾದ ಗೊಬ್ಬರಗಳು ಯಾವ ಪ್ರಯೋಜನಗಳನ್ನು ಉಂಟುಮಾಡಿದವೊ ಅದೇ ಪ್ರಯೋಜನಗಳು ಆಳವಾಗಿ ಉತ್ತ ತಾಕಿನಲ್ಲೂ ಕಂಡುಬಂದವು. ಆದರೆ ಪ್ರತಿ ಅಜಮಾಯಿಷಿಯಲ್ಲಿಯೂ ಆಳವಾಗಿ ಉತ್ತ ತಾಕಿನಲ್ಲಿ ಉತ್ಪತ್ತಿಯು ಹೆಚ್ಚಿರುತ್ತೆ.

ಇದರಿಂದ ನಾವು ತಿಳಿಯಬಹುದೆಂದರೆ:—ಒಳ್ಳೇ ವ್ಯವಸಾಯಮಾಡಿ ದನವಿನ ಗೊಬ್ಬರದ ಜೊತೆಗೆ ತಯಾರಿಸಿದ ಗೊಬ್ಬರವನ್ನು ಸೇರಿಸಿ ಉಪಯೋಗಿಸುವದು ಹೊಗೇಸೊಪ್ಪಿನ ಬೆಳೆಗೆ ಫಾಯಿದೆಕರ, ಖರ್ಚು

ಜಾತಿಯ ಎಕರೆಗೆ ನಿವಳ ಆದಾಯ ಹೆಚ್ಚಾಗಿಯೇ ಉಳಿಯುವದು. ದನಿ
ಸಗೊಬ್ಬರದ ಜೊತೆಗೆ ಪರಳು ಹಿಂಡಿ ಉಪಯೋಗಿಸುವದೆ ಆದಾಯಕ
ವೆಂದು ಕಂಡುಬರುತ್ತದೆ. ಪರಂತು ಈರೀತಿ ಇತರ ತಯಾರಿಸಿದ ಗೊ
ಬ್ಬರಗಳನ್ನು ವಿವೇಕವಾಗಿ ಉಪಯೋಗಿಸಿದಲ್ಲಿ ಈ ಸಂದರ್ಭಗಳಲ್ಲಿ
ಯೂ ಹೆಚ್ಚು ಆದಾಯವಾಗುವಂತೆ ಮಾಡಬಹುದು.

ಪ್ರಕೃತ ಸಾಲಿನಲ್ಲಿ ಹೊಗೇಸೊಪ್ಪಿಗೆ ಹದಮಾಡುವದರಲ್ಲಿ ಹೊ
ಸ ಕ್ರಮಗಳು ಅಜಮಾಯಿಷಿ ಮಾಡಲಾದವು. ಈ ಕ್ರಮಗಳಲ್ಲಿ ಎಲೆ
ಯನ್ನು ನೆರಳಿನಲ್ಲಿ ಒಣಗಿಸುವದೆ ಒಂದು ಮುಖ್ಯಾಂಶವಾಗಿರುತ್ತದೆ. ಈ
ರೀತಿ ಹದಮಾಡಿದ ಸೊಪ್ಪನ್ನು ಮಾದರಿಯಾಗಿ ಬೊಂಬಾಯಿಗೆ ಕಳುಹಿಸಿ
ದ್ದರಲ್ಲಿ ಪೌಂಡು ತೂಕಕ್ಕೆ ೫ ಆಣೆ ಬೆಲೆ ಕಟ್ಟಿರುತ್ತಾರೆ. ನಾಟುತರ
ಹೆ ಹದ ಕೊಟ್ಟರೆ ಪೌಂಡಿಗೆ ೧—೧|| ಆಣೆ ಬೆಲೆಯಾಗುತ್ತೆ.

---

## Notifications.

## ಇಸ್ತಿಹಾರ್‌ನಾಮೆಗಳು.

ನಂ. ೧೧೬೦೭ ತಾ|| ೧೧—೫—೧೯೦೯.

ಮೈಸೂರು ಸರ್ವಿಸ್ ರೆಗ್ಯುಲೇಷನ್ ೧೭೭ನೆ ಪ್ರಕರಣದಮೇರೆ
ತೀರ್ಥಹಳ್ಳಿ ತಾ|| ಆಕ್ಟಿಂಗ್ ಅಮಲ್ದಾರ್ ಮೆ|| ಶ್ರೀನರಸುಬ್ರಹ್ಮಣ್ಯಶಾಸ್ತ್ರಿಗ
ಳಿಗೆ ಅವರು ಉಪಯೋಗಿಸಿಕೊಳ್ಳುವ ತಾರೀಖು ಲಾಗಾಯ್ತು ೧೦ದಿನಗಳ
ಪ್ರಿವಿಲೇಜ್ ರಜಾ ಮಂಜೂರ್ಮಾಡಿರುತ್ತೆ.

ಅವರ ಗೈರ್‌ಹಾಜರಿಯಲ್ಲಿ ತಾಲ್ಲೂಕು ಶಿರಸ್ತೇದಾರ್ ಎ. ವಿ. ಶೇಷ
ದ್ರಿ ಅಯ್ಯಂಗಾರ್ರು ತಾಲ್ಲೂಕು ಛಾರ್ಜಿನಲ್ಲಿರತಕ್ಕದ್ದು.

---

## Sugar Cultivation in India. *

## ಇಂಡಿಯಾದೇಶದಲ್ಲಿ ಸಕ್ಕರೆ ತಯಾರಿ.

ಇಂಡಿಯಾದೇಶವು ಸಕ್ಕರೆ ತಯಾರಾಗುವ ದೇಶಗಳಲ್ಲೊಂದಾಗಿ ಇನ್ನೂ ಎಣಿಸಲ್ಪಟ್ಟಿರುವದಿಲ್ಲ. ಈ ದೇಶದಿಂದ ಸಕ್ಕರೆ ಇತರ ದೇಶಗಳಿಗೆ ರಫ್ತಾಗುವದಿಲ್ಲ. ಆದರೆ ಇಲ್ಲಿ ೫೦ ಲಕ್ಷ ಟನ್ ಕಚ್ಚಾ ಸಕ್ಕರೆ ಉತ್ಪತ್ತಿಯಾಗಿ ಸ್ಥಳದಲ್ಲಿಯೇ ಉಪಯೋಗಿಸಲ್ಪಡುತ್ತಿದೆ.

ಕೆಲವುಕಡೆ ಕಬ್ಬಿನ ಗದ್ದೆಗೆ ಎಕರೆಗೆ ೩೦-೪೦ ಟನ್ ದನವಿನ ಗೊಬ್ಬರವನ್ನು ಹಾಕುತ್ತಾರೆ. ಇತರಕಡೆಗಳಲ್ಲಿ ಸೊಪ್ಪಿನ ಗೊಬ್ಬರ ಮತ್ತು ತಯಾರಿಸಿದ ಗೊಬ್ಬರಗಳನ್ನೂ ಉಪಯೋಗಿಸುವದುಂಟು. ಅನೇಕ ಕಡೆಗಳಲ್ಲಿ ಸಗಣಿ ತಟ್ಟಿ ಒಲೆಗೆ ಉಪಯೋಗಿಸುವದರಿಂದ ಕಬ್ಬಿನ ಗದ್ದೆಗಳು ಗೊಬ್ಬರ ಸಾಲದೆ ಸೊರಗುತ್ತವೆ.

ಕೆಲವು ಕಡೆಗಳಲ್ಲಿ ಕಬ್ಬಿನ ಪೈರು ಬಲಿತು ಆಲೆಯಾಡುವದಕ್ಕೆ ಲಾಯಖಾಗಿರುವಾಗ ಕಡೇಸಾರಿ ಕಬ್ಬಿನ ಗದ್ದೆಗೆ ನೀರು ಹಾಯಿಸಿ ನೆನಸುತ್ತಾರೆ. ಇದರ ಉದ್ದೇಶವೇನೆಂದರೆ, ರಸವು ಸ್ವಲ್ಪ ನೀರಾಗಿ ಕಬ್ಬಿನಿಂದ ರಸವನ್ನು ಹಿಂಡುವದು ಸುಲಭವಾಗುತ್ತದೆ. ಇದು ಆಶ್ಚರ್ಯವಾದ ವಾಡಿಕೆ.

ಈ ದೇಶದಲ್ಲಿ ಒಂದು ಎಕರೆಯಲ್ಲಿ ೫ರಿಂದ ೫೦ ಟನ್ ಕಬ್ಬು ಉತ್ಪತ್ತಿಯಾಗುತ್ತದೆ. ಒಂದು ಟನ್ ಕಬ್ಬನ್ನು ೭೪ ರೂಪಾಯಿ ಲಾಗವಡಾಗಿಂತ ಕಡಿಮೆಯಾಗಿ ಬೆಳೆಯಲಾಗುವದಿಲ್ಲ.

ಎರಡು ಜೋಡಿ ಎತ್ತಿನಿಂದ ಲಂಬವಾಗಿ ತಿರುಗುವ ಮೂರು ಕಣೆಗಳುಳ್ಳ ಕಬ್ಬಿಣದ ಗಾಣದಲ್ಲಿ ಆಲೆ ಯಾಡಿದರೆ ಒಂದು ದಿನದ ಸಾಮಾನ್ಯವಾಗಿ ಕೆಲಸ ಮಾಡುವ ಹೊತ್ತಿನಲ್ಲಿ ಮೃದುವಾದ ಕಬ್ಬಾದರೆ ೪೨೦೦ ಪೌಂಡು ತೂಕದ ರಸವು, ಗಟ್ಟಿಯಾದ ಕಬ್ಬಾದರೆ ಇದರಲ್ಲಿ ಅರ್ಧವು ಇಳಿಯುತ್ತದೆ. ಎಂಜಿನ್ ಬಲದಿಂದ ನಡೆಯುವ ಅಡ್ಡಲಾಗಿ ತಿರಗುವ ಕಣೆಗಳುಳ್ಳ ಹೊಸತರಹ ಗಾಣಗಳಿಂದ ಹೆಚ್ಚು ರಸ ಒದಗುತ್ತದಲ್ಲದೆ ಕಬ್ಬಿನಿಂದ ಇತರ ಗಾಣಗಳಲ್ಲಿ ಹಿಂಡಲ್ಪಡುವದಕ್ಕಿಂತಲೂ ಶೇಕಡಾ ೧೦ರಷ್ಟು ರಸವು ಹಿಂಡಲ್ಪಡುತ್ತದೆ.

---

* ಇಂಡಿಯನ್ ಟ್ರೇಡ್ ಜರ್ನಲ್ ೬-೫-೦೯.

## Occasional Notes.

## ವಿವಿಧ ವೃತ್ತಾಂತಗಳು.

೧. ೧೯೧೯ನೆ ಏಪ್ರಿಲ್ ೧ನೆ ತಾರೀಖಿನ ಸಂಚಿಕೆಯೊಂದಿಗೆ ವ್ಯವಸಾಯ ಸಂಘಗಳ ವಿಚಾರವಾದ ಒಂದು ಸಣ್ಣ ಪುಸ್ತಕವನ್ನು ಸಪ್ಲಿಮೆಂಟಾಗಿ ರವಾನಿಸಿರುವದು ಸರಿಯಷ್ಟೆ. ಈ ಪುಸ್ತಕವು ಕಡೂರ್ ಡಿಸ್ಟ್ರಿಕ್ಟ್ ಅಗ್ರಿಕಲ್ಚರಲ್ ಅಸೋಸಿಯೇಷನ್ ಸೆಕ್ರೆಟರಿಯವರಾದ ಚಿಕ್ಕಮಗಳೂರು ಸಬ್‌ರಿಜಿಸ್ಟ್ರಾರ್ ಮೆ|| ರಾಮದಾಸಪ್ಪನವರಿಂದ ರಚಿಸಲ್ಪಟ್ಟದ್ದು. ಈ ಸಂಗತಿಯನ್ನು ಇದರಲ್ಲಿ ನಮೂದಿಸದೇ ಇದ್ದದ್ದಕ್ಕಾಗಿ ವಿಷಾದಿಸುತ್ತೇವೆ.

———o———

೨. ಕಿತ್ತಳೆಗಿಡಕ್ಕೆ ಎರಡು ತರಹೆ ದುಂಬಿಗಳು ಹತ್ತುತ್ತವೆ. ಹೆಣ್ಣು ದುಂಬಿಯು ತೊಗಟೆಯ ಮೇಲೆ ಮೊಟ್ಟೆಗಳಿಡುತ್ತದೆ. ಇದರಲ್ಲಿ ಹೊರಟ ಹುಳಗಳು ಕೆಲವು ಕಾಲ ತೊಗಟೆಯ ಮೇಲೆ ಜೀವಿಸಿ ನಂತರ ಕಾಂಡವೊಳಗೆ ಕೊರೆಯುತ್ತವೆ. ಇವು ಕಾಂಡವೊಳಗೆ ವಾಸವಾಗಿದ್ದು ಹೊರಗೆ ಬರುವಷ್ಟರೊಳಗೆ ಗಾತ್ರನಾಗಿ ಬೆಳೆದು ನಂತರ ದುಂಬಿಗಳಾಗಿ ಹೊರಗೆ ಬರುತ್ತವೆ. ಮರದ ಕಾಂಡದಲ್ಲಿನ ರಂಧ್ರದಿಂದ ಮರದ ಪುಡಿಯಂತೆ ಕಾಣು ಬರುವ ಒಂದು ತರಹೇ ಹಿಟ್ಟು ಕೆಲವುವೇಳೆ ಹೊರಗೆ ಬರುತ್ತದೆ. ಇದರಿಂ ಒಳಗೆ ದುಂಬಿ ಇರುವದನ್ನು ತಿಳಿದುಕೊಳ್ಳಬಹುದು. ಪ್ರತಿಸಾಲಿನಲ್ಲಿಯೂ ಅನೇಕ ಕಿತ್ತಳೆ ಮರಗಳು ಇದರ ಕಾಟದಿಂದ ನಾಶವಾಗುತ್ತಿವೆ.

ಪರಿಹಾರಗಳು.—ರಂಧ್ರಗಳಲ್ಲಿರುವ ಹುಳಗಳನ್ನು ಒಂದು ಬಗ್ಗಿಸಿದ ತಂತಿಯಿಂದ ಕೊಂದುಹಾಕಬೇಕು. ಇಲ್ಲವಾದರೆ ರಂಧ್ರದಲ್ಲಿ ಕಾರ್ಬನ್ ಬೈಸಲ್ಫೈಡ್ ಧೃತಿ (Carbon bisulphide) ಅಥವಾ ಕೆರೋಸೀನ್ ಎಣ್ಣೆ ಅಥವಾ ಯಾವದಾದರೂ ಒಂದು ವಿಷದ ಧೃತಿಯನ್ನು ರಂಧ್ರದೊಳಗೆ ಸುರಿದು ಅದನ್ನು ಜೇಡಿಮಣ್ಣಿನಿಂದಾಗಲಿ ಅಥವಾ ಟಾರ್ ಎಣ್ಣೆಯಿಂದಾಗಲಿ ಮುಚ್ಚಿಬಿಡಬಹುದು.—ಇಂಡಿಯನ್ ಅಗ್ರಿಕಲ್ಚರಿಸ್ಟ್-೧-೬-೧೯.

———o———

೩. ಈಚೆಗೆ ಪೆನ್ಸಿಲ್ವೇನಿಯ ರಾಜ್ಯದಲ್ಲಿ ಸ್ಥಳದಿಂದ ಸ್ಥಳಕ್ಕೆ ಸಂಚಾರಮಾಡಿ ವ್ಯವಸಾಯ ಸಂಬಂಧವಾದ ಸಂಗತಿಗಳನ್ನು ಜನಗಳಿಗೆ ಬೋಧಿಸುವ ಒಂದು ಕ್ರಮವು ಏರ್ಪಾಡಾಗಿದೆ. ಇದರಿಂದ ಬಹಳ ಅನುಕೂಲ ಕಂಡುಬಂದು ಈ ಕ್ರಮವು ಅನೇಕ ಕಡೆ ರೂಢಿಯಲ್ಲಿ ಬರುತ್ತಿದೆ. „ಫಾರ್ಮರ್ಸ್ ಸ್ಪೆಷಲ್'' (Formers' Special) ಎಂಬ ರೈತರ ಉಪಯೋಗಕ್ಕಾಗಿಯೇ ಒಂದು ರೈಲುಗಾಡಿಯು ಏರ್ಪಟ್ಟು ಅದರಲ್ಲಿ ಆರು ಜನ ವ್ಯವಸಾಯ ಶಾಸ್ತ್ರಜ್ಞರು ಪ್ರಯಾಣಮಾಡಿ ಅಲ್ಲಲ್ಲಿ ಮೊಕ್ಕಾಂ ಮಾಡುತ್ತಾರೆ. ಇವರುಗಳು ಮೊಕ್ಕಾಂ ಮಾಡಿದ ವೇಳೆ ಧಾನ್ಯ ಬೆಳೆಯುವದು ದನಗಳ ಸಾಕುವಿಕೆ, ಗೊಬ್ಬರ ಹಾಕುವುದು, ಮುಂತಾದ ವಿಷಯಗಳಲ್ಲಿ ರೈತರಿಗೆ ಉಪಯೋಗವಾಗಿರುವಂತೆ ಸಣ್ಣ ಉಪನ್ಯಾಸಗಳನ್ನು ಮಾಡಿದರು. ಈ ಸ್ಪೆಷಲ್ ಗಾಡಿ ಬರುವ ವೇಳೆಯನ್ನು ರೈತರಿಗೆ ಮುಂದಾಗಿ ತಿಳಿಸಿತ್ತು. ಇವರು ಈ ಗಾಡಿ ನಿಲ್ಲುವ ಸ್ಥಳಕ್ಕೆ ಅನೇಕವಾಗಿ ಬಂದಿದ್ದರು. ೧೯—೨೦ ವಯಸ್ಸಿನವರು ಮೊದಲುಗೊಂಡು ಮುದುಕರು ಕೂಡಿ ಸುಮಾರು ಮೂರುಸಾವಿರ ರೈತರಿಗೆ ಕಡಮೆ ಇಲ್ಲದೆ ಈ ಉಪನ್ಯಾಸಗಳನ್ನು ಕೇಳುವದಕ್ಕೆ ಬಂದಿದ್ದರಂತೆ. ಇಂಡಿಯನ್ ಅಗ್ರಿಕಲ್ಚರಿಸ್ಟ್ ೧-೫-೦೯.

———o———

೪. ವಿಶೇಷವಾಗಿ ಭತ್ತದ ಪೈರನ್ನೇ ಇಡುವ ಡಿಸ್ಟ್ರಿಕ್ಟುಗಳಲ್ಲಿ ಪರಿವರ್ತನೆ ಕ್ರಮದಿಂದ ಪೈರಿಡುವದು ಬಹಳ ಫಾಯಿದೆಕರವೆಂದು ಕಂಡುಬಂದಿದೆ. ಸಿಲೋನ್ ದೇಶದ ಪೆಲಮಾಡ ಪ್ರಾಂತ್ಯದಲ್ಲಿ ನೀರು ಸಾಲದೇ ಭತ್ತದ ಗದ್ದೆಗಳಲ್ಲಿ ಎಲ್ಲಾ ಕಾಲಗಳಲ್ಲಿಯೂ ಭತ್ತದ ಪೈರಿಡುವದಕ್ಕೆ ಸಾಧ್ಯವಾಗುವುದಿಲ್ಲವಾದಕಾರಣ ಹುಲ್ಲು ಬೆಳಸಿ ಬಂಜರು ಬಿಡುವದಕ್ಕೆ ಬದಲಾಗಿ ರೈತರು ಮೊದಲು ಗೆಣಸು ಪೈರು ತೆಗೆದುಕೊಂಡು ಪುನಃ ಹುರಳಿ ಪೈರನ್ನಿಡುತ್ತಾರೆ. ಈ ಹುರಳಿ ಪೈರಿಟ್ಟು ಉತ್ತು ಬಿಡುವದರಿಂದ ಗದ್ದೆಯಲ್ಲಿ ಸಾರಜನಕವಾದ ನೈಟ್ರೊಜನ್ ಪದಾರ್ಥವು (Nitrogen) ವೃದ್ಧಿಯಾಗುತ್ತದೆ. ಜಾವಾದ್ವೀಪದಲ್ಲಿ ಭತ್ತದ ಕುಯಿಲು ಆದಕೂಡಲೇ ಗದ್ದೆಯನ್ನು ಪುನಃ ನೆನೆಸಿ ಗೊಬ್ಬರ ಸಹಿತ ಅಥವಾ ಗೊಬ್ಬರವಿಲ್ಲದೆ ನೆಲ್ಲಹುಲ್ಲು ಹಾಕಿ ಉತ್ತು ತರಕಾರಿ ಬೆಳೆಯುತ್ತಾರೆ. ಈ ವಿಧಾನವನ್ನು ಅನುಸರಿಸುವದ

ರಿಂದ ಗ್ರಾಮಾಂತರಗಳಲ್ಲಿ ಆಹಾರ ಪದಾರ್ಥಗಳ ಸಾಗಾಣಿಕೆಯನ್ನು ಹೆಚ್ಚಿಸ...
ಬಹುದು. ಇಲ್ಲವಾದರೆ ಜನಗಳಿಗೆ ಮೇವು ಹೆಚ್ಚಾಗಿ ...ಗುವ ರೀತಿ ಬೆ...
ಪೈರನ್ನಾದರೂ ಇಡಬಹುದು. ... ಒದಗಿಸುವ ... 
ವರೆ ಮೊದಲಾದ ಪೈರುಗಳನ್ನು ಬೆಳೆಯೂ ಒಳ್ಳೇದು.—... 
ಕಲ್ಚರಿಸ್ಟ್, ೧—೯—೦೮.

---

೫. ಗಿರಾಕಿಗೆ ತಕ್ಕಷ್ಟು ಹಸನು ತುಪ್ಪ ದೊರೆಯದೇ ಇದರ ಧಾರ...
ಹೆಚ್ಚಿರುತ್ತೆ. ಈ ಕಾರಣದಿಂದ ಜನರು ನಾತದ ತುಪ್ಪವನ್ನು ಕೊ...
ಉಪಯೋಗಿಸಲು ಅವಕಾಶವಾಗಿರುತ್ತೆ. ಈಚೆಗೆ ಸುಮಾರು ೧೫ ವರು...
ಗಳಿಂದಲೂ ಅಮೇರಿಕಾ ದೇಶದಲ್ಲಿ ನೆಲಗಡ್ಲೆಯಿಂದ ಬೆಣ್ಣೆಯನ್ನು ತೆ...
ಯುತ್ತಲಿದಾರೆ. ಈ ಉದ್ಯೋಗವು ಅಲ್ಲಿ ಬಹಳ ವೃದ್ಧಿ ಹೊಂದುತ್ತ...
ಇದನ್ನು ನೋಡಿದರೆ ನೆಲಗಡ್ಲೆಯ ಬೆಣ್ಣೆಯು ಬೇಹಕ್ಕೆ ಆರೋಗ್ಯಕ...
ವಾದದ್ದೆಂದು ದೃಢಪಡುತ್ತದೆ. ಆದಕಾರಣ ಇಂಡಿಯಾದೇಶದಲ್ಲಿ ನೆಲಗಡ್ಲೆ...
ಯು ವಿಶೇಷವಾಗಿ ಬೆಳೆದು ಪರಸ್ಥಳಗಳಿಗೆ ರಫ್ತಾಗುತ್ತಿರುವದರಿಂದ ಬೆಣ್ಣೆ...
ತೆಗೆಯುವ ಈ ಹೊಸ ಕಸಬನ್ನು ಇಲ್ಲೇ ಸ್ಥಾಪಿಸುವದು ಅದಾಯಕ...
ಮೊದಲು ಅಜಮಾಯಿಷಿ ಬಗ್ಗೆ ಬೆಣ್ಣೆ ಈರೀತಿ ತಯಾರು ಮಾಡಿನೋಡ...
ಹುದು. ಬೀಜವನ್ನು ಚನ್ನಾಗಿ ಹುರಿದು ಹೊಟ್ಟು ತೆಗೆದು ಒರಳಿನಲ್ಲಿ ನ...
ಣ್ಣಗೆ ಕುಟ್ಟುವದರಿಂದ ಬೆಣ್ಣೆಯಂತೆ ಆಗುತ್ತೆ. ಇದು ಅಡಿಗೆಯಲ್ಲಿ ಉ...
ಪಯೋಗಿಸುವದಕ್ಕೆ ಲಾಯಖಾಗಿರುತ್ತೆ. ಈ ಕಸಬನ್ನು ... 
ನಡೆಸಿ ವ್ಯಾಪಾರ ಮಾಡಬೇಕಾದರೆ ಅಮೇರಿಕಾದೇಶದಲ್ಲಿ ರೂಢಿಯಲ್ಲಿರು...
ತಕ್ಕ ಯಂತ್ರಗಳನ್ನು ಪಯೋಗಿಸಬಹುದು. ಇದರ ಕ್ರಯ ಸುಮಾ...
೧,೬೦೦ ರೂಪಾಯಿ ಆಗುತ್ತೆ.—...

---

V. B. Soobbiah & Sons, Printers, Bangalore.—1909.

THE MYSORE

# REVENUE & AGRICULTURAL GAZETTE.

ವಾಲ್ಯುಂ ೩.] ಮಂಗಳವಾರ, ೧ನೆ ಜೂನ್ ೧೯೦೯. [ನಂ. ೧೫.

## *Contents.*



## ಅನುಕ್ರಮಣಿಕೆ.



## Dairy Farming. *

## ದನಗಳನ್ನು ಸಾಕುವದು ಮತ್ತು ಬೆಣ್ಣೆ ತಯಾರಿ.

ಮನುಷ್ಯನ ಆರೋಗ್ಯಕ್ಕೆ ಶುಚಿಯಾದ ಹಾಲು ಮತ್ತು ಬೆಣ್ಣೆ ಅವಶ್ಯಕವಾದ್ದರಿಂದ ಉತ್ತಮ ಕ್ರಮದಲ್ಲಿ ಕ್ಷೀರಾಗಾರವನ್ನು ಏರ್ಪಡಿಸು

ವದು ಅವಶ್ಯಕ. ಮನುಷ್ಯ ದೇಹದ ಪೋಷಣೆಗೆ ಬೇಕಾದ ಪದಾರ್ಥ ಗಳು ಹಾಲಿನಲ್ಲಿ ಕ್ರಮವಾಗಿ ಸೇರಿವೆ. ಹಾಲು ಶುಚಿಯಾಗಿರಬೇಕಾದರೆ ಕರೆಯುವ ಪಾತ್ರೆಗಳು, ಕೊಟ್ಟಿಗೆ, ಮೇವು, ನೀರು, ಮೊದಲಾದವುಗಳೆಲ್ಲಾ ಶುಚಿಯಾಗಿರಬೇಕು.

ಈ ಏರ್ಪಾಡಿನಲ್ಲಿ ಮುಖ್ಯವಾಗಿ ಯಾವ ಸ್ಥಳದಲ್ಲಿದನ್ನು ಸ್ಥಾಪಿಸಿದರೆ ಅನುಕೂಲವೆಂಬುದನ್ನು ಯೋಚಿಸತಕ್ಕದ್ದು. ದೊಡ್ಡಪಟ್ಟಣ ಅಥವಾ ಕಂಟೋನ್ಮೆಂಟ್ ಸಮೀಪದಲ್ಲಿ ಇಡುವದಾದರೆ ಬಹಳ ಫಾಯಿದೆಕರ.

ಕ್ಷೀರಾಗಾರದ ಏರ್ಪಾಡಿಗೆ ಕರೆಯುವ ಹಸುಗಳು ಎಮ್ಮೆಗಳು ಬೇಕಾಗುತ್ತೆ. ೩೦-೪೦ ಹಸುಗಳಿಗೆ ಒಂದು ಹೋರಿ ಅವಶ್ಯ. ಹಸುವು ೨೦ ವರ್ಷಗಳೂ, ಎಮ್ಮೆಯು ೨೫ ವರ್ಷಗಳೂ ಜೀವಿಸುತ್ತದೆ.

ದನಗಳ ಕೊಟ್ಟಿಗೆ.—ಕರಿಯುವ ರಾಸುಗಳಿಗೆ ಕೊಟ್ಟಿಗೆ ಕಟ್ಟುವದರಲ್ಲಿ ಈ ಅಂಶಗಳಿಗೆ ಗಮನಕೊಡಬೇಕು. ನೆಲವು ಎತ್ತರವಾಗಿರಬೇಕು. ಗಾಳಿ ಹೊಡೆಯುವ ಕಡೆ ಬಿಟ್ಟು ಎದುರು ಕಡೆ ಬಾಗಿಲು ಇಡಬೇಕು. ಪ್ರತಿ ಹಸುವಿಗೂ ೪ ಅಡಿ ಅಗಲ ೮ ಅಡಿ ಉದ್ದವುಳ್ಳ ಜಾಗ ಅವಶ್ಯಕ. ಆದ್ದರಿಂದ ೨೦೦ ಅಡಿ ಉದ್ದ ೩೬ ಅಡಿ ಅಗಲವುಳ್ಳ ಕೊಟ್ಟಿಗೆಯಲ್ಲಿ ನಡುವೆ ಮೇವಿನ ತೊಟ್ಟಿ, ತಿರುಗುವದಾರಿ ಮತ್ತು ಕರುಗಳಿಗೆ ಥಾಳಿ ಮರೆಯಾಗಿ ಒಂದಂಕಣ ಏರ್ಪಡಿಸಿ ೧೦೦ ದನಗಳನ್ನು ಗಾಳಿ, ಮಳೆಗೆ ಮರೆಯಾಗಿ ಎರಡು ಸಾಲಿನಲ್ಲಿ ಕಟ್ಟಬಹುದು.

ಮೇವು.—ದನಗಳಿಗೆ ಹುಲ್ಲು ಮೇವು ಮುಖ್ಯ. ಇದಕ್ಕಾಗಿ ಹುಲ್ಲುಗಾವಲುಗಳನ್ನು ಇಟ್ಟುಕೊಳ್ಳುವದು ಒಳ್ಳೇದು. ಒಳ್ಳೆ ಹುಲ್ಲುಗಾವಲು ಇದ್ದಲ್ಲಿ ಒಂದು ರಾಸಿಗೆ ೩ ಎಕರೆ ಸಾಕಾಗುತ್ತೆ. ಹೊಟ್ಟು, ಹಿಂಡಿ, ರಾಗಿ ಅಥವಾ ಬತ್ತದ ಹುಲ್ಲು ಮುಂತಾದವುಗಳ ಖರ್ಚು ಕಮ್ಮಿ. ದನಗಳನ್ನು ಕಾಲಾಡಲು ಹೊರಕ್ಕೆ ಕರದುಕೊಂಡುಹೋಗುವ ತೊಂದರೆಯೂ ಇಲ್ಲ. ಇದರ ಜೊತೆಗೆ ಬೇರೆ ಮೇವನ್ನೂ ಒದಗಿಸಬೇಕಾಗುತ್ತೆ. ನೀರು ಹಾಯಿಸಿ ಬೆಳದಲ್ಲಿ ೧೦೦ ದನಗಳಿಗೆ ೨೫ ಎಕರೆ ಬೇಕು. ಇಲ್ಲವಾದರೆ ಇದಕ್ಕೆ ಎರಡರಷ್ಟು ಬೇಕು. ಹುಲ್ಲು ಮೇವು ವಿಶೇಷವಾಗಿರುವಾಗ ಕರಿಯುದ ದನ ಒಂದಕ್ಕೆ ೧ ಪೌಂಡು ಹಿಂಡಿ ಮತ್ತು ಸ್ವಲ್ಪ ವುಪ್ಪು ಸಾಕು. ಕರಿಯುವ ದನಕ್ಕೆ ಪೂರಾಹಾಕುವದರಲ್ಲಿ ೩ರಲ್ಲಿ ೧ ಭಾಗ ಬೇಕು.

ದನಗಳನ್ನು ತಪ್ಪದೆ ಬೆಳಿಗ್ಗೆ ಸಾಯಂಕಾಲ ಮೇಯುವದಕ್ಕಾಗಲಿ ಅಥವಾ ಕಾಲಾಡುವದಕ್ಕಾಗಲಿ ಹೊರಕ್ಕೆ ಅಟ್ಟಿಕೊಂಡು ಹೋಗಬೇಕು. ೩ ತಿಂಗಳ ಕರುಗಳನ್ನು ಹಾಗೆಯೇ ಅಟ್ಟಿಕೊಂಡು ಹೋಗಬೇಕು.

ಎಮ್ಮೆಗಳನ್ನು ನಿತ್ಯವೂ ತೊಳಿಯಬೇಕು. ಹಾಗಿಲ್ಲದಿದ್ದರೆ ನದಿಯಲ್ಲಾಗಲಿ ಕಾಲುವೆಯಲ್ಲಾಗಲಿ ಈಜುವುದಕ್ಕೆ ಬಿಡಬೇಕು. ಹಸುಗಳನ್ನು ತೊಳೆಯುವ ಅವಶ್ಯಕವಿಲ್ಲ. ಕೆಚ್ಚಲನ್ನು ಪಾರ್ಶ್ವವನ್ನು ಮಾತ್ರ ತೊಳೆದು ಇತರ ಭಾಗಗಳನ್ನು ತಿಕ್ಕಿದರೆ ಸಾಕು. ತಣ್ಣೀರಿನಲ್ಲಿ ತೊಳೆಯುವದರಿಂದ ಆಕಳುಗಳಿಗೆ ಚಳಿಯುಂಟಾಗಿ ಹಾಲು ಕಮ್ಮಿಯಾಗಬಹುದು. ದನಗಳಿಗೆ ನಿರ್ಮಲವಾದ ನೀರನ್ನು ಕುಡಿಯುವದಕ್ಕೆ ಇಡಬೇಕು. ದನಗಳು ಹೊರಕ್ಕೆ ಹೋಗಿರುವಾಗ ಕೊಟ್ಟಿಗೆ, ತೊಟ್ಟಿ, ಬಚ್ಚಲು ಮುಂತಾದವುಗಳನ್ನೆಲ್ಲಾ ಚನ್ನಾಗಿ ತೊಳೆದು ಈ ನೀರು ಗೊಬ್ಬರದ ಗುಂಡಿಗೆ ಬೀಳುವಂತೆ ಮಾಡಬೇಕು. ದನಗಳು ಮನೆಗೆ ಬಂದೊಡನೆ ಮೈ ತಿಕ್ಕಬೇಕು. ಮುಂದೆಗಾಗಿಟ್ಟ ಬೀಜದ ಹೋರಿಯನ್ನಲ್ಲದೆ ಇನ್ನಾವವನ್ನೂ ದನಗಳ ಜೊತೆಯಲ್ಲಿ ಸೇರಿಸಬಾರದು. ಇಂಥಾ ಬೀಜದ ಹೋರಿಗಳನ್ನು ಗೊಬ್ಬರದ ಗಾಡಿ ಅಥವಾ ಹುಲ್ಲು ಗಾಡಿಗೆ ಕಟ್ಟಬಹುದು. ಇವುಗಳಿಗೆ ಸೂಕ್ಷ್ಮವಾಗಿ ಕೆಲಸ ಕೊಡದಿದ್ದರೆ ಕೆಡುತ್ತವೆ.

ಹಾಲು ಕರೆಯುವದಕ್ಕೆ ಮುಂಚೆ ಕೆಚ್ಚಲನ್ನು ಚನ್ನಾಗಿ ತೊಳೆದು ಒರಸುವದಲ್ಲದೆ ಪಾರ್ಶ್ವಗಳನ್ನು ಒದ್ದೆಬಟ್ಟೆಯಿಂದ ಒರಸಬೇಕು. ಇದರಿಂದ ಹಾಲಿನಲ್ಲಿ ಕೊಳೆ ಬೀಳಲು ಅವಕಾಶವಿರುವದಿಲ್ಲ. ಪ್ರತಿಯೊಂದು ಹಸುವಿನ ಹಾಲನ್ನೂ ತೂಕಮಾಡಿ ತಿಳಿದುಕೊಳ್ಳಬೇಕು. ಏಕಂದರೆ ಯಾವದು ಹೆಚ್ಚಾಗಿ ಕರೆಯುತ್ತೊ ಅದನ್ನು ಅರಿಯಬಹುದು. ಕರಿಯುವಾಗ ಸಾಮಾನ್ಯವಾಗಿ ತೌಡು, ಹಿಂಡಿ ಮತ್ತು ಹತ್ತೀಬೀಜ ಇವುಗಳನ್ನು ಕಲಿಸಿ ತಿನ್ನಿಸುತ್ತಾರೆ. ಹಾಲು ಕೊಡುವದರಮೇಲೂ, ಹಸುವಿನ ಗಾತ್ರ ಮತ್ತು ಸ್ಥಿತಿಯಮೇಲೂ ಎಷ್ಟು ತಿಂಡಿ ಕೊಡಬೇಕೆಂಬುವದನ್ನು ಅರಿಯಬಹುದು.

ಕರು ಹಾಕುವದಕ್ಕೆ ೧ ತಿಂಗಳು ಮುಂಚೆ ಹುಲ್ಲು ಜೊತೆಗೆ ೨ ಪೌಂಡು ತೌಡು, ೨ ಪೌಂಡು ಹಿಂಡಿ ಮತ್ತು ೨ ಪೌಂಡು ಹತ್ತಿ ಬೀಜ ಕಲಸಿ

ನಿತ್ಯವೂ ತಿನ್ನಿಸಬೇಕು. ಕರು ಹಾಕಿದ ಮೇಲೆ ೬ ದಿನಗಳವರಿಗೆ ಸಲೀಸಾಗಿ ಮಲವಿಸರ್ಜನೆ ಆಗುವ ಪದಾರ್ಥಗಳನ್ನು ಸೇರಿಸಿ ತಿನ್ನಿಸಬೇಕು. ಕರೆಯುವ ಹಸುಗಳಿಗೆ ಯಾವದಾದರೂ ಒಂದು ಹಿಂಡಿಯನ್ನು ತಿನ್ನಿಸಿದರೆ ಒಳ್ಳೇದು.

---

## Revenue Appeals.
## ರೆವಿನ್ಯೂ ಅಪೀಲುಗಳು.

### ೧೯೦೮—೦೯ನೆ ಸಾಲಿನ ೪೯ನೆ ನಂ. ಅಪೀಲು ಮೊಕದ್ದಮೆ.

### ವಾದಿಗಳು—ಅಣ್ಣಯ್ಯ, ನಂಜುಂಡೈಯ್ಯ.

ವಾದಿಗಳಾದ ಅಣ್ಣಯ್ಯ ಮತ್ತು ನಂಜುಂಡೈಯ್ಯ ಒಂದೇ ತಂದೆಯ ಮಕ್ಕಳು. ಈಪೈಕಿ ನಂಜುಂಡೈಯ್ಯನು ಅವರ ದೊಡ್ಡಪ್ಪನಿಗೆ ದತ್ತು ಮಗನಾಗಿರುತ್ತಾನೆ. ನಂಜುಂಡೈಯ್ಯನ ಹೆಸರಿನಲ್ಲಿ ನೆಕ್ಕುಂಡಿ ಫಿರ್ಕಾ ಶ್ಯಾನುಭೋಗಿಕೆ ರಿಜಸ್ಟರಾಗಿರುತ್ತೆ. ಆದರೆ ಇವನು ದೊಡ್ಡಗಂಜೂರು ಫಿರ್ಕಾದಲ್ಲಿ ವಾಸವಾಗಿದ್ದು ಈ ಫಿರ್ಕಾ ಕೆಲಸಗಳನ್ನು ನೋಡುತ್ತಿದಾನೆ. ಅಣ್ಣಯ್ಯನು ದೊಡ್ಡಗಂಜೂರು ಮತ್ತು ಕರಿಯಾಪಲ್ಲಿ ಫಿರ್ಕಾಗಳ ಶ್ಯಾನುಭೋಗಿಗೆ ಬರಾವರ್ದಾರನಾಗಿದ್ದಾಗ್ಯೂ ಕೂಡ ನೆಕ್ಕುಂಡಿ ಫಿರ್ಕಾದಲ್ಲ ವಾಸವಾಗಿದ್ದು ನೆಕ್ಕುಂಡಿ ಮತ್ತು ಕರಿಯಾಪಲ್ಲಿ ಫಿರ್ಕಾಗಳ ಕೆಲಸವನ್ನು ನೋಡುತ್ತಿದ್ದಾನೆ. ಶ್ಯಾನುಭೋಗರು ತಮ್ಮ ತಮ್ಮ ಫಿರ್ಕಾಗಳಲ್ಲಿ ವಾಸಮಾಡಬೇಕೆಂಬ ಸರ್ಕಾರಿ ಹುಕುಮನ್ನು ಜಾರಿಗೆ ತರುವದರಲ್ಲಿ ವಾದಿಗಳು ತಾವು ವಾಸಮಾಡುವ ಸ್ಥಳಗಳನ್ನು ಬಿಡುವದರಿಂದ ಬಹಳ ಅನಾನುಕೂಲವಾಗುವಕಾರಣ ತಮ್ಮ ರಿಜಸ್ಟರ್ ಬರಾವರ್ದನ್ನು ಪರಸ್ಪರ ವರ್ಗಾವರ್ಗಿ ಮಾಡಿ ಕೊಡಬೇಕೆಂದು ಕೇಳಿಕೊಂಡರು. ಈ ಏರ್ಪಾಟನ್ನು ಡೆಪ್ಯುಟಿ ಕಮಿಷನರವರು ಮಂಜೂರ್ಮಾಡಲಿಲ್ಲವಾದಕಾರಣ ಈ ವಿಚಾರದಲ್ಲಿ ಗೌರ್ನಮೆಂಟಿನವರು ಅಪೀಲಿನಲ್ಲಿ ಹುಕುಂಮಾಡಿರುವದೇನಂದರೆ.—ವಾದಿಗಳಿಬ್ಬರೂ ಒಂದೆ ಮನೆತನಕ್ಕೆ ಸೇರಿದವರು. ತಮ್ಮಲ್ಲಿಯೇ ಬರಾವರ್ದು ಬದಲಾವಣೆ ಮಾಡಿಕೊಳ್ಳುವದಕ್ಕೆ ಒಪ್ಪುತ್ತಾರೆ. ಅಲ್ಲದೆ ಇವರು ಬಹಳ ಕಾಲದಿಂದ ಯಾವ ಫಿರ್ಕಾವಿನ ಬರಾವರ್ದನ್ನು ಅಪೇ

ಷ್ಠಿಸುತ್ತಿದ್ದಾರೆಯೊ ಆ ಫಿರ್ಕಾವಿನ ಕೆಲಸವನ್ನು ನೋಡುತ್ತಿದ್ದಾರೆ. ವಾದಿಗಳು ಮಾಡಿಕೊಂಡಿರುವ ಏರ್ಪಾಟು ಶ್ಯಾನುಭೋಗರು ತಮ್ಮ ತಮ್ಮ ಫಿರ್ಕಾಗಳಲ್ಲಿ ವಾಸಮಾಡಬೇಕೆಂಬ ಸರ್ಕಾರಿ ಹುಕುಮಿಗೆ ಸಹಕಾರಿಯಾಗಿರುತ್ತದಲ್ಲದೆ ಇದನ್ನು ಮಂಜೂರ್ಮಾಡುವದರಿಂದ ಫಿರ್ಕಾ ಶ್ಯಾನುಭೋಗಿ ಕೆಲಸಗಳು ಎಂದಿನಂತೆಯೇ ನಡೆಯುತ್ತಿರಬಹುದು. ಈ ಕಾರಣಗಳಿಂದ ವಾದಿಗಳ ಕೋರಿಕೆಯನ್ನು ನಡಸಿಕೊಡದೆಇರಲು ಸಾಕಾದಷ್ಟು ಕಾರಣಗಳು ಕಂಡುಬರುವುದಿಲ್ಲವಾಗಿ, ಡೆಪ್ಯುಟಿ ಕಮಿಷನರವರ ಆರ್ಡರನ್ನು ಬದಲಾಯಿಸಿ ಇವರು ಕೇಳುವ ಬರಾವರ್ದು ಬದಲಾವಣೆಗಳನ್ನು ಮಂಜೂರ್ಮಾಡಿರುತ್ತೆ.

---

### ೧೯೦೮—೯ನೆ ಸಾಲ್ ೨೧ನೆ ಅಪೀಲ್ ನಂಬರು.

ವಾದಿ.
ರಾಜಾ ದೊಡ್ಡನಂಜಪ್ಪಶೆಟ್ಟಿ.

*vs.*

ಪ್ರತಿವಾದಿಗಳು.—(೧) ಅನಂತೈಯ್ಯಾ, ಖಾತೆದಾರ್ (೨) ದೊಡ್ಡಬಳ್ಳಾಪುರದ ತಾ॥ ಚಿಕ್ಕಹೆಜ್ಜಾಜಿ ಗ್ರಾಮದ ಶ್ಯಾ॥ ವೆಂಕಟರಾಯ.

ದೊಡ್ಡಬಳ್ಳಾಪುರದ ತಾ॥ ಚಿಕ್ಕಹೆಜ್ಜಾಜಿಗ್ರಾಮದ ೧ನೆ ಪ್ರತಿವಾದಿ ಅನಂತಯ್ಯನ ಖಾತೆಯಲ್ಲಿರುವ ಸರ್ವೆ ೩ನೆ ನಂಬರು ಜಮೀನು ಈ ಖಾತೆಯ ಕಂದಾಯದ ಬಾಕಿಗಾಗಿ ಹರಾಜಾಯಿತು. ವಾದಿಯು ಸರ್ವೆ ೩ನೆ ನಂಬರು ಜಮೀನನ್ನು ಭೋಗ್ಯಮಾಡಿಕೊಂಡು ಸ್ಪೆಷಲ್ ರಿಜಿಸ್ಟರಿನಲ್ಲಿ ತನ್ನ ಹೆಸರನ್ನು ದಾಖಲುಮಾಡಿಸಿಕೊಂಡಿದ್ದರೂ ರೂಲ್ ಪ್ರಕಾರ ನೋಟೀಸು ಅವನಿಗೆ ಜಾರಿಆಗಲಿಲ್ಲ. ಹರಾಜಿನಲ್ಲಿ ಈ ಜಮೀನು ೨ನೆ ಪ್ರತಿವಾದಿ ಹೆಸರಿಗೆ ೧೦೦ ರೂಪಾಯಿಗೆ ನಿಂತಿತು. ಹರಾಜನ್ನು ಅಸಿಸ್ಟೆಂಟ್ ಕಮಿಷನರವರು ಖಾಯಂಮಾಡಿದರು. ಹರಾಜಿನಲ್ಲಿ ಉತ್ಪತ್ತಿಯಾದ ಮೊಬಲಗಿನ ಪೈಕಿ ಪ್ರಸಕ್ತ ಬಾಕಿಗೆ ತಕ್ಕಷ್ಟು ಮೊಬಲಗನ್ನು ವಸೂಲು ಕಟ್ಟಿಕೊಂಡನಂತರ ಉಳಿದ ಮೊಬಲಗು ಖಾತೇದಾರನ ಕೋರಿಕೆ ಮೇರೆ ಇವನ ಇತರ ಜಮೀನುಗಳ ಕಂದಾಯಕ್ಕಾಗಿ ಕಟ್ಟಿಕೊಳ್ಳಲ್ಪಟ್ಟಿತು. ನೋಟೀಸು ಜಾರಿಯಾಗದಿದ್ದರಿಂದ ನಡೆದಿರುವ ಹರಾಜು ಅಕ್ರಮವೆಂದು ಭೋಗ್ಯದಾರನು (ವಾದಿ) ತಕರಾರು ಮಾಡಿದ್ದರಮೇಲೆ ರಿಕಾರ್ಡು

ನಡೆಸು ಅಪ್ರೀಲಿನಲ್ಲಿ ಗೌರ್ನಮೆಂಟಿನವರು ಫೈಸಲು ಹುಕುಂ ಕೊಟ್ಟಿರು ವದೇನಂದರೆ.—ಲ್ಯಾಂಡ್ ರೆವಿನ್ಯೂ ರೂಲ್ಸ್ ೪ನೆ ರೂಲ್ ಪ್ರಕಾರ ಯಾವ ನಾದರೂ ಒಂದು ಜಮೀನಿನಲ್ಲಿ ತನಗಿರುವ ಹಕ್ಕನ್ನು ಉಳಿಸಿಕೊಳ್ಳುವದ ಕ್ಕೋಸ್ಕರ ಸ್ಪೆಷಲ್ ನೋಟೀಸ್ ರಿಜಸ್ಟರ್‌ನಲ್ಲಿ ತನ್ನ ಹೆಸರನ್ನು ದಾಖ ಲ್ಮಾಡಿಸಿಕೊಂಡಿದ್ದರೆ ಅವನಿಗೆ ತಗಾದೆ ನೋಟೀಸನ್ನು ಜಾರಿಮಾಡಬೇಕಾ ದ್ದು ಅವಶ್ಯಕವಾಗಿರುತ್ತೆ. ಪ್ರಕೃತ ಸಂದರ್ಭದಲ್ಲಿ ಸದರಿ ಮೇರಿಗೆ ನೋ ಟೀಸು ಜಾರಿಆಗಿರುವದಿಲ್ಲ. ಆದಕಾರಣ ವಾದಿಯ ಹಕ್ಕನ್ನು ತಪ್ಪಿಸುವ ಈ ಹರಾಜು ನ್ಯಾಯವಾಗಿರುವದಿಲ್ಲ. ಜಮೀನನ್ನು ಹರಾಜಿನಲ್ಲಿ ಪಡೆದ ೨ನೆ ಪ್ರತಿವಾದಿಯು ಈ ಜಮೀನಿನ ಆಬಾದಿಗೆ ಹಣ ಮುಟ್ಟಿಸಿರುವದಾಗಿ ಬಯಾನಿಸುತ್ತಾನೆ. ಆದರೆ ಇದು ಖುಷ್ಕಿ ಜಮೀನು. ಇವನು ಮಾಡಿ ರುವ ಆಬಾದೆಂಬುವದು ಜಮೀನಿಗೆ ಗೊಬ್ಬರ ಗೋಡನ್ನು ಹೇರಿದ್ದಾಗಿರು ತ್ತದೆ. ಇವನು ಇದಕ್ಕೆ ಕಾಂಪೆನ್ಸೇಷನ್ ಕೇಳಲು ಸಾಕಾದಷ್ಟು ಕಾರಣ ವಿರುವದಿಲ್ಲ. ಗೊಬ್ಬರ ಹಾಕಿ ಕಂದಾಯ ಕೊಟ್ಟದ್ದಕ್ಕೆ ಪ್ರತಿ ಸಾಲಿನಲ್ಲಿ ಯೂ ಇವನು ಫಸಲನ್ನು ಅನುಭವಿಸಿಕೊಂಡುಬಂದಿರುವದೇ ಸಾಕಾದಷ್ಟು ಪ್ರತಿಫಲವಾಗಿರುತ್ತದೆ. ಆದಕಾರಣ ಹರಾಜು ರದ್ದು ಮಾಡುವದರಿಂದ ಇವನಿಗೇನೂ ನಷ್ಟವಾಗುವದಿಲ್ಲ. ಈ ಕಾರಣಗಳಿಂದ ವಾದಿಯನ್ನು ಜಮೀನನ್ನು ಹರಾಜಿನಲ್ಲಿ ಪಡೆದ ೨ನೆ ಪ್ರತಿವಾದಿಗೆ ಪಾವತಿ ಮಾಡಲು ೧ ತಿಂಗಳೊಳಗಾಗಿ ಹರಾಜು ಮೊಬಲಗು ೧೦೦ ರೂಪಾಯಿಯನ್ನು ತಾಲ್ಲೂ ಕು ಅಮಲ್ದಾರರಲ್ಲಿ ಡಿಪಾಜಿಟ್ ಮಾಡುವ ಷರತ್ತಿಗೊಳಪಡಿಸಿ ನಡೆದಿರುವ ಹ ರಾಜು ರದ್ದುಮಾಡಿರುತ್ತೆ. ಈ ಮೊಬಲಗನ್ನು ವಾದಿಯು ಖಾತೆದಾರ ಅಥವಾ ಇದಕ್ಕೆ ಯಾರು ಜವಾಬ್ದಾರರೋ ಅವರಿಂದ ವಸೂಲ್ಮಾಡಿಕೊಳ್ಳಲು ಅಭ್ಯಂತರವಿರುವದಿಲ್ಲ. ಹಾಗೆ ಡಿಪಾಜಿಟ್‌ಮಾಡಲು ತಪ್ಪಿದ ಪಕ್ಷದಲ್ಲಿ ಅ ಪೀಲು ಡಿಸ್ಮಿಸ್ ಆಗುತ್ತೆ.

ಈ ಕೇಸು ಹತ್ತು ವರುಷಗಳಿಂದಲೂ ನಡೆಯುತ್ತಿದೆ. ಈ ವಿ ಚಾರದಲ್ಲಿ ತಾಲ್ಲೂಕು ಮತ್ತು ಡಿಸ್ಟ್ರಿಕ್ಟ್ ಆಫೀಸುಗಳಲ್ಲಿ ತೋರಿಸಿರುವ ಅಶ್ರದ್ಧೆಯನ್ನು ಕುರಿತು ಗೌರ್ನಮೆಂಟಿನವರು ವಿಷಾದಿಸುತ್ತಾರೆ.

## Experimental work of the Surat Agricultural Station, 1907-08.

## ಸೂರಟ್ ಅಗ್ರಿಕಲ್ಚರಲ್ ಸ್ಟೇಷನ್ನಲ್ಲಿ ನಡೆದ ಅಜಮಾಯಿಷಿಗಳು.—

ನೆಲಗಡ್ಲೆ.—ನೆಲಗಡ್ಲೆ ರಖಮನ್ನು ಚುನಾಯಿಸುವದರಲ್ಲಿ ಗಮನಿಸ ತಕ್ಕ ಅನೇಕ ಅಂಶಗಳು ಇರುತ್ತವೆ.—

(೧) ಇದನ್ನು ಖುಷ್ಕಿಪೈರಾಗಿ ಬೆಳೆಯಬಹುದೆ ಅಥವಾ ನೀರು ಹಾಯಿಸಿ ಬೆಳೆಯಬೇಕೆ.

(೨) ಸುಲಿದ ಕಾಳು ಸುಲಿಯದೆ ಇದ್ದ ಕಾಯಿನ ತೂಕದಲ್ಲಿ ಶೇಕಡಾ ಸರಾಸರಿ ಎಷ್ಟು ಒದಗುತ್ತದೆ.

(೩) ಸುಲಿದ ಕಾಳಿನಲ್ಲಿ ಸರಾಸರಿ ಶೇಕಡಾ ಎಷ್ಟು ಎಂಣೆ ಇಳಿಯುತ್ತದೆ. ಸಾಮಾನ್ಯವಾಗಿ ತಿನ್ನುವದಕ್ಕಾಗಲಿ ಅಥವಾ ಗಂದಿಗೆಅಂಗಡಿಯ ಉಪಯೋಗಕ್ಕೋಸ್ಕರವಾಗಲಿ ಬೆಳೆಯದೆ ಭಾರಿಯಾಗಿ ವ್ಯಾಪಾರ ಮಾಡುವದಕ್ಕೆ ಬೆಳೆಯುವ ಸಂದರ್ಭದಲ್ಲಿ ಈ ಅಂಶವನ್ನು ಮುಖ್ಯವಾಗಿ ನೆನಪಿನಲ್ಲಿಡಬೇಕು. ಕಾಳಿನಿಂದ ಶೇಕಡಾ ೪೦ ಅಥವಾ ಅದಕ್ಕೆ ಹೆಚ್ಚಾಗಿ ಎಂಣೆ ಇಳಿಯುವದಾದರೆ ಈ ರಖಂಗೆ ಒಳ್ಳೆ ಗಿರಾಕಿ ಇರುತ್ತದೆಂದು ತಿಳಿಯಬಹುದು.

(೪) ಎಕರೆಗೆ ಸರಾಸರಿ ಉತ್ಪತ್ತಿ.

(೫) ಸಿಪ್ಪೆ ದಪ್ಪವಾಗಿಧೆಯೋ, ತೆಳುವಾಗಿಧೆಯೋ. ಇದರಿಂದ ಯಾವ ರಖಂನಿಂದ ಹೆಚ್ಚು ಖರ್ಚಿಲ್ಲದೆ ಎಂಣೆ ತೆಗೆಯಬಹುದೆಂದು ತಿಳಿಯಬಹುದು.

(೬) ಇದರ ಖರೀದಿ.

ಈ ವಿಚಾರಗಳಲ್ಲಿ ಅಜಮಾಯಿಷಿಯಲ್ಲಿ ಕಂಡುಬಂದ ಫಲಿತಾಂಶಗಳನ್ನು ಇಲ್ಲಿ ಸಂಕ್ಷೇಪವಾಗಿ ತಿಳಿಸುತ್ತೇವೆ.

ಅಜಮಾಯಿಷಿ ಮಾಡಲ್ಪಟ್ಟ ರಖಂಗಳು ಯಾವವಂದರೆ.—ವರ್ಜಿನಿಯ, ಪುದುಚೆರಿ, ಸ್ಥಳೀಯ, ಜಪಾನೀಸ್ ದೊಡ್ಡರಖಂ, ಜಪಾನೀಸ್ ಸಣ್ಣ

ರಖಂ, ಸ್ಪಾನಿಷ್‌ಪೀನಟ್, ಸೆನೆಗಲ್, ಮೊಸಾಂಬಿಕ್, ಮರಿಷಸ್, ಈಜಿಪ್ಟ್, ಪೂರ್ವಆಫ್ರಿಕಾ.

(೧) ಜಪಾನೀಸ್ ಸಂಣ ಮತ್ತು ಸ್ಪಾನಿಷ್‌ಪೀನಟ್ ರಖಂಗಳು ಗುಜರಾತ್ ಕರಿನೆಲದಲ್ಲಿ ಮಳೆಗಳು ಸರಿಯಾಗಿ ನಡೆಸಿದರೆ, ಒಳ್ಳೆ ಖುಷ್ಕಿಪೈರಾಗಿ ಬೆಳೆಯುತ್ತವೆ.

(೨) ರಖಂ ವೆತ್ಯಾಸವಾದಹಾಗೆಲ್ಲಾ ಸುಲಿಯುದೆಯಿಲ್ಲ ಕಾಯಿನಲ್ಲಿ ಒದಗಬಹುದಾದ ಕಾಳಿನ ತೂಕವು ಹೆಚ್ಚು ಕಡಮೆಯಾಗುತ್ತದೆ. ನೀರುಹಾಯಿಸಿ ಬೆಳೆದಲ್ಲಿ ಈ ವೆತ್ಯಾಸವು ಶೇಕಡಾ ಹತ್ತಕ್ಕೆ ಮೀರುವದಿಲ್ಲ. ಜಪಾನೀಸ್ ಸಂಣ ರಖಂನಲ್ಲಿ ಈರೀತಿ ಹೆಚ್ಚು ತೂಕದ ಕಾಳು ಅಂದರೆ ಶೇಕಡಾ ೮೨.೦೬ರಂತೆ ಒದಗುತ್ತದೆ. ಖುಷ್ಕಿಪೈರಾಗಿ ಬೆಳೆದ ಸಂದರ್ಭಗಳಲ್ಲಿ ಈ ವೆತ್ಯಾಸವು ಶೇಕಡಾ ೫೪-೮ಕ್ಕೆ ಮೀರುವದಿಲ್ಲ. ಈ ರಖಂಗಳ ಪೈಕಿ ಸ್ಪಾನಿಷ್‌ಪೀನಟ್ ರಖಂನಲ್ಲಿ ಹೆಚ್ಚು ಕಾಳು ಅಂದರೆ ಶೇಕಡಾ ೮೦ ೮೬ ಒದಗುತ್ತದೆ.

(೩) ಈ ರಖಂಗಳಲ್ಲಿ ಎಂಣೆ ಇಳಿಯುವದರ ವ್ಯತ್ಯಾಸವು ಶೇಕಡಾ ೪೪ ವರೆಗೆ ಮೀರುವದಿಲ್ಲ. ಜಪಾನೀಸ್ ಸಂಣ ರಖಂನಲ್ಲಿ ಹೆಚ್ಚು ಎಂಣೆ ಅಂದರೆ ಶೇಕಡಾ ೫೦.೮೩ ಇಳಿಯುತ್ತದೆ. ಪುದುಚೇರಿ ರಖಂನಲ್ಲಿ ಇದಕ್ಕೆ ಕಮ್ಮಿ.

(೪) ವ್ಯಾಪಾರಕ್ಕಾಗಿ ವರ್ಜಿನಿಯಾ, ಸ್ಪಾನಿಷ್‌ಪೀನಟ್, ಮೊಸಾಂಬಿಕ್, ಪುದುಚೇರಿ ಈ ರಖಂಗಳನ್ನು ಬೆಳೆದಲ್ಲಿ ಒಳ್ಳೆ ಗಿರಾಕಿ ದೊರೆಯುತ್ತದೆ.

(೫) ಮೊಸಾಂಬಿಕ್, ಸೆನಿಗಲ್, ಪುದುಚೆರಿ ರಖಂಗಳು ನೀರು ಹಾಯಿಸಿ ಸಾಗುಮಾಡುವದಕ್ಕೆ ಲಾಯಕ್ಕಾಗಿವೆ.

(೬) ಎಕರೆಗೆ ಸುಮಾರು ೨೫೦ ರೂಪಾಯಿ ಫಸಲು ಉತ್ಪತ್ತಿಯಾಗಬಹುದು. ಧಾರಾಳವಾಗಿ ೧೫೦ರಂತೆ ಸಾಗುವಳಿಗೆ ಖರ್ಚು ಇಟ್ಟುಕೊಂಡರೂ ೧೦೦ ರೂಪಾಯಿ ನಿವಳ ಆದಾಯ ತೇಲುತ್ತದೆ. ಈಜಿಪ್ಟ್ ಮತ್ತು ಸೆನಿಗಲ್ ರಖಂಗಳನ್ನು ಗಂಧಿಗೆಅಂಗಡಿಯವರು ಶೇಕಡಾ ೨೫ರಷ್ಟು ಹೆಚ್ಚು ಬೆಲೆ ಕೊಟ್ಟು ಕೊಂಡುಕೊಳ್ಳುತ್ತಾರೆ.

ಮುಸಾಳೆಸೊಪ್ಪು.-ಇದನ್ನು ಕರೀನೆಲಗಳಲ್ಲಿ ನೀರು ಹಾಯಿಸಿ ಬೆಳೆದಲ್ಲಿ ಈ ಪೈರನ್ನು ನಾಲ್ಕು ವರ್ಷಗಳ ಕಾಲ ಭೂಮಿಯುಮೇಲೆ ನಿಲ್ಲಿಸಬಹುದು. ಮಡಿಯೊಳಗೆ ಬೆಳೆಯುವವಕ್ಕಿಂತ ಸಾಲುಸಾಲಾಗಿ ದಿಂಡಿಗಳಮೇಲೆ ಬೆಳೆಯುವದು ಮೇಲೆಂದು ಸೂರತ್‌ಫಾರಂನ ಸಂದರ್ಭಗಳಿಂದ ತಿಳಿಯಬರುತ್ತೆ. ಹೇಗೆಂದರೆ ಮಡಿಯಲ್ಲಿಟ್ಟ ಪೈರು ಒಂದು ವರ್ಷದ ನಂತರ ಸತ್ತುಹೋಗಿ ಇದರಲ್ಲಿ ಕಳೆಗಳು ಅನೇಕವಾಗಿ ಬೆಳೆಕೊಳ್ಳುತ್ತವೆ. ಮಡಿಗಳಲ್ಲಿ ಕಳೆ ತೆಗೆಯುವ ಕ್ರಮಗಳನ್ನು ನಡೆಸುವದೇನೊ ಅಸಾಧ್ಯ. ಕರೀನೆಲದಲ್ಲಿಟ್ಟ ಈ ಪೈರಿಗೆ ಬಿಸಲುಕಾಲದಲ್ಲಿ ಹದಿನೈದುದಿನಕ್ಕೊಂದಾವರ್ತಿಯಾದರೂ ನೀರು ಹಾಯಿಸಬೇಕು. ಎಕರೆಗೆ ಈ ಪೈರಿನಿಂದ ೧೨೨ ರೂಪಾಯಿನಿಂದ ೧೨೬ ರೂಪಾಯಿವರೆಗೆ ಉತ್ಪತ್ತಿಯಾಗುತ್ತೆ. ಆದರೆ ಮೊದಲು ವರ್ಷ ಈ ಪೈರು ಇಡುವದರಲ್ಲಿ ದುಬಾರಿ ಲಾಗವಡು ಆಗುವದರಿಂದ ಆವರ್ಷ ಹೆಚ್ಚು ಲಾಭ ಬರಲು ಅವಕಾಶವಿರುವದಿಲ್ಲ.

---

## Government Orders.

## ಸರ್ಕಾರಿ ಹುಕುಂಗಳು.

### ೧೯೦೮ನೇ ಇಸವಿ ಡಿಸೆಂಬರ್ ಮಾಹೆ ಆಖೈರು ವರಿಗೆ ಆಗುವ ಮೂರು ತಿಂಗಳಲ್ಲಿ ಆದ ಜಾನುವಾರುಗಳ ಮರಣಗಳ ವಿಚಾರ.

ರೆವಿನ್ಯೂ ಕಮಿಷನರವರ ಹುಕುಂ.—ಈ ಮೂರು ತಿಂಗಳಕಾಲದಲ್ಲಿ ಈ ಸಂಸ್ಥಾನದಲ್ಲಿ ಮರಣ ಹೊಂದಿದ ಒಟ್ಟು ಜಾನುವಾರ್‌ಗಳ ಸಂಖ್ಯೆಯು ೩೪,೫೫೨, ಹಿಂದಿನ ಸಾಲಿನ ಇದೇಕಾಲದಲ್ಲಿ ಸತ್ತ ಜಾನ್ವರ್‌ಗಳ ಸಂಖ್ಯೆಯು ೨೬,೦೮೯ ಆಗಿ ಇರುವ್ರುದರಿಂದ, ಈ ಮೂರು ತಿಂಗಳುಗಳಲ್ಲಿ ೮,೪೮೩ ಜಾನ್ವರ್‌ಗಳು ಜಾಸ್ತಿಯಾಗಿ ಸತ್ತಹಾಗೆ ಆಯಿತು. ರೋಗಗಳಿಂದ ಈ ಕಾಲದಲ್ಲಿ ೨೧,೩೨೨ ಮರಣಗಳು ಹಿಂದಿನ ಸಾಲಿನ ಇದೇಕಾಲದಲ್ಲಿ ೧೬,೯೫೯ ಮರಣಗಳು ಆಗಿ ಇರುತ್ತವೆ. ಬೆಂಗಳೂರು, ಕೋಲಾರ, ತುಮಕೂರು ಮತ್ತು ಮೈಸೂರು ಡಿಸ್ಟ್ರಿಕ್ಟುಗಳಲ್ಲಿ ದೊಡ್ಡರೋಗ, ಮಾರಿಜಾಡ್ಯ ಮತ್ತು ಇತರ ಜಾಡ್ಯಗಳು ಬಹಳ ಕ್ರೂರವಾ

ಗಿಯೂ ಇತರ ಡಿಸ್ಟ್ರಿಕ್ಟುಗಳಲ್ಲಿ ಸ್ವಲ್ಪ ಸುಮಾರಾಗಿ ಶಾಂತವಾಗಿಯೂ ಪ್ರಾಪ್ತವಾಗಿ ಇದ್ದದ್ದಕ್ಕಾಗಿಯೇ ಈ ರೀತಿ ತುಂಬಾ ಜಾಸ್ತಿ ಮರಣಗಳು ಉಂಟಾಗಿರುತ್ತವೆಂದು ತಿಳಿಯಬರುತ್ತದೆ.

ಈ ಮೂರು ತಿಂಗಳಿನ ಕಾಲದಲ್ಲಿ ಸಿಡುಬು ಹಾಕಿದ ಜಾನವರುಗಳ ಸಂಖ್ಯೆಯನ್ನು ಇದರಡಿ ತೋರಿಸಿರುತ್ತದೆ.—

| ಡಿಸ್ಟ್ರಿಕ್ಟು. | ಸಿಡುಬು ಹಾಕಲ್ಪಟ್ಟ ಜಾನುವರುಗಳ ಸಂಖ್ಯೆ. |
|---|---|
| ಬೆಂಗಳೂರು ... ... | 80 |
| ಮೈಸೂರು ... ... | 1,161 |
| ಹಾಸನ ... ... | 880 |
| ಕಡೂರು ... ... | 334 |

ಸಿಡುಬು ಹಾಕಿಸುವದರ ಅವಶ್ಯಕತೆಯನ್ನು, ವೆಟರಿನೆರಿ ಅಸಿಸ್ಟೆಂಟ್ ಇನ್ಸ್ಪೆಕ್ಟರುಗಳು ಮತ್ತು ತಾಲ್ಲೂಕು ಆಫೀಸರುಗಳು ಸಹಾ ಬುದ್ಧಿವಂತರಾದ ಪಟೇಲರ ಮೂಲಕ ಜಾನವರುಗಳ ಮಾಲೀಕರಿಗೆ ಚೆನ್ನಾಗಿ ತಿಳಿಯಪಡಿಸಬೇಕು. ಅಸಿಸ್ಟೆಂಟ್ ವೆಟರಿನೆರಿ ಇನ್ಸ್ಪೆಕ್ಟರುಗಳು ಈ ಭಾಗದಲ್ಲಿ ಇನ್ನೂ ಹೆಚ್ಚು ಕೆಲಸ ನಡೆಸಲು ಪ್ರಯತ್ನಿಸಬೇಕು. ರೋಗ ವ್ಯಾಪಿಸದಂತೆ ಮಾಡಬೇಕಾದರೆ ದನಗಳನ್ನು ಪ್ರತ್ಯೇಕಿಸುವುದು ಒಳ್ಳೇದೆಂಬ ಅಂಶವನ್ನು ದನಗಳ ಮಾಲೀಕರಿಗೆ ಚೆನ್ನಾಗಿ ತಿಳಿಯಪಡಿಸಬೇಕಲ್ಲದೆ, ಸತ್ತ ಜಾನವರ್‌ಗಳ ಶವಗಳನ್ನು ಗ್ರಾಮಕ್ಕೆ ದೂರ ಫಾಸಲೆಯಲ್ಲಿ ಭೂಮಿಯೊಳಗೆ ಆಳವಾಗಿ ತೋಡಿದ ಗುಂಡಿಗಳಲ್ಲಿ ಹೂಳಿಟ್ಟು, ಅವುಗಳ ಚರ್ಮಗಳಿಗಾಗಿ ಮಾದಿಗರು ಸದರಿ ಶವಗಳನ್ನು ಈಚೆಗೆ ತೆಗೆಯುವದಕ್ಕೆ ಅವಕಾಶವಿಲ್ಲದಂತೆ ಮಾಡಬೇಕು.

ಗೌ॥ ಹುಕುಂ.— ನಂ. ರೆ. ೯೨೧೨-೨೨ ವ್ಯವಸಾಯ ೬೪-೦೮-೮.

ತಾರೀಖು ೭ನೆ ಮೇ ೧೯೦೯.

ಸಂಸ್ಥಾನದ ಅನೇಕ ಕಡೆಗಳಲ್ಲಿ ಜಾನವರುಗಳಿಗೆ ತಗಲುವ ಸಾಂಕ್ರಾಮಿಕ ಜಾಡ್ಯಗಳು ಶಮನವಾಗುವ ಸೂಚನೆಯೇ ತೋರಬಾರದೇ ಇರುವುದಕ್ಕಾಗಿ ಸರ್ಕಾರದವರು ಬಹಳ ವಿಷಾದಿಸುತ್ತಾರೆ. ಜಾಡ್ಯ ತಗಲಿದ ಜಾನವರುಗಳಿಗೆ ಸಿಡುಬನ್ನು ಹಾಕಿಸುವ ವಿಷಯದಲ್ಲಿಯೂ, ಮತ್ತು ಅವುಗಳನ್ನು ಪ್ರತ್ಯೇಕವಾಗಿ ಇಡಿಸುವ ವಿಷಯದಲ್ಲೂ ಅಸಿಸ್ಟೆಂಟ್

ದ್ದಾದರೆ ಬಿತ್ತನೆ ಕೆಲಸವು ಬೀಜಚೆಲ್ಲಿ ನೇಗಿಲುನಿಂದ ಮುಚ್ಚುವದಕ್ಕಿಂತಲೂ ಬಹಳ ಜಾಗ್ರತೆ ಪೂರೈಸುತ್ತೆ.

ಕೂರಿಗೆಯಿಂದ ಬಿತ್ತುವದರಲ್ಲಿ ಮತ್ತೊಂದು ಅನುಕೂಲವೇನೆಂದರೆ... ಪೈರು ಸಾಲು ಸಾಲಾಗಿ ಬೆಳೆಯುವದರಿಂದ ಎತ್ತು ಕಟ್ಟಿ ಸಾಲುಗಳ ಮಧ್ಯೆ ಕುಂಟೆಗಳಿಂದ ಅರಗಬಹುದು. ಇಬ್ಬರು ಹುಡುಗರು ಅಥವಾ ಹೆಂಗಸರು ಮತ್ತು ಒಬ್ಬ ಗಂಡಾಳು ಇಂಥಾ ಮೂರು ಕುಂಟೆಗಳಿಗೆ ಒಂದು ಜೋಡಿ ಎತ್ತು ಕಟ್ಟಿ ದಿನ ೧ಕ್ಕೆ ೬—೮ ಎಕರೆವರಿಗೆ ಅರಗಬಹುದು. ಬೀಜ ಚೆಲ್ಲಿ ಪೈರು ಬೆಳೆಯುವದರಲ್ಲಿ ಸಾಮಾನ್ಯವಾಗಿ ಮೂರು ಸಲ ಹಲುಬೆ ಅಥವಾ ಕೈ ಮುಮುಟಿಯಿಂದ ಅರಗುವ ವಾಡಿಕೆ ಇದೆ. ಇದು ಸಾವಕಾಶವಾಗುವ ಕಾರಣ ಅನೇಕವಾಗಿ ಕೆಲಸ ಪೂರೈಸುವದರೊಳಗೆ ಭೂಮಿ ಒಣಗಿ ಬಿರುಕು ಬಿಡುತ್ತದೆ. ಎತ್ತು ಕಟ್ಟಿ ಅರಗುವದರಿಂದ ಭೂಮಿಯಲ್ಲಿ ತಂಪಿರುವಾಗಲೆ ಈ ಕೆಲಸವನ್ನು ಪೂರೈಸಬಹುದು. ಇದಕ್ಕೆ ಲಾಗವಡೂ ಕಮ್ಮಿ. ರೈತನು ಅವಶ್ಯ ಬಿದ್ದಹಾಗೆಲ್ಲಾ ಅಂದರೆ ಮಳೆ ಬಿದ್ದು ಭೂಮಿ ಒಣಗಿದ ಕೂಡ್ಲೆ ಈ ಕೆಲಸವನ್ನು ಮಾಡುತ್ತಿರಬಹುದು. ಇದರಿಂದ ಭೂಮಿಯಲ್ಲಿ ತನುವು ನಿಂತು ಪೈರು ಅತಿ ಜಾಗ್ರತೆಯಾಗಿ ಕಟಾವಿಗೆ ಬರುವದು ತಪ್ಪುತ್ತದೆ. ಬಿಸಿಲಿನಲ್ಲಿ ಒಣಗಿ ಕಟಾವಿಗೆ ಬರುವ ಪೈರು ಸಕಾಲದಲ್ಲಿ ಕಟಾವಿಗೆ ಬರುವ ಪೈರಿನಷ್ಟು ಎಂದಿಗೂ ಉತ್ಪತ್ತಿ ಕೊಡುವದಿಲ್ಲವೆಂಬುದು ಎಲ್ಲರಿಗೂ ತಿಳಿದಿರುತ್ತೆ.

ಕೂರಿಗೆ ಬಿತ್ತನೆಯನ್ನು ನವಂಬರು ತಿಂಗಳ ೨ನೆ ವಾರದೊಳಗೆ ಪೂರೈಸಬೇಕು. ಯಾಕೆಂದರೆ, ಹೀಗೆ ಬೆಳೆದ ಪೈರು ಚೆಲ್ಲಿ ಬೆಳೆದ ಪೈರಿಗಿಂತಲೂ ಬಲವಾಗಿ ಬೆಳೆಯುವದರಿಂದ ಬಿತ್ತನೆ ಹಿಂದಾದರೆ ಹತ್ತಿಯು ಮೆ ತಿಂಗಳಲ್ಲಿ ಮಂಜು ಷುರುವಾಗುವದಕ್ಕೆ ಮುಂಚೆ ಬಲಿಯದೇ ಬುಡ್ಡೆಗಳು ಅರಳುವದಿಲ್ಲ.

ಕೊಯಿಲ್‌ಪಟ್ಟಿ ಅಗ್ರಿಕಲ್ಚರಲ್ ಸ್ಟೇಷನ್ನಲ್ಲಿ ೪೦ ಎಕರೆಗಳಲ್ಲಿ ಕೂರಿಗೆಯಿಂದ ಬೀಜ ಹಾಕಿ ಬೆಳೆದದ್ದರಲ್ಲಿ ಸರಾಸರಿ ಹೋದ ವರುಷ ೫೦೧೩ ಪೌಂಡು ತೂಕ ಹತ್ತಿ ಉತ್ಪತ್ತಿಯಾಯಿತು. ಈ ತಾಕುಗಳಲ್ಲೆಲ್ಲಾ ಒಂದು ವರ್ಷ ಜೋಳ ಅಥವಾ ಕಂಬು ಮತ್ತೊಂದುವರ್ಷ ಹತ್ತಿ ಕೂರಿ

ತಿ ಪರಿವರ್ತನೆಯಿಂದ ಬೆಳೆಯುತ್ತಿದ್ದಾರೆ. ಗೊಬ್ಬರಕ್ಕಾಗಿ ಒಂದು ಎಕರೆಗೆ ಒಂದು ಸಾವಿರ ಕುರಿಗಳಂತೆ ಒಂದು ರಾತ್ರೆ ಮಂದೆ ನಿಲ್ಲಿಸುತ್ತಾರೆ. ತಿನ್ನವೆಲ್ಲಿ ಡಿಸ್ಟ್ರಿಕ್ಟಿನಲ್ಲಿ ಈರೀತಿ ಕೂರಿಗೆಯಲ್ಲಿ ಬಿತ್ತುವದರ ಅನುಕೂಲವನ್ನು ತಿಳಿದುಕೊಂಡಿರುತ್ತಾರೆ. ಒಂದು ಗ್ರಾಮದಲ್ಲಿ ರೈತನೊಬ್ಬನು ಹೋದವರ್ಷ ಕೂರಿಗೆಯಲ್ಲಿ ಬಿತ್ತಿ ಹತ್ತಿ ಸಾಗು ಮಾಡಿದನು. ಈ ಹೊಸ ಪದ್ಧತಿಯನ್ನನುಸರಿಸಿದ್ದಕ್ಕಾಗಿ ಇವನು ಗ್ರಾಮಸ್ಥರ ಅಸಮಾಧಾನಕ್ಕೆ ಗುರಿಯಾದನು. ಆದರೆ ಗ್ರಾಮಸ್ಥರು ಇವನಿಗೆ ಈಪದ್ಧತಿಯನ್ನನುಸರಿಸಿದ್ದರಿಂದ ಲಾಭ ಬಂದದ್ದು ನೋಡಿ ತಾವ್ಯಾನೂ ಇದೇರೀತಿ ವ್ಯವಸಾಯ ಮಾಡುವದರಲ್ಲಿ ಕುತೂಹಲವನ್ನು ತೋರಿಸುತ್ತಿದ್ದಾರೆ.

---

## Notifications.
## ಇಸ್ತಿಹಾರ್‌ನಾಮೆಗಳು.

ನಂ. ೧೨೧೮೩ ತಾ|| ೨೮-೫-೦೯.

ಮೈಸೂರು ಸರ್ವಿಸ್ ರೆಗ್ಯುಲೇಷನ್ಸ್ ೧೭೭ನೆ ಪ್ರಕರಣದ ಮೇರೆ ನಾಗಮಂಗಲದ ತಾಲ್ಲೂಕು ಅಮಲ್ದಾರ್ ಮೆ|| ಷೇಕ್ ಅಬ್ದುಲ್ಲಾಯವರಿಗೆ ೧೯೦೯ನೆ ಇಸವಿ ಮೆ ೫ನೆ ತಾರೀಖು ಲಾಗಾಯಿತು ೧೫ ದಿನಗಳ ಪ್ರಿವಿಲೇಜ್ ರಜಾ ಮಂಜೂರ್ಮಾಡಿತ್ತು.

೨. ಅವರಗೈರ್ ಹಾಜರಿನಲ್ಲಿ ತಾಲ್ಲೂಕು ಶಿರಸ್ತೇದಾರ್ ಜೆಚ್. ಶ್ರೀನಿವಾಸೈಯ್ಯಂಗಾರ್ರು ತಾಲ್ಲೂಕು ಛಾರ್ಜಿನಲ್ಲಿದ್ದರು.

---

ನಂ. ೧೨೨೨೧ ತಾ|| ೨೮-೫-೦೯.

ಮೈಸೂರು ಸರ್ವಿಸ್ ರೆಗ್ಯುಲೇಷನ್ಸ್ ೧೭೭ನೆ ಪ್ರಕರಣದ ಮೇರೆ ಹೊಸಕೋಟೆ ತಾಲ್ಲೂಕು ಅಮಲ್ದಾರ್ ಮೆ|| ವಿ. ಯಲ್. ಗುರುರಾಯರಿಗೆ ೧೯೦೯ನೆ ಇಸವಿ ಜೂನ್ ೧ನೆ ತಾರೀಖಿನಿಂದ ಅಥವ ಅವರು ವುಪಯೋಗಿಸಿಕೊಳ್ಳುವ ತಾರೀಖು ಲಾಗಾಯ್ತು ೧೫ ದಿನಗಳ ಪ್ರಿವಿಲೇಜ್ ರಜಾ ಮಂಜೂರ್ಮಾಡಿದೆ.

೨. ಅವರ ಗೈರ್‌ಹಾಜರಿನಲ್ಲಿ ತಾ|| ಶಿರಸ್ತೆ(ದಾರು) ಬಿ. ಕೆ. ಚಿನ್ನ ಸ್ವಾಮಿನಾಯಿಡುರವರು ತಾಲ್ಲೂಕು ಛಾರ್ಜಿನಲ್ಲಿರತಕ್ಕದ್ದು.

———o———

ನಂ. ೧೨೦೭ ತಾ|| ೨೧—೫—೧೯೦೯.

ಮೈಸೂರು ಸರ್ವಿಸ್ ರೆಗ್ಯುಲೇಷನ್ಸ್ ೧೭೭ನೆ ಪ್ರಕರಣದ ಮೇರೆ ತರೀಕೆರೆ ತಾಲ್ಲೂಕು ಅಮಲ್ದಾರ್ ಮೆ|| ಯ.ಂ. ಕೃಷ್ಣಸ್ವಾಮೈಯ್ಯಂಗಾರ್ರಿಗೆ ಅವರು ಉಪಯೋಗಿಸಿಕೊಳ್ಳುವ ತಾರೀಖು ಲಾಗಾಯಿತು ೧೫ ದಿನಗಳ ಪ್ರಿವಿಲೇಜು ರಜಾ ಮಂಜೂರ್ಮಾಡಿರುತ್ತೆ.

೨. ಅವರ ಗೈರ್‌ಹಾಜರಿನಲ್ಲಿ ತಾಲ್ಲೂಕು ಶಿರಸ್ತೇದಾರ್ ಕೋನೇರಿರಾಯರು ತಾಲ್ಲೂಕು ಛಾರ್ಜಿನಲ್ಲಿರತಕ್ಕದ್ದು.

——o——

## Occasional Notes.
## ವಿವಿಧ ವೃತ್ತಾಂತಗಳು.

೧. ಈ ಸಂಚಿಕೆ ಜೊತೆಗೆ ಬೆಂಗಳೂರು ಗೌರ್ನಮೆಂಟ್ ಬುಕ್ ಡಿಪೋವಿನಲ್ಲಿ ದೊರೆಯತಕ್ಕ ಮೈಸೂರು ಸರ್ಕಾರಿ ಪ್ರೊಸೀಡಿಂಗ್ಸ್‌ಗಳ ಪಟ್ಟಿಯನ್ನು ತೋರಿಸುವ ಒಂದು ಸಣ್ಣ ಪುಸ್ತಕವನ್ನು ನಮ್ಮ ಚಂದಾದಾರರುಗಳಿಗೆ ಸಪ್ಲಿಮೆಂಟಾಗಿ ಕಳುಹಿಸಿರುತ್ತೆ.

———o———

೨. ದ್ರಾಕ್ಷಿಬಳ್ಳಿಗೂ, ಉರಳೆಗೆಡ್ಡೆಗೂ ಮರದ ಬೂದಿಯು ಒಳ್ಳೆ ಗೊಬ್ಬರ. ಈ ಗಿಡಗಳ ಬೆಳವಳಿಕೆಗೆ ಮುಖ್ಯವಾದ ಪೊಟ್ಯಾಷ್ ಎಂಬ ಪದಾರ್ಥವು ಇದರಿಂದ ದೊರಕುತ್ತೆ. ಇದರಲ್ಲಿ ಪೊಟ್ಯಾಷ್ ಸೇರಿರುವದರಿಂದಲೇ ಬಟ್ಟೆ ಕೊಳೆಯನ್ನು ಸಹ ತೆಗೆಯಲು ಉಪಯೋಗಿಸಬಹುದು. ಮರದ ಬೂದಿಯನ್ನು ಸಣ್ಣಗೆ ಕತ್ತರಿಸಿದ ಹುಲ್ಲಿನೊಡನೆ ಬೆರಿಸಿ ಬಸವನ ಹುಳಗಳು ವಿಶೇಷವಾಗಿರುವ ಸ್ಥಳದಲ್ಲಿಟ್ಟರೆ ಈ ಹುಳವಿಸರ್ಜನೆಯು ಬೂದಿಗೆ ಅಂಟಿಕೊಂಡು ಹುಳಗಳನ್ನು ನಿಶ್ಶಕ್ತಿಮಾಡಿ ಜಾಗ್ರತೆ ನಾಶಪಡಿಸುತ್ತದೆ. ಸಾಮಾನ್ಯವಾಗಿ ಇಟಲಿದೇಶದಲ್ಲಿ ಫಲವೃಕ್ಷಗಳ ಬುಡಕ್ಕೆ ಚಳಿಗಾಲದಲ್ಲಿ ಗಂಧಕ, ಕಾಡಿಗೆ, ಸುಣ್ಣ, ಮರದಬೂದಿ, ಸವೀರಪಾಷಾಣ (Sublimate)

ಮತ್ತು ಜೇಡಿ ಮಣ್ಣು ಸಮಭಾಗ ಸೇರಿಸಿ ಬ್ರಷಿನಿಂದ ಲೇಪನ ಮಾಡು ತ್ತಾರೆ.—ಇಂಡಿಯನ್ ಟ್ರೇಡ್ ಜರ್ನಲ್, ೧೩—೫—೦೯.

———o———

೩. ಜರ್ಮನ್‌ದೇಶದಲ್ಲಿ ತಯಾರಾಗುವ ಕಾಲುಚೀಲ ಮುಂತಾದವುಗಳ ವ್ಯಾಪಾರವು ಇಂಡಿಯಾದೇಶದಲ್ಲಿ ಪ್ರಬಲವಾಗಿದೆ. ಇದಕ್ಕೆ ಕಾರಣವೇನಂದರೆ, ಜರ್ಮನ್‌ದೇಶೀಯರು ಈ ಸಾಮಾನುಗಳನ್ನು ತಯಾರ್‌ಮಾಡುವದರಲ್ಲಿ ಹೆಚ್ಚು ಕೌಶಲ್ಯವನ್ನು ತೋರಿಸುತ್ತಿದ್ದಾರೆ. ಇವರು ಉಪಯೋಗಿಸುವ ಯಂತ್ರವು ಮತ್ತು ಇವುಗಳಲ್ಲಿ ಕೆಲಸಮಾಡುವ ವಿಧಾನವು ಕೇವಲ ಸುಲಭವಾಗಿರುವದರಿಂದ ವಿಶೇಷ ಲಾಗವಡೇನೂ ಮುಟ್ಟುವದಿಲ್ಲ. ಅಲ್ಲಿ ಕೂಲಿ ಜನರು ಸಹ ಸುಲಭವಾಗಿ ದೊರಕುತ್ತಾರೆ. ಇಷ್ಟೇ ಅಲ್ಲದೆ ಇದಕ್ಕೆ ಇಂಡಿಯಾದೇಶದಲ್ಲಿರುವ ಗಿರಾಕಿಯನ್ನೂ ಸಹ ಇವರು ಚೆನ್ನಾಗಿ ಮಂಡಟ್ಟು ಮಾಡಿಕೊಂಡಿರುತ್ತಾರೆ. ಜರ್ಮನ್ ಸರ್ಕಾರದವರು ಇತರ ದೇಶಗಳಲ್ಲಿ ಈ ವ್ಯಾಪಾರವನ್ನು ಯಾವರೀತಿ ಪ್ರಚುರಪಡಿಸಬೇಕೆಂಬುವದನ್ನು ಮಾತ್ರ ಕಸಬುಗಾರರಿಗೆ ತಿಳಿಹೇಳುತ್ತಾರೆ. ಜರ್ಮನ್‌ದೇಶದಲ್ಲಿ ಈ ವ್ಯಾಪಾರವು ಬಹಳ ಜಾಗ್ರತೆ ಅಭಿವೃದ್ಧಿಗೆ ಬಂದಿರುತ್ತೆ. ೧೯೦೬ನೆ ಸಾಲಿನಲ್ಲಿ ೩೩,೦೦೦ ಪೌಂಡ್ ಬಾಳುವ ಸರಕುಗಳು ಅಲ್ಲಿಂದ ರವಾನಾದವು, ೧೯೦೭ರಲ್ಲಿ ೩೭೮,೦೦೦ ಪೌಂಡ್ ಬಾಳುವ ಸರಕುಗಳು ರವಾನಾಗಿರುತ್ತೆ. ಈ ಸರಕುಗಳಿಗೆ ಇಂಡಿಯಾದೇಶದಲ್ಲಿ ಗಿರಾಕಿ ಜಾಸ್ತಿ.—ಇಂಡಿಯನ್ ಅಗ್ರಿಕಲ್ಚರಿಸ್ಟ್ ೧—೯—೦೮.

———o———

೪. ತುಪ್ಪದ ಕ್ರಯವು ಇತ್ತಲಾಗಿ ಈ ದೇಶದಲ್ಲಿ ಸೇಕಡಾ ೧೨೫ ರಂತೆ ಜಾಸ್ತಿಯಾಗಿರುವುದು. ಅಗ್ಗವಾಗಿದ್ದಾಗ ಇದನ್ನು ಉಪಯೋಗಿಸುತ್ತಿದ್ದ ಬಹಳ ಮಂದಿ ಬಡಬಗ್ಗರಿಗೆ ಈಗ ಇದು ಸಾಧ್ಯವಾಗಿರುವದಿಲ್ಲ. ಕಳೆದ ವರುಷದಲ್ಲಿ ನಾಲ್ಕು ಮಿಲಿಯನ್ ಪವನುಗಳ ಮೌಲ್ಯದ ತುಪ್ಪವು ಉತ್ಪತ್ತಿಯಾಯಿತು. ಇದು ಹಿಂದೂಸ್ಥಾನದ ಜನರಿಗೆ ಸಾಲದೆಂಬುದು ಈ ಜಾಸ್ತಿ

ಕ್ರಿಯದಿಂದ ಗೊತ್ತಾಗುವುದು. ತುಪ್ಪವನ್ನು ಚೇಜಿ ಯಾವದಾದರೂ ವಿಧಾನದಿಂದ ತಯಾರಿಸಿದ್ದಲ್ಲಿ ಈ ಕೈಗಾರಿಕೆಯು ಬಹಳ ಪ್ರಯೋಜನವುಳ್ಳದ್ದಾಗಿತೋರಿಬರುವದು. ಈ ದೇಶದಲ್ಲಿ ಕೆಲವರು ಬೆಣ್ಣೆಯನ್ನು ಉಪಯೋಗಿಸುವರಾದರೂ ತುಪ್ಪವು ಹೆಚ್ಚಾಗಿ ಖರ್ಚಾಗುವುದು. ಅದರಲ್ಲಿಯೂ ದಕ್ಷಿಣ ಹಿಂದೂಸ್ಥಾನದ ಜನರು ತುಪ್ಪವನ್ನೇ ಅಧಿಕವಾಗಿ ಉಪಯೋಗಿಸುವರು. ತುಪ್ಪವು ಎಷ್ಟು ವರ್ಷಗಳಾದರೂ ಕಮಟಾಗುವುದಿಲ್ಲ. ಹಾಳಾದ ಕೋಟೆಗಳಲ್ಲಿಯೂ ಅರಮನೆಗಳಲ್ಲಿಯೂ ಸಹ ೨೦೦ ವರುಷಗಳ ಹಿಂದಿನ ತುಪ್ಪವು ಏನೂ ಕಮಟಾಗದೆ ಸಿಕ್ಕಿದ ದಾಖಲೆಗಳಿರುವವು. ೧೯೦೭-೦೮ನೆ ವರುಷಗಳಲ್ಲಿ ೪,೦೬,೫೫೫ ಪೌಂಡುತೂಕದ ತುಪ್ಪವನ್ನು ಹೊರದೇಶಗಳಿಗೆ ಕಳುಹಿಸಿತ್ತಾಗಿ ತಿಳಿದು ಬರುತ್ತದೆ. ಹೀಗೆ ಪರದೇಶಗಳಿಗೆ ರಫ್ತಾಗುವ ತುಪ್ಪವು ಬಹಳ ಕಡಿಮೆಯಾಗಿರುವುದು. ಮುಂಬಯಿಯಲ್ಲಿ ಕೆಲವು ವರ್ತಕರು ತುಪ್ಪವನ್ನು ಹತ್ತೀಕಾಳಿನ ಎಣ್ಣೆಯಿಂದ ತಯಾರಿಸಲು ತಕ್ಕುದಾದ ಯಂತ್ರಸಾಹಿತ್ಯಗಳನ್ನೂ ಹೀಗೆ ತುಪ್ಪ ತಯಾರಿಸುವ ಬಳ್ಳೇ ಮಾಹಿತಿದಾರರನ್ನೂ ಸಂಗ್ರಹಿಸುತ್ತಿರುವರು.—ಇಂಡಿಯನ್ ಟ್ರೇಡ್ ಜರ್ನಲ್—೬—೫—೦೯.

V.B. Soobbiah & Sons, Printers, Bangalore.—1909.

# THE MYSORE
# REVENUE & AGRICULTURAL GAZETTE.

ವಾಲ್ಯೂಂ ೩.] ಮಂಗಳವಾರ, ೧೫ನೆ ಜೂನ್ ೧೯೦೯. [ನಂ. ೧೬.

## Contents.



## ಅನುಕ್ರಮಣಿಕೆ.



## Use of Iron ploughs for Black Cotton Soils.*

## ಕರಿ ನೆಲಗಳಲ್ಲಿ ಕಬ್ಬಿಣದ ನೇಗಿಲುಗಳ ಉಪಯೋಗ.

ಹತ್ತಿ ಬೆಳೆಯುವ ಕರಿನೆಲದ ಭಾರಿ ವಿಸ್ತೀರ್ಣಗಳನ್ನು ಆಳವಾಗಿ

* ಮದರಾಸು ಅಗ್ರಿಕಲ್ಚರಲ್ ಕ್ಯಾಲೆಂಡರ್.—೧೯೦೯.

ಉಳದ ಸಾಲ್ ಬಸಾಲ್ ಕುಂಟೆ ಮತ್ತು ಕೂರಿಗೆಗಳಲ್ಲಿ ಮೇಲೆ ಮೇಲೆ ಕೆರೆಯುವದರಿಂದ ಭೂಮಿಯ ಹುಲುಸು ಅನೇಕ ವಿಧಗಳಲ್ಲಿ ಕಡಿಮೆಯಾಗುತ್ತದೆ. ನಾಡು ನೇಗಿಲುಗಳಿಂದ ಉಳುವದು ಇದಕ್ಕಿಂತಲೂ ಉತ್ತಮವಾಗಿದ್ದಾಗ್ಯೂಕೂಡ ಇದರಿಂದಲೂ ಕೆಲಸವು ಅಷ್ಟು ಸಮರ್ಪಕವಾಗಿರುವದಿಲ್ಲ. ಮೇಲೆ ಮೇಲೆ ಉಕ್ಕೆ ಮಾಡುವದರಲ್ಲಿ ಮುಖ್ಯವಾದ ಅನಾನುಕೂಲಗಳು ಯಾವವಂದರೆ, ಮೇಲೆ ಬಿದ್ದ ಮಳೆನೀರು ಭೂಮಿಯಲ್ಲಿ ಚನ್ನಾಗಿ ಊರುವದಿಲ್ಲ. ಕರಿ ನೆಲವು ತನುವನ್ನು ಬಹಳಕಾಲ ಉಳಿಸಿಕೊಳ್ಳುತ್ತದೆಯಾದ್ದರಿಂದ ಒಳ್ಳೆ ಒಂದು ನೆನೆ ಮಳೆ ಬಂದಲ್ಲಿ ಸಡಲಿರುವ ಮೇಲ್ಭಾಗದಲ್ಲಿ ನೀರು ಚನ್ನಾಗಿ ಊರುತ್ತದೆ. ಅಂದರೆ ಕುಂಟೆ ಕೂರಿಗೆ ಉಪಯೋಗಿಸಿದಾಗ ಎರಡು ಅಂಗುಲ ಆಳವೂ, ನೇಗಿಲು ಉಪಯೋಗಿಸಿದಾಗ ೪ ಅಂಗುಲ ಆಳವೂ ನೀರು ಇಳಿಯುತ್ತದೆ. ಸಡಲಿರುವ ಮೇಲ್ಭಾಗದ ಪ್ರತಿಮಣ್ಣಿನ ಕೆಳಗಿರುವ ಅಡಿನೆಲವು ಗಟ್ಟಿಯಾಗಿರುವಕಾರಣ ಇದರಲ್ಲಿ ನೀರು ಊರುವದು ಸಾವಕಾಶ. ಆದಕಾರಣ ಒಂದು ಮಳೆಯಾದ ಮೇಲೆ ಎರಡನೆ ಮಳೆ ಬಂದಲ್ಲಿ ನೀರು ಭೂಮಿಯಲ್ಲಿ ವಿಶೇಷ ಇಳಿಯದೆ ಎಲ್ಲಾ ಹರಿದು ಹೋಗುತ್ತದೆ. ಇದರಿಂದ ಎರಡು ವಿಧವಾಗಿ ನಷ್ಟವಾಗುತ್ತದೆ. (೧)ಸಾಮಾನ್ಯವಾಗಿ ಸಾಕು ಸಾಲದಷ್ಟು ಮಳೆ ಬರುವ ಪ್ರಾಂತ್ಯದಲ್ಲಿಯೇ ಕರಿನೆಲ ಇರುವದು. ಒಟ್ಟು ಮಳೆ ಸಾಕಾದಷ್ಟು ಬಂದಾಗ್ಯೂಕೂಡ ಮಳೆಗಳು ಅನೇಕವಾಗಿ ಜೋರಾಗಿಬಂದು ಜಮೀನಿನ ಮೇಲೆ ಹೊರಳಿಹೋಗಿ ಭೂಮಿಯಲ್ಲಿಟ್ಟ ಪೈರಿಗೆ ಸಾಕಾದಷ್ಟು ತನುವು ನಿಲ್ಲುವದಿಲ್ಲ. (೨) ಜಮೀನಿನ ಮೇಲೆ ಬಿದ್ದ ನೀರು ಹೊರಳಿ ಹೋಗುವದರಿಂದ ಇದರಲ್ಲಿರುವ ಸಸ್ಯಾಹಾರವು ಕೊಚ್ಚಿಹೋಗಿ ಬಹಳ ಲುಕ್ಸಾನಾಗುತ್ತದೆ. ಜಮೀನನ್ನು ಆಳವಾಗಿ ಉಳುವದರಿಂದ ಮೇಲ್ಭಾಗವನ್ನು ೧೦ ಅಂಗುಲ ಸಡಲಿಸಬಹುದು. ಇದರಿಂದ ಮಳೆ ನೀರು ಜಾಗ್ರತೆಯಾಗಿಯೂ ಚನ್ನಾಗಿಯೂ ಭೂಮಿಯಲ್ಲಿ ಊರುವದಕ್ಕೆ ಅನುಕೂಲಿಸುತ್ತದೆ.

ಆಳವಾಗಿ ಉಳುವದರಿಂದ ಮತ್ತೊಂದು ಅನುಕೂಲವುಂಟು. ಈ ಕರಿನೆಲಗಳಲ್ಲಿ ಆಳವಾಗಿ ಬೇರೂರುವ ಹುಲ್ಲುಗಳು ಬೆಳೆಯುವದು ಹೆಚ್ಚು. ಇವು ಪೈರಿಗೆ ಒದಗುವ ಸಸ್ಯಾಹಾರವನ್ನೂ ತನುವನ್ನೂ ಅಪಹರಿಸಿ ಬಹಳ

ನಷ್ಟವನ್ನುಂಟು ಮಾಡುತ್ತವೆ. ಈ ಕರಿನೆಲಗಳು ಎಷ್ಟು ಫಲವತ್ತಾಗಿದ್ದಾಗ್ಯೂಕೂಡ ಇವುಗಳಲ್ಲಿ ಗರಿಕೆಗಡ್ಡೆ, ಕಂದಾರ ನಟ್ಟು ಮುಂತಾದ ಹುಲ್ಲುಗಳು ಹೆಚ್ಚಾಗಿಬೆಳೆದು ಇಟ್ಟ ಪೈರು ಲುಕ್ಸಾನಾಗಿರುವದು ಅಥವಾ ನರಟಿಕೊಂಡು ಸೊರಗಿರುವದು ಸಾಮಾನ್ಯವಾಗಿ ನೋಡಿರಬಹುದು. ಆದ್ದರಿಂದ ಈ ಹುಲ್ಲುಗಳನ್ನು ನಾಶಮಾಡುವದು ಕೇವಲ ಮುಖ್ಯವಿಷಯ. ಈ ಹುಲ್ಲುಗಳ ಬೇರುಗಳಿಗೆ ಬೇಸಿಗಿಯಲ್ಲಿ ಬಿಸಲು ಒಡಿಯುವ ಹಾಗೆ ಮಾಡುವದು ಇದಕ್ಕೆ ಒಂದು ಸುಲಭೋಪಾಯ.

ಆಳವಾಗಿ ಉಳುವದರಿಂದ ಮೂರು ಅನುಕೂಲಗಳುಂಟೆಂದು ಸಂಕ್ಷೇಪವಾಗಿ ಈ ರೀತಿ ಹೇಳಬಹುದು. (೧)ಪೈರಿಗೆ ತಕ್ಕಷ್ಟು ತನುವು ಭೂಮಿಯಲ್ಲಿ ಉಳಿಯುತ್ತದೆ. (೨)ಸಸ್ಯಾಹಾರ ಪದಾರ್ಥಗಳು ಭೂಮಿಯಿಂದ ಕೊಚ್ಚಿ ಹೋಗುವದಿಲ್ಲ. (೩) ಆಳವಾಗಿ ಬೇರೂರುವ ಹುಲ್ಲುಗಳು ನಾಶವಾಗುತ್ತವೆ.

ಕೆಲವು ಪ್ರಾಂತ್ಯಗಳಲ್ಲಿ ಭಾರಿ ವಿಸ್ತೀರ್ಣಗಳನ್ನು ಗುದ್ದಲಿಗಳಿಂದ ಅಗೆಯುತ್ತಾರೆ. ಇದರಿಂದ ಆಳವಾಗಿ ಉಳುವದರ ಅನುಕೂಲತೆಯನ್ನು ಅವರು ತಿಳಿದಿರುವದು ವ್ಯಕ್ತಪಡುತ್ತದೆ. ಹೀಗೆ ಮಾಡುವದರಿಂದ ಕೆಲಸವು ಸಮರ್ಪಕವಾಗಿ ನಡೆದರೂ ಲಾಗವಡು ದುಬಾರಿಯಾಗುತ್ತದೆ. ಅಂದರೆ ಎಕರೆಗೆ ೧೦ ರೂಪಾಯಿಗೆ ಕಡಿಮೆ ಆಗುವದಿಲ್ಲ. ಪೂರ್ವದಲ್ಲಿ "ದೊಡ್ಡಮಡಕ" ಎಂಬ ಅಗಾಧವಾದ ಮರದ ನೇಗಿಲನ್ನು ಆರುಜೊತೆ ಎತ್ತು ಕಟ್ಟಿ ಉಪಯೋಗಿಸುತ್ತಿದ್ದರು. ಇದರಿಂದ ದಿನ ಒಂದಕ್ಕೆ ೪ ಎಕರೆ ಉಳಬಹುದಾಗಿತ್ತು ಮತ್ತು ಪುನಹ ಇನ್ನೊಂದು ಸಾಲು ಉಳದೆ ಇದ್ದರೆ ಜಮೀನು ಹಸನಾಗುತ್ತಿರಲಿಲ್ಲ. ಇದನ್ನು ಉಪಯೋಗಿಸುತ್ತಿದ್ದುದೇ ಆಳವಾಗಿ ಉಳುವದರ ಅವಶ್ಯಕತೆಯನ್ನು ಸ್ಪಷ್ಟಪಡಿಸುತ್ತದೆ. ಈಚೆಗೆ ಈ ಕೆಲಸಕ್ಕೆ ಕಬ್ಬಿಣದ ನೇಗಿಲುಗಳನ್ನು ಉಪಯೋಗಿಸುತ್ತಿದ್ದಾರೆ. ಇದಕ್ಕೆ ಬಲವಾದ ನಾಲ್ಕುಜೊತೆ ಅಥವಾ ಸಾಮಾನ್ಯವಾದ ೫ ಜೊತೆ ಎತ್ತುಕಟ್ಟಿ ದಿನ ಒಂದಕ್ಕೆ ¾ ಎಕರೆ ಪೂರೈಸಬಹುದು. ಇನ್ನೊಂದು ಸಾಲು ಉಳಬೇಕಾದ ಅವಶ್ಯಕತೆ ಇರುವದಿಲ್ಲ. ಜಮೀನು ಹಸನಾಗುತ್ತದಲ್ಲದೆ ಲಾಗವಡು ಎಕರೆಗೆ ೫ ರೂಪಾಯಿ ಮೀರುವದಿಲ್ಲ. ಸೀಡೆಡ್ ಡಿಸ್ಟ್ರಿಕ್ಟುಗಳಲ್ಲಿ ಉಪಯೋಗ

ದಲ್ಲಿರುವ ಕಬ್ಬಿಣದ ನೇಗಿಲುಗಳು ಚನ್ನಾಗಿ ಕೆಲಸ ಮಾಡುತ್ತಿವೆ. ಈ
ನೇಗಿಲುಗಳಿಂದ ಬೇಸಿಗೆಯಲ್ಲಿ ಜಮೀನನ್ನು ಉತ್ತು ದೊಡ್ಡ ದೊಡ್ಡ ಹೆಂ
ಟೆಗಳನ್ನು ಎಬ್ಬಿಸುತ್ತಾರೆ. ಇವು ಬಿಸಲಿನಲ್ಲಿ ಒಣಗಿ ನೀರು ಊರುವದ
ಕ್ಕೆ ಅನುಕೂಲ ವಾಗುತ್ತವಲ್ಲದೆ ಹುಲ್ಲಿನಬೇರು ಬಿಸಲಿಗೆ ಸಿಕ್ಕಿ ಒಣಗು
ತ್ತದೆ. ಈ ನೇಗಿಲುಗಳ ಉಪಯೋಗದಿಂದ ಬಳ್ಳಾರಿಯಲ್ಲಿ ಜೋಳದ
ಪೈರಿನಲ್ಲಿ ಎಕರೆಗೆ ೪೦ ಪೌಂಡು ಕಾಳೂ, ಹತ್ತಿಪೈರಿನಲ್ಲಿ ಎಕರೆಗೆ ೪೦
ಪೌಂಡು ಹತ್ತಿಯೂ ಹೆಚ್ಚು ಉತ್ಪತ್ತಿಯಾಗಿರುತ್ತೆ. ಕೊಯಿಲ್‌ಪಟ್ಟಿ ಫಾ
ರಂನಲ್ಲಿ ಕಂಬು ಪೈರಿನಲ್ಲಿ ಎಕರೆಗೆ ೩೦೦ ಪೌಂಡು ಕಾಳೂ, ಜೋಳದ ಪೈ
ರಿನಲ್ಲಿ ೫೦೦ ಪೌಂಡು ಸಪ್ಪೆಯೂ, (ಮೇವು) ಹೆಚ್ಚು ಉತ್ಪತ್ತಿಯಾಯಿ
ತು. ಆಳವಾಗಿ ಉಳುವದರಲ್ಲಿ ಒಂದಂಶವನ್ನು ಮಾತ್ರ ಗಮನಿಸಬೇಕು. ಬಿ
ತ್ತನೆ ಮಾಡುವದರಲ್ಲಿ ಕಾಳು ಚನ್ನಾಗಿ ಮೊಳೆಯ ಬೇಕಾದರೆ ಸ್ವಲ್ಪ ಆಳ
ವಾಗಿ ಬಿತ್ತಬೇಕು. ಹೇಗೆಂದರೆ, ಜಮೀನು ಮೇಲ್ಭಾಗವು ಪುಡಿ ಪುಡಿಯಾ
ಗಿ ಸಡಲಿರುವ ಕಾರಣ ಜಾಗ್ರತೆ ಒಣಗಲಾಗುತ್ತದೆ.

---

## Revenue Appeals.
## ರೆವಿನ್ಯೂ ಅಪೀಲುಗಳು.

೧೯೦೪—೦೫ನೆ ಸಾಲಿನ ೧೧ನೆ ನಂ. ಅಪೀಲು ಮೊಕದ್ದಮೆ.

| ಅಪೀಲು ವಾದಿ.— | | ಅಪೀಲು ಪ್ರತಿವಾದಿ.— |
|---|---|---|
| ಅರಳು ಮಲ್ಲಿಗೆಗೌಡ. | vs. | ನರಸಿಂಹ. |

ವಾದಿ ಪ್ರತಿವಾದಿಗಳು ಒಂದೇ ತಂದೆಯ ಮಕ್ಕಳು. ಈಪೈಕಿ
ವಾದಿಯು ಕಿರೆ ಹೆಂಡತಿಯ ಮಗ. ಪ್ರತಿವಾದಿಯು ಹಿರೆ ಹೆಂಡತಿಯ ಮ
ಗ. ತಂದೆಯು ಫೌತಿಯಾದನಂತರ ಜಮಾಬಂದಿ ಆಫೀಸರವರು ಇವನ
ಖಾತೆಯಲ್ಲಿದ್ದ ಜಮೀನುಗಳನ್ನು ವಾದಿ ಪ್ರತಿವಾದಿಗಳ ಹೆಸರಿನಲ್ಲಿ ಜಾಯಿಂ
ಟ್ ಪಟ್ಟಿಮಾಡಿದರು. ಈ ವಿಚಾರದಲ್ಲಿ ಪ್ರತಿವಾದಿಯ ತಾಯಿಯು ಡೆಪ್ಯು
ಟಿ ಕಮೀಷನರವರಲ್ಲಿ ಪುನಃ ಅರ್ಜಿಮಾಡಿಕೊಂಡದ್ದರಮೇಲೆ ಡೆಪ್ಯುಟಿ ಕ
ಮೀಷನರವರು ಜಾಯಿಂಟ್ ಪಟ್ಟಿಯನ್ನು ರದ್ದುಮಾಡಿ ಪ್ರತಿವಾದಿಯ ಹೆ
ಸರಿನಲ್ಲಿ ಪಟ್ಟಿಮಾಡಲು ಹುಕುಂಮಾಡಿದರು. ಈ ಆರ್ಡರ್ ಮೇಲೆ ವಾದಿ
ಯು ಅಪೀಲುಮಾಡಿದ್ದರಲ್ಲಿ ಗೌರ್ನಮೆಂಟಿನವರು ಫೈಸಲು ಹುಕುಂ ಕೆ

ಟ್ಟಿನುವದೇನೆಂದರೆ.—ಲ್ಯಾಂಡ್ ರೆವಿನ್ಯೂಕೋಡ್ ೬೮ನೆ ಸೆಕ್ಷರ್ಜ ಮೇರೆ ಹಿರೆ ಮಗನಿಗೆ ಹೆಚ್ಚು ಬಾಧ್ಯತೆ ಇರುತ್ತದೆ. ಹಿರೆ ಹೆಂಡತಿಯ ಮಗನು ಕಿರೆ ಮಗನಾಗಿದ್ದ ಪಕ್ಷದಲ್ಲಿ ಅವನಿಗೆ ಹೆಚ್ಚು ಹಕ್ಕು ಇರುತ್ತದೆಂದು ಹೇಳ ಲು ಕಾನೂನಿನಲ್ಲಿ ಎಲ್ಲಿಯೂ ಅವಕಾಶವಿರುವದಿಲ್ಲ. ಆದಕಾರಣ ಡೆಪ್ಯುಟಿ ಕಮಿಷನರವರ ಆರ್ಡರನ್ನು ಬದಲಾಯಿಸಿ ಖಾತೆಯನ್ನು ವಾದಿಯ ಹೆಸರಿ ನಲ್ಲಿ ಮಾಡಬೇಕೆಂದು ಹುಕುಂ ಮಾಡಿರುತ್ತೆ. ಪ್ರತಿವಾದಿಯು ಕಂದಾ ಯಕ್ಕಾಗಿ ಪಾವತಿಮಾಡಿರುವ ಹಣವನ್ನು ರೀಫಂಡುಮಾಡಲು ಕೇಳಿಕೊಂಡ ಲ್ಲಿ ಇವನಿಗೆ ಮೊಬಲಗನ್ನು ರೀಫಂಡು ಮಾಡಿ, ಅದನ್ನುವಾದಿಯಿಂದ ವ ಸೂಲ್ಮಾಡತಕ್ಕದ್ದು.

## Experimental work of the Surat Agricultural Station, 1907-08.

## ಸೂರಟ್ ಅಗ್ರಿಕಲ್ಚರಲ್ ಸ್ಟೇಷನ್ನಲ್ಲಿ ನಡೆದ ಅಜಮಾಯಿಷಿಗಳು.

ಅನೇಕ ತರಹೆ ಗೊಬ್ಬರಗಳ ಉಪಯೋಗ.—ಈ ಫಾರಂನಲ್ಲಿ ಅನೇ ಕ ತರಹೆ ಗೊಬ್ಬರಗಳನ್ನಿಟ್ಟು ಹತ್ತಿ, ಜೋಳ, ಎಳ್ಳು ಮತ್ತು ತೊಗರಿ ಈ ಪೈರುಗಳನ್ನು ಬೆಳೆದು ಅಜಮಾಯಿಷಿ ಮಾಡಿ ನೋಡಿದ್ದರಲ್ಲಿ ಈ ಫಲಿ ತಾಂಶಗಳು ಕಂಡುಬಂದಿರುತ್ತೆ.

(೧) ಹತ್ತಿ, ಜೋಳ ಮತ್ತು ಎಳ್ಳು ಇವುಗಳಿಗೆ ಈ ಗೊಬ್ಬರ ಗಳನ್ನು ವಿವೇಕವಾಗಿ ಉಪಯೋಗಿಸುವದರಿಂದ ಅನುಕೂಲವಾಗಿರುತ್ತೆ. ಇವುಗಳಿಂದ ತೊಗರಿಗೇನೂ ಉಪಯೋಗ ಕಂಡುಬರಲಿಲ್ಲ.

(೨) ದನವಿನ ಗೊಬ್ಬರ ಮತ್ತು ಹರಳು ಹಿಂಡಿಯ ಉಪಯೋ ಗದಿಂದ ಒಳ್ಳೇ ಫಲಿತಾಂಶಗಳು ತೋರಿಬಂದವು. ಆದರೆ ಸೋಡಿಯಂ ನೈ ಟ್ರೇಟ್ (*Sodium Nitrate*) ಮತ್ತು ಸೂಪರ್ ಫಾಸ್ಫೇಟ್ (*Super-phosphate*) ಗೊಬ್ಬರವನ್ನು ಹಾಕಿ ಹತ್ತಿ ಬೆಳೆಮಾಡಿದ್ದರಲ್ಲಿ ಒಳ್ಳೇ ದ ನವಿನ ಗೊಬ್ಬರದಿಂದಾಗುವ ಅನುಕೂಲವೇ ಕಂಡುಬಾತು. ಈ ಗೊ ಬ್ಬರಗಳನ್ನು ವಿವೇಕವಾಗಿ ಉಪಯೋಗಿಸಿದ್ದಾದರೆ ಉತ್ಪತ್ತಿಯನ್ನು ಇ ನ್ನೂ ಹೆಚ್ಚಿಸಬಹುದಾಗಿ ತೋರುತ್ತೆ. ನೈಟ್ರೋಜನ್ ಇರುವ ಗೊಬ್ಬ

ರಗಳನ್ನು ಉಪಯೋಗಿಸುವದರಿಂದ ಜೋಳದ ಉತ್ಪತ್ತಿಯು ಹೆಚ್ಚಿ ಲಾಭವು ತೋರಿತು. ಈ ಗೊಬ್ಬರಗಳನ್ನು ಇತರ ಗೊಬ್ಬರಗಳೊಂದಿಗೆ ಬೆರಸಿ ಉಪಯೋಗಿಸಿದ್ದಾದರೆ ಇವು ದನವಿನ ಗೊಬ್ಬರ ಮತ್ತು ಹರಳು ಹಿಂಡಿಗೆ ಸಮಾನಗಳಾಗುವವು. ಎಳ್ಳು ತೊಗರಿ ಬೆರಸಿ ಪೈರಿಟ್ಟದ್ದರಲ್ಲಿ ದನವಿನ ಗೊಬ್ಬರದಿಂದ ಉಪಯೋಗ ಕಂಡುಬಂದಿತು. ತೊಗರಿಪೈರಿಗೆ ಈ ಗೊಬ್ಬರಗಳನ್ನು ಉಪಯೋಗಿಸಿದ್ದರಲ್ಲಿ ಕಾಣಬರುವಹಾಗೆ ಏನೂ ಅನುಕೂಲವಾಗಲಿಲ್ಲ.

ಹತ್ತಿ ಮತ್ತು ಜೋಳದ ಪೈರಿಗೆ ಕೊಳೆತ ಕತ್ತಾಳೆಯನ್ನು ಪ್ರಸಕ್ತಸಾಲಿನಲ್ಲಿ ಗೊಬ್ಬರವಾಗಿ ಉಪಯೋಗಿಸಿದ್ದರಲ್ಲಿ ದನವಿನ ಗೊಬ್ಬರದ ಉಪಯೋಗದಿಂದ ಉತ್ಪತ್ತಿಯಾದದ್ದಕ್ಕಿಂತಲೂ ಹೆಚ್ಚು ಉತ್ಪತ್ತಿಯಾಯಿತು. ದನವಿನ ಗೊಬ್ಬರವನ್ನು ಉಪಯೋಗಿಸಿದ ತಾಕಿನಲ್ಲಾದರೋ ಗೊಬ್ಬರವನ್ನು ಉಪಯೋಗಿಸದೇಯಿದ್ದ ತಾಕಿನಲ್ಲಿ ಆದದ್ದಕ್ಕಿಂತಲೂ ಹೆಚ್ಚು ಉತ್ಪತ್ತಿಯಾಯಿತು.

ಮೇವು.—ಹುಲ್ಲನ್ನು ಯಾವಕಾಲದಲ್ಲಿ ಕತ್ತರಿಸಿದರೆ ದನಗಳಿಗೆ ಒಳ್ಳೇಮೇವಾಗಿ ಒದಗುವದೆಂಬುವ ವಿಚಾರದಲ್ಲಿ ಅಜಮಾಯಿಷಿ ನಡೆದವು. ಇದಕ್ಕಾಗಿ ಹುಲ್ಲು ಹೂಬಿಟ್ಟದ್ದಾಗಲೂ, ಹಳದಿ ಬಣ್ಣ ತಿರುಗಿದನಂತರವೂ, ಕತ್ತರಿಸಿ ಪರೀಕ್ಷಿಸಿದ್ದರಲ್ಲಿ ಹೂಬಿಟ್ಟಿರುವಾಗ ಹುಲ್ಲನ್ನು ಕುಯ್ಯುವದು ಮೇಲೆಂದು ತಿಳಿಯಬರುತ್ತದೆ. ಹಿಂಗಾರು ಮಳೆಗಳು ಸಕಾಲದಲ್ಲಿ ನಡೆಸಿದರೆ ಈ ಕಾಲದಲ್ಲಿ ಕತ್ತರಿಸಿದ ಹುಲ್ಲು ಹೆಚ್ಚಾಗಿ ಒದಗುತ್ತದೆ ಮತ್ತು ರಸಾಯಿನ ಶಾಸ್ತ್ರದ ರೀತಿ ಅಜಮಾಯಿಷಿ ಮಾಡಿದ್ದರಲ್ಲಿ ಈ ಹುಲ್ಲಿನ ಗುಣವು ಉತ್ತಮವೆಂದು ಕಂಡುಬಂತು. ಈ ಕಾಲದಲ್ಲಿ ಹುಲ್ಲನ್ನು ಕುಯ್ಯುವದರಿಂದ ಮತ್ತೊಂದು ಅನುಕೂಲ. ಛಳಿಗಾಲದಲ್ಲಿ ದನಗಳನ್ನು ಈ ಜಮೀನುಗಳಲ್ಲಿಯೇ ಬಹಳಕಾಲ ಮೇಯಿಸಲು ಅವಕಾಶವಿರುತ್ತೆ.

—o—

## Government Orders.
## ಸರ್ಕಾರಿ ಹುಕುಂಗಳು.

ಕ್ಯಾಂಪು ನಂಬರ್ ೨೦—೩೦.

ತಾರೀಖು ೩೦ನೆ ಮೇ ೧೯೦೯ನೆ ಇಸವಿ.

೧೯೦೮—೦೯ನೆ ಕೀಲಕ ಸಂವತ್ಸರದಲ್ಲಿ ಕಾಲಸ್ಥಿತಿ ಸುಭಿಕ್ಷವಾಗಿಲ್ಲ

ದರಿಂದ, ಆ ಸಾಲಿನ ಜಮೀನು ಕಂದಾಯವನ್ನು ರಿಮಿಷನ್ ಯಾ ಮುಜರೆ ಕೊಡತಕ್ಕ ಮತ್ತು ಅದನ್ನು ವಸೂಲ್ಮಾಡದೆ ಕೆಲವುಕಾಲ ನಿಲ್ಲಿಸತಕ್ಕ ವಿಷಯದಲ್ಲಿ, ಸಾದರಾಗಿರುವ ಸರ್ಕಾರಿ ಹುಕುಂ.—

೧. ತರೀ ಜಮೀನಾಗಿ ವಿಂಗಡಿಸಲ್ಪಟ್ಟ ಜಮೀನುಗಳ ಕಂದಾಯ.—ನೀರಿನ ಆಸರೆ ಯಾವ ಮೂಲಕವಾಗಿಯಾದರೂ ಇರಲಿ, ತರಿಯಾಗಿ ವಿಂಗಡಿಸಲ್ಪಟ್ಟ ಜಮೀನುಗಳಲ್ಲಿ ೧೯೦೮—೦೯ನೆ ಕೀಲಕ ಸಾಲಿನಲ್ಲಿ ತರೀ ಫಸಲು ಶುದ್ಧಾಂಗವಾಗಿ ಆಗದೆ ಇದ್ದರೂ ಅಥವಾ ಸಾಧಾರಣ ೧೬ ಆಣೆ ಬೆಳೆ ಪೈಕಿ ೪ ಆಣೆಗೆ ಮೀರದಷ್ಟು ಫಸಲು ಆಗಿದ್ದರೂ ಸಹಿತ, ಅರ್ಧ ಕಂದಾಯವನ್ನು ರಿಮಿಷನ್ ಯಾ ಮುಜರೆ ಕೊಟ್ಟು ಬಾಕೀ ಅರ್ಧ ಕಂದಾಯವನ್ನು ವಸೂಲ್ಮಾಡತಕ್ಕದ್ದು.

೨. ಫಸಲು ಶುದ್ಧಾಂಗವಾಗಿ ಆಗದೆ ಇರುವ ಜಮೀನುಗಳಿಗೆ ಮುಜರೆ ಕೊಡುವಂತೆ ಅದೇ ಪ್ರದೇಶದಲ್ಲಿರುವ ಹಿಡುವಳಿ ಬಂಜರು ಜಮೀನಿಗೂ ಅದೇ ದರದ ರಿಮಿಷನ್ ಕೊಡಬೇಕು. ಆದರೆ 'ಮಾಮೂಲು ಬಂಜರು' ಜಮೀನುಗಳಿಗೆ ಅಂದರೆ, ಕ್ರಮವಾಗಿ ಸಾಧಾರಣ ಸಾಲಿನಲ್ಲಿ ಬೆಳೆ ಇಡಲ್ಪಡದ ಹಿಡುವಳಿಯ ಜಮೀನಾಗಿದ್ದು ಈ ವರ್ಷವೂ ಸಾಧಾರಣ ಬೆಳೆಯಾಗಿದ್ದ ಪಕ್ಷದಲ್ಲಿ ಅಂಥಾ ಜಮೀನು ಬಂಜರಾಗಿಯೇ ಇರುತ್ತಿತ್ತೆಂದು ಊಹಿಸಬಹುದಾದ ಜಮೀನುಗಳಿಗೆ ರಿಮಿಷನ್ ಕೊಡತಕ್ಕದ್ದಲ್ಲ.

೩. ತರಿಯಾಗಿ ವಿಂಗಡಿಸಲ್ಪಟ್ಟ ಜಮೀನಿನಲ್ಲಿ ಸರ್ಕಾರಿ ನೀರಿನ ಆಸರೆಯಿಂದ ಅಥವಾ ಅಂಥಾ ಆಸರೆಇಲ್ಲದೆ ಖುಷ್ಕಿ ಫಸಲನ್ನು ಬೆಳದಿದ್ದರೆ, 1ನೆ ಪ್ಯಾರಾದಲ್ಲಿ ಕಂಡ ರಿಯಾಯಿತಿಯನ್ನು ಇದಕ್ಕೂ ತೋರಿಸಬೇಕು, ಆದರೆ ಅಂಥಾ ಗ್ರಾಮದಲ್ಲಿ ವಸೂಲಾಗುತ್ತಿರುವ ಖುಷ್ಕಿ ಕಂದಾಯದ ಸರಾಸರಿ ದರವನ್ನೂ ಸಹಾ ಖುಷ್ಕಿ ಬೆಳೆ ಬೆಳದ ಸದರಿ ಜಮೀನಿನಮೇಲೆ ವಸೂಲ್ಮಾಡಬೇಕು. ಈ ಜಮೀನುಗಳನ್ನು ಅಳತೆ ಮಾಡಬೇಕಾದ್ದಿಲ್ಲ, ಆದರೆ ಒಂದು ಪೂರಾ ಸರ್ವೆ ನಂಬರನ್ನಾಗಲಿ ಅಥವಾ ಒಂದು ಸರ್ವೆ ನಂಬರಿನ, ಒಂದು ಪ್ರತ್ಯೇಕ ಭಾಗವನ್ನಾಗಲಿ, ಪೂರ್ತಿ ಇದ್ದಂತೆ ಭಾವಿಸತಕ್ಕದ್ದು. ಖುಷ್ಕಿ ಬೆಳೆಯು ಶುದ್ಧಾಂಗವಾಗಿ ಆಗದಿದ್ದರೆ ಅಂಥಾ ಖುಷ್ಕಿ ಬೆಳೆಗಾಗಿ ಹೆಚ್ಚು ತೆರಿಗೆಯನ್ನು ವಸೂಲ್ಮಾಡತಕ್ಕದ್ದಿಲ್ಲವು.

೪. ಖುಷ್ಕಿಯಾಗಿ ವಿಂಗಡಿಸಲ್ಪಟ್ಟ ಜಮೀನುಗಳ ಕಂದಾಯ.— ಖುಷ್ಕಿಯಾಗಿ ವಿಂಗಡಿಸಲ್ಪಟ್ಟ ಜಮೀನುಗಳಲ್ಲಿ ಖುಷ್ಕಿ ಬೆಳೆ ಶುದ್ಧಾಂಗ ವಾಗಿ ಆಗದಿದ್ದರೂ ಅಥವಾ ಆದ ಬೆಳೆ ಸಾಧಾರಣ ೧೬ ಆಣೆ ಪೈಕಿ ೪ ಆಣೆ ಗೆ ಮೀರದಂತೆ ಬೆಳೆ ಆಗಿದ್ದರೂ ಅರ್ಧ ಕಂದಾಯವನ್ನು ನಿಲ್ಲಿಸಿಬಿಟ್ಟು ಬಾ ಕಿ ಅರ್ಧವನ್ನು ವಸೂಲ್ಮಾಡಬೇಕು.

೫. ಖುಷ್ಕಿ ಜಮೀನಾಗಿ ವಿಂಗಡಿಸಲ್ಪಟ್ಟ ಸರ್ಕಾರದ ನೀರು ಉ ಪಯೋಗಿಸಿಕೊಳ್ಳುವದಕ್ಕಾಗಿ ಅದರ ಮೇಲೆ ನೀರು ಸರಿದಿ ಕಂದಾಯವ ನ್ನು ತರೀ ಕಂದಾಯಕ್ಕೆ ಸೇರಿಸದೆ ಪ್ರತ್ಯೇಕವಾಗಿ ವಸೂಲಾಗುತ್ತಿದ್ದರೆ, ಅಂಥಾ ಜಮೀನುಗಳಿಗೆ ತರಿಯಾಗಿ ವಿಂಗಡಿಸಲ್ಪಟ್ಟ ತರಿ ಕಂದಾಯ ತೆರು ವ ಜಮೀನುಗಳಿಗೆ ತೋರಿಸುವಂಥಾ ರಿಯಾಯಿತಿಗಳನ್ನು ತೋರಿಸಬೇಕು.

೬. ಬಾಗಾಯಿತು ಜಮೀನೆಂತ ವಿಂಗಡಿಸಿದ ಜಮೀನುಗಳ ಕಂದಾ ಯ.—ಬಾಗಾಯಿತು ಜಮೀನುಗಳೆಂತ ತರಗತಿ ವಿಂಗಡಿಸಿರುವ ಜಮೀನು ಗಳಲ್ಲಿ ಸಾಮಾನ್ಯವಾಗಿ ತರಿ ಫಸಲನ್ನು ಇಡುತ್ತಾ ಇದ್ದರೆ, ಅಂಥಾ ಜಮೀ ನುಗಳಿಗೆ ತರಿ ಜಮೀನುಗಳಿಗೆ ಮೇಲೆ ತೋರಿಸಿರುವ ರಿಯಾಯಿತಿಯನ್ನೇ ತೋರಿಸತಕ್ಕದ್ದು.

೭. ಅಡಿಕೆ ಮರಗಳಾಗಲಿ ತೆಂಗಿನ ಮರಗಳಾಗಲಿ ಅಥವಾ ಅವುಗ ಳ ಫಸಲಾಗಲಿ ಬಹಳವಾಗಿ ನಷ್ಟವಾಗಿದ್ದರೆ, ಡೆಪ್ಯುಟಿ ಕಮೀಷನರು, ಅಂ ಥಾ ಜಮೀನಿನ ಅರ್ಧ ಕಂದಾಯದ ವಸೂಲಾತಿಯನ್ನು ಕೆಲವು ಕಾಲ ನಿಲ್ಲಿ ಸಿಡಬಹುದು. ಇದಕ್ಕೆ ಕಾರಣಗಳನ್ನು ರಿಕಾರ್ಡು ಮಾಡಬೇಕು.

೮. ಲೋಕಲ್ ಸೆಸ್ಸುಗಳು.—ಕಂದಾಯವನ್ನು ಮಾಫ್ ಮಾಡಿದ ಮಾತ್ರಕ್ಕೆ ಲೋಕಲ್ ಸೆಸ್ಸನ್ನೂ ಮಾಫು ಮಾಡಕೂಡದು. ಲೋಕಲ್ ಸೆಸ್ಸುಗಳನ್ನು ಮಾಮೂಲ್ ಮೇರೆಗೆ ಒಟ್ಟು ಕಂದಾಯದಮೇಲೆ ವಸೂ ಲ್ಮಾಡಲೇಬೇಕು. (ಮಾಫು ಮಾಡಿದ ಭಾಗದ ಕಂದಾಯದಮೇಲೂ ಈ ಸೆಸ್ಸನ್ನು ವಸೂಲ್ಮಾಡಬೇಕು.) ಈ ಸೆಸ್ಸುಗಳ ವಸೂಲಾತಿಯನ್ನು ಕೆಲವುಕಾಲ ನಿಲ್ಲಿಸಿ ರಿಯಾಯಿತಿ ತೋರಿಸುವದು ಅವಶ್ಯಕವೆಂದು ಡೆಪ್ಯುಟಿ ಕಮೀಷನರವರಿಗೆ ತೋರಿದರೆ ಅಂಥಾ ವಿಶೇಷ ಸಂದರ್ಭಗಳಲ್ಲಿ ಮಾತ್ರ ಕೆಲವು ಕಾಲ ವಸೂಲಾತಿಯನ್ನು ನಿಲ್ಲಿಸಬಹುದು.

೯. ಮೈನರ್ ಯಾ ಚಿಲ್ಲರೆ ಇನಾಂ ಜಮೀನುಗಳು.—ಕಂದಾಯ ವಸೂಲಾತಿಯನ್ನು ಕೆಲವುಕಾಲ ನಿಲ್ಲಿಸಿಡುವ ವಿಚಾರದಲ್ಲಿಯೂ ಕಂದಾಯ ವನ್ನು ಮಾಫು ಮಾಡುವ ವಿಚಾರದಲ್ಲಿಯೂ ಕೊಟ್ಟಿರುವ ಮೇಲ್ಕಂಡ ಹು ಕುಮುಗಳು, ಸಂಪೂರ್ಣ ಕಂದಾಯ ದಾಖಲಾದ ಚಿಲ್ಲರೆ ಇನಾಮು ಜಮೀ ನುಗಳಿಗೂ ಅಥವಾ ಸರ್ವೆ ಸೆಟ್ಲಮೆಂಟಿನಲ್ಲಿ ಬೆಲೆ ನಿಷ್ಕರ್ಷೆಯಾದ ಮೊ ಬಲಗಿಗೆ ಸಮಾನವಾದ ಅಥವಾ ಹೆಚ್ಚಾದ ಕ್ವಿಟ್‌ರೆಂಟ್ ಯಾ ಜೋಡಿ ದಾಖ ಲಾದ ಚಿಲ್ಲರೆ ಇನಾಮು ಜಮೀನುಗಳಿಗೂ ಸಹ ಲಗಾವಾಗತಕ್ಕದ್ದು.

೧೦. ಖುಲ್ಲು ಇನಾಂ ಗ್ರಾಮಗಳು.—ಸರ್ಕಾರದ ಆಡಳಿತದಲ್ಲಿರು ವ ಖುಲ್ಲು ಇನಾಂ ಗ್ರಾಮಗಳಿಗೂ ಸಹ ಮೇಲ್ಕಂಡ ಹುಕುಂಗಳು ಲಗಾವಾ ಗುತ್ತವೆ.

೧೧. ಸಾಮಾನ್ಯವಾದ ಷರಾಗಳು.—ಈ ಹುಕುಂಪ್ರಕಾರ ಮಾ ಫು ಮಾಡಿದ ಕಂದಾಯಗಳನ್ನೆಲ್ಲಾ ಚನ್ನಾಗಿ ಪ್ರಕಟಿಸಿ ಅವುಗಳನ್ನು ರೈ ತರ ಪಟ್ಟಿ ಬುಕ್ಕುಗಳಲ್ಲಿ ದಾಖಲ್ಮಾಡಿಸುವಂತೆ ಜಮಾಬಂದಿ ಆಫೀಸರುಗ ಳು ಹುಷಾರಿಯಿಂದ ನೋಡಿಕೊಳ್ಳಬೇಕು.

೧೨. ಗ್ರಾಮಗಳಿಗೂ ಒಂದೇ ತರಹೆಯ ಪ್ರದೇಶಗಳಿಗೂ ಎಲ್ಲಾ ಒಟ್ಟಾಗಿ ಕಂದಾಯವನ್ನು ಮಾಫುಮಾಡಬೇಕು. (ಕಂದಾಯವನ್ನು ಮಾ ಫು ಮಾಡುವುದರಲ್ಲಿಯೇ ಆಗಲಿ ಅಥವಾ ಅದರ ವಸೂಲಾತಿಯನ್ನು ಕೆಲವು ಕಾಲ ನಿಲ್ಲಿಸಿ ಇಡುವುದರಲ್ಲಿಯೇ ಆಗಲಿ) ಇಂಥಾ ರಿಯಾಯಿತಿಯನ್ನು ತೋ ರಿಸುವಾಗ್ಯೆ ಜಮೀನಿನಲ್ಲಿ ಉತ್ಪತ್ತಿಯಾದ ಫಸಲಿಗನುಸಾರವಾಗಿ ಮಾಡತ ಕ್ಕದ್ದೇ ಹೊರತು ಸದರಿ ಜಮೀನಿನ ಹಿಡುವಳಿದಾರನ ಸ್ಥಿತಿಯನ್ನು ಆ ಲೋಚಿಸಿ ಮಾಡತಕ್ಕದ್ದಲ್ಲ.

೧೩. ವಸೂಲಾಗಬೇಕಾದ ಅರ್ಧ ಕಂದಾಯವನ್ನು ಕಾಲಕ್ಕೆ ಸ ರಿಯಾಗಿ ಕೊಡದೆಹೋದ ಸಂದರ್ಭದಲ್ಲಿ ಬಾಕಿ ಅರ್ಧ ಕಂದಾಯವನ್ನು ಮಾಫು ಮಾಡುವುದಿಲ್ಲವೆಂತ ಯಾವುದಾದರೂ ಒಂದೊಂದು ಸಂದರ್ಭದಲ್ಲಿ ಡೆಪ್ಯುಟಿ ಕಮೀಷನರಾಗಲಿ ಸಬ್ ಡಿವಿಜನ್ ಆಫೀಸರಾಗಲಿ ತಿರಸ್ಕರಿಸಬ ಹುದು.

೧೪. ಮೇಲ್ಕಂಡ ಹುಕುಂಗಳು ಈ ಕೆಳಗೆ ತೋರಿಸಿರುವ ಪ್ರ ದೇಶಗಳಲ್ಲಿ ಜಾರಿಯಲ್ಲಿ ಬರತಕ್ಕದ್ದು:—

| ತಾಲ್ಲೂಕಿನ ಹೆಸರು. | ಹೋಬಳಿಯ ಹೆಸರು. |
|---|---|
| **ಬೆಂಗಳೂರು ಡಿಸ್ಟ್ರಿಕ್ಟ್.** | |
| ಬೆಂಗಳೂರು | ಹೆಸರುಘಟ್ಟ. |
| ಹೊಸಕೋಟೆ | ಕಸಬಾ ಹೋಬಳಿ, ಜಡಿಗೇನಹಳ್ಳಿ, ನಂದಗುಡಿ, ಸೂಲಿಬೆಲೆ. |
| ದೇವನಹಳ್ಳಿ | ತಾಲ್ಲೂಕೆಲ್ಲಾ. |
| ದೊಡ್ಡಬಳ್ಳಾಪುರ | ಮಧುರೆ, ದೊಡ್ಡಬೆಳವಂಗಲ, ಕಸಬಾ ಹೋಬಳಿ. |
| ನೆಲಮಂಗಲ | ಕಸಬಾ ಹೋಬಳಿ, ದಾಸನಪುರ, ತ್ಯಾಮಗೊಂಡ್ಲು. |
| ಮಾಗಡಿ | ತಿಪ್ಪಸಂದ್ರ, ಕುದೂರು, ಸೋಲೂರು. |
| ಚನ್ನಪಟ್ಟಣ | ವಿರೂಪಾಕ್ಷಿಪುರ, ಕಸಬಾ ಹೋಬಳಿ, ಮಳೂರು. |
| **ತುಮಕೂರು ಡಿಸ್ಟ್ರಿಕ್ಟ್.—ತಮಾಂ ಡಿಸ್ಟ್ರಿಕ್ಟ್.** | |
| **ಕೋಲಾರ ಡಿಸ್ಟ್ರಿಕ್ಟ್—ತಮಾಂ ಡಿಸ್ಟ್ರಿಕ್ಟ್.** | |
| **ಮೈಸೂರು ಡಿಸ್ಟ್ರಿಕ್ಟ್.** | |
| ನಾಗಮಂಗಲ | ತಮಾಂ ತಾಲ್ಲೂಕು. |
| ಕೃಷ್ಣರಾಜಪೇಟೆ | ಸಂತೇಬಾಚಹಳ್ಳಿ, ಕಿಕ್ಕೇರಿ, ಕಸಬಾ ಹೋಬಳಿ. |
| ಮಂಡ್ಯ | ತಮಾಂ ತಾಲ್ಲೂಕು. |
| **ಹಾಸನ ಡಿಸ್ಟ್ರಿಕ್ಟ್.** | |
| ಅರಸೀಕೆರೆ | ತಮಾಂ ತಾಲ್ಲೂಕು. |
| ಚನ್ನರಾಯಪಟ್ಟಣ | ಕಸಬಾ ಹೋಬಳಿ, ಬಾಗೂರು, ಅಣತಿ, ನುಗ್ಗಿಹಳ್ಳಿ, ಹಿರಿಸಾವೆ, ಶ್ರವಣಬೆಳಗೊಳ. |
| ಹೊಳೆನರಸೀಪುರ | ಕಸಬಾ ಹೋಬಳಿ ದೊಡ್ಡಕಾಡನೂರು. |
| ಬೇಲೂರು | ಹಳೇಬೀಡು, ಮಾದಿಹಳ್ಳಿ. |
| **ಶಿವಮೊಗ್ಗ ಡಿಸ್ಟ್ರಿಕ್ಟ್.** | |
| ಶಿವಮೊಗ್ಗ | ತಾಲ್ಲೂಕೆಲ್ಲಾ. |
| ಚನ್ನಗಿರಿ | ಡಿಟೋ |
| ಹೊನ್ನಾಳಿ | ಸಾಸವೆಹಳ್ಳಿ. |
| **ಕಡೂರು ಡಿಸ್ಟ್ರಿಕ್ಟ್.** | |
| ಚಿಕ್ಕಮಗಳೂರು | ಲಕ್ಯಾ. |
| ಕಡೂರು | ತಾಲ್ಲೂಕೆಲ್ಲಾ. |

| ತಾಲ್ಲೂಕಿನ ಹೆಸರು. | ಹೋಬಳಿಯ ಹೆಸರು. |
|---|---|
| ಚಿತ್ರದುರ್ಗ ಡಿಸ್ಟ್ರಿಕ್ಟ್. | |
| ಚಿತ್ರದುರ್ಗ | ಕಸಬಾ ಹೋಬಳಿ, ತುರುವನೂರು. |
| ಚಳ್ಳಕೆರೆ | ತಳ್ಳುಕಲ್ಲು. |
| ಹಿರಿಯೂರು | ಡಿಟ್ಟೊ. |
| ದಾವಣಗೆರೆ | ಕಸಬಾ ಹೋಬಳಿ, ಹದಡಿ. |
| ಜಗಲೂರು | ಜಗಲೂರು ಹೋಬಳಿ. |
| ಹೊಸದುರ್ಗ | ಹೊಸದುರ್ಗ, ಮಾಕೋಡು, ಬೂದಿಹಾಳು, ಮಾಡದಕೆರೆ |
| ಹರಿಹರ | ಕಸಬಾ ಹೋಬಳಿ, ಮಳೆ ಬೆನ್ನೂರು. |
| (ಸಬ್ ತಾಲ್ಲೂಕು) | |

## Dairy Farming. *

## ದನಗಳನ್ನು ಸಾಕುವಿಕೆ ಮತ್ತು ಬೆಣ್ಣೆ ತಯಾರಿ.

ಹೋದ ಸಂಚಿಕೆಯಲ್ಲಿ ದನಗಳನ್ನು ಸಾಕುವದರ ವಿಚಾರದಲ್ಲಿ ಕೆಲವು ಸಂಗತಿಗಳು ತಿಳಿಸಿದ್ದಾಯಿತು. ಕ್ಷೀರಾಗಾರಗಳಲ್ಲಿ ಬೆಣ್ಣೆ ತೆಗೆಯುವ ಮುಖ್ಯವಾದ ಕೆಲಸವನ್ನು ಯಾವರೀತಿ ನಡೆಸುತ್ತಿದಾರೆಂಬುದನ್ನು ಇಲ್ಲಿ ಸಂಕ್ಷೇಪವಾಗಿ ತಿಳಿಸುತ್ತೇವೆ.

ಬೆಣ್ಣೆ ಮಾಡುವ ಕ್ರಮ.—ಹಾಲು ಕರೆದವಡನೆ ೯೦ರಿಂದ ೯೫ ಡಿಗ್ರಿಯ ಉಷ್ಣವನ್ನು ಹೊಂದಿರುತ್ತೆಯಾದ್ದರಿಂದ ಕೆನೆಯನ್ನು ಹಾಲಿನಿಂದ ಪ್ರತ್ಯೇಕಿಸಲು ಸಾಕಾದಷ್ಟು ಬಿಸಿ ಇರುತ್ತೆ. ೯೫ ಡಿಗ್ರಿ ಉಷ್ಣಕ್ಕಿಂತ ಕಮ್ಮಿಯಾಗಿದ್ದರೆ ಕೆನೆ ಹಸನಾಗಿ ಬರುವದಿಲ್ಲ. ಕೆನೆ ತೆಗೆಯುವ ಯಂತ್ರಗಳು ಅನೇಕ ಇರುತ್ತವೆ.

ಹೀಗೆ ತೆಗೆದ ಕೆನೆಯನ್ನು ಕೆಲವುಕಾಲಹಾಗೆಯೇ ಇಟ್ಟು ಕಡೆಯಬೇಕು. ಇದರಿಂದ ಬೆಣ್ಣೆಗೆ ಒಂದು ಸುವಾಸನೆ ಉಂಟಾಗುತ್ತೆ. ಇದಕ್ಕಾಗಿ ಹಾಲನ್ನು ಒಂದು ಪಾತ್ರೆಯಲ್ಲಿಟ್ಟು ತಂತಿ ಪಂಜರದಿಂದ ಮುಚ್ಚಿ, ಕೆಟ್ಟ ವಾಸನೆ, ಧೂಳು, ಹುಳಗಳು ಮುಂತಾದವುಗಳಿಲ್ಲದ ೫೮-೬೮ ಡಿಗ್ರಿ ಉಷ್ಣವಿರುವ ಮತ್ತು ಶುಚಿಯಾದ ಗಾಳಿ ಆಡುವ ಸ್ಥಳದಲ್ಲಿ ೨೦ ಘಂಟೆ ಕಾಲ ಇಟ್ಟು ಕಡೆಯಬೇಕು. ಸರಿಯಾಗಿ ಪಕ್ವವಾದ ಕೆನೆಯನ್ನು ಕಡೆದರೆ ಬೆಂಣೆ

* ಇಂಡಿಯನ್ ಅಗ್ರಿಕಲ್ಚರಿಸ್ಟ್, ೧—೧೨—೦೮.

ಯು ಜಾಗ್ರತೆ ಬರುವದಲ್ಲದೆ ಸ್ವಲ್ಪವೂ ಪೋಲಾಗುವದಿಲ್ಲ. ಕೆನೆಯನ್ನು
ಕಡೆಯುವಾಗ ೪-೫ ವಿಚಾರಗಳಿಗೆ ಗಮನ ಕೊಡಬೇಕಾಗುತ್ತೆ. (೧) ಉ
ಷ್ಣ (೨) ಹುಳಿ (೩) ಕೆನೆಯುವಂದ (೪)ಕಡೆಯುವಿಕೆ. ಕಡೆಯುವಾಗ ಕೆ
ನೆಗೆ ಒಾಮು ಬಣ್ಣವನ್ನು ಕೊಡುತ್ತಾರೆ. ಕಡೆಗೋಲನ್ನು ನಿಮಿಷಕ್ಕೆ ೪೦-
೪೫ ಸುತ್ತಿನಂತೆ ೩ ನಿಮಿಷ ಕಡದು ಕ್ಷಣಕಾಲ ಮುಚ್ಚಳ ತೆಗೆಯಬೇಕು.
ಕೆಟ್ಟಗಾಳಿಯೆಲ್ಲಾ ಹೋಗುತ್ತದೆ. ನಂತರ ಪುನಃ ಕಡೆದರೆ ಬೆಣ್ಣೆಯು ವ
ರಳು ಮಾಳಾಗಿ ಬರುತ್ತದೆ. ನಂತರ ಕೆಳಗಿನ ಹಾಲನ್ನು ಪ್ರತ್ಯೇಕಿಸಿ ನಿಂ
ತ ಬೆಂಣೆಗೆ ಇದರಷ್ಟು ಬಿಸಿಯಾದ ನೀರನ್ನು ಸೇರಿಸಬೇಕು. ಇದರಿಂದ
ಕೇಸೀನ್ (*Casein*) ಎಂಬ ಪದಾರ್ಥವು ಪ್ರತ್ಯೇಕವಾಗುತ್ತೆ. ನೀರಿನ ಬಿಸಿ
ಹೆಚ್ಚಾದರೆ ಬೆಣ್ಣೆ ಮೃದುವಾಗಿಯೂ ಜಿಡ್ಡಾಗಿಯೂ ಆಗಿ ಕೆಲಸ ಕಷ್ಟ
ವಾಗುತ್ತೆ. ನೀರಿನ ಬಿಸಿಯು ಕಮ್ಮಿಯಾದರೆ ಬೆಂಣೆಯು ಗಟ್ಟಿಯಾಗಿ ಹೀ
ಗೂ ಕೆಲಸ ಕಷ್ಟವಾಗುತ್ತದೆ. ನಂತರ ನಿಂತ ಹಾಲನ್ನು ಪುನಃ ಬಸಿದು
ಬೆಣ್ಣೆಗೆ ತಣ್ಣೀರನ್ನು ಹಾಕಬೇಕು. ಅನಂತರ ೪—೫ ದಫಾ ಕಡದ
ನೀರು ಹೊರಡಿಸಿ ಬೆಂಣೆಯನ್ನು ಒಂದು ಯಂತ್ರದಲ್ಲಿ ಕೊಟ್ಟು ಅದರಲ್ಲಿ
ರತಕ್ಕ ಹೆಚ್ಚು ನೀರನ್ನೂ ಹೊರಡಿಸುತ್ತಾರೆ. ಆಮೇಲೆ ಇದಕ್ಕೆ ಉ
ಪ್ಪನ್ನು ಸೇರಿಸುವದರಿಂದ ಒಂದು ಸುವಾಸನೆಯು ಮತ್ತು ಬಣ್ಣವು ಉಂ
ಟಾಗುವದಲ್ಲದೆ ಬೆಣ್ಣೆಯೂ ಸಹ ಕೆಡುವದಿಲ್ಲ.

## Notifications.

## ಇಸ್ತಿಹಾರ್‌ನಾಮೆಗಳು.

ನಂ: ೧೨೪೭೯, ೨ನೆ ಬ್ಲಾಕ್ ೯೯೦೯.

ತೀರ್ಥಹಳ್ಳಿ ತಾ|| ಅಮಲ್ದಾರ್ ಮ|| ಶ್ರೀ ನರಸಿಂಹಶಾಸ್ತ್ರಿಗಳಿ
ಈ ಆಫೀಸಿನ ೯೯೦೯ನೆ ಇಸವಿ ಮೇ ೧೨ನೆ ತಾರೀಖಿನ ೧೧೬೦೭ನೆ ನಂಬ
ನಲ್ಲಿ ಮಂಜೂರ್ಮಾಡಿದ್ದ ೧೦ ದಿನಗಳ ಪ್ರಿವಿಲೇಜ್ ರಜಾವನ್ನ ೧ ದಿನ
ಚ್ಚಿಸಿರುತ್ತೆ.

## Occasional Notes.

## ವಿವಿಧ ವೃತ್ತಾಂತಗಳು.

೧. ಫಲವೃಕ್ಷಗಳಿಗೆ ನೀರು ಕಟ್ಟಬೇಕಾದರೆ ಮರದ ಬುಡದ ಸುತ್ತ

ಲೂ ಪಾತಿಮಾಡದೆ ಮಧ್ಯಾನ್ಹ ಹನ್ನೆರಡು ಗಂಟೆ ಹೊತ್ತಿನಲ್ಲಿ ಬೀಳುವ ಇದರ ನೆರಳಿನೊಳಗೆ ನೀರು ಕಾಲುವೆಯನ್ನು ಮಾಡಬೇಕು.-ಮದರಾಸ್ ಅಗ್ರಿಕಲ್ಚರಲ್ ಕ್ಯಾಲೆಂಡರ್.—೧೯೧೫.

———o———

೨. ಕೆಲವುಕಡೆ ಪಾಪಾಸ್ ಕಳ್ಳಿಯನ್ನು ಗದ್ದೆಗೆ ಗೊಬ್ಬರವಾಗಿ ಉಪಯೋಗಿಸುತ್ತಾರೆ. ಇವುಗಳನ್ನು ಗುಂಡಿಗಳಲ್ಲಿ ಹಾಕಿ ಮುಂದಿನ ವರ್ಷಕ್ಕೆ ಉಪಯೋಗಿಸುವದುಂಟು, ಅಥವಾ ಇವುಗಳನ್ನು ರಾಶಿಹಾಕಿ ಒಣಗಿದ ನಂತರ ಸುಟ್ಟು ಬೂದಿಯನ್ನು ಉಪಯೋಗಿಸುತ್ತಾರೆ. ಕೆಸರಿನಲ್ಲಿ ಇದರ ಮುಳ್ಳುಗಳು ನೆಟ್ಟಗೆ ನಿಲ್ಲುವದಿಲ್ಲವಾದಕಾರಣ ಜನಗಳ ಮತ್ತು ದನಗಳ ಕಾಲಿಗೆ ಏನೂಘಾಯವಾಗುವದಿಲ್ಲ-ಮದರಾಸ್ ಅಗ್ರಿಕಲ್ಚರಲ್ ಕ್ಯಾಲೆಂಡರ್-೧೯೧೫.

———o———

೩. ಕೃಷ್ಣಾ ಡಿಸ್ಟ್ರಿಕ್ಟಿನಲ್ಲಿ ಆಂಧ್ರ ಲಕ್ಷ್ಮೀ ಇಂಡಸ್ಟ್ರಿಯಲ್ ಕಂಪೆನಿ ಲಿಮಿಟೆಡ್ ಎಂಬ ಒಂದು ಕೈಗಾರಿಕೆ ಕಂಪೆನಿ ಏರ್ಪಟ್ಟಿರುತ್ತೆ. ಯಂತ್ರವನ್ನು ಉಪಯೋಗಿಸಿ ಬತ್ತದಿಂದ ಅಕ್ಕಿ ಮಾಡುವದೆ ಈ ಕಂಪೆನಿಯ ಮುಖ್ಯ ಉದ್ದೇಶ. ಈ ರೀತಿ ಈಗ ನಾಲ್ಕು ತಿಂಗಳಿಂದಲೂ ಮಿಲ್ಲನ್ನು ಉಪಯೋಗಿಸಿ ಅಕ್ಕಿ ತೆಗೆಯುತ್ತಿದ್ದಾರೆ. ಈ ಕಸಬಿನೊಂದಿಗೆ ಚರ್ಮಕ್ಕೆ ಹದಾ ಕೊಡುವದು, ಎಲುಬು ಪುಡಿ ತಯಾರುಮಾಡುವದು, ಸಾಧ್ಯವಾದಷ್ಟು ನೇಗೀ ಕೆಲಸ ಇವುಗಳನ್ನು ಇದೇ ಯಂತ್ರ ಸಹಾಯದಿಂದಲೇ ನಡೆಸಬೇಕೆಂದು ಇದ್ದಾರೆ.

———o———

೪. ಬಾಂಕು ಬತ್ತದಲ್ಲಿ ಅಕ್ಕಿಯು ಬೆಳ್ಳಗಿರುತ್ತದಲ್ಲದೆ ಹಸನಾಗಿಯೂ ಇರುತ್ತದೆ. ಇದು ೬½ ತಿಂಗಳಲ್ಲಿ ಕಟಾವಿಗೆ ಬರುತ್ತದೆ. ನೀರಿನ ಅನಾನುಕೂಲತೆಯಿಂದ ೫ ತಿಂಗಳು ಅಥವಾ ಹೆಚ್ಚು ಕಾಲದ ಬತ್ತದ ರಕಂಗಳನ್ನು ಬೆಳೆಯಲು ಸಾಧ್ಯವಾಗದೆ ಇರುವ ಗದ್ದೆಗಳಲ್ಲಿ ಇವನ್ನು ಅನುಕೂಲವಾಗಿ ಬೆಳೆಯಬಹುದು.—* ಮದ್ರಾಸ್ ಅಗ್ರಿಕಲ್ಚರಲ್ ಕ್ಯಾಲೆಂಡರ್ ೧೯೧೫.

———o———

೫. ಬೆಲ್ಲಕ್ಕೋಸ್ಕರ ಕಬ್ಬಿನ ಹಾಲನ್ನು ಕಾಯಿಸುವದಕ್ಕೆ ಕೆಲವು ಸ್ಥಳಗಳಲ್ಲಿ ತೆಟ್ಟೆಯಾಗಿರುವ ಕಬ್ಬಿಣದ ಕೊಪ್ಪರಿಗೆಗಳನ್ನು ಉಪಯೋಗಿಸುತ್ತಾರೆ. ಇವು ಆಳವಾಗಿರುವ ಕೊಪ್ಪರಿಗೆಗಳಿಗಿಂತ ಉತ್ತಮವಾಗಿ

ರುತ್ತವೆಯಂತೆ. ಆಳವಾಗಿರುವ ಕೊಪ್ಪರಿಗೆಗಳಲ್ಲಿ ಇರುವ ಅನಾನುಕೂಲ ಗಳೇನೆಂದರೆ.—ಇವುಗಳಲ್ಲಿ ಹಾಲನ್ನು ಬಹಳ ಹೊತ್ತು ಕಾಯಿಸಬೇಕಾ ಗುವದರಿಂದ ಇದರಲ್ಲಿರುವ ಮರಳು ಮುಳುಗುವ ಸಕ್ಕರೆ ಪದಾರ್ಥವು ಜೀರ್ನಿಯಾಗುತ್ತದೆ. ಕೊಪ್ಪರಿಗೆಗಳ ತಳದಿಯಲ್ಲಿ ಬೆಲ್ಲವು ಕರಿದುಹೋ ಗಿ ಕಪ್ಪು ಬಣ್ಣಕ್ಕೆ ಇಳಿಯುವ ಸಂಭವ ವುಂಟು. ತಟ್ಟೆಯಾಗಿರುವ ಕೊಪ್ಪರಿಗೆಯಲ್ಲಾದರೊ ಇವು ಬಹಳ ಅಗಲವಾಗಿರುವಕಾರಣ ಹಾಲು ಜಾಗ್ರತೆ ಕುದಿಯುತ್ತದೆ. ಈ ಕೊಪ್ಪರಿಗೆಯನ್ನು ಇದರ ತುದಿಯು ಒ ಲೆಯಿಂದ ೪-೬ ಅಂಗುಲ ಹೊರಗೆ ಬರುವ ರೀತಿ ಅದರಮೇಲೆ ಇಟ್ಟಲ್ಲಿ ಬೆಲ್ಲವು ಶಾಖ ಹೆಚ್ಚಾಗಿ ಸುಟ್ಟು ಹೋಗುವ ಸಂಭವವು ತಪ್ಪುತ್ತದೆ.—ಇಂಡಸ್ಟ್ರಿ ಯಲ್ ಇಂಡಿಯಾ, ಫೆಬ್ರವರಿ ೧೯೦೯.

---

೬. ಹರಳು ಗಿಡ.—ಈ ಗಿಡದಲ್ಲಿ ಸಣ್ಣ ಬೀಜದ್ದೂ ದೊಡ್ಡ ಬೀಜದ್ದೂ ಎರಡು ರಖಂ ಇರುತ್ತದೆ. ದೊಡ್ಡ ಬೀಜದ ಗಿಡದ ರಖಂನಿಂದ ಕಿರಿದು ಎಣ್ಣೆ ಯು ಹೆಚ್ಚಾಗಿ ಉತ್ಪತ್ತಿಯಾಗುತ್ತದೆ. ಸಣ್ಣ ಬೀಜದ ರಖಂ ಗಿಡದಿಂ ದ ಔಷಧಿಗೆ ಉಪಯೋಗ ಪಡುವ ಎಣ್ಣೆಯು ಉತ್ಪತ್ತಿಯಾಗುತ್ತದೆ. ಬೀಜದಿಂದ ಸರಾಸರಿ ಶೇಕಡಾ ೪೬—೫೩ ರಷ್ಟು ಎಣ್ಣೆಯು ಇಳಿಯುತ್ತ ದೆ. ಶೇಕಡಾ ೬೦ ಇಳಿಯುವದೂ ಉಂಟು. ಔಷಧಿಗೆ ಉಪಯೋಗ ಪ ಡುವ ಎಣ್ಣೆಯು ಸ್ವಚ್ಛವಾಗಿ ಇಳಿಯುತ್ತದೆ. ಕಿರಿದು ರಖಂ ಎಣ್ಣೆಗಳು ಹಸರು ಸೇರಿದ ಹಳದಿ ಬಣ್ಣದ್ದಾಗಿ ಇರುತ್ತವೆ. ಮಳೆ ಬಂದನಂತರ ೨ ಸಲ ಜಮೀನನ್ನು ಉತ್ತು ಹರಳು ಬೀಜವನ್ನು ನೇಗಿಲು ಸಾಲಿನಲ್ಲಿ ಉ ದರಿಸಿ ಇನ್ನೊಂದು ನೇಗಿಲು ಸಾಲಿನಿಂದ ಮುಚ್ಚುತ್ತಾರೆ. ಒಂದು ತಿಂಗ ಳ ನಂತರ ಸಸಿಗಳು ೧ ಅಡಿ ಮಟ್ಟಕ್ಕೆ ಬೆಳೆದಾಗ ೨ ಸಾಲು ನಡುವೆ ಪುನ ಹ ಉಳುತ್ತಾರೆ. ಸಾಲುಗಳು ೧ ಗಜ ದೂರ ದೂರವಾಗಿರುತ್ತವೆ. ಈ ಗಿಡಗಳಲ್ಲಿ ಫಸಲು ಗೊಂಚಲು ಗೊಂಚಲಾಗಿ ಬಿಡುತ್ತವೆ. ಈ ಗೊಂಚಲು ಗಳು ಒಣಗಿ ಬಿರಿದು ಕಾಳುಗಳು ಹೊರಕ್ಕೆ ಹೊರಡುವದಕ್ಕೆ ಶುರುವಾ ಗುತ್ತಲೆ ಇವುಗಳನ್ನು ಕೂಡಿಡಬೇಕು.—ಅಗ್ರಿಕಲ್ಚರಲ್ ಮತ್ತು ಇಂಡಸ್ಟ್ರಿ ಯಲ್ ಪ್ರೋಗ್ರೆಸ್ ಪತ್ರಿಕೆ, ಮೇ ೧೯೦೯.

---

೭. ಜನ ಹೆಚ್ಚಾದ ಪ್ರಾಂತ್ಯಗಳಲ್ಲಿ ಹುಲ್ಲುಗಾವಲುಗಳು ಪ್ರಾಯಶಃ ಕಡಿಮೆಯಾಗುತ್ತಾ ಬಂದು ಅಲ್ಲಿನ ದನಗಳಿಗೆ ಮೇವನ್ನು ಒದಗಿಸುವದರಲ್ಲಿ ಪ್ರಯಾಸ ಕಂಡುಬರುತ್ತಿದೆ. ಇಂಥಾ ಸ್ಥಳಗಳಲ್ಲಿ ದನಗಳ ಮೇವಿಗಾಗಿಯೇ ಪ್ರತ್ಯೇಕವಾಗಿ ಕೆಲವು ಪೈರುಗಳನ್ನು ಸಾಗುಮಾಡುವದು ಇದಕ್ಕೆ ಮುಖ್ಯಪರಿಹಾರ. ಇಂಥಾ ಪೈರುಗಳಲ್ಲಿ ಜೋಳ ಒಂದು ಮುಖ್ಯವಾಗಿರುತ್ತೆ. ಹೀಗೆ ಬೆಳೆಯುವದರಲ್ಲಿ ಎಕರೆಗೆ ೧೨ ಸೇರು ಬಿತ್ತ ಬೇಕಾಗುತ್ತೆ. ಬಿತ್ತ ಹಾಕಿದ ನಂತರ ಬೇರೆ ಸಾಗುವಳಿ ಕ್ರಮಗಳೇನೂ ಅವಶ್ಯಕವಿರುವದಿಲ್ಲ. ನಾಲ್ಕೈದು ವಾರಗಳಲ್ಲಿ ಜೋಳದ ಪೈರು ಭೂಮಿಯಮೇಲೆ ಒತ್ತಾಗಿ ಎದ್ದು ಕಳೆಗಳು ಬೆಳೆಯುವದಕ್ಕೆ ಅವಕಾಶ ಕೊಡುವದಿಲ್ಲ. ಎಕರೆಗೆ ೨೦೦-೨೫೦ ಮಣ (ಬಂಗಾಳ) ತೂಕದ ಮೇವು ಒದಗುತ್ತದೆ. ಅಂದರೆ ಈ ಮೇವು ಒಂದು ರಾಶಿಗೆ ೪೦-೬೦ ದಿನಗಳಿಗೆ ಸಾಕಾಗುತ್ತೆ. ಬೀಜ ಹಾಕಿದ ಮೂರು ತಿಂಗಳಾದ ನಂತರ ಮೇವಿಗೋಸ್ಕರ ಪೈರನ್ನು ಕತ್ತರಿಸಿಕೊಳ್ಳಬಹುದು. ನಂತರ ಮೂರು ನಾಲ್ಕು ತಿಂಗಳು ಹಾಗೇ ಬಿಟ್ಟಿದ್ದು ಪುನಃ ಬೆಳೆದ ಪೈರನ್ನು ಕುಯಿಲು ಮಾಡಿ ಬಿಸಲಿನಲ್ಲಿ ಒಣಗಿಸಿಡಬಹುದು. ಒಣಗಿದ ದಂಟು ಮತ್ತು ಸಪ್ಪೆ ಒಳ್ಳೆಮೇವಾಗುತ್ತವೆ. ಹಸೀ ಮೇವನ್ನಾಗಲಿ, ಒಣಗಿದ ಮೇವನ್ನಾಗಲಿ, ದನಗಳಿಗೆ ಕೊಡುವದಕ್ಕೆ ಮುಂಚೆ ತುಂಡು ತುಂಡಾಗಿ ಕತ್ತರಿಸಿ ಕೊಡುವದು ಮೇಲು.—ಇಂಡಸ್ಟ್ರಿಯಲ್ ಇಂಡಿಯಾ, ಫೆಬ್ರವರಿ ೧೯೦೯.

---

೮. ಬಂಗಾಳ ವ್ಯವಸಾಯ ಇಲಾಖೆಯವರು ನೈನಿಟಾಲ್, ಪಾಟ್ನಾ, ಮತ್ತು ಸ್ಥಳೀಯ ರಖಂ ಉರಲ ಗಡ್ಡೆಗಳನ್ನು ಹಾಕಿ ಅಜಮಾಯಿಷಿ ಮಾಡಿರುತ್ತಾರೆ. ಅಜಮಾಯಿಷಿ ಮಾಡಿ ನೋಡಿದ್ದರಲ್ಲಿ ನೈನಿಟಾಲ್ ರಖಂ ಬೆಳೆದದ್ದರಲ್ಲಿ ಎಕರೆಗೆ ೨೧೦ ಮಣದಂತೆಯೂ (ಬಂಗಾಳ), ಪಾಟ್ನಾ ರಖಂ ಬೆಳೆದದ್ದರಲ್ಲಿ ೨೧೫ ಮಣದಂತೆಯೂ, ಸ್ಥಳೀಯ ರಖಂ ಉಪಯೋಗಿಸಿದ್ದರಲ್ಲಿ ೧೦೩ ಮಣದಂತೆಯೂ ಉತ್ಪತ್ತಿ ಕಂಡು ಬಂದಿರುತ್ತೆ. ಸಾಗುವಳಿ ಖರ್ಚು ಗೊಬ್ಬರ ಮತ್ತು ಬೀಜದ ಖರ್ಚು ಉತ್ಪತ್ತಿಯಿಂದ ವಜಾಮಾಡಿದ್ದರಲ್ಲಿ ಮೇಲೆ ನಮೂದಿಸಿದ ಮೂರು ರಖಂಗಳಲ್ಲಿ ಎಕರೆಗೆ ೧೮೦, ೧೮೫ ೧೦ ರೂಪಾಯಿಗಳಂತೆ ನಿವಳ ಆದಾಯ ತೇಲಿರುತ್ತೆ. ಗಡ್ಡೆಗಳನ್ನು

ನಾಟುವವರಲ್ಲಿ ಚಿಕ್ಕದಾದರೆ ಉಂಡಗಡ್ಡೆಯನ್ನೇ ನಾಟಬೇಕು; ದೊಡ್ಡದಾ
ದರೆ ಎರಡು ಅಥವಾ ಹೆಚ್ಚು ತುಂಡುಗಳು ಮಾಡಿ ಒಂದೊಂದಾದರೂ ಒಳ್ಳೆ
ಕಣ್ಣುಗಳಿರುವ ತುಂಡುಗಳನ್ನೇ ಚುನಾಯಿಸಿ ನೆಡಬೇಕು.—ಇಂಡಿಸ್ಟ್ರಿಯ
ಲ್ ಇಂಡಿಯಾ, ಫೆಬ್ರವರಿ ೧೯೦೯.

---

೯. ಕ್ಷಾಮ ಕಾಲಗಳಲ್ಲಿ ಜನರು ಆಹಾರಕ್ಕಾಗಿ ಉಪಯೋಗಿಸುವ ಗೆಡ್ಡೆ
ಗೆಣಸುಗಳ ಪೈಕಿ ಕೇಬಿಗಡ್ಡೆ ಒಂದಾಗಿರುತ್ತದೆ. ಇದನ್ನು ಕೊನ್ನಾ
ಗಡ್ಡೆ ಅಥವಾ ಗುತ್ತಿಗಡ್ಡೆ ಎಂತಲೂ ಕರೆಯುತ್ತಾರೆ. ಇದು ಕೆರೆ ಒಳ
ಯದಲ್ಲಿ ಮತ್ತು ಕೆಸರು ಇರತಕ್ಕ ಸ್ಥಳಗಳಲ್ಲಿ ಬೆಳೆಯುತ್ತದೆ. ಇದರ
ಲೆಗಳು ಮಾವಿನ ಎಲೆಯ ಹಾಗೆ ಇರುತ್ತವೆ. ಇದರ ದಂಟು ೫-೬ ಅ
ಎತ್ತರ ಬೆಳೆಯುತ್ತದೆ. ಪ್ರತಿ ದಂಟಿನ ತುದಿಯಲ್ಲಿಯೂ ನೀರಿನ ಮೇಲ
೨-೩ ಎಲೆಗಳು ತೇಲುತ್ತವೆ. ಇದರ ಹೂವು ಬೆಳ್ಳಗಿರುತ್ತದೆ. ಮುಖ್ಯ
ವಾಗಿ ಇದರ ಗಡ್ಡೆಯೇ ಆಹಾರವಾಗಿ ಉಪಯೋಗಿಸಲ್ಪಡುವದು. ಇದ
ನೆಲದಲ್ಲಿರುತ್ತದೆ. ಈ ಗಡ್ಡೆಗಳನ್ನು ಸಾಮಾನ್ಯವಾಗಿ ಮಾರ್ಚಿ, ಜೂನ್ ತಿಂ
ಗಳಲ್ಲಿ ಜಮಾಯಿಸುತ್ತಾರೆ. ಈ ಗಡ್ಡೆಗಳನ್ನು ಚನ್ನಾಗಿ ತೊಳೆದು ನೀರಿ
ನಲ್ಲಿ ಬೇಯಿಸಿ ಮೇಲಿನ ಸಿಪ್ಪೆಯನ್ನು ಸುಲಿದು ಬೆಲ್ಲ ಸೇರಿಸಿ ತಿನ್ನುವ
ದುಂಟು. ಅಥವಾ ಇದನ್ನು ಒಣಗಿಸಿ ಕುಟ್ಟಿ ಪುಡಿಮಾಡಿ ರಾಗಿ ಹಿಟ್ಟಿ
ನೊಂದಿಗೆ ಬೆರಸಿ ತಿನ್ನುವದೂ ಉಂಟು. ಸಾಮಾನ್ಯವಾಗಿ ಕ್ಷಾಮಗಾಲ
ಗಳಲ್ಲಿಯೇ ಇದನ್ನು ಆಹಾರವಾಗಿ ಉಪಯೋಗಿಸುವದು. ದೇಹಧಾ
ಢ್ಯ ಕಮ್ಮಿಯಾಗಿರುವವರು ಈ ಗಡ್ಡೆಯನ್ನು ತಿಂದರೆ ವಾಯು ಹಿಡಿಯು
ವದಾಗಿ ಹೇಳುತ್ತಾರೆ.

---

V.B. Soobbiah & Sons, Printers, Bangalore.—1909.

THE MYSORE

# REVENUE & AGRICULTURAL GAZETTE.

ವಾಲ್ಯೂಂ ೩.] ಗುರುವಾರ, ೧ನೆ ಜುಲೈ ೧೯೦೯. [ನಂ. ೧೭.

## Contents.



## ಅನುಕ್ರಮಣಿಕೆ.



## The Advantages of Transplanting Paddy. *

## ಬತ್ತವನ್ನು ನಾಟಿ ಹಾಕಿ ಸಾಗುವಳಿ ಮಾಡುವದರ ಅನುಕೂಲತೆಗಳು.

ಸಾಮಾನ್ಯವಾಗಿ ರೂಢಿಯಲ್ಲಿ ಎರಡು ವಿಧವಾಗಿ ಬತ್ತದ ಸಾಗುವಳಿ

* ಅಗ್ರಿಕಲ್ಚರಲ್ ಕ್ಯಾಲೆಂಡರ್, ೧೯೦೯.

ನಡಿಸುತ್ತಾರೆ. (೧) ಬಿತ್ತವನ್ನು ಗದ್ದೆಯಲ್ಲಿ ಚೆಲ್ಲುವದು; (೨) ಮೊದಲು ಅಗೆಗಳಲ್ಲಿ ಬಿತ್ತವನ್ನು ಚೆಲ್ಲಿ ನಂತರ ಸಸಿಯನ್ನು ಗದ್ದೆಗಳಲ್ಲಿ ನಾಟಿ ಹಾಕುವದು. ಬಿತ್ತವನ್ನು ನಾಟಿ ಮಾಡುವದರಲ್ಲಿ ಅನೇಕ ಅನುಕೂಲತೆಗಳು ಇರುವವು. ಇವುಗಳನ್ನು ಕೆಳಗೆ ಸಂಕ್ಷೇಪವಾಗಿ ವಿವರಿಸುತ್ತೆ. ನಾಟಿ ಹಾಕುವ ವಿಧಾನವನ್ನೆ ಎಲ್ಲಾ ಕಡೆಯಲ್ಲಿಯೂ ರೂಢಿಗೆ ತಂದರೆ ಒಳ್ಳೇದು. ನಾಟಿ ವಿಧಾನದಲ್ಲಿ ಮುಖ್ಯವಾಗಿ ಬಿತ್ತದ ಖರ್ಚು ಕಡಿಮೆ, ಕನಿಷ್ಟಪಕ್ಷ ಎಕರೆಗೆ ೧೦—೧೫ ಸೇರು ಅಂದರೆ ಒಂದು ರೂಪಾಯಿನ ಬಿತ್ತ ಉಳಿತಾಯವಾಗುತ್ತೆಂದು ಹೇಳಬಹುದು. ಇದೂ ಅಲ್ಲದೆ ಒಂದೊಂದೇ ಸಸಿಯನ್ನು ನಾಟುವ ವಿಧಾನವನ್ನು ಅನುಸರಿಸಿದ್ದೇ ಆದರೆ ಮೇಲೆ ಹೇಳಿದುದಕ್ಕೆ ಎರಡರಷ್ಟು ಉಳಿತಾಯವಾಗುವದು. ಒಂದು ಎಕರೆಗೆ ಎಷ್ಟು ಸೇರು ಬಿತ್ತವನ್ನು ಉಪಯೋಗಿಸಬೇಕೆಂಬುವದನ್ನು ಭೂಗುಣ, ಬೆಳೆಯ ರಖಂ, ಅನುಸರಿಸಿ ನಿರ್ಧರಿಸಬೇಕು. ಹೆಚ್ಚು ಕಾಲ ಬೇಕಾಗುವ ರಖಂಗಳನ್ನು ಜಾಗ್ರತೆ ಬೆಳೆಯುವ ರಖಂಗಳಿಗಿಂತಲೂ ವಿರಳವಾಗಿ ನೆಡಬೇಕಾದೀತು. ಸಸಿಗಳನ್ನು ಕೈಯಿಂದ ನೆಡುವದರಲ್ಲಿ ಪ್ರತಿ ಸಸಿಗೂ ಒಂದೆ ವಿಧವಾಗಿ ಸಸ್ಯಾಹಾರ, ಗಾಳಿ ನೀರು ದೊರೆತು ಪೈರು ಒಂದೇ ಸಮನಾಗಿ ಬೆಳೆದು ಏಕಕಾಲದಲ್ಲಿ ಕಟಾವಿಗೆ ಬರುತ್ತದೆ. ಚೆಲ್ಲಿ ಬೆಳೆದ ಪೈರಿನಲ್ಲಿ ಈ ಅನುಕೂಲಗಳು ಸಾಧ್ಯವಲ್ಲ. ಹೇಗಂದರೆ ಬಿತ್ತವು ಒಂದೊಂದು ಕಡೆಗಳಲ್ಲಿ ಒತ್ತಾಗಿ ಬಿದ್ದು ಪೈರಿನ ಬೆಳವಳಿಕೆ ಮತ್ತು ಕಟಾವಿನಲ್ಲಿ ವ್ಯತ್ಯಾಸ ಬರುತ್ತೆ. ಇಷ್ಟೇ ಅಲ್ಲದೆ ಅಗೆಯಿಂದ ಸಸಿಯನ್ನು ಕೀಳುವಾಗ ನರಟಿ ಹೋದ ಅಥವಾ ರೋಗ ತಗಲಿದ ಸಸಿಗಳನ್ನು ಬಿಟ್ಟು ಒಳ್ಳೆ ಸಸಿಗಳನ್ನೇ ನಾಟಬಹುದು. ಸಸಿಗಳನ್ನು ನಾಟಿ ಹಾಕಿದ ನಂತರ ಪೈರು ಬೆಳವಳಿಕೆಯ ಕಾಲದಲ್ಲೂ ಕೂಡ ಅನೇಕ ಅನುಕೂಲಗಳು ಕಂಡುಬರುತ್ತವೆ. ಸಸಿಗಳನ್ನು ಸಾಲುಸಾಲಾಗಿ ನೆಟ್ಟಲ್ಲಿ ಕಳೆ ಕೀಳುವ ಕೆಲಸವು ಸುಲಭವಾಗುವದಲ್ಲದೆ ನಾಟಿ ಹಾಕುವದಕ್ಕೆ ಕೆಸರುಗದ್ದೆ ಮಾಡುವದರಿಂದ ಬುಡ ಸಹಿತ ಎದ್ದಿರುವ ಕಳೆಗಳು ನಾಶವಾಗಿ ಕೊಳೆಯುತ್ತವೆ. ನಾಟಿ ಮಾಡಿದ ಒಂದು ತಿಂಗಳನಂತರ ಒಂದು ದಫಾ ಕಳೆ ತೆಗದರೆ ಸಾಕು. ಹೇಗಂದರೆ ಇಷ್ಟರಲ್ಲಿಯೇ ಸಸಿಗಳು ಚೆನ್ನಾಗಿ ಬೇರೂರಿ ತಕ್ಕಷ್ಟು ಒತ್ತಾಗಿ ಬೆಳೆದು ಕಳೆ

ಏಳುವದಕ್ಕೆ ಆಸ್ಪದ ಕೊಡುವದಿಲ್ಲ. ಚೆಲ್ಲಿ ಬೆಳೆಯುವದರಲ್ಲಿಯಾದರೊ ಎ ರಡು ದಫಾ ಕೈಯಿಂದ ಕಳೆ ತೆಗೆಯಬೇಕಲ್ಲದೆ ಒತ್ತಾಗಿ ಬೆಳೆದಕಡೆ ವಿರಳ ಪಡಿಸಿ ಹಾಳು ಬಿದ್ದಕಡೆ ಹೊಸದಾಗಿ ಸಸಿ ನೆಡಬೇಕಾದೀತು. ಕೆಲವು ಕಡೆಗಳಲ್ಲಿ ಚೆಲ್ಲಿದ ಒಂದು ತಿಂಗಳಮೇಲೆ ಕಳೆ ತೆಗೆಯುವದಕ್ಕೂ, ಸಸಿಗಳ ನ್ನು ವಿರಳ ಪಡಿಸುವದಕ್ಕೂ ಪೈರುನಡುವೆ ಉಳುವ ವಾಡಿಕೆ ಇರುತ್ತೆ. ಇದರಿಂದ ಬೇರು ಕಳೆ ನಾಶವಾಗಿದಂತಾಗಿ ಉಳಿದ ಸಸಿಗಳೇನೋ ಚನ್ನಾಗಿ ಬೆಳೆ ಯುತ್ತವೆ. ಪರಂತು ಈ ವಿಧಾನದಲ್ಲಿ ಬಿತ್ತದ ಖರ್ಚು ಹೆಚ್ಚಾಗುವದು ಸ್ಪಷ್ಟಪಡುತ್ತದೆ.

ನಾಟಿ ಸಾಗುವಳಿಯಲ್ಲಿ ಕಾಳು ಉತ್ಪತ್ತಿಯು ಹೆಚ್ಚೆಂಬುದು ಎಲ್ಲರಿ ಗೂ ತಿಳಿದಿರುತ್ತೆ. ಎರಡು ವಿಧಾನದಲ್ಲಿಯೂ, ಹುಲ್ಲೇನೊ ಒಂದೇಸಮ ನಾಗಿ ಒದಗುತ್ತದೆ.

ನಾಟಿ ವಿಧಾನವನ್ನು ಹೊಸದಾಗಿ ರೂಢಿಗೆ ತರುವದರಲ್ಲಿ ಲಾಗವಡು ದುಬಾರಿಯಾಗುವದಾಗಿ ಹೇಳುವದುಂಟು. ನೀರು ವಸತಿಯಾಗಿದ್ದು ಭೂ ಮಿ ಉತ್ಕೃಷ್ಟವಾಗಿದ್ದಲ್ಲಿ ನಾಟಿ ಸಾಗುವಳಿ ಮಾಡುವದು ಅನುಕೂಲ ವೆಂದು ತಿಳಿದಿರುತ್ತಾರೆ. ನೀರು ವಸತಿ ಕಡಮೆಯಾಗಿರುವ ಕಿರಿದು ರಖಂ ಭೂಮಿಗಳಲ್ಲಿ ಈ ಸಾಗುವಳಿಯು ಅನುಕೂಲವಲ್ಲವಂತೆ. ಆದರೆ ಇದು ತ ಪ್ಪಭಿಪ್ರಾಯ. ಹೇಗಂದರೆ ಎರಡು ವಿಧಾನದಲ್ಲಿಯೂ ಖರ್ಚಿನಲ್ಲೇನೂ ವ್ಯತ್ಯಾಸವಿರುವದಿಲ್ಲ. ಸಸಿಗಳನ್ನು ಕಿತ್ತು ಹೊಲಕ್ಕೆ ಸಾಗಿಸಿ ಕೈಯಿಂ ದ ನಾಟುವ ಖರ್ಚು ಒಂದರಲ್ಲಿರುವದು. ಇದಕ್ಕೆ ಸಮನಾಗಿ ಮತ್ತೊಂದ ರಲ್ಲಿ ಒಂದು ದಫಾ ಹೆಚ್ಚಾಗಿ ಕಳೆ ಕೀಳುವದು, ಸಸಿಗಳನ್ನು ವಿರಳ ಪಡಿಸು ವದು ಅಥವಾ ಹಾಳು ಬಿದ್ದಕಡೆ ನೆಡುವದರ ಖರ್ಚು ತಗಲುತ್ತದೆ. ನೀರು ವಸತಿ ಕಡಿಮೆಯಾಗಿರುವ ಸಂದರ್ಭದಲ್ಲಿ ನಾಟಿ ವಿಧಾನದಲ್ಲಿಯೆ ಅನುಕೂ ಲತೆಗಳು ಹೆಚ್ಚು. ಹೇಗಂದರೆ ಸಾಗುವಳಿ ಮಾಡತಕ್ಕ ವಿಸ್ತೀರ್ಣದ ಪೈ ಕಿ ೧೦ ಅಥವಾ ೧೫ರಲ್ಲಿ ಒಂದು ಭಾಗವನ್ನು ಅಗೆ ಹಾಕುವದಕ್ಕೆ ಉಪ ಯೋಗಿಸುತ್ತಾರೆ. ಅಂದರೆ ಒಂದು ತಿಂಗಳಕಾಲ ಸಾಮಾನ್ಯವಾಗಿ ಪೈರಿ ಗೆ ಬೇಕಾಗುವ ನೀರಿನಲ್ಲಿ ೧೦—೧೫ರಲ್ಲಿ ಒಂದು ಭಾಗ ನೀರು ಅಗೆಗೆ ಬಿ ಟ್ಟರೆ ಸಾಕು. ಜಲಾಧಾರಕ್ಕೆ ಪ್ರಾರಂಭ ನೀರು ಸರಬರಾಜು ಆಗುವದಕ್ಕೆ

೨—೩ ವಾರಗಳ ಮುಂಚೆಯೇ ಮಳೆ ಅಥವಾ ಭಾವಿ ಆಸರೆಯಿಂದ ಅಗೆಗಳ
ಲ್ಲಿ ಬಿತ್ತವನ್ನು ಹಾಕಬಹುದು. ಪೈರಿಗೆ ಬೇಕಾಗುವ ಒಟ್ಟು ನೀರು ಈ
ರೀತಿ ಕಡಮೆಯಾಗುವದಾದಕಾರಣ ಮಳೆ ಕಡಮೆಯಾದ ವರ್ಷದಲ್ಲಿ ಕೆರೆ
ಕೆಳಗಿಟ್ಟ ಫಸಲು ಕೈಗೆ ಬರುವ ಸಂಭವವು ಹೆಚ್ಚುತ್ತದೆ. ಅಗೆ ಹಾಕು
ವದರಲ್ಲಿ ಕಾಲವು ಕೂಡಿಬರುತ್ತದೆಯಾಗಿ ರೈತನು ಹೆಚ್ಚು ಕಾಲ ಬೇಕಾ
ಗುವ ಒಳ್ಳೆ ರಖಂ ಬತ್ತವನ್ನು ಬೆಳೆಯಲು ಸಾಧ್ಯವಾಗುತ್ತದೆ. ಅಥವಾ
ವರ್ಷಕ್ಕೆ ಒಂದೇ ಪೈರನ್ನು ಬೆಳೆಯುವ ಬದಲಾಗಿ ಎರಡು ಪೈರನ್ನು ಬೆಳೆ
ಯಬಹುದು. ಇಲ್ಲವಾದರೆ ಮೊದಲು ಮಳೆ ಬಂದನಂತರ ಕೆರೆ ಅಥವಾ
ನಾಲಾ ತುಂಬುವದಕ್ಕೆ ಮುಂಚೆ ಗದ್ದೆ ಉತ್ತು ಯಾವದಾದರೂ ಒಂದು
ಹಸರು ಪೈರನ್ನು ಗೊಬ್ಬರಕ್ಕಾಗಿ ಬೆಳೆಯಬಹುದು. ಈಕಾಲದಲ್ಲಿ ಅ
ಗೆಯನ್ನೂ ಒಂದುಕಡೆ ಮಾಡಿಕೊಳ್ಳಬಹುದು. ಗದ್ದೆಯಲ್ಲಿ ಸಸಿಗಳ
ನ್ನು ನಾಟುವದಕ್ಕೆ ಕೆಲವುದಿನಗಳ ಮುಂಚೆ ಈ ಹಸರು ಪೈರನ್ನು ಗದ್ದೆ
ಯಲ್ಲಿ ಉತ್ತುಬಿಡುವುದರಿಂದ ಗದ್ದೆಗೆ ಸೊಪ್ಪಿನ ಗೊಬ್ಬರಕ್ಕಾಗಿ ತಗ
ಲುವ ಖರ್ಚು ಕೂಡಿಬರುತ್ತದೆ.

---

## Government Orders.
## ಸರ್ಕಾರಿ ಹುಕುಂಗಳು.

ನಂ. ಫೈ. ೭೪೧೦-೨೧—ಬ್ಯಾಂ. ೪೩-೦೮-೪.
ತಾರೀಖು ೧೩ನೆ ಮೇ ೧೯೦೯.

ಹುಕುಂ—ಒಂದು ವ್ಯವಸಾಯ ಬ್ಯಾಂಕಿಗೆ ಕೊಟ್ಟಿರುವ ಸಾಲವ
ನ್ನು ವಾಪಸು ಪಡಿಯಬೇಕೆಂದು ಸರ್ಕಾರದವರು ಹುಕುಂಕೊಟ್ಟ ಮಾ
ತ್ರಕ್ಕೆ ಸದರಿ ಬ್ಯಾಂಕು ಮೌಕೂಫ್ ಮಾಡಲ್ಪಟ್ಟಂತೆ ಆಗುವದಿಲ್ಲ. ಮತ್ತು
ಜಾಯಿಂಟ್ ಸ್ಟಾಕ್ ಕಂಪೆನಿಗಳ ರಿಜಸ್ಟ್ರಾರವರು ತಮ್ಮ ಪುಸ್ತಕಗಳಲ್ಲಿ
ಬ್ಯಾಂಕು ಮೌಕೂಫ್ ಮಾಡಲ್ಪಟ್ಟಿರುತ್ತೆಂದು ದಾಖಲ್ಮಾಡತಕ್ಕದ್ದು ಸ
ರಿಯಲ್ಲ. ಬ್ಯಾಂಕಿನವರು ತಾವಾಗಿಯಾಗಲಿ ಅಥವಾ ಕೋರ್ಟು ಮೂಲ
ಕವಾಗಲಿ ಕಂಪೆನಿಗಳ ರೆಗ್ಯುಲೇಷನಿನ ನಿಯಮಗಳಮೇರಿಗೆ ಬ್ಯಾಂಕನ್ನು
ಮೌಕೂಫ್ ಮಾಡುವ ವರಿಗೂ ಸದರಿ ಬ್ಯಾಂಕಿನ ನೌಕರರು ರಿಜಸ್ಟ್ರಾರವ
ರಿಗೆ ಕ್ಲುಪ್ತಕಾಲಕ್ಕೆ ಸಂಬಂಧಪಟ್ಟ ಬ್ಯಾಲೆನ್ಸ್‌ಷೀಟ್ ವಗೈರೆ ಲೆಖ್ಖಗಳ

ನ್ನು ಕಳುಹಿಸಲು ಬದ್ಧರಾಗಿ ಇರುತ್ತಾರೆ. ಇದಕ್ಕೆ ತಪ್ಪಿದರೆ ಅವರು ರೆಗ್ಯುಲೇಷನಿನಲ್ಲಿ ನಮೂದಾಗುವ ದಂಡನೆಗೆ ಗುರಿಯಾಗುತ್ತಾರೆ.

ಬ್ಯಾಂಕಿನ ಷೇರುದಾರರುಗಳ ಮತ್ತು ಲೇಣಿದಾರರುಗಳ ಹಿತಕ್ಕಾಗಿ, ಕ್ಲುಪ್ತಕಾಲಗಳಿಗೆ ಸಂಬಂಧಪಟ್ಟ ಬ್ಯಾಲೆನ್ಸ್‌ಷೀಟುಗಳನ್ನು ಕಳುಹಿಸುವ ವಿಷಯದಲ್ಲಿ ರೆಗ್ಯುಲೇಷನಿನ ನಿಬಂಧನೆಗಳನ್ನು ಖಂಡಿತವಾಗಿ ಜಾರೀ ಮಾಡುವದು ತುಂಬಾ ಅವಶ್ಯಕ ವಾಗಿರುತ್ತೆ.

---

## Sandy Soils.*
## ಮರಳು ಭೂಮಿಗಳು.

ಮರಳು ನೆಲಗಳನ್ನು ಒಳ್ಳೆ ಸ್ಥಿತಿಗೆ ತರಬೇಕಾದರೆ ಭೂರಚನೆಯಲ್ಲಿ ಸಡಲಿ ಪುಡಿಪುಡಿಯಾಗಿರುವದನ್ನು ಕಡಮೆ ಮಾಡುವದು ಅವಶ್ಯಕ. ಈ ಕೆಲಸವನ್ನು ಮೂರು ವಿಧದಲ್ಲಿ ಅಂದರೆ (೧) ಉಳುಮೆ ಮುಂತಾದ ವ್ಯವಸಾಯ ಕ್ರಮಗಳಿಂದಲೂ (೨) ಜೇಡಿ ಅಥವಾ ಒಂಡು ಮಣ್ಣುಗಳನ್ನು ಬೆರಸುವದರಿಂದಲೂ (೩) ಹಸರು ಪೈರುಗಳನ್ನು ಬೆಳೆದು ಭೂಮಿಯಲ್ಲಿ ಹ್ಯೂಮಸ್ (Humus) ಸಾರವನ್ನು ವಿಶೇಷವಾಗಿ ವೃದ್ಧಿಪಡಿಸುವದರಿಂದಲೂ ಸಾಧಿಸಬಹುದು. ಸಸ್ಯ ಮತ್ತು ಪ್ರಾಣಿಸಂಭಂಧವಾದ ಪದಾರ್ಥಗಳು ಭೂಮಿಯಲ್ಲಿ ಕೊಳೆತು ಅತ್ಯುತ್ತಮವಾದ ಸಾರವಾಗಿ ಪರಿಣಮಿಸುತ್ತವೆ. ಈ ಸಾರವನ್ನು ಹ್ಯೂಮಸ್ (Humus) ಎಂದು ಕರೆಯುತ್ತಾರೆ. ಇದು ಭೂಮಿಯಲ್ಲಿ ಮುಖ್ಯವಾದ ಅಂಶವಾಗಿರುತ್ತದೆ. ಹ್ಯೂಮಸ್ ಸಾರವು ತಕ್ಕಷ್ಟು ಇದ್ದದ್ದೇ ಆದರೆ ಭೂಮಿಯಲ್ಲಿ ಥಾಳಿಯು ಅತಿ ಸುಲಭವಾಗಿ ಆಡುವದು ತಪ್ಪುತ್ತದಲ್ಲದೆ ಇದರಲ್ಲಿರುವ ತನುವು ಬಹಳ ಕಾಲ ನಿಲ್ಲುತ್ತದೆ. ಮರಳು ನೆಲಗಳಲ್ಲಿ ಸಸ್ಯಾಹಾರವು ಸ್ವಾಭಾವಿಕವಾಗಿಯೇ ಕಡಿಮೆಯಾಗಿದ್ದಾಗ್ಯೂ ಕೂಡ ಇದದ್ದರಲ್ಲಿಯೇ ಇದನ್ನು ಒಳ್ಳೆ ಸ್ಥಿತಿಗೆ ತರಬಹುದು. ಫಾಸ್ಫಾರಿಕ್ ಆಸಿಡ್ (ರಂಜಕ ಪದಾರ್ಥ) ಮತ್ತು ಪೊಟಾಷ್ (ಮರದ ಬೂದಿ) ಇವುಗಳನ್ನು ಹೆಚ್ಚು ಖರ್ಚಿಲ್ಲದೇನೇ ಒದಗಿಸಬಹುದು. ಹಸರು ಗೊಬ್ಬರಗಳಮೂಲಕ ನೈಟ್ರೊಜನ್ ಪದಾರ್ಥವನ್ನೂ

* ಅಗ್ರಿಕಲ್ಚರಲ್ ಮತ್ತು ಇಂಡಸ್ಟ್ರಿಯಲ್ ಪ್ರೋಗ್ರೆಸ್ ಪತ್ರಿಕೆ, ಜೂನ್ ೧೯೧೯.

ಒದಗಿಸಬಹುದು. ಮರಳು ನೆಲದಲ್ಲಿ ಹ್ಯೂಮಸ್ ವೃದ್ಧಿಯಾದಹಾಗೆಲ್ಲಾ
ತನುವು ಹೆಚ್ಚಾಗಿ ನಿಂತು ಒದಗಬಹುದಾದ ಸಸ್ಯಾಹಾರವು ಹೆಚ್ಚುತ್ತದೆ
ಅವರೆ, ಹುರಳಿ, ತೊಗರಿ ಮುಂತಾದ ದ್ವಿದಳ ಧಾನ್ಯಗಳ ಪೈರನ್ನು ಇಂ
ಥಾ ಮರಳು ನೆಲಗಳಲ್ಲಿಟ್ಟರೆ ಹ್ಯೂಮಸ್ ಸಾರವು ವೃದ್ಧಿಯಾಗುತ ದೆ
ಆಯಿಸ್ಟರ್ ಚಿಪ್ಪುಗಳನ್ನು ಪುಡಿಮಾಡಿ ಅರ್ಧ ಟನ್ನಿನಷ್ಟು ಮರಳು ನೆಲ
ಗಳಿಗೆ ಹಾಕಿದರೆ ಸಾಕಂತೆ. ಸುಣ್ಣವನ್ನು ಉಪಯೋಗಿಸುವದರಿಂದಲೂ
ಅನುಕೂಲವೆಂದು ಸಾಮಾನ್ಯವಾಗಿ ತಿಳಿದಿರುತ್ತಾರೆ.

---

## Revenue Appeals.

## ರೆವಿನ್ಯೂ ಅಪೀಲುಗಳು.

೧೯೦೮-೦೯ನೆ ಸಾಲಿನ ೩೩ನೆ ನಂಬರು ಅಪೀಲು ಮೊಕದ್ದಮೆ.

| ಅಪೀಲು ವಾದಿಗಳು— | | ಅಪೀಲು ಪ್ರತಿವಾದಿ— |
|---|---|---|
| (1) ಕೆಪ್ಪಣ್ಣ (2) ಸೀತಾರಾಮಯ್ಯ (3) ಶ್ರೀಕಂಠಯ್ಯ (4) ಸಂಜೀವಪ್ಪ (5) ಕೃಷ್ಣಪ್ಪ. | *vs.* | ಶಾಮಣ್ಣ ಮೈನರ್ ತಂದೆ ಮತ್ತು ಗಾರ್ಡಿಯನ್ ಅನಂತರಾಮಯ್ಯ. |

ಅವರ್ಗೆರೆ ಮತ್ತು ೪ ಗ್ರಾಮಗಳು ಒಂದು ಫಿರ್ಕಾ. ಬಿಡದಿ ಮ
ತ್ತೊಂದು ಪ್ರತ್ಯೇಕ ಶ್ಯಾನುಭೋಗಿ ಫಿರ್ಕಾ. ಈ ಎರಡು ಫಿರ್ಕಾವಿಗೂ
ಒಬ್ಬನೇ ಮೂಲೀಕ ಶಾನುಭೋಗ. ಅನಂತರಾಮಯ್ಯನ ತಂದೆ ಶಾಮ
ಣ್ಣ ಮತ್ತು ೧, ೨, ೩, ೪ನೆ ವಾದಿಗಳು ಮತ್ತು ನಾಲ್ಕನೆ ವಾದಿ ತಂದೆ ಮ
ಹೀಪತಿರಾವು ಮೂಲೀಕ ಶಾನುಭೋಗನ ಮಕ್ಕಳು. ಇವನು ಫೌತಿಯಾ
ದನಂತರ ಇವನ ಹಿರೇಮಗ ಶಾಮಣ್ಣನ ಹೆಸರಿನಲ್ಲಿ ಈ ಫಿರ್ಕಾಗಳ ಶ್ಯಾ
ನುಭಾವಿಕೆ ಹಕ್ಕು ರಿಜಸ್ಟರಾಯಿತು. ರಿಜಸ್ಟರ್‌ದಾರ್ ಶಾಮಣ್ಣನು ಗತ
ಸಿದ ತರುವಾಯ ಇವನ ಮಗ ಅನಂತರಾಮಯ್ಯನ ಹೆಸರಿಗೆ ಬರಾಮದು
ಆಯಿತು. ಇವನು ಸ್ಕೂಲ್ ಮಾಸ್ಟರಾಗಿದ್ದದರಿಂದ ತನ್ನ ಮೈನರ್ ಮಗ
ನ (ಪ್ರತಿವಾದಿ) ಹೆಸರಿನಲ್ಲಿ ಶ್ಯಾನುಭೋಗಿ ಹಕ್ಕನ್ನು ರಿಜಸ್ಟರ್ ಮಾಡಿ
ಗುಮಾಸ್ತೆಯನ್ನು ಚುನಾಯಿಸಲು ಅಧಿಕಾರವನ್ನು ತನಗೆ ಕೊಡಿಸಬೇ
ಕಾಗಿ ಕೇಳಿಕೊಂಡನು. ಎರಡನೆ ವಾದಿ ಸೀತಾರಾಮಯ್ಯನು ಬಿಡದಿ ಗ್ರಾಮ
ವು ಒಂದು ಪ್ರತ್ಯೇಕ ಫಿರ್ಕಾವಾಗಿರುವದರಿಂದಲೂ ಮತ್ತು ೨೦ ವರ್ಷಗಳ
ಕಾಲ ಸದರಿ ಫಿರ್ಕಾ ನೌಕರಿಯನ್ನು ತಾನೇ ನೋಡುತ್ತಿರುವದರಿಂದಲೂ

ಈ ಫಿರ್ಕಾವಿನ ರಿಜಸ್ಟರ್ ಬರಾವರ್ದು ತನ್ನ ಹೆಸರಿನಲ್ಲಿ ಆಗಬೇಕೆಂದು ಬಯಸಿದನು. ಬಾಕಿ ವಾದಿಗಳು ತಮ್ಮ ತಮ್ಮ ಸುಫರ್ದಿನಲ್ಲಿರುವ ಗ್ರಾಮಗಳ ಬರಾವರ್ದು ತಮ್ಮತಮ್ಮ ಹೆಸರಿನಲ್ಲಿ ಆಗಬೇಕೆಂದು ಕೇಳಿಕೊಂಡರು. ಡೆಪ್ಯುಟಿ ಕಮೀಷನರವರು ಫಿರ್ಕಾಗಳನ್ನು ಒಡೆಯಲು ಆಗುವದಿಲ್ಲವೆಂದು ಅಪ್ಪಣೆಮಾಡಿ ಎರಡು ಫಿರ್ಕಾಗಳ ಬರಾವರ್ದನ್ನು ಪ್ರತಿವಾದಿಯ ಹೆಸರಿನಲ್ಲಿ ಮಾಡಿದ್ದಲ್ಲದೆ ಇವುಗಳಿಗೆ ಇಬ್ಬರು ಲಾಯಖು ಗುಮಾಸ್ತರನ್ನು ಇವನ ತಂದೆಯು ನೇಮಿಸಬೇಕೆಂದು ಹುಕುಂ ಮಾಡಿದರು. ಈ ಆರ್ಡರ್ ಮೇಲೆ ವಾದಿಗಳು ಆಪೀಲು ಮಾಡಿದ್ದರಲ್ಲಿ ಗೌರ್ನಮೆಂಟಿನವರು ಫೈಸಲು ಹುಕುಂ ಕೊಟ್ಟಿರುವದೇನಂದರೆ.—ಎರಡು ಫಿರ್ಕಾಗಳಿಗೂ ಒಬ್ಬನೇ ಬರಾವರ್ದಾರನಿರತಕ್ಕದ್ದಲ್ಲ. ಸೀತಾರಾಮಯ್ಯನೆಂಬುವನು ಬಿಡದಿ ಫಿರ್ಕಾವನ್ನು ಅನುಭವಿಸುತ್ತಿರುವದರಿಂದ ಆ ಫಿರ್ಕಾವಿನ ಬರಾವರ್ದು ಅವನ ಹೆಸರಿಗೆ ಆಗತಕ್ಕದ್ದು. ಮತ್ತೊಂದು ಫಿರ್ಕಾ ಶಾಮಣ್ಣನ ಹೆಸರಿನಲ್ಲಿಯೇ ಇರತಕ್ಕದ್ದು. ಇವನು ಮೈನರ್ ಆಗಿರುವವರಿಗೂ ಗುಮಾಸ್ತೆ ಕೆಲಸಕ್ಕೆ ಹಕ್ಕುದಾರರಪೈಕಿ ಲಾಯಖಾಗಿರುವವರಿದ್ದಲ್ಲಿ ಹೊರಗಿನವರನ್ನು ನೇಮಿಸಕೂಡದು.

——o——

## The Mysore Season and Crop Report, 1907-08.

## ಮೈಸೂರು ಸಂಸ್ಥಾನದ ೧೯೦೭-೦೮ನೆ ಸಾಲಿನ ಕಾಲಸ್ಥಿತಿ ಮತ್ತು ಫಸಲುತ್ಪತ್ತಿ ರಿಪೋರ್ಟು.

ಸಂಸ್ಥಾನದ ಒಟ್ಟು ವಿಸ್ತೀರ್ಣದಲ್ಲಿ ೩,೧೮೯ ಎಕರೆಗಳು ಹೆಚ್ಚಿರುತ್ತೆ. ಚೆನ್ನಗಿರಿ ಮತ್ತು ಮೊಳಕಾಲ್ಮುರು ತಾಲ್ಲೂಕುಗಳಲ್ಲಿ ರಿವಿಜನ್ ಸರ್ವೆ ನಡೆದಿರುವದೇ ಇದಕ್ಕೆ ಮುಖ್ಯ ಕಾರಣ.

(೧) ಸಂಸ್ಥಾನದ ಒಟ್ಟು ವಿಸ್ತೀರ್ಣವು ೧೯೦ ಲಕ್ಷ ಎಕರೆ. ಈ ಪೈಕಿ ೧೩ ಲಕ್ಷ ಎಕರೆಗಳು ಇನಾಂ ಮತ್ತು ಜಹಗೀರುಗಳ ವಿಸ್ತೀರ್ಣ. ಉಳಿದ ೧೭೩ ಲಕ್ಷ ಎಕರೆಗಳ ಪೈಕಿ ೭೬ ಲಕ್ಷ ಎಕರೆಗಳು ಸ್ಟೇಟ್ ಫಾರೆಸ್ಟು ಮತ್ತು ಪ್ಲಾಂಟೇಷನ್‌ಗಳು, ಗೋಮಾಳ ಮತ್ತು ಹುಲ್ಲುಬನ್ನಿ ಜಮೀನುಗಳು ಮತ್ತು ಸರ್ಕಾರಿ ಅಮೃತ ಮಹಲ್ ಕಾವಲುಗ

ಳಾಗಿ ಫಾರೆಸ್ಟ್ ಇಲಾಖೆಯ ಆಡಳಿತದಲ್ಲಿರುತ್ತದೆ. ಉಳಿದ ವಿಸ್ತೀರ್ಣದ
ಪೈಕಿ ಸುಮಾರು ೮೫ ಲಕ್ಷ ಎಕರೆಗಳು ಸಾಗುವಳಿಗೆ ಲಾಯಖಾಗಿದ್ದು
ಸುಮಾರು ೨೩ ಲಕ್ಷ ಎಕರೆಗಳು ಹಿಡುವಳಿಯಲ್ಲಿರುತ್ತವೆ. ಈಪೈಕಿ ೬೦
ಲಕ್ಷ ಎಕರೆಗಳು ಪ್ರಸಕ್ತ ಸಾಲಿನಲ್ಲಿ ಸಾಗಿನಲ್ಲಿದ್ದು ೧೩ ಲಕ್ಷ ಎಕರೆಗಳು
ಆಕಾರ ಕಂಡ ಬಂಜರಾಗಿದ್ದವು.

(೨) ಬೆಂಗಳೂರು, ಕೋಲಾರ, ತುಮಕೂರು, ಚಿತ್ರದುರ್ಗ
ಡಿಸ್ಟ್ರಿಕ್ಟುಗಳಲ್ಲಿ ಪ್ರಸಕ್ತ ಸಾಲಿನಲ್ಲಿ ಹಿಂದಿನ ಸಾಲಿನಷ್ಟು ಮಳೆ ಅ
ನುಕೂಲವಾಗಿರಲಿಲ್ಲ. ಶಿವಮೊಗ್ಗಾ ಮತ್ತು ಕಡೂರು ಡಿಸ್ಟ್ರಿಕ್ಟುಗಳಲ್ಲಿ
ನೋ ಅನುಕೂಲವಾಗಿತ್ತು. ಪ್ರಸಕ್ತ ಸಾಲಿನಲ್ಲಿ ಸಂಸ್ಥಾನದಲ್ಲಿ
ಆದ ಸರಾಸರಿ ಮಳೆ ಒಟ್ಟು ೩೯.೦೧ ಇಂಚುಗಳು. ಹಿಂದಿನ ಸಾಲಿನಲ್ಲಿ
೪೪.೪೨ ಇಂಚುಗಳು. ೧೮೭೦ರ ಲಾಗಾಯಿತು ೧೯೦೮ರ ವರೆವಿಗೆ ೩೮
ವರ್ಷದ ಸರಾಸರಿ ೩೬.೭೯ ಇಂಚುಗಳು.

(೩) ಪ್ರಸಕ್ತ ಸಾಲಿನಲ್ಲಿ ೬೦,೧೧,೬೭೧ ಎಕರೆಗಳು ಫಸಲಿಟ್ಟಿ
ತ್ತು. ಇದು ಹಿಂದಿನ ಸಾಲಿಗಿಂತಲೂ ೧೮,೮೦೦ ಎಕರೆಗಳು ಕಮ್ಮಿ.
ನೀರು ಹಾಯಿಸಿ ಬೆಳೆದ ವಿಸ್ತೀರ್ಣ ೯,೨೭,೪೩೮ ಎಕರೆಗಳು. ಇದು
ಹಿಂದಿನ ಸಾಲಿಗಿಂತಲೂ ೯,೧೯೩ ಎಕರೆಗಳು ಕಮ್ಮಿ. ರಾಗಿ, ಎಣ್ಣೆ ಬೀ
ಜಗಳು, ಮಸಾಲೆ ಪೈರು, ನಾರುಗಳು, ಕಬ್ಬು, ಈ ಪೈರುಗಳಿಟ್ಟ ವಿ
ಸ್ತೀರ್ಣವು ಪ್ರಸಕ್ತ ಸಾಲಿನಲ್ಲಿ ಹೆಚ್ಚಿತು. ಬತ್ತ, ಹುರಳಿ, ಇತರ ಆ
ಹಾರ ಪದಾರ್ಥಗಳು, ತೋಟದ ಫಸಲು, ಈ ಪೈರುಗಳು ಇಟ್ಟ ವಿಸ್ತೀ
ರ್ಣ ಕಡಮೆಯಾಯಿತು.

(೪) ಹಿಂದಿನಸಾಲಿನಲ್ಲಿ ಇನಾಂ ಗ್ರಾಮಗಳೂ ಸೇರಿ ಒಟ್ಟು ಭೂ
ಕಂದಾಯವು (ಸೆಸ್ಸುಗಳು ಬಿಟ್ಟು)ಒಟ್ಟು ಜನಸಂಖ್ಯೆಯ ಪೈಕಿ ಇಸ
ಒಂದಕ್ಕೆ ಸರಾಸರಿ ರೂ. ೧—೧೨—೯ ಬಿದ್ದು ಪ್ರಸಕ್ತಸಾಲಿನಲ್ಲಿ ರೂ
೧—೧೩—೨ ಬಿತ್ತು. ಪಕ್ತ ಪೂರಾ ಕಂದಾಯ ದಾಖಲಾಗಿರತಕ್ಕ ವಿ
ಸ್ತೀರ್ಣದಲ್ಲಿ ಈ ಕಂದಾಯವು ತಲೆ ಒಂದಕ್ಕೆ ಗತ ಸಾಲಿನಲ್ಲಿ ರೂ. ೧—
೧೩—೧೦ ಆಗಿ ಪ್ರಸಕ್ತಸಾಲಿನಲ್ಲಿ ೧—೧೪—೫ ಬಿತ್ತು. ರೈತ್ವಾರಿ ಹಿ
ಡುವಳಿಗಳ ಸಂಖ್ಯೆಯು ೧೯೦೬—೦೭ನೆ ಸಾಲಿನಲ್ಲಿ ೧೦,೪೧,೩೭೮ ಇದ್ದ

ದ್ದು ಪ್ರಸಕ್ತಸಾಲಿನಲ್ಲಿ ೧೦೩೦೫೯೪ಗೆ ಇಳಿಯಿತು. ಗತಸಾಲಿನಲ್ಲಿ ಕೋರ್ಟಿನ ಹುಕುಂಪ್ರಕಾರ ೯,೭೯೩ ಎಕರೆಗೆ ೧೩೬೩ ನಾಂ ತಬ್ದೀಲ್‌ಗಳು ಆಗಿ ಪ್ರಸಕ್ತಸಾಲಿನಲ್ಲಿ ೭,೨೫೦ ಎಕರೆಗೆ ೧೩೧೮ ನಾಂ ತಬ್ದೀಲ್‌ಗಳು ಆದವು. ಖಾಸಿಗಿ ಒಪ್ಪಂದಗಳಿಂದಲೂ ಮತ್ತು ದಾನಮೂಲಕವೂ ಗತಸಾಲಿಗೆ ೭೫,೪೯೯ ಎಕರೆಗೆ ೧೪೧೬೩ ವರ್ಗರಾಜೀನಾಮೆಗಳು ಬಂದು ಈ ಸಾಲಿನಲ್ಲಿ ೮,೫೦೮೦ ಎಕರೆಗೆ ೧೫೯೫೪ ವರ್ಗ ತಬ್ದಿಲ್ಲುಗಳು ಬಂದವು.

(೫) ೧೯೦೭ನೆ ಸಾಲಿನಲ್ಲಿ ಕಾಫಿ ಫಸಲಿಟ್ಟಿದ್ದ ವಿಸ್ತೀರ್ಣವು ಗತಸಾಲಿಗಿಂತಲೂ ೧೩೧೩ ಎಕರೆಗಳು ಕಡಿಮೆಯಾಗಿದ್ದಾಗ್ಯೂ ಎಕರೆಗೆ ೧೩೬ ಪೌಂಡು ತೂಕದಷ್ಟು ಉತ್ಪತ್ತಿಯಾಗಿ ಒಟ್ಟು ೧೩,೫೮೧,೨೨೦ ಪೌಂಡು ತೂಕ ಉತ್ಪತ್ತಿಯಾಯಿತು. ಇದು ಗತವರ್ಷದ ಉತ್ಪತ್ತಿಗಿಂತ ಎರಡರಷ್ಟಾಗಿರುತ್ತದೆ. ಗತಸಾಲಿನಂತೆ ಪ್ರಸಕ್ತಸಾಲಿನಲ್ಲಿಯೂ ೧೧೨ ಎಕರೆಗಳು ಸಿಂಕೋನಾ ಫೇರಾವಿನಲ್ಲಿದ್ದವು. ಬತ್ತದ ಉತ್ಪತ್ತಿಯಲ್ಲಿ ಈ ಸಾಲಿನಲ್ಲಿ ೯೪,೨೦೦ ಖಂಡಗ ಕಡಿಮೆಯಾಯಿತು. ಫೇರಾವಿನಲ್ಲಿದ್ದ ವಿಸ್ತೀರ್ಣ ಕಡಿಮೆಯಾದದ್ದೇ ಇದಕ್ಕೆ ಕಾರಣ. ರಾಗಿ ಫೇರಾವಿನಲ್ಲಿದ್ದ ವಿಸ್ತೀರ್ಣವು ಹೆಚ್ಚಿದ್ದರೂ ಉತ್ಪತ್ತಿಯು ಗತಸಾಲಿಗಿಂತಲೂ ೭,೦೮,೦೦೦ ಖಂಡಗ ಕಡಿಮೆಯಾಯಿತು. ಹುರಳಿ ಫೇರಾವಿನಲ್ಲಿದ್ದ ವಿಸ್ತೀರ್ಣವು ಕಡಿಮೆಯಾಗಿದ್ದರೂ ಉತ್ಪತ್ತಿಯು ೧೬,೦೦೦ ಖಂಡಗ ಹೆಚ್ಚಿತು. ಜೋಳದಪೈರಿಟ್ಟ ವಿಸ್ತೀರ್ಣವು ಹೆಚ್ಚಿದುದರಿಂದ ಇದರ ಉತ್ಪತ್ತಿಯೂ ೧೮,೦೦೦ ಖಂಡಗದಷ್ಟು ಹೆಚ್ಚಿತು. ಕಬ್ಬಿನ ವಿಸ್ತೀರ್ಣವು ೪,೦೦೦ ಎಕರೆಯಷ್ಟು ಹೆಚ್ಚಿದುದರಿಂದ ಬೆಲ್ಲದ ಉತ್ಪತ್ತಿಯಲ್ಲಿಯೂ ೧,೦೭,೮೦೦ ಮಣ ಹೆಚ್ಚಿತು.

(೬) ಗತಸಾಲಿಗಿಂತಲೂ ಪ್ರಸಕ್ತಸಾಲಿನಲ್ಲಿ ಆಹಾರ ಜಿನಸಿಗಳಾದ ಅಕ್ಕಿ, ರಾಗಿ, ಜೋಳ, ಹುರಳಿ ಇವುಗಳ ಧಾರಣೆಮಾಸಿಯು ಹೆಚ್ಚಿತು.

---

## Notifications.

## ಇಸ್ತಿಹಾರ್‌ನಾಮೆಗಳು.

ನಂ|| ೧೩೦೨೬-೧೫ನೆ ಜೂನ್ ೧೯೦೯.

ಮೈಸೂರು ಸರ್ವಿಸ್ ರೆಗ್ಯುಲೇಷನ್ಸ್ ೧೭೭ನೇ ಪ್ರಕರಣದ ಮೇರೆ

ಸೊರಬದ ತಾ॥ ಆಕ್ಟಿಂಗ್ ಅಮಲ್ದಾರ್ ಮೆ॥ ಚಿ. ಮುರುಡಪ್ಪನವರಿಗೆ ಅವರು ಉಪಯೋಗಿಸಿ ಕೊಳ್ಳುವ ತಾರೀಖು ಲಾಗಾಯ್ತು ೧೫ ದಿನಗಳ ಪ್ರಿವಿಲೇಜ್ ರಜಾ ಮಂಜೂರ್ಮಾಡಿರುತ್ತೆ.

ಅವರ ಗೈರ್ ಹಾಜರಿನಲ್ಲಿ ಕುಂಸಿ ಸಬ್ ತಾ॥ ಡೆಪ್ಯುಟಿ ಅಮಲ್ದಾರ್ ವಿ. ರಾಜಾರಾಯರು ಸೊರಬದ ತಾಲ್ಲೂಕು ಛಾರ್ಜಿನಲ್ಲಿರತಕ್ಕದ್ದು ಮತ್ತು ಶಿವಮೊಗ್ಗ ತಾ॥ ಅಮಲ್ದಾರು ತಮ್ಮ ಕೆಲಸದ ಜೊತೆಗೆ ಕುಂಸಿ ಸಬ್ ತಾಲ್ಲೂಕು ಕೆಲಸಗಳನ್ನು ನೋಡತಕ್ಕದ್ದು.

---

## Co-operative Society, Molakalmuru.

## ಮೊಳಕಾಲ್ಮುರು ಕೃಷಿಕರ ಸಹಾಯ ಸಂಘ.

ಚಿತ್ರದುರ್ಗ ಡಿಸ್ಟ್ರಿಕ್ಟ್ ಮೊಳಕಾಲ್ಮುರು ತಾಲ್ಲೂಕು ಮೊಳಕಾಲ್ಮುರುನಲ್ಲಿರುವ ಕೃಷಿಕರ ಸಹಾಯಸಂಘವು ೧೯೦೮ನೆ ಇಸವಿ ಫೆಬ್ರವರಿ ಒಂದನೆ ತಾರೀಖಿನಲ್ಲಿ ಕಾನೂನ್ ಅನುಸರಿಸಿ ರಿಜಸ್ಟರು ಮಾಡಲ್ಪಟ್ಟಿತು.

೨ ಈ ಸಂಘದ ಮೆಂಬರುಗಳ ಪೈಕಿ ೫ ಜನರು ಷೇರಿಗೆ ೫ ರೂಪಾಯಿನಂತೆ ೮ (ಹಣದ)ಷೇರುಗಳನ್ನು ೨೬ಮಂದಿ ಷೇರಿಗೆ ೨೦ ಸೇರಿನಂತೆ ೨೩೯ (ಧಾನ್ಯದ)ಷೇರುಗಳನ್ನು ಇದುವರಿಗೆ ಪಡೆದಿರುತ್ತಾರೆ. ಇದಲ್ಲದೆ ಸರ್ಕಾರದಿಂದ ೨೦೦ ರೂಪಾಯಿ ಸಾಲ ಈ ಸಂಘವು ಪಡೆದಿರುತ್ತೆ.

೩. ಸಂಘದಲ್ಲಿ ನಡೆದಿರುವ ಕೆಲಸ.—೧೭ ಜನ ೪,೩೬೦ ಸೇರು ದವಸ (ಧಾನ್ಯದ) ಸಾಲವನ್ನೂ ಒಬ್ಬರು ನಗದು ೨೫೦ ರೂ (ಹಣದ) ಸಾಲವನ್ನು ಪಡೆದಿರುತ್ತಾರೆ. ಈ ಸಾಲಕ್ಕೆ ೫೪೫ ಸೇರು ವಾತವು, ರೂಪಾಯಿ ೨೧-೮-೬ ಬಡ್ಡಿಯೂ ಆಗುತ್ತೆ. ೧೦ ಜನರು ದವಸದ ಸಾಲದ ಪೈಕಿ ೨೭೮೦ ಸೇರನ್ನು ವಾಪಸು ಕೊಟ್ಟಿರುತ್ತಾರೆ. ಇದಕ್ಕೆ ೩೪೭ ಸೇರು ವಾತವು ವಸೂಲಾಯಿತು.

೪. ಈ ವರ್ಷದ ಕಾಲಸ್ಥಿತಿಯು ಸರಿಯಾಗಿರಲಿಲ್ಲವಾಗಿ ವ್ಯವಸಾಯದ ಉತ್ತಮೋತ್ತಮವಾದ ಪದ್ಧತಿಯನ್ನು ಪ್ರೋತ್ಸಾಹಗೊಳಿಸಲು ಯಾವವಿಧವಾದ ಪ್ರಯತ್ನವನ್ನೂ ಮಾಡಲು ಅನುಕೂಲಿಸಲಿಲ್ಲ.

೫. ಜಮಾ ಮತ್ತು ಖರ್ಚು:—

ಜಮ.

| | | ಮೊಬಲಗು. | ಧಾನ್ಯ. |
|---|---|---|---|
| (೧) ಷೇರುಗಳಿಂದ | ... | ರೂ. ೪೦-೦-೦ | ಸೇರು ೪,೫೬೦. |
| (೨) ಪ್ರವೇಶಧನ | ... | ೬-೮-೦ | ,, |
| (೩) ಅಪ್ಪ್ಚ ಹಾಕಿಸುವ ಖರ್ಚಿಗಾಗಿ | | ೬-೮-೦ | ,, |
| (೪) ಸಾಲ | ... | ೨೦೦-೦-೦ | ,, |
| ಜುಮ್ಲಾ...... | | ೨೫೩-೦-೦ | ೪,೫೬೦ |

ಖರ್ಚು.

| | | |
|---|---|---|
| ಸಾದಿಲ್ವಾರ್ | ... | ರೂ ೨-೦-೦ |
| ಸಾಲ | ... | ೨೫೦-೦-೦ |
| ನಗದು ಹಾಜರಿ | ... | ೧-೦-೦ |
| ಜುಮ್ಲಾ...... | | ೨೫೩-೦-೦ |

ದವಸದ ವಾತ ೩೪೭ ಸೇರು ರಾಗಿ ಪೈಕಿ ೮೭ ಸೇರು ರಿಜರ್ವ್‌ಫಂಡಿಗೂ ೨೬೦ ಸೇರು ಷೇರುಗಳಿಗೂ ಹಂಚಿಗೆ ಆಗಬೇಕಾಗುತ್ತೆ.

೬. ಈ ಸಂಘದ ಸೆಕ್ರೆಟರಿಯವರು ರಿಪೋರ್ಟಿನ ಕೊನೆಯಲ್ಲಿ ಹೇಳಿರುವದು ಬಹಳ ಶ್ಲಾಘ್ಯವಾದ ಅಂಶವಾದ್ದರಿಂದ ಇಲ್ಲಿ ಅದನ್ನು ಸಂಪೂರ್ಣವಾಗಿ ಬರೆದಿರುತ್ತೆ.

,,ಈ ಸಂಘವು ಸ್ಥಾಪಿಸಿದ್ದರಿಂದ ಈ ಬರಗಾಲದಲ್ಲಿ ರೈತರಿಗೆ ಎಷ್ಟೋ ಅನುಕೂಲವಾಯಿತು. ತಮ್ಮತಮ್ಮ ವಿತ್ತವನ್ನೇ ಒಂದುಕಡೆ ಶೇಖರಿಸಿ ತಮ್ಮ ಅವಶ್ಯಕತೆಗೆ ಅನುಗುಣವಾಗಿ ಈ ಪರಸ್ಪರ ಸಹಾಯ ಸಂಘದಿಂದ ತಕ್ಕ ಸಹಾಯವನ್ನು ಹೊಂದಿ ಇದರಿಂದ ತಮ್ಮ ಷೇರುಗಳಮೇಲೂ ಲಾಭವನ್ನು ಪಡೆಯಬಹುದಾದ ಇಂತಹ ಸಂಘದ ಪ್ರಯೋಜನವನ್ನು ಜನರು ಚನ್ನಾಗಿ ಅರಿತು ಸರ್ಕಾರದವರು ದಯಪಾಲಿಸಿದ ಅನುಕೂಲತೆಯನ್ನು ಸಾಂಗವಾಗಿ ಅನುಭವಿಸಬೇಕೆಂಬುವದೇ ದೇಶಾಭಿಮಾನಿಗಳ ಮುಖ್ಯ ಪ್ರಾರ್ಥನೆಯಾಗಿದೆ. ಆದರೆ ಪರಸ್ಪರ ಸಹಾಯ ಸಂಘಗಳಲ್ಲಿ ಸ್ವಾರ್ಥತೆ ಕಡಿಮೆಯಾಗಬೇಕು. ಸಂಘದ ಏಳಿಗೆಯೇ ನಮ್ಮ ಏಳಿಗೆ, ಸಂಘದ ಪ್ರಯೋಜನವೇ ನಮ್ಮ ಪ್ರಯೋಜನ ಎಂದು ಪ್ರತಿಯೊಬ್ಬನೆಂಬರು ತಿಳಿದುಕೊಳ್ಳಬೇಕು. ಇದು ಕಷ್ಟವಾದ ಮಾತ; ಪರಂತು

ಅಭ್ಯಾಸಕ್ಕೆ ಯಾವದು ಅಸಾಧ್ಯವಲ್ಲ. ದೇವರ ದಯೆಯಿಂದ ಈ ಪಾಠವು ಚೆನ್ನಾಗಿ ಅಭ್ಯಾಸಕ್ಕೆ ಬಂದು ಈ ಸಂಘವು ದಿನದಿನಕ್ಕೆ ಅಭಿವೃದ್ಧಿಗೆ ಬರಬೇಕೆಂದು ಎಲ್ಲರೂ ಏಕಕಂಠವಾಗಿ ಹಾರೈಸೋಣ.''

---

## Short Notes on Cattle Diseases.
## ದನಕರುಗಳ ಜಾಡ್ಯ.

ಚಿತ್ರದುರ್ಗದ ಡಿಸ್ಟ್ರಿಕ್ಟ್ ಹಿರಿಯೂರ್ ತಾಲ್ಲೂಕು ಮಾರೀಕಣಿವೆ ಯಿಂದ ಹೊಸದಾಗಿ ತೆಗದಿರುವ ನಾಲಾ ಪಕ್ಕದಲ್ಲಿರುವ ಹಳ್ಳಿಗಳಲ್ಲಿ ಕೆಲವು ಕಾಲದಿಂದ ದನಕರುಗಳು ಸಾಯುತ್ತಾ ಬಂದವು. ಡೆಪ್ಯುಟಿ ಕಮಿಷನರ ವರು ಆ ಜಾಡ್ಯವನ್ನು ಕಂಡು ಹಿಡಿಯಬೇಕೆಂದು ಆ ಡಿಸ್ಟ್ರಿಕ್ಟ್ ಅಸಿಸ್ಟೆಂಟ್ ವೆಟರಿನೆರಿ ಇನ್ಸ್ಪೆಕ್ಟರವರನ್ನು ಪರೀಕ್ಷೆ ಮಾಡಲು ಕಳುಹಿಸಿದ್ದರು. ಅವ ರು ಹೋಗಿದ್ದಾಗ ರೋಗದಿಂದ ಸತ್ತ ಒಂದು ದನವನ್ನು ಕುಯಿದು ಪರಿ ಕ್ಷೆಮಾಡಿ ನೋಡಿದ್ದರಲ್ಲಿ ಪಿತ್ಥಕೋಶವು ಸ್ವಭಾವಸ್ಥಿತಿಗಿಂತ ಎರಡರಷ್ಟು ದೊಡ್ಡದಾಗಿಯೂ ಅದರಲ್ಲಿ ಸಣ್ಣ ಗೂಡುಗಳಾಗಿ ಅವುಗಳಲ್ಲಿ ಅನೇಕ ಹು ಳುಗಳು ಇದ್ದವು. ಈ ಹುಳುಗಳು ಬಿಳಿ ಬಣ್ಣ ವುಳ್ಳದ್ದಾಗಿ $\frac{1}{16}$ ಅಂಗುಲ ದಪ್ಪನಾಗಿಯೂ, $\frac{3}{4}$ ರಿಂದ $1\frac{1}{2}$ ಅಂಗುಲ ಉದ್ದವಾಗಿಯೂ $\frac{1}{3}$ರಿಂದ $\frac{1}{4}$ ಅಂ ಗುಲಕ್ಕಿಂತ ಕಡಿಮೆ ಅಗಲವಾಗಿಯೂ ಇವೆ. ಅವುಗಳ ಮರಿಗಳು ಇನ್ನು ಸಣ್ಣದಾಗಿವೆ. ಈ ಹುಳುಗಳು ಮೊಟ್ಟೆಗಳಾಗಿರುವ ಸ್ಥಿತಿಯಲ್ಲಿ ನೀರಿನ ಲ್ಲಿಯೂ ಮತ್ತು ಅಲ್ಲಿ ಬೆಳೆದಿರುವ ಗರಿಕೆ ಹುಲ್ಲಿನಮೇಲೆಯೂ ಸೇರಿ ಕೊಂಡಿವೆ.

ಅದೇನೀರನ್ನು ಕುಡಿಯುವದರಿಂದಾಗಲಿ ಅಥವಾ ಅಂಥಾ ಹುಲ್ಲನ್ನು ತಿನ್ನುವದರಿಂದಾಗಲಿ ಆ ಹುಳುಗಳ ಮೊಟ್ಟೆಗಳು ದನ ಕರುಗಳ ಜೀರ್ಣ ಕೋಶಕ್ಕೆಹೋಗಿ ಅಲ್ಲಿಂದ ಪಿತ್ಥಜನಕಾಂಗದಲ್ಲಿ ಸೇರಿ ಅಲ್ಲಿ ಅನೇಕ ಗೂಡು ಗಳು ಮಾಡಿಕೊಂಡು ಜೀವಿಸುವವು. ಅಲ್ಲದೆ ಪಿತ್ಥ ನಾಳಗಳಲ್ಲಿಯೂ ಪಿ ತ್ಥ ಕೋಶದಲ್ಲಿಯೂ ಸೇರಿ ಪಿತ್ಥವು ಸರಿಯಾಗಿ ಆಹಾರ ದೊಂದಿಗೆ ಸೇರದ ಹಾಗೆ ಮಾಡುವವು. ಅದರಿಂದ ಅಜೀರ್ಣಹುಟ್ಟಿ ದನ ಕರುಗಳು ಬಹಳ

ಬಹಳವಾಗಿ ೧—೪ ತಿಂಗಳಲ್ಲಿ ಸಾಯುವವು. ಈ ಹುಳುಗಳಿಗೆ ಪ್ರಾಯಶಃ ಸೀತ ಪ್ರದೇಶವೇ ಮಾತೃಸ್ಥಾನವಾಗಿರುವದು. ಈ ರೋಗ ಪೀಡಿತವಾದ ದನ ಕರುಗಳಿಂದ ವಿಸರ್ಜಿಸಲ್ಪಟ್ಟ ಸಗಣಿಯಲ್ಲಿ ಈ ಹುಳುಗಳು ಹೆಚ್ಚಾಗಿ ಸೇರಿರುವವು. ಆ ಸಗಣಿಯು ಅಲ್ಲಿರತಕ್ಕ ನೀರಿನಲ್ಲಿಯೂ ಮತ್ತು ಹುಲ್ಲಿನಮೇಲೂ ಬೀಳುವದರಿಂದ ಅವು ಅಲ್ಲಿಯೆ ಪ್ರಬಲವಾಗಿ ಇತರ ದನಗಳ ಶರೀರಕ್ಕೂ ವ್ಯಾಪಿಸಿ ರೋಗವನ್ನುಂಟುಮಾಡುವವು.

ಚಿನ್ಹೆಗಳು.—ಮೊದಲು ಆಹಾರ ತಿನ್ನುವದು ಮತ್ತು ಜೀರ್ಣಶಕ್ತಿ ಕಡಿಮೆಯಾಗುವದು. ಬಾಯಾರಿಕೆ ಹೆಚ್ಚುವದು. ಕಾಲುಗಳಲ್ಲಿ ತ್ರಾಣ ಕಡಿಮೆಯಾಗುವದು. ಕಣ್ಣಿನ ಪೊರೆಯು ಬಿಳಪು ಹಳದಿ ಮಿಶ್ರವಾಗುವದು ಮತ್ತು ಕಣ್ಣು ರೆಪ್ಪೆಗಳು ಬಾತುಕೊಳ್ಳುವವು. ಒಂದೆರಡು ತಿಂಗಳಲ್ಲಿ ಜಾಡ್ಯವು ಪ್ರಬಲಿಸಿ ಬಹಳ ನಿತ್ರಾಣದಿಂದ ಕಾಲುಗಳು ಬಾತುಕೊಂಡು ನಡಿಯುವದು ಅಸಾಧ್ಯವಾಗಿ ಭೇದಿಯಿಂದ ಸಾಯುವವು. ಈ ರೋಗವು ದನಕರುಗಳಲ್ಲದೆ ಕುರಿ ಆಡುಗಳಿಗೂ ಬಹಳವಾಗಿ ಬರುವದು. ಅವುಗಳಲ್ಲಿಯೂ ಮೇಲೆ ಹೇಳಿದ ಚಿನ್ಹೆಗಳೆಲ್ಲಾ ಕಾಣಿಸುವವು. ಇವುಗಳಲ್ಲದೆ ಆನೆ ಕುದುರೆ ಕತ್ತೆ ಮನುಷ್ಯರಿಗೂ ಈ ರೋಗವು ಕೆಲವು ವೇಳೆಗಳಲ್ಲಿ ವ್ಯಾಪಿಸುವದು.

ಚಿಕಿತ್ಸೆ.—ಮಳೆಗಾಲದಲ್ಲಿ ದನ ಕರುಗಳನ್ನು ಅಂಥಾ ಸೀತ ಪ್ರದೇಶದಲ್ಲಿ ಮೇಯುವದಕ್ಕೆ ಬಿಡಬಾರದು. ಬಿಸಲು ಕಾಲದಲ್ಲಿ ಈ ಹುಳುಗಳ ಉಲ್ಬಣಿಯು ಬಹಳ ಕಡಿಮೆಯಾಗಿರುವದು. ಆಗ ಅವುಗಳಿಂದ ಬಾಧೆಯು ಬಹಳಕಡಿಮೆ. ಬಹಳವಸತಿಯಾದ ಪ್ರದೇಶಗಳಲ್ಲಿ ಸ್ವಂತ ಜಮೀನುಳ್ಳವರು ಆ ಜಮೀನಿನ ಸುತ್ತಲು ಕಾಲುವೆಗಳನ್ನು ತೆಗೆಯುವದರಿಂದ ವಸತಿಯು ಬಹಳಮಟ್ಟಿಗೆ ಕಡಿಮೆಯಾಗುವದು. ಅಲ್ಲದೆ ಕ್ಷಾರಸ್ವಭಾವ ಉಳ್ಳ ಜಮೀನುಗಳಲ್ಲಿ ಈ ಹುಳುಗಳ ಬಾಧೆಯು ಬಹಳ ಕಡಿಮೆ.

ಜಾಡ್ಯದಿಂದ ಪೀಡಿತವಾದವುಗಳಿಗೆ ಪುಷ್ಟಿಕರವಾದ ಆಹಾರಗಳನ್ನು ಕೊಡಬೇಕು. ಹತ್ತಿಬೀಜ, ನೆಲಕಡಲೆಕಾಯಿ, ಎಳ್ಳು, ಕೊಬರಿ ಇವುಗಳ ಹಿಂಡಿ, ತವುಡು, ಉದ್ದು, ಕಡಲೆ, ಮುಂತಾದವುಗಳನ್ನು ಕೊಡಬೇಕು. ಮತ್ತು ಉಪ್ಪು, ಶುಂಠಿ, ಅನ್ನಭೇದಿ, ಸೋಪುಬೀಜ-ಬೆಳ್ಳುಳ್ಳಿ ಇವುಗಳ

ನ್ನು ಸಮಭಾಗವಾಗಿ ತೆಗೆದುಕೊಂಡು ಪುಡಿಮಾಡಿ ದಿನಒಂದಕ್ಕೆ ೧-೨ ತೊಲವರಿವಿಗೂ ಆಹಾರದ ಸಂಗಡ ಮಿಶ್ರಮಾಡಿ ಕೊಡುವದು.

---

## Occasional Notes.

## ವಿವಿಧ ವೃತ್ತಾಂತ್ರಗಳು.

೧. ಹರಳು ಹಿಂಡಿಯು ಒಳ್ಳೆ ಗೊಬ್ಬರ. ಇದನ್ನು ಕಬ್ಬು, ಉರಳಗಡ್ಡೆ, ಕೋಸು ಮುಂತಾದ ಅನೇಕ ಪೈರುಗಳಿಗೆ ಗೊಬ್ಬರವಾಗಿ ಇಡುತ್ತಾರೆ. ಉರಳಗಡ್ಡೆಗೂ, ಕಬ್ಬಿಗೂ ಎಕರೆ ಒಂದಕ್ಕೆ ೧೮ ರಿಂದ ೩೦ ಮಣ (ಬಂಗಾಳ) ವರಿಗೂ ಉಪಯೋಗಿಸುವದುಂಟು. ಕಬ್ಬಿಗೆ ಹರಳು ಹಿಂಡಿಯನ್ನು ಒಂದೆ ದಫಾ ಒಟ್ಟಾಗಿ ಉಪಯೋಗಿಸದೆ ಸ್ವಲ್ಪ ಸ್ವಲ್ಪವಾಗಿ ೨-೩ ವೇಳೆ ಅಂದರೆ, ಬೀಜ ನೆಡುವಾಗ ಒಂದುಸಾರಿ, ಕಬ್ಬಿನ ಬುಡಕ್ಕೆ ಮಣ್ಣುಹಾಕುವಾಗ ಎರಡುಸಾರಿ, ಈ ರೀತಿ ಉಪಯೋಗಿಸಿದರೆ ಮೇಲು. ನೀರು ಹಾಯಿಸದೆ ಉರಳಗೆಡ್ಡೆಯನ್ನು ಬೆಳೆಯುವ ಸಂದರ್ಭಗಳಲ್ಲಿ ಈ ಹಿಂಡಿಯನ್ನು ಬೀಜ ನೆಡುವದಕ್ಕೆ ಮುಂಚೆ ಉಪಯೋಗಿಸಿ ಕೊಳೆಯುವದಕ್ಕೆ ಅವಕಾಶ ಕೊಡಬೇಕು. ನೀರು ಹಾಯಿಸಿ ಬೆಳದಲ್ಲಿ ಉರಳಗೆಡ್ಡೆ ಗಿಡಗಳಿಗೆ ಮಣ್ಣುಹಾಕುವಾಗ ಈ ಹಿಂಡಿಯನ್ನು ಉಪಯೋಗಿಸುವದು ಉತ್ತಮ.-[ಇಂಡಸ್ಟ್ರಿಯಲ್ ಇಂಡಿಯಾ, ಫೆಬ್ರವರಿ ೧೯೦೯.]

---

೨. ಸಿಲೋನ್ ದೇಶದ ಪರಂಗಿ ಹಣ್ಣಿನ ಬೀಜವನ್ನು ಹಾಕಿದರೆ ಒಂದು ವರ್ಷದಲ್ಲಿ ಗಿಡವು ೮ ಅಡಿ ಉದ್ದ ಬೆಳೆಯುತ್ತದೆ. ಆಗಸ್ಟ್ ತಿಂಗಳಲ್ಲಿ ಒಟ್ಟು ಹಾಕಿ ಸೆಪ್ಟಂಬರ್ ತಿಂಗಳ ಮಧ್ಯೆ ಹೊಲಗಳಲ್ಲಿ ಸಸಿಗಳನ್ನು ನೆಟ್ಟರೆ ಮಾರ್ಚಿ ತಿಂಗಳಲ್ಲಿ ಗಿಡಗಳು ಹೂ ಬಿಡುವದಕ್ಕೆ ಆರಂಭಿಸಿ ಜೂನ್ ತಿಂಗಳಿಂದ ಜನವರಿ ತಿಂಗಳ ವರಿವಿಗೂ ಫಲ ಕೊಡುತ್ತವೆ. ಆಗಸ್ಟ್, ಸೆಪ್ಟಂಬರ್ ತಿಂಗಳಲ್ಲಿ ಅಂದರೆ ಬೀಜ ಹಾಕಿದ ೧೨ ತಿಂಗಳನಂತರ ಬಿಡುವ ಹಣ್ಣುಗಳು ಗಾತ್ರವಾಗಿ ಇರುತ್ತವೆ. ಗಿಡ ಒಂದಕ್ಕೆ ನೂರು ಹಣ್ಣು ಬಿಡುತ್ತದೆ. ಹಣ್ಣುಗಳು ಗಾತ್ರದಲ್ಲಿಯೂ ರುಚಿಯಲ್ಲಿಯೂ ಚನ್ನಾಗಿಯೇ ಇರುತ್ತವೆ. ಮುಖ್ಯವಾಗಿ ಈ ಗಿಡದ ಬೆಳವಳಿಕೆಯು ಬಹಳ

ಚಮತ್ಕಾರ.—[ಅಗ್ರಿಕಲ್ಚರಲ್ ಮತ್ತು ಇಂಡಸ್ಟ್ರಿಯಲ್ ಪ್ರೋಗ್ರೆಸ್ ಪತ್ರಿಕೆ, ಜೂನ್ ೧೯೦೯.]

—o—

೩. ಅಕ್ಕಿಯನ್ನು ಮಿಲ್ಲುಗಳಲ್ಲಿ ತೆಗೆದು ಅದಕ್ಕೆ ವಿಶೇಷವಾಗಿ ಹೊಳಪು ಕೊಡುವದರಿಂದ ಅಕ್ಕಿಯಲ್ಲಿರುವ ನೈಟ್ರೋಜನ್ ಪದಾರ್ಥದ ಪೈಕಿ ಶೇಕಡಾ ೯೦ರಷ್ಟು ಹೊಳಪು ಕೊಡುವದಕ್ಕಾಗಿ ತೆಗೆದ ಸಣ್ಣ ತೌಡಿನಲ್ಲಿಯೇ ಹೋಗಿಬಿಡುತ್ತೆ.-[ಅಗ್ರಿಕಲ್ಚರಲ್ ಮತ್ತು ಇಂಡಸ್ಟ್ರಿಯಲ್ ಪ್ರೋಗ್ರೆಸ್ ಪತ್ರಿಕೆ, ಜೂನ್ ೧೯೦೯.]

—o—

೪. ಹೊಂಡಗಳಲ್ಲಿರುವ ದೂಣು ಉತ್ತಮವಾದ ಗೊಬ್ಬರವಾಗುತ್ತದೆ. ಉತ್ಕೃಷ್ಟವಾದ ನೆಲದಲ್ಲಿರುವದಕ್ಕಿಂತಲೂ ಇದರಲ್ಲಿ ಸಸ್ಯಾಹಾರವು ಹೆಚ್ಚಾಗಿರುತ್ತದೆ. ಇದನ್ನು ಫಲವೃಕ್ಷಗಳಿಗೆ ವಿಶೇಷವಾಗಿ ಉಪಯೋಗಿಸುತ್ತಾರೆ.—[ಅಗ್ರಿಕಲ್ಚರಲ್ ಜರ್ನಲ್ ಇಂಡಿಯಾ, ಏಪ್ರಿಲ್ ೧೯೦೮.]

—o—

೫. ಇಂಡಿಯಾ ದೇಶದಲ್ಲಿ ೧೯೦೮-೦೯ನೆ ಸಾಲಿನಲ್ಲಿ ೨೫,೮೩೬,೮೦೦ ಎಕರೆಗಳು ಗೋಧಿ ಸಾಗುವಳಿಯಲ್ಲಿರುತ್ತೆ. ಹೋದ ಸಾಲಿಗಿಂತಲೂ ಪ್ರಸಕ್ತ ಸಾಲಿನಲ್ಲಿ ಶೇಕಡಾ ೧೩.೩ ವಿಸ್ತೀರ್ಣವು ಹೆಚ್ಚಿರುತ್ತೆ. ಪ್ರಸಕ್ತ ಸಾಲಿನಲ್ಲಿ ೭,೫೮೦,೮೦೦ ಟನ್ ಗೋಧಿ ಉತ್ಪತ್ತಿಯಾಗುವದಾಗಿ ಅಂದಾಜಾಗಿರುತ್ತೆ. ಇದು ಹಿಂದಿನ ಸಾಲು ಉತ್ಪತ್ತಿಗಿಂತಲೂ ಶೇಕಡಾ ೨೪.೨ ರಷ್ಟು ಹೆಚ್ಚು.

—o—

೬. ಹೊಗೆಸೊಪ್ಪು ಬಹಳ ಹುಲುಸಾಗಿಯೂ ಜಾಗ್ರತೆಯಾಗಿಯೂ ಬೆಳೆಯತಕ್ಕ ಪೈರು. ಇದಕ್ಕೆ ಸಸ್ಯಾಹಾರವು ಹೆಚ್ಚಾಗಿ ಬೇಕಾಗುತ್ತೆಯಾದ್ದರಿಂದ ಇದಕ್ಕೆ ಒಳ್ಳೆ ವ್ಯವಸಾಯ ಮಾಡುವದು ಗೊಬ್ಬರ ಹಾಕುವದು ಅವಶ್ಯಕ. ಈ ಗಿಡದಲ್ಲಿ ವಿಶೇಷವಾಗಿ ನೈಟ್ರೋಜನ್ ಮತ್ತು ಪೋಟಾಷ ಮತ್ತು ಅಲ್ಪಸ್ವಲ್ಪ ಫಾಸ್ಫರಿಕ್ ಆಸಿಡ್ ಇರುತ್ತದೆ. ಆದಕಾರಣ ಈ ಪೈ

ರಿಗೆ ಉಪಯೋಗಿಸುವ ಗೊಬ್ಬರದಲ್ಲಿ ಈ ಪದಾರ್ಥಗಳು ಹೆಚ್ಚಾಗಿರಬೇ
ಕು. ಸಗಣಿ ಗೊಬ್ಬರ ಮತ್ತು ಮೇಕೆ ಗೊಬ್ಬರ ಹಾಕುವದು ಅನು
ಕೂಲ. ಆದರೆ ಇವು ತಕ್ಕಷ್ಟು ಸಿಕ್ಕುವದಿಲ್ಲ. ಸಗಣಿ ಗೊಬ್ಬರದೊಂ
ದಿಗೆ ಕೆಲವು ತಯಾರಿಸಿದ ಗೊಬ್ಬರಗಳನ್ನು ಮಿಶ್ರಮಾಡಿ ಹಾಕುವದರಿಂದ
ಉತ್ಪತ್ತಿಯು ಬಹಳ ಹೆಚ್ಚುವದೆಂದು ಅಜಮಾಯಿಷಿಗಳಿಂದ ತಿಳಿಯಬರು
ತ್ತದೆ. ನಡಿಯಾ ಫಾರಂನಲ್ಲಿ ಹರಳು ಹಿಂಡಿಯನ್ನು ಹಾಕಿ ಪೈರು ಮಾಡಿ
ದ್ದರಲ್ಲಿ ಒಳ್ಳೆ ಫಲಿತಾಂಶಗಳು ಕಂಡು ಬಂದಿರುತ್ತೆ. ಈ ಗೊಬ್ಬರಗಳನ್ನು
ಉಪಯೋಗಿಸುವದು ಹೇಗೆಂದರೆ.—ಸಗಣಿ ಗೊಬ್ಬರವನ್ನು ಮಳೆ ಬೀಳು
ವದಕ್ಕೆ ಮುಂಚೆ ಹಾಕಬೇಕು. ಹರಳು ಹಿಂಡಿಯನ್ನು ಸಸಿಗಳು ಬೇರೂ
ರಿದನಂತರ ಉಪಯೋಗಿಸಬೇಕು; ಅಂದರೆ ಹಿಂಡಿಯನ್ನು ಪುಡಿಮಾಡಿ ಇದ
ಕ್ಕೆ ಸರಿಸಮವಾಗಿ ಮಣ್ಣು ಬೆರಸಿ ಒಂದು ಗಿಡಕ್ಕೆ ಒಂದು ಹಿಡಿಯಂತೆ
ಗಿಡದ ಸುತ್ತಲೂ ಹರಡಿ ನೆಲವನ್ನು ಕೆರದುಬಿಡಬೇಕು. ಕೇವಲ ಗಿಡದ
ಹತ್ತಿರ ಹರಡಬಾರದು.

V.B. Soobbiah & Sons, Printers, Bangalore.—1909.

THE MYSORE

# REVENUE & AGRICULTURAL GAZETTE.

ವಾಲ್ಯುಂ ೩.] ಗುರುವಾರ, ೧೫ನೆ ಜುಲೈ ೧೯೦೯. [ನಂ. ೧೮.

## Contents.



## ಅನುಕ್ರಮಣಿಕೆ.



## The Effect of After-Cultivation. *

## ಪೈರಿಟ್ಟನಂತರ ನಡೆಸಬೇಕಾದ ವ್ಯವಸಾಯ ಕ್ರಮ.

ಬಿಸಲುಕಾಲ ಮುಗಿಯುತ್ತಲೆ ರೈತರು ಭೂಮಿಯನ್ನು ಉಳುವದಕ್ಕಾಗಿ ಮೊದಲು ಮಳೆಗಳನ್ನು ಆತುರದಿಂದ ನಿರೀಕ್ಷಿಸುವರು. ಭೂಮಿ

---

* ಮದ್ರಾಸ್ ಅಗ್ರಿಕಲ್ಚರಲ್ ಕ್ಯಾಲೆಂಡರ್.—೧೯೦೯.

ಯನ್ನು ಅನೇಕಸಲ ಉತ್ತು ಪುನಃ ಮಳೆ ಬಂದನಂತರ ಬೀಜವನ್ನು ಹಾಕುತ್ತಾರೆ.

ಮಳೆ ಬಂದ ನಂತರ ಪೈರಿಗಿಂತಲೂ ಜಾಗ್ರತೆಯಾಗಿ ಭೂಮಿಯಲ್ಲಿ ಕಳೆ ಏಳುತ್ತದೆ. ಆದ್ದರಿಂದ ಭೂಮಿಯನ್ನು ಅನೇಕಾವರ್ತಿ ಅರಗಬೇಕಾಗುತ್ತೆ. ಇದರಿಂದ ಕಳೆಗಳು ನಾಶವಾಗಿ ಪೈರಿನಮೇಲೆ ಕವಿಕೊಳ್ಳುವದು ತಪ್ಪಿ ಭೂಮಿಯಲ್ಲಿನ ಸಸ್ಯಾಹಾರವು ಪೈರಿಗೆ ಒದಗುವದಕ್ಕೆ ಅನುಕೂಲಿಸುತ್ತದೆ. ಪೈರಿಟ್ಟನಂತರ ಭೂಮಿಯನ್ನು ಅರಗುವದರಲ್ಲಿ ಮತ್ತೊಂದು ಮುಖ್ಯವಾದ ಅನುಕೂಲ ಉಂಟು; ಭೂಮಿಯಲ್ಲಿ ಗಾಳಿಯು ಸಲೀಸು ಆಡಲು ಅನುಕೂಲಿಸಿ ನೆಲದಲ್ಲಿ ತನುವು ನಿಲ್ಲುತ್ತದೆ. ಉಷ್ಣಪ್ರದೇಶದ ಖುಷ್ಕಿ ಸಾಗುವಳಿಯಲ್ಲಿ ಭೂಮಿಯಲ್ಲಿ ತನುವನ್ನು ನಿಲ್ಲಿಸುವದೇ ಒಂದು ಮುಖ್ಯವಾದ ಅಂಶ. ಸಸಿಗಳ ಬೇರುಗಳನ್ನು ಪರೀಕ್ಷಿಸಿದ್ದಾದರೆ ಇವು ಜಲರೂಪವಾದ ಸಾರವನ್ನೇ ತೆಗೆದುಕೊಳ್ಳುವದಕ್ಕೆ ಅನುಕೂಲಿಸುವಂತೆ ರಚಿಸಲ್ಪಟ್ಟಿರುತ್ತೆ. ಈ ಜಲರೂಪವಾದ ಸಾರವು ಭೂಮಿಗೆ ನಾಲ್ಕು ವಿಧವಾಗಿ ಒದಗುತ್ತದೆ (೧) ಈ ಪೈಕಿ ಮುಖ್ಯವಾದ್ದು ಮಳೆ (೨)ಹಾಯಿಸಿದ ನೀರು (೩)ಅಂತರಿಕ್ಷದಲ್ಲಿ ಒದಗುವ ಇಬ್ಬನಿ (೪)ಭೂಮಿಯೊಳಗಿನ ನೀರು. ಇದು ಆಳದಿಂದ ನೆಲ ಮಟ್ಟಕ್ಕೆ ಕ್ರಮವಾಗಿ ಏರಿ ಪೈರುಗಳಿಗೆ ಉಪಯೋಗ ಪಡುತ್ತದೆ. ಈ ರೀತಿ ಒದಗುವ ನೀರುಗಳನ್ನು ಉಪಯೋಗ ಪಡಿಸಿಕೊಳ್ಳುವದೂ ಭೂಮಿಯಲ್ಲಿ ಈ ತನುವನ್ನು ಸಾಧ್ಯವಾದಷ್ಟು ಹೆಚ್ಚುಕಾಲ ನಿಲ್ಲಿಸುವದೂ ಪೈರಿಟ್ಟನಂತರ ವ್ಯವಸಾಯ ಮಾಡುವದರಲ್ಲಿನ ಮುಖ್ಯೋದ್ದೇಶವಾಗಿರುತ್ತೆ.

ಭೂಮಿಯಲ್ಲಿ ಮಣ್ಣಿನ ರೇಣುಗಳ (particles) ಮಧ್ಯೆ ರಂಧ್ರಗಳು ಇರುತ್ತವೆ. ಇವು ಕಣ್ಣಿಗೆ ಗೋಚರವಾಗದಷ್ಟು ಸಣ್ಣಗೆ ಇರುತ್ತವೆ. ಭೂಮಿಯಲ್ಲಿನ ನೀರು ಇವುಗಳಲ್ಲಿ ಹರಿದು ಹೋಗುತ್ತದಲ್ಲದೆ ಈ ಸಂದುಗಳು ಚಿಕ್ಕದಾಗಿದ್ದಹಾಗೆಲ್ಲಾ ನೀರು ಬಸಿದು ಹೋಗುವದು ಜಾಗ್ರತೆ. ಒಂದು ಹೆಂಟೆಯನ್ನು ನೀರಿನಲ್ಲಿ ಹಾಕಿದ್ದೇ ಆದರೆ ನೀರು ಹೆಂಟೆಯ ಬುಡಕ್ಕೆ ಮಾತ್ರ ತಗಲಿದ್ದರೂ ಕೂಡ ಇದರ ಮೇಲ್ಭಾಗವು ಜಾಗ್ರತೆಯಾಗಿ ಕಪ್ಪು ತಿರುಗುತ್ತದೆ. ಈ ಸಣ್ಣ ರಂಧ್ರಗಳಲ್ಲಿ ನೀರು ವ್ಯಾಪಿಸಿರುವದೇ ಇ

ದಕ್ಕೆ ಕಾರಣ. ಗಟ್ಟಿಯಾಗಿರುವ ಭೂಮಿಯಲ್ಲಿ ಈ ರಂಧ್ರಗಳು ಮೇ ಲಿನವರಿಗೂ ಅವಿಚ್ಛಿನ್ನವಾಗಿರುತ್ತವೆ. ಭೂಮಿಯಲ್ಲಿನ ನೀರು ಈ ಸಂದುಗಳ ಮೂಲಕ ಆರಿಹೋಗಿ ಮೇಲ್ಭಾಗವು ಒಣಗಿ ಹೆಪ್ಪು ಕಟ್ಟುತ್ತದೆ. ಈ ಸಂದುಗಳನ್ನು ತಪ್ಪಿಸಿದ್ದೇ ಆದರೆ ಇವುಗಳಲ್ಲಿ ನೀರು ಸುಲಭವಾಗಿ ವ್ಯಾಪಿಸಲು ಸಾಧ್ಯವಿಲ್ಲವೆ ಭೂಮಿಯಲ್ಲಿಯೇ ಹೆಚ್ಚು ಕಾಲ ನಿಲ್ಲುತ್ತದೆ. ಈ ಸಂದುಗಳು ಭೂಮಿಯೊಳಗಿಂದ ಗಾಳಿ ಸೋಕುವ ಮೇಲ್ಭಾಗದವಾಗೂ ತಡೆಯಿಲ್ಲದೆ ಇರುವದನ್ನು ತಪ್ಪಿಸಿ ತನುವು ಆರಿಹೋಗದರೀತಿ ಮಾಡುವದೆ ಈ ವ್ಯವಸಾಯ ಕ್ರಮಗಳ ಮುಖ್ಯೋದ್ದೇಶವಾಗಿರುತ್ತೆ. ಭೂಮಿಯನ್ನು ಒಳ್ಳೆ ಉಳುಮೆ ಮಾಡುವದರಿಂದ ಅಡಿಯಿಂದ ಏರುವ ನೀರೂ ಮೇಲಿಂದ ಊರುವ ಮಳೆ ಅಥವಾ ಹಾಯಿಸಿದ ನೀರೂ ಭೂಮಿಯಲ್ಲಿಯೇ ನಿಲ್ಲುತ್ತದೆ. ಇಷ್ಟೇ ಅಲ್ಲದೆ ಉತ್ತನೆಲವು ರಾತ್ರಿ ಕಾಲಗಳಲ್ಲಿ ಅಂತರಿಕ್ಷದಲ್ಲಿನ ಇಬ್ಬನಿಯನ್ನು ಹೀರಿ ಈ ವಿಧವಾಗಿಯೂ ಸಸಿಗಳಿಗೆ ಸಾರವನ್ನು ಹಗಲಿನಲ್ಲಿ ಒದಗಿಸುತ್ತದೆ.

ಗುಂಟೂರು ಆಸ್‌ಪಾಸ್‌ನಲ್ಲಿರುವ ಕರೀ ನೆಲಗಳನ್ನು ಮಳೆ ಇಲ್ಲದಿರುವ ಕಾಲಗಳಲ್ಲೆಲ್ಲಾ ಭೂಮಿಯನ್ನು ರೂಢಿಸುತ್ತಲೇ ಇರುವ ವಾಡಿಕೆಯುಂಟು. ಈ ರೀತಿ ಜೋಳ, ಮುಸುಕಿನ ಜೋಳ, ಮೆಣಸಿನಕಾಯಿ, ಹೊಗೆಸೊಪ್ಪು, ಹತ್ತಿ, ಹುರಳಿ ಮುಂತಾದ ಪೈರುಗಳನ್ನು ಉತ್ಕೃಷ್ಟವಾಗಿ ಬೆಳೆಯುತ್ತಾರೆ. ಬಿತ್ತನೆ ಯಾದನಂತರ ಒಂದು ಒಳ್ಳೆ ಮಳೆ ಬಿದ್ದರೆ ಭೂಮಿಯನ್ನು ಆಗಾಗ್ಯೆ ಅರಗಿ ನಾಲ್ಕೈದು ತಿಂಗಳ ಕಾಲ ಮಳೆ ಇಲ್ಲದಿದ್ದರೂ ಪೈರು ಬೆಳೆಯಲು ಸಾಧ್ಯವಾಗುತ್ತದೆ. ನೀರು ಹೀರುವದರಲ್ಲಿ ಕರಿನೆಲದಷ್ಟು ಇತರ ನೆಲಗಳು ಉತ್ಕೃಷ್ಟವಾಗಿಲ್ಲದಿದ್ದರೂ ಇಂಥಾ ವ್ಯವಸಾಯದಿಂದ ಇವುಗಳಿಗೂ ಅನುಕೂಲಿಸುತ್ತ.

ಮಳೆ ಬಿದ್ದು ಬಿಸಲು ಬಂದನಂತರ ನೀರು ಆರಿ ಹೋಗದ ರೀತಿ ಜಮೀನನ್ನು ಕೆದಕುತ್ತಿರಬೇಕು. ನೀರು ಹಾಯಿಸಿದ ನಂತರವೂ ಸಹಾ ಮೇಲ್ಭಾಗವು ಹೆಪ್ಪು ಕಟ್ಟುತ್ತಿರುವದನ್ನು ತಪ್ಪಿಸಬೇಕು. ಮಳೆ ಇಲ್ಲದೆ ಅಥವಾ ನೀರು ಹಾಯಿಸದೆ ಇದ್ದಾಗಲೂ ಸಹ ಜಮೀನನ್ನು ಒಳ್ಳೆ ಉಳುಮೆ ಸ್ಥಿತಿಯಲ್ಲಿ ಇಟ್ಟು ಕೊಂಡಿದ್ದಾದರೆ ಪೈರು ಅನೇಕವಾಗಿ ತಡವು ಕೈಗೆ ಬರುವ ಸಂಭವವು ಹೆಚ್ಚುತ್ತದೆ.

ನೆಲದಲ್ಲಿ ಕೇವಲ ಚಿಕ್ಕದಾದ ಅಂಗ ರಚನೆಗಳು (Organisms) ಇ
ರುವದು ಗೋಚರಕ್ಕೆ ಬಂದಿರುತ್ತೆ. ಈ ಅಂಗ ರಚನೆಗಳಿಗೆ ಸಾಯಿಲ್
ಬ್ಯಾಕ್ಟೀರಿಯಾ (Soil Bacteria) ಎಂದು ಹೆಸರು. ಇವು ತಂಪಿಲ್ಲದ
ಜೀವಿಸಲಾರವು. ಇವುಗಳನ್ನು ಸೂರ್ಯ ರಶ್ಮಿಗೆ ತಗಲುವ ರೀತಿ ಮಾಡುವ
ದು ಹಾನಿಕರ. ಆದಕಾರಣ ಉಷ್ಣ ಪ್ರದೇಶಗಳಲ್ಲಿ ನೆಲವನ್ನು ಸಾಧ್ಯ
ವಾದಷ್ಟು ಮರೆ ಮಾಡುವದು ಮುಖ್ಯವಿಷಯು. ಇದಕ್ಕಾಗಿ ಪೈರನ್ನು
ಬೆಳೆಯಬಹುದು. ಇದು ಸಾಧ್ಯವಿಲ್ಲದೆ ಇದ್ದ ಸಂದರ್ಭದಲ್ಲಿ ಮೇಲ್ ಮ
ಣ್ಣು ಪುಡಿಯಾಗಿರುವ ರೀತಿ ಮಾಡಿದರೆ ಇದು ಕೆಳಭಾಗವನ್ನು ಮರೆ ಮಾ
ಡುತ್ತದೆ. ಇದರಿಂದ ಭೂಮಿಯಲ್ಲಿ ತನುವು ನಿಂತು ಬ್ಯಾಕ್ಟೀರಿಯಾ ಬೆ
ವಳಿಕೆಗೆ ಅನುಕೂಲಿಸುವಂತೆ ನೆಲವು ತಂಪಾಗಿರುತ್ತದೆ.

---

## Bombay Co-operative Conference.
## ಬೊಂಬಾಯಿ ಪರಸ್ಪರ ಸಹಾಯಿಕ ಸಭೆ.

ಕಳೆದ ಡಿಶಂಬರು ತಿಂಗಳಲ್ಲಿ ಬೊಂಬಾಯಿನಲ್ಲಿ ನಡೆದ ಕೊ ಆಪರೇ
ಟಿವ್ ಸಭೆಯ (Conference) ತೀರ್ಮಾನಗಳಮೇಲೆ ಬೊಂಬಾಯಿ ಗವರ್
ಮೆಂಟಿನವರು ಮಾಡಿರುವ ರೆಜಲ್ಯೂಷನ್ (Resolution) ಇದರಡಿ ಸಂ
ಕ್ಷೇಪವಾಗಿ ಬರೆದಿರುತ್ತೆ.

"ರಿಜಿಸ್ಟ್ರಾರವರ ಅಭಿಪ್ರಾಯದಂತೆ ಸದರಿ ಸಭೆಯು ಪ್ರಯೋಜ
ನವಾಗಿತ್ತೆಂತಲೂ, ಡಿವಿಜನಲ್ ಮತ್ತು ಪ್ರಾವಿನ್ಷಿಯಲ್ ಸಭೆಗಳನ್ನು
ಪ್ರತಿ ವರುಷವೂ ನಡಿಸಬೇಕೆಂಬುವದನ್ನು ಗವರ್ನಮೆಂಟಿನವರು ಮಂಜೂ
ರ್ಮಾಡಿರುತ್ತಾರೆ. ಈ ಜುಲೈ ತಿಂಗಳಲ್ಲಿ ಡಿವಿಜನಲ್ ಸಭೆಗಳನ್ನು ಸೇರಿಸಲು
ಅಲ್ಲಿಯ ಡೈರೆಕ್ಟರು ಏರ್ಪಾಡು ಮಾಡುವಲ್ಲಿ ಅಪ್ಪಣೆ ಕೊಟ್ಟಿರುತ್ತಾರೆ.
ಮುಂದೆ ಪ್ರತಿ ವರುಷದಲ್ಲಿಯೂ ಇಂಥಾ ಸಭೆಗಳನ್ನು ಯಾವ ತಿಂಗಳಲ್ಲಿ
ಮಾಡಿದರೆ ಅನುಕೂಲವೆಂಬುವದನ್ನು ರಿಪೋರ್ಟು ಮಾಡಬೇಕೆಂದು ಹೇಳಿ
ರುತ್ತಾರೆ.

ಈ ಸಂವತ್ಸರ ಪ್ರಾವಿನ್ಷಿಯಲ್ ಸಭೆ ಅವಶ್ಯಕವಿಲ್ಲವೆಂತಲೂ ಬ
ರುವ ಗಣಗಂನೆ ಮಳೆಗಾಲದಲ್ಲಿ ರಿಜಿಸ್ಟ್ರಾರುಗಳ ಸಭೆ ಕಲ್ಕತ್ತಾ ಅಥವಾ

ಸಿಮ್ಲಾದಲ್ಲಿ ನಡೆಯುವದಕ್ಕಿಂತ ಮುಂಚೆ ಪ್ರೊವಿನ್ಷಿಯಲ್ ಸಭೆ ಸೇರ ಬಹುದೆಂತಲೂ, ಡೈರೆಕ್ಟರು ತಮ್ಮಲ್ಲಿರುವ ಹಣದಿಂದ ಸಭೆಗೆ ಆಗುವ ಖರ್ಚು ಮಾಡಬಹುದೆಂತಲೂ ಹುಕ್ಕುಂ ಕೊಟ್ಟಿರುತ್ತಾರೆ.

ಮೆಂಬರುಗಳ ಹಿಂದಿನ ಸಾಲವನ್ನು ತೀರಿಸುವ ವಿಷಯದಲ್ಲಿ ಸೆಂಟ್ರಲ್ ಬ್ಯಾಂಕನ್ನು ಸ್ಥಾಪಿಸುವ ವಿಷಯದಲ್ಲಿ ಇಂಡಿಯಾ ಗೌವರ್ನಮೆಂಟಿಗೆ ಬರೆದಿರುತ್ತಾರೆ. ಬರೀಸಾಲವನ್ನು ತೀರಿಸುವದರಲ್ಲಿ ಸೊಸೈಟಿಗಳೇ ಒಳ್ಳೆ ಸಹಕಾರಿಗಳಾಗಿದ್ದಾಗ್ಯೂ ಬರಿ ಸಾಲ ತೀರಿಸುವದು ಅಷ್ಟು ಪ್ರಯೋಜನವಲ್ಲವೆಂತಲೂ, ಇದಲ್ಲದೆ ಇನ್ನೂ ಇತರ ಕೆಲಸಗಳಿಗೂ ಸೊಸೈಟಿಗಳಿಗೆ ಬಂಡವಾಳವನ್ನು ಒದಗಿಸಲು ತಕ್ಕ ಏರ್ಪಾಟು ಮಾಡುವದು ಸರಿಯಾದ ಮಾರ್ಗವೆಂದು ಹೇಳಿರುತ್ತಾರೆ.

ವಸೂಲಿ ಕ್ರಮ ವಿಷಯದಲ್ಲಿ ಮಾಡಿರುವ ಆರ್ಡರನ್ನು ಬದಲಾಯಿಸಲು ಇಂಡಿಯಾ ಗೌರ್ನಮೆಂಟಿನವರನ್ನು ಕೇಳಬೇಕಾದ ಪ್ರಯುಕ್ತ ಇಲ್ಲವೆಂದು ಅಪ್ಪಣೆ ಕೊಟ್ಟಿರುತ್ತಾರೆ. ಸಾಧಾರಣವಾಗಿ ಎಲ್ಲಾ ಸಾಲಗಳೂ ವಾಯಿದೆಗೆ ಸರಿಯಾಗಿ ವಾಪಸು ಬರುತ್ತಲಿರುವದ್ದರಿಂದ ವಸೂಲಿ ಕ್ರಮದಲ್ಲಿ ಬೇರೆ ರೂಲ್ಸ್ ಮಾಡಬೇಕಾದ ಅವಶ್ಯಕತೆ ಕಂಡು ಬರುವದಿಲ್ಲ."

—o—

## Potato Cultivation. *

## ಉರಳಗಡ್ಡೆ ಸಾಗುವಳಿ.

ಉರಳಗಡ್ಡೆ ಸಾಗುವಳಿಗೆ ಪುಡಿ ಪುಡಿಯಾಗಿರುವ ಮಣ್ಣಿನ ಒಂಡು ಜಮೀನು ಸರ್ವೋತ್ಕೃಷ್ಟವಾದುದು. ನೀರು ಬಸಿದು ಹೋಗುವ ಎತ್ತರವಾದ ಜಮೀನುಗಳಲ್ಲೂ ಇದನ್ನು ಬೆಳೆಯಬಹುದು. ಜಮೀನು ಮಾತ್ರ ಜಿಗಟಾಗಿರಕೂಡದು. ಹೊಸದಾಗಿ ಹಸನು ಮಾಡಿದ ಹುಲ್ಲು ಅಥವಾ ಕಾಡು ಬೆಳೆದಿದ್ದ ನೆಲವು ಇದಕ್ಕೆ ಲಾಯಖಲ್ಲ. ಏಕೆಂದರೆ, ಇದರಲ್ಲಿ ಈ ಪೈರಿಟ್ಟರೆ ಹುಳಗಳಿಂದ ಬಾಧೆಯಾಗುವ ಸಂಭವವುಂಟು. ಈ ಪೈರು ಅನೇಕಾವರ್ತಿ ಉತ್ತು ಬೀಳು ಬಿಟ್ಟಿದ್ದ ಜಮೀನಿನಲ್ಲಿ ಚನ್ನಾಗಿ ಆಗುತ್ತದೆ.

* ಇಂಡಿಯನ್ ಅಗ್ರಿಕಲ್ಚರಿಸ್ಟ್ ೧—೩—೧೯.

ನೆಲವನ್ನು ಅನೇಕಾವರ್ತಿ ಉತ್ತು ಹಲುಬೆ ಹೊಡೆದು ಒಳ್ಳೆ ಉಳುಮೆಗ
ತರಬೇಕು.

ಈ ಪೈರಿಗೆ ಹೆಚ್ಚಾಗಿ ಗೊಬ್ಬರ ಹಾಕುವದು ಅವಶ್ಯಕ. ಎಕರೆಗ
೩೦೦—೪೦೦ ಬಂಗಾಳಿ ಮಣದಷ್ಟು ಒಳ್ಳೆ ಮಾಗಿದ ಸಗಣಿ ಗೊಬ್ಬರವ
ನ್ನು ಉಪಯೋಗಿಸಿದರೆ ಸಾಕು. ಇದಕ್ಕೆ ಇನ್ಯಾವ ವಿಧವಾದ ಇತರ ಗೊ
ಬ್ಬರವನ್ನು ಬೆರಸಬೇಕಾದುದಿಲ್ಲ. ತಕ್ಕಷ್ಟು ಸಗಣಿ ಗೊಬ್ಬರ ಒದಗ
ದೆ ಇದ್ದಲ್ಲಿ ಇದಕ್ಕೆ ಅರ್ಧವನ್ನು ಉಪಯೋಗಿಸಿ ಇದರ ಜೊತೆಗೆ ೧೫-೨
ಮಣ ಹರಳು ಹಿಂಡಿಯನ್ನು ಹಾಕಬಹುದು. ಬಂಗಾಳದಲ್ಲಿ ೨೦೦ ಮಣ
ದನವಿನ ಗೊಬ್ಬರ, ೩ ಮಣ ಸೂಪರ್‌ಫಾಸ್ಫೇಟ್, ೨ ಮಣ ಪೆಟ್ಲುಪ್ಪು ಜ
ರಸಿ ಉಪಯೋಗಿಸುತ್ತಾರೆ. ಜಮೀನಿನಲ್ಲಿ ಮೊದಲು ಸಣಬಿನ ಪೈ
ಟ್ಟು ಉರಳಗಡ್ಡೆ ಪೈರಿಡುವದಕ್ಕೆ ೨ ತಿಂಗಳ ಮುಂಚೆ ಹಸರು ಗೊಬ್ಬ
ಕ್ಕಾಗಿ ಉತ್ತು ಬಿಡುತ್ತಾರೆ. ಈ ಸಂದರ್ಭದಲ್ಲಿ ದನವಿನ ಗೊಬ್ಬರವನ್ನು
ಇನ್ನೂ ಕಡಿಮೆ ಮಾಡಬಹುದು. ಮಳೆಗಳೆಲ್ಲಾ ಪೂರೈಸಿದ ನಂತರ ಅಂ
ದರೆ ಅಕ್ಟೋಬರ್ ಡಿಸೆಂಬರ್ ತಿಂಗಳುಗಳಲ್ಲಿ ಬಿತ್ತವನ್ನು ನೆಡುವದಕ್ಕೆ ಒ
ಳ್ಳೆಕಾಲ. ಸಾಮಾನ್ಯ ಗಾತ್ರದ ಗಡ್ಡೆಗಳು ಬೀಜಕ್ಕೆ ಲಾಯಖಾಗಿರುತ್ತವೆ
ದೊಡ್ಡ ಗಡ್ಡೆಗಳನ್ನು ನೆಟ್ಟರೆ ಫಸಲುತ್ಪತ್ತಿಯೇನೋ ಹೆಚ್ಚುತ್ತದೆ
ಆದರೆ ಇವುಗಳನ್ನು ಕತ್ತರಿಸಿ ನೆಡದೆ ಇದ್ದಲ್ಲಿ ಅಷ್ಟು ಫಾಯಿದೆಕರವಾಗ
ವದಿಲ್ಲ. ನೀರು ಹಾಯಿಸದೆ ಇರುವ ಸಂದರ್ಭದಲ್ಲಿ ಗಡ್ಡೆಯನ್ನು ಕತ್ತರಿಸಿ
ನೆಡುವದು ಅನುಕೂಲವಲ್ಲ. ಏಕೆಂದರೆ, ನೆಟ್ಟನಂತರ ಮಳೆ ಬರದೆ ಇದ್ದರ
ಬೀಜಗಳು ಅನೇಕವಾಗಿ ಮೊಳಕೆ ಇಡದೆ ಇರಬಹುದು. ಅಥವಾ ಹೆಚ್ಚ
ಮಳೆ ಬಂದಲ್ಲಿ ಕೊಳೆತು ನಿರುಪಯೋಗವಾಗಬಹುದು. ಆದ್ದರಿಂದ ದುಂಡ
ಗಡ್ಡೆ ನೆಡುವದು ಮೇಲು. ಉಂಡು ಗಡ್ಡೆಗಳಲ್ಲಿ ಕಣ್ಣುಗಳು ಆಳವಾಗಿಯೂ
ಕಾಣುವಂತೆಯೂ ಇರುತ್ತವೆ. ಆದ್ದರಿಂದ ಇವುಗಳನ್ನು ಎರಡು ಅಥವಾ
ಹೆಚ್ಚು ಹೋಳುಗಳು ಮಾಡಿ ನೆಡಬಹುದು. ಉದ್ದವಾಗಿ ಮೊಟ್ಟೆಯ ಹಾ
ಗಿರುವ ಗಡ್ಡೆಗಳಲ್ಲಿ ಕಣ್ಣುಗಳು ಒಂದು ತುದಿಯಲ್ಲಿ ಗಿಜಿಬಿಜಿಯಾಗಿ ಸೇರಿ
ಕೊಂಡು ಚನ್ನಾಗಿ ಕಾಣಬರುವದಿಲ್ಲ. ಆದ್ದರಿಂದ ಇಂಥವುಗಳನ್ನು ಒಂದು
ಹೋಳಿನಲ್ಲಿ ಒಂದಾದರೂ ಒಳ್ಳೆ ಕಣ್ಣು ಇರುವ ರೀತಿ ಕತ್ತರಿಸುವದು ಕ

ಷ್ಟ. ಹೋಳು ಮಾಡಿ ನೆಡುವ ಸಂದರ್ಭದಲ್ಲಿ ಕತ್ತರಿಸಿದ ಮುಖಕ್ಕೆ ಸುಣ್ಣವನ್ನು ಪುಡಿಮಾಡಿ ಒರಸಿದರೆ ಒಳ್ಳೇದು. ಇದರಿಂದ ರೋಗವು ತಗಲುವದು ತಪ್ಪುತ್ತದೆ.

ಸ್ಥಳೀಯ ರಖಂಗಳು ಕೇವಲ ಚಿಕ್ಕದಾಗಿರುವ ಕಾರಣ ಒಂದು ಎಕರೆಗೆ ಬೀಜಕ್ಕಾಗಿ ಮೂರು ಮಣ ಬೇಕಾದೀತು. ಉತ್ತಮ ರಖಂಗಳನ್ನು ಉಪಯೋಗಿಸಿದ್ದಾದರೆ ಎಕರೆಗೆ ೧೫—೨೦ ಮಣ ಬೇಕಾಗುತ್ತದೆ. ಬಂಗಾಳ ವ್ಯವಸಾಯಕ ಫಾರಂಗಳಲ್ಲಿ ತಿಳಿದುಬಂದಿರುವದೇನಂದರೆ, ಸ್ಥಳದಲ್ಲಿ ಬೆಳೆದ ರಖಂಗಳ ಬೀಜವನ್ನು ವರ್ಷವರ್ಷ ಕಾಪಾಡಿ ಉಪಯೋಗಿಸಿದ್ದಾದರೆ ನೈನಿಟಾಲ್ ಮತ್ತು ಡಾರ್ಜಿಲಿಂಗ್ ರಖಂ ಬೀಜಗಳನ್ನು ಪ್ರತಿವರ್ಷವೂ ಹೊರಗಿನಿಂದ ತಂದು ಬೆಳೆಯುವದರಲ್ಲಾಗುವಷ್ಟು ಉತ್ಪತ್ತಿಯು ಇರುವದಿಲ್ಲ. ಪ್ರತಿವರ್ಷವೂ ಬೀಜವನ್ನು ಹೊಸದಾಗಿ ಹೊರಗಿನಿಂದ ತಂದು ಉಪಯೋಗಿಸುವದು ಒಳ್ಳೇದು. ಜಮೀನನ್ನು ಒಳ್ಳೇ ಉಳುಮೆಗೆ ತಂದುಕೊಂಡನಂತರ ನೇಗಿಲುನಿಂದ ೧೪—೨ ಅಡಿಯಷ್ಟು ದೂರದೂರವಾಗಿ ೪—೫ ಅಂಗುಲ ಆಳವಾದ ಸಾಲುಗಳನ್ನು ಮಾಡಬೇಕು. ಈ ಸಾಲುಗಳಲ್ಲಿ ಸಗಣಿ ಗೊಬ್ಬರವನ್ನು ಹರಡಿ ಗೊಬ್ಬರದಮೇಲೆ ೬—೧ ಅಡಿ ದೂರದೂರವಾಗಿ ಬೀಜವನ್ನು ಇಟ್ಟು ಸಾಲುಗಳನ್ನು ಮುಚ್ಚಬೇಕು. ಹಿಂಡಿಯನ್ನು ಉಪಯೋಗಿಸಿದ್ದಾದರೆ ನೀರು ಹಾಯಿಸಿ ಬೆಳೆಯುವ ಸಂದರ್ಭದಲ್ಲಿ ಹಿಂಡಿಯನ್ನು ಪುಡಿಮಾಡಿ ಗೊಬ್ಬರದ ಜೊತೆಗೆ ಸಾಲುಗಳಲ್ಲಾಗಲಿ ಅಥವಾ ಮೊದಲು ಏರುಹಾಕುವಾಗ ಗಿಡದ ಬುಡಕ್ಕಾಗಲಿ ಹಾಕಬೇಕು. ನೀರು ಹಾಯಿಸದೆ ಬೆಳೆಯುವದರಲ್ಲಿ ಮಳೆಗಳು ಪ್ರಾರಂಭಿಸುವದಕ್ಕೆ ಮುಂಚೆ ಹಿಂಡಿಯನ್ನು ಜಮೀನಿನಲ್ಲಿ ಎರಚಿ ಚನ್ನಾಗಿ ಉತ್ತು ಮಣ್ಣಿನಲ್ಲಿ ಬೆರಸಬೇಕು. ಪೈರಿಟ್ಟನಂತರ ಒಂದೆರಡು ದಫಾ ಕಳೆ ಕಿತ್ತು ಸಸಿಗಳು ಅರ್ಧ ಮುಕ್ಕಾಲು ಅಡಿ ಎತ್ತರ ಬೆಳೆದಾಗ ಏರು ಹಾಕಬೇಕು. ಒಂದೆರಡು ತಿಂಗಳನಂತರ ಇನ್ನೊಂದು ದಫಾ ಇದೇರೀತಿ ಮಾಡಬೇಕು. ನೆಲವು ಒಣಗಿದ್ದರೆ ಸಾಧ್ಯವಾದಲ್ಲಿ ನೀರು ಹಾಯಿಸಿದರೆ ಒಳ್ಳೇದು. ಹಿಂಡಿ ಅಥವಾ ತಯ್ಯಾರಿಸಿದ ಗೊಬ್ಬರಗಳನ್ನು ಉಪಯೋಗಿಸಿದ ಸಂದರ್ಭಗಳಲ್ಲಿ ನೀರು ಹಾಯಿಸಿದರೆ ಅನುಕೂಲ. ಇಲ್ಲವಾದರೆ ಗೊಬ್ಬರಗಳು ಕೊಳೆಯದೆ ಮಣ್ಣಿನಲ್ಲಿ ಸರಿಯಾ

ಗಿ ಬೆರೆಯುವದಿಲ್ಲ. ಎಲೆಗಳು ಹಳದಿ ಬಣ್ಣಕ್ಕೆ ತಿರುಗಿ ಗಿಡದ ಬೆಳವಳಿಕೆ ನಿಂತನಂತರ ಫಸಲನ್ನು ಕಟಾವು ಮಾಡಬಹುದು. ಮೈದಾನಗಳಲ್ಲಿ ಎಕರೆಗೆ ಸರಾಸರಿ ೯೦-೧೨೦ ಮಣ (ಬಂಗಾಳ) ಉತ್ಪತ್ತಿ ಕಟ್ಟಬಹುದು. ನೀರು ಹಾಯಿಸಿ ಒಳ್ಳೇ ಗೊಬ್ಬರ ಹಾಕಿದ್ದಾದರೆ ೨೦೦—೩೫೦ ಮಣ ಗಡ್ಡೆ ಬೆಳೆಯುವದು ಸಾಧ್ಯ.

---

## Revenue Appeals.

## ರೆವಿನ್ಯೂ ಅಪೀಲುಗಳು.

### ೧೯೦೮—೦೯ನೆ ಸಾಲ್ ೧೭ನೆ ನಂಬರು ಅಪೀಲು ಮೊಕದ್ದಮೆ.

| ವಾದಿಗಳು. | | ಪ್ರತಿವಾದಿ. |
|---|---|---|
| ವೆಂಕಟೇಗೌಡನ ಮಕ್ಕಳು:—<br>(೧) ಪುಟ್ಟೇಗೌಡ.<br>(೨) ಮುತ್ತೇಗೌಡ.<br>(೩) ವೆಂಕಟೇ[illegible]ಗೌಡ. | *vs.* | ವೆಂಕಟೇಗೌಡನ ಅಣ್ಣ ಫೌತಿ ಹುಚ್ಚೇಗೌಡನ ಹೆಂಡತಿ ದತ್ತು ಮಗ ತಿಂಮ. |

ಮಂಡ್ಯಾ ತಾಲ್ಲೂಕು ಕಡಲೂರು ಗ್ರಾಮದ ೪೧ನೆ ನಂಬರು ನಿವೇಶನವ ಪಟ್ಟೆಯನ್ನು ಫವತಿ ಖಾತೇದಾರಳ ಹೆಸರಿನಿಂದ ಪ್ರತಿವಾದಿಯ ಹೆಸರಿಗೆ ಬದಲಾಯಿಸಬೇಕೆಂದು ಡೆಪ್ಯುಟಿ ಕಮಿಷನರವರು ಮಾಡಿದ ಹುಕುಮಿನ ಮೇಲೆ ತಂದ ಅಪ್ಪೀಲು.

ಗೌರ್ನಮೆಂಟಿನವರ ತೀರ್ಮಾನ;—ಪ್ರಸಕ್ತ ನಿವೇಶನವು ಕಂದಾಯ ದಾಖಲಾಗತಕ್ಕ ನಿವೇಶನವಲ್ಲ. ಈ ನಿವೇಶನವು ಖಾತೆಯಲ್ಲಾಗಲಿ ಅಥವಾ ಗ್ರಾಮದ ಇತರ ಸರ್ಕಾರಿ ಲೆಖ್ಖಗಳಲ್ಲಿಯೇ ಆಗಲಿ ದಾಖಲಾಗತಕ್ಕದ್ದಲ್ಲ. ತಿಮ್ಮನ ಹೆಸರಿನಲ್ಲಿ ಇದನ್ನು ರಿಜಸ್ಟರು ಮಾಡಬೇಕೆಂದು ಹುಕುಂ ಮಾಡಿರುವದರಲ್ಲಿ ಏನೂ ಅರ್ಥ ಇರುವದಿಲ್ಲ. ಆದಕಾರಣ ಡೆಪ್ಯುಟಿ ಕಮಿಷನರವರ ಹುಕುಮನ್ನು ರದ್ದುಮಾಡಿದೆ.

---

೧೯೦೮—೦೯ನೆ ಸಾಲಿನ ೧೦ನೆ ನಂಬರು ರೆವಿನ್ಯೂ ಅಪೀಲು.

| ವಾದಿ. | | ಪ್ರತಿವಾದಿ. |
|---|---|---|
| ಬಸಪ್ಪ. | *vs.* | ಬಸವಲಿಂಗ. |

ಸೀರಾ ತಾಲ್ಲೂಕು ಅತ್ತೂರು ಗ್ರಾಮದ ಸರ್ವೆ ೨೯೨ನೆ ನಂಬರು ಜಮೀನು ಪ್ರತಿವಾದಿ ಬಸವಲಿಂಗನ ಹೆಸರಿನಲ್ಲಿತ್ತು. ಅವನು ೧೮೮೮ನೆ ಇಸವಿಯಲ್ಲಿ ಈ ಜಮೀನಿಗೆ ರಾಜೀನಾಮೆ ಕೊಟ್ಟು ಮಾರನೇ ವರ್ಷ ಇದನ್ನು ಪೋಡು ಮಾಡಿಸಿ ಕೊಡಲು ಕೇಳಿಕೊಂಡನು. ಇವನ ಕೋರಿಕೆ ಪ್ರಕಾರ ಜಮೀನು ೩ ಸಬ್ ನಂಬರುಗಳಾಗಿ ಮಾಡಲ್ಪಟ್ಟು ೨೯೨/೩ನೆ ನಂಬರು ಜಮೀನನ್ನು ಇವನು ಪಡದನು. ೧೯೦೦ನೆ ಇಸವಿಯಲ್ಲಿ ಪ್ರತಿವಾದಿಯ ಸಹೋದರನು ಸರ್ವೆ ೨೯೨/೨ನೆ ನಂಬರನ್ನು ದರಖಾಸ್ತಿನಲ್ಲಿ ಪಡೆದನು. ನಿಂತ ಸರ್ವೆ ೨೯೨/೧ನೆ ನಂಬರು ೧೯೦೭ರವರಿಗೆ ಬಂಜರಾಗಿದ್ದು ನಂತರ ವಾದಿಯ ದರಖಾಸ್ತಿನಮೇಲೆ ಹರಾಜು ಮಾಡಲ್ಪಟ್ಟು ಇವನಿಗೆ ನಿಂತಿತು. ಪ್ರತಿವಾದಿಯು ತಾನು ಒಂದು ಸಬ್ ನಂಬರಿನ ಹಿಡುವಳಿದಾರನಾಗಿರುವದರಿಂದ ಈ ಸಬ್ ನಂಬರನ್ನು ಪಡೆಯಲು ತನಿಗೆ ಹೆಚ್ಚು ಬಾಧ್ಯತೆ ಇರುವದೆಂದು ಹರಾಜಿಗೆ ಮುಂಚೆಯೂ ಮತ್ತು ಹರಾಜು ಕಾಲದಲ್ಲೂ ತಕರಾರು ಮಾಡಿದನು. ಹರಾಜಿನಲ್ಲಿ ವಸೂಲಾದ ಕಿಮ್ಮತನ್ನು ಪ್ರತಿವಾದಿಯು ಕೊಡಲು ಒಪ್ಪಿರುವದರಿಂದ ಅವನಿಗೆ ಈ ಜಮೀನನ್ನು ಕೊಡಬಹುದಾಗಿ ಅಮಲ್ದಾರ್ರು ಅಸಿಸ್ಟೆಂಟ್ ಕಮೀಷನರವರಿಗೆ ಸಿಫಾರ್ಸು ಮಾಡಿದರು.

ಜಮೀನು ೧೮ ವರ್ಷಗಳಿಂದ ಬಂಜರಾಗಿದ್ದದ್ದರಿಂದಲೂ ಮತ್ತು ಪ್ರತಿವಾದಿಯು ಹರಾಜುಕಾಲದಲ್ಲಿ ಹಾಜರಿದ್ದು ಸವಾಲ್ ಮಾಡಬಹುದಾಗಿತ್ತಾದ್ದರಿಂದಲೂ ಅಸಿಸ್ಟೆಂಟ್ ಕಮೀಷನರವರು ಹರಾಜನ್ನು ಖಾಯಂ ಮಾಡಿದರು. ಅಪ್ಪೀಲಿನಲ್ಲಿ ಲ್ಯಾಂಡ್ ರೆವಿನ್ಯೂಕೋಡ್ ೧೩೧ (h)ನೇ ಪ್ರಕರಣದ ಮೇರೆ ತಕರಾರು ಜಮೀನ್ನು ರಾಜೀನಾಮೆಯಾದಲ್ಲಿ ಪ್ರತಿವಾದಿಯೇ ಅದನ್ನು ಪಡೆಯಲು ಬದ್ಧನಾಗಿರುವದರಿಂದ ಡೆಪ್ಯೂಟಿ ಕಮೀಷನರವರು ಜಮೀನನ್ನು ಅವನ ಹೆಸರಿಗೆ ಆಗಲು ಆರ್ಡರ್ ಮಾಡಿದರು. ಇದ

ರವೇಲೆ ವಾದಿಯು ಅಪ್ಪೀಲು ಮಾಡಲು ಗವರ್ನಮೆಂಟಿನವರು ಫೈಸಲ್ ಹುಕ್ಕುಂ ಕೊಟ್ಟಿರುವದೇನಂದರೆ:—

ಲ್ಯಾಂಡ್ ರೆವಿನ್ಯೂ ಕೋಡ್ ೧೧೦ನೆ ಸೆಕ್ಷನು ಸಬ್ ನಂಬರುಗಳು ರಾಜೀನಾಮೆಯಾದಾಗ ಅನ್ವಯಿಸುತ್ತದೆಯೇ ಹೊರ್ತು ಬಂಜರು ಜಮೀನುಗಳನ್ನು ವ್ಯವಸಾಯಕ್ಕೆ ದರಖಾಸ್ತು ಮಾಡಿದಾಗ ಲಗತ್ತಾಗುವದಿಲ್ಲ. ತಕರಾರು ಜಮೀನು ಬಹಳ ದಿನಗಳಿಂದಲೂ ಬಂಜರಾಗಿತ್ತು. ಪ್ರತಿವಾದಿಯು ಇದನ್ನು ಪಡೆಯಲು ಯಾವ ಅಭ್ಯಂತರವೂ ಇರಲಿಲ್ಲ. ಆದ್ದರಿಂದ ಡೆಪ್ಯುಟಿ ಕಮಿಾಷನರವರ ಹುಕುಂ ತಪ್ಪಾಗಿರುವಕಾರಣ ಇದನ್ನು ರದ್ದು ಮಾಡಿರುತ್ತೆ.

ಪ್ರತಿವಾದಿಯು ತಕರಾರು ಅರ್ಜಿಯನ್ನು ಹರಾಜುಕಾಲದಲ್ಲಿ ಫೈಸಲ್ಮಾಡದೆ ಇದ್ದದ್ದರಿಂದ ಅವನು ಹರಾಜಿನಲ್ಲಿ ಬಿಡ್ ಮಾಡಲು ಅನುಮಾನಪಟ್ಟಿರಬಹುದು. ಹರಾಜು ರಿಕಾರ್ಡಿನಲ್ಲಿ ಈರೀತಿ ಒಂದು ಷರಾ ಇರುತ್ತೆ. ಆದಕಾರಣ ಉಭಯ ಪಾರ್ಟಿಗಳಿಗೂ ನೋಟೀಸು ಜಾರಿಮಾಡಿ ತಕರಾರು ಜಮೀನನ್ನು ಪುನಹ ಹರಾಜಿಗೆ ಇಟ್ಟು ಆಖೈರು ಸವಾಲ್‌ದಾರನಿಗೆ ಕೊಡತಕ್ಕದ್ದು.

---

## Cowdung as Manure. *

## ದನವಿನ ಗೊಬ್ಬರ.

ಈ ದೇಶದಲ್ಲಿ ಸಗಣಿಯನ್ನು ಒಣಗಿಸಿ ಒಲೆಗೆ ಉಪಯೋಗಿಸುವ ವಾಡಿಕೆ ಇರುವಷ್ಟು; ಇದಕ್ಕೆ ಬದಲಾಗಿ ಸಗಣಿಯನ್ನು ಗೊಬ್ಬರವಾಗಿ ಉಪಯೋಗಿಸಿದರೆ ಎಷ್ಟು ಉಪಯೋಗಕರವಾಗಿರುತ್ತೆಂಬುದು ತಿಳಿಯುವದು ಅವಶ್ಯಕ. ದನವಿನ ಗೊಬ್ಬರದ ವ್ಯವಸಾಯಕ ಪ್ರಯೋಜನವನ್ನು (೧)ಇದರಲ್ಲಿ ಎಷ್ಟು ನೈಟ್ರೊಜನ್, ಫಾಸ್ಫಾರಿಕ್ ಆಸಿಡ್ ಮ

* ಇಂಡಿಯನ್ ಅಗ್ರಿಕಲ್ಚರಿಸ್ಟ್, ೨—೧೧—೦೮.

ತ್ತು ಪೊಟಾಷ್ ಅಂಶಗಳು ಇರುತ್ತೆಂಬುದನ್ನು ತಿಳಿದುಕೊಳ್ಳುವದರಿಂದ ಲೂ (೨) ಈ ಗೊಬ್ಬರವನ್ನು ಉಪಯೋಗಿಸುವದರಿಂದ ಎಷ್ಟು ಫಸಲು ತ್ಪತ್ತಿ ಹೆಚ್ಚಾಗುತ್ತದೆಂಬುವದರಿಂದಲೂ ಈರೀತಿ ಎರಡು ವಿಧವಾಗಿ ತಿಳಿಯಬಹುದು. ಎರಡನೆ ವಿಧಾನದ ಮೂಲಕ ಈ ವಿಚಾರವನ್ನು ತಿಳಿದುಕೊಳ್ಳಲು ಸಾಕಾದಷ್ಟು ಸಂಗತಿಗಳು ಇನ್ನೂ ಹೊರಪಟ್ಟಿರುವದಿಲ್ಲ. ಗೊಬ್ಬರಗಳ ಬೆಲೆಯನ್ನು ಅವರಲ್ಲಿರುವ ಸಸ್ಯಾಹಾರಭೂತವಾದ ಪದಾರ್ಥಗಳು ಶೇಕಡಾ ಎಷ್ಟು ಇರುತ್ತೆಂಬುವದರಮೇಲೆ ಅರಿಯಬೇಕಾಗುತ್ತೆ. ಹೇಗಂದರೆ ನೈಟ್ರೇಟ್ ಆಫ್ ಪೊಟಾಷ್ ಗೊಬ್ಬರದಲ್ಲಿ (Nitrate of Potash) ಸೇಕಡಾ ೧೩ ನೈಟ್ರೋಜನ್, ಸೇಕಡಾ ೪೦ ಪೊಟಾಷ್ ಇರುತ್ತದೆ. ನೈಟ್ರೋಜನ್ ಒಂದು ಪೌಂಡು ತೂಕಕ್ಕೆ ಹತ್ತಾಣೆಯಂತೆಯೂ ಪೊಟಾಷ್ ಒಂದು ಪೌಂಡು ತೂಕಕ್ಕೆ ೧ ಆಣೆಯಂತೆಯೂ ಬೆಲೆಯಾಗುತ್ತೆ. ಈ ರೀತಿ ೧೦೦ ಪೌಂಡು ತೂಕ ನೈಟ್ರೇಟ್ ಆಫ್ ಪೊಟಾಷ್ ಗೊಬ್ಬರಕ್ಕೆ ರೂ. ೧೦—೧೨—೦ ಬೆಲೆಯಾಗುತ್ತೆ. ಆದರೆ ಈ ಗೊಬ್ಬರದ ವ್ಯವಸಾಯಕ ಪ್ರಯೋಜನವು ಬೆಲೆಗೆ ತಕ್ಕಷ್ಟು ಇರುವದಿಲ್ಲ. ಏಕೆಂದರೆ ಇದರಲ್ಲಿರುವ ನೈಟ್ರೋಜನ್ ಮತ್ತು ಪೊಟಾಷ್ ಪ್ರಮಾಣಗಳು ಸರಿಯಾಗಿರುವದಿಲ್ಲ. ಸಸಿಗಳು ಸೇಕಡಾ ೪೦ ಪೊಟಾಷಿಗೆ ಸೇಕಡಾ ೧೩ ನೈಟ್ರೋಜನ್ನನ್ನು ಆಹಾರವಾಗಿ ಉಪಯೋಗಿಸುವದಿಲ್ಲವಾದಕಾರಣ ಪೊಟಾಷ್ ಅಂಶವು ಉಪಯೋಗಪಡದೆ ನೆಲದಲ್ಲಿ ನಿಂತುಹೋಗಿ ವ್ಯರ್ಥವಾಗುತ್ತದೆ.

ಸಗಣಿ ಗೊಬ್ಬರದಲ್ಲಿಯಾದರೊ ಈ ಅಂಶಗಳು ಸರಿಯಾದ ಪ್ರಮಾಣದಲ್ಲಿರುತ್ತವೆಯಾದಕಾರಣ ಪೈರುಗಳನ್ನು ಪರಿವರ್ತನೆಯಿಂದ ಕ್ರಮವಾಗಿ ಇಟ್ಟಿದ್ದೇ ಆದರೆ ಸಸ್ಯಾಹಾರವು ಕ್ರಮವಾಗಿ ಒದಗುತ್ತದೆ. ಆದ್ದರಿಂದ ಇದನ್ನು ಗೊಬ್ಬರವಾಗಿ ಉಪಯೋಗಿಸುವದು ಒಳಿಗೆ ಉಪಯೋಗಿಸುವದಕ್ಕೆ ಮಾಡುವದರಲ್ಲಿ ಬರತಕ್ಕ ಬೆಲೆಗಿಂತ ಹೆಚ್ಚು ಲಾಭಕರವೆಂದು ಹೇಳಬಹುದು. ಈರೀತಿ ಮಾಡುವ ಸಗಣಿಯಲ್ಲಿ ಸೇಕಡಾ ೧ ನೈಟ್ರೋಜನ್, ಸೇಕಡಾ ೧ ಫಾಸ್ಫರಿಕ್ ಆಸಿಡ್, ಸೇಕಡಾ ೧| ಪೊಟಾಷ್ ಇರುವುದೆಂದು ಲೆಖ್ಖ ಮಾಡಿದ್ದಾದರೆ ಮೇಲೆ ಹೇಳಿದ ದರದ ಮೇರಿಗೆ ೮೦ ಪೌಂಡು ಅಂದರೆ ಬಾಗಾಳ ಮಣ ೧ಕ್ಕೆ ೦-೧೧-೬ ಬೆಲೆ ಆಗುತ್ತೆಂದು ಇಟ್ಟುಕೊಳ್ಳ

ಬಹುದು. ಒಲೆಗೆ ಉರಿಸುವದಕ್ಕೆ ಮಾರಿದ್ದಾದರೆ ಮಣಕ್ಕೆ ೦-೪-೬ ಬೆಲೆ ಸಿಕ್ಕುತ್ತೆ. ಆದ್ದರಿಂದ ಇದನ್ನು ಗೊಬ್ಬರವಾಗಿ ಉಪಯೋಗಿಸುವದು ಹೆಚ್ಚು ಲಾಭಕರವೆಂದು ಸ್ಪಷ್ಟಪಡುತ್ತದೆ.—

---

## Notifications.

## ಇಸ್ತಿಹಾರ್‌ನಾಮೆಗಳು.

### ನಂ. ೫೯—೨ನೆ ಜುಲೈ—೧೯೦೯.

ಮೈಸೂರ್ ಸರ್ವಿಸ್ ರೆಗ್ಯುಲೇಷನ್ ೧೭೭ನೇ ಪ್ರಕರಣದ ಮೇರೆ ಚಿಕ್ಕಮಗಳೂರು ತಾ|| ಆಕ್ಟಿಂಗ್ ಅಮಲ್‌ದಾರ್ ಮೆ|| ಎಸ್. ಚಕ್ರವರ್ತ್ಯೈಯ್ಯಂಗಾರಿಗೆ ೧೬ನೇ ಜೂನ್ ೧೯೦೯ ರಿಂದ ಅಥವಾ ಅವರು ಉಪಯೋಗಿಸಿಕೊಳ್ಳುವ ತಾರೀಖು ಲಾಗಾಯಿತು ೧೦ ದಿನಗಳ ಪ್ರಿವಿಲೇಜ್ ರಜಾ ಮಂಜೂರ್ಮಾಡಿಧೆ.

ಇವರ ಗೈರ್ ಹಾಜರಿನಲ್ಲಿ ಶಿರಸ್ತೇದಾರ್ ಎಸ್. ಸುಬ್ಬರಾಯರು ತಾಲ್ಲೂಕು ಛಾರ್ಜಿನಲ್ಲಿರತಕ್ಕದ್ದು.

---

### ನಂ. ೨೧೧.—೫ ಜುಲೈ ೧೯೦೯.

ಮೈಸೂರು ಸರ್ವಿಸ್ ರೆಗ್ಯುಲೇಷನ್ ೧೭೭ನೇ ಪ್ರಕರಣದ ಮೇರೆ ದಾವಣಗೆರೆ ತಾ|| ಅಮಲ್ದಾರ್ರು ಮೆ|| ಟಿ. ವೆಂಕಟರಾಮೈಯ್ಯನವರಿಗೆ ಅವರು ಉಪಯೋಗಿಸಿ ಕೊಳ್ಳುವ ತಾರೀಖು ಲಾಗಾಯಿತು ೧೫ ದಿನಗಳ ಪ್ರಿವಿಲೇಜ್ ರಜಾ ಮಂಜೂರ್ಮಾಡಿರುತ್ತೆ.

ಇವರ ಗೈರ್ ಹಾಜರಿನಲ್ಲಿ ಅಥವಾ ಮತ್ತೊಂದು ಹುಕುಂ ಕೊಡುವವರಿಗೂ ಹರಿಹರದ ಡೆ|| ಅಮಲ್ದಾರ್ರವರು ತಮ್ಮ ಕೆಲಸದ ಜೊತೆಗೆ ದಾವಣಗೆರೆ ತಾಲ್ಲೂಕು ಛಾರ್ಜಿನಲ್ಲಿರತಕ್ಕದ್ದು.

---

## Japan's Matting Industry.*

## ಜಪಾನ್‌ದೇಶದ ಚಾಪೆ ಕೈಗಾರಿಕೆ.

ಜಪಾನ್‌ದೇಶದಲ್ಲಿ ಜನರು ಕೈಗಾರಿಕೆ ವಿಷಯಗಳಲ್ಲಿ ತೋರಿಸುತ್ತಿರುವ ಅಭಿವೃದ್ಧಿಯನ್ನು ತಿಳಿದುಕೊಂಡಿದ್ದಾದರೆ ಈ ದೇಶದ ಜನರು ಇದರಿಂದ ಅನೇಕ ಸಂಗತಿಗಳನ್ನು ಕಲಿಯಬಹುದು. ಈಚೆಗೆ ಕೆಲವು ವರ್ಷಗಳಿಂದ ಜಪಾನ್‌ದೇಶದಲ್ಲಿ ಚಾಪೆಗಳನ್ನು ಹೆಣೆಯುವ ಒಂದು ಕೈಗಾರಿಕೆಯು ಅಭಿವೃದ್ಧಿ ಸ್ಥಿತಿಗೆ ಬರುತ್ತಿದೆ. ೧೮೮೮ನೆ ಇಸವಿ ಲಾಗಾಯಿತು ೧೯೦೭ನೆ ಇಸವಿವರಿಗೆ ಚಾಪೆಗಳ ರಫ್ತು ವ್ಯಾಪಾರವು ೨೨೦೦೦ ಪೌಂಡ್ ನಿಂದ ೫೮೪೦೦೦ ಪೌಂಡ್‌ವರಿಗೆ ಹೆಚ್ಚಿರುತ್ತದೆ. ಈ ಚಾಪೆಗಳನ್ನು ಒಂದು ವಿಧವಾದ ಜೊಂಡಿನಿಂದ ಮಾಡುತ್ತಾರೆ. ಬತ್ತದ ಗದ್ದೆಗಳಲ್ಲಿ ಬತ್ತದ ಸಾಗುವಳಿಗೆ ಕುಂದಕವಾಗದ ರೀತಿ ಈ ಜೊಂಡನ್ನು ಬೆಳೆಯುತ್ತಾರೆ. ಇದಕ್ಕೆ ಕ್ರಮವಾಗಿ ಗೊಬ್ಬರ ಹಾಕುವದುಂಟು. ಕತ್ತರಿಸಿದ ನಂತರ ಕೆಲವು ದಿನ ಬಿಸಲಿನಲ್ಲಿ ಒಣಗಿಸುತ್ತಾರೆ. ನಂತರ ಇದನ್ನೆಲ್ಲಾ ಕೂಡಿಸಿ ಉದ್ದದ ಪ್ರಕಾರ ವಿಂಗಡಿಸಿ ಅವಶ್ಯಕ ವಿದ್ದರೆ ಬಣ್ಣ ಹಾಕುತ್ತಾರೆ. ಈ ಚಾಪೆ ವ್ಯಾಪಾರವನ್ನು ಜಪಾನ್‌ದೇಶದಲ್ಲಿ ಎರಡು ತರವಾಗಿ ನಡಿಸುವದುಂಟು. (೧) ಕೊಂಡು ಕೊಳ್ಳುವವರು ಕೇಳುವ ಮಾದರಿಗಳನ್ನು ಅನುಸರಿಸಿ ತಯಾರ್ಮಾಡುವದು (೨) ಹಿಂದಿನ ಅನುಭವವನ್ನು ನೋಡಿಕೊಂಡು ಹೆಚ್ಚಾಗಿ ಬಿಕರಿಯಾಗುವ ಚಾಪೆ ಮಾದರಿಗಳನ್ನೇ ತಯಾರ್ಮಾಡಿ ಕೂಡಿಡುವದು. ಪಟ್ಟಿಗಳು ಬಂದಿರುವ ೪೦ ಗಜದುದ್ದ ಚಾಪೆಯ ಸುರಳಿಗೆ ಜಪಾನ್‌ನಲ್ಲಿ ೬ ರೂಪಾಯಿ ಬೆಲೆ ಆಗುತ್ತೆ. ಈಚೆಗೆ ಈ ಚಾಪೆ ಕೈಗಾರಿಕೆಯನ್ನು ಮೇಲ್ ತನಿಖೆ ಮಾಡುವದಕ್ಕಾಗಿ ಒಂದು ಇನ್‌ಸ್ಪೆಕ್ಟರ್ ಆಫೀಸ್ ಏರ್ಪಡಿಸಿರುತ್ತಾರೆ. ತಾಟಾಪ್ರೋಟಿ ಕೆಲಸಕ್ಕೆ ಆಸ್ಪದ ಕೊಡದೆ ಉತ್ತಮ ತರಹ ಚಾ

* ಇಂಡಿಯನ್ ಅಗ್ರಿಕಲ್ಚರಿಸ್ಟ್, ೧ನೆ ಮಾರ್ಚಿ ೧೯೦೯.

ಪೆಗಳನ್ನೇ ತಯಾರಾಗುವಂತೆ ಮಾಡುವದೂ ಈ ಸಂಬಂಧವಾದ ವ್ಯಾಪಾರವನ್ನು ಭದ್ರಪಡಿಸುವದೂ ಇದರ ಮುಖ್ಯೋದ್ದೇಶಗಳಾಗಿರುತ್ತವೆ. ಈ ಆಫೀಸಿನಲ್ಲಿ ಚಾಪೆಗಳನ್ನು ನೇಯುವದು, ಇವುಗಳಿಗೆ ಬಣ್ಣ ಕೊಡುವದು ಮತ್ತು ಇವುಗಳನ್ನು ಇನ್ನೂ ಉತ್ತಮ ಸ್ಥಿತಿಗೆ ತರುವ ವಿಚಾರಗಳಲ್ಲಿಯೂ ಸಹ ಅಜಮಾಯಿಷಿಗಳನ್ನು ನಡಿಸುತ್ತಾರೆ. ಇದೂ ಅಲ್ಲದೆ ಚಾಪೆಯನ್ನು ಹೆಣೆಯುವ ಅನೇಕ ತರಹೆ ಮಗ್ಗಗಳನ್ನು ಪ್ರದರ್ಶಿಸಿ ಕೆಲಸ ಮಾಡಿ ತೋರಿಸುತ್ತಾರೆ. ಈ ಶೀಮೆಯಲ್ಲಿ ಕೂಲಿ ದರಗಳು ಜರ್ಮನಲ್ಲಿರುವಂತೆಯೇ ಅನುಕೂಲವಾಗಿರುವಕಾರಣ ಇಲ್ಲಿಯೂ ಇಂಥಾ ಕಸಬುಗಳನ್ನು ಅಭಿವೃದ್ಧಿಗೆ ತಂದರೆ ಉತ್ತಮ.

---

## Occasional Notes.
## ವಿವಿಧ ವೃತ್ತಾಂತಗಳು.

೧. ಬೆಂಗಳೂರು ಬಸವನಗುಡಿ ಎಕ್ಸ್‌ಟೆನ್‌ಷನ್‌ನಲ್ಲಿರುವ,, ಬಸವನಗುಡಿ ಕೋಆಪರೇಟೀವ್ ಸೊಸೈಟಿ,,ಯನ್ನು ಕೋಆಪರೇಟೀವ್ ಸೊಸೈಟಿಗಳ ಇನ್‌ಸ್ಪೆಕ್ಟರವರು ಕಳೆದ ಏಪ್ರೆಲ್ ಮತ್ತು ಮೇ ಮಾಹೆಗಳಲ್ಲಿ ಇನ್‌ಸ್ಪೆಕ್‌ಷನ್ ಮಾಡಿ ಬರೆದಿರುವ ರಿಪೋರ್ಟು ಜೂನ್ ೧೭ನೆ ತಾರೀಖಿನ ಮೈಸೂರು ಗೆಜೆಟ್ ೨ನೆ ಭಾಗದಲ್ಲಿ ಸಂಪೂರ್ಣವಾಗಿ ಘಾಯಿಷಾಗಿರುವದನ್ನು ಇಲ್ಲಿ ಸಂಕ್ಷೇಪವಾಗಿ ತಿಳಿಸಲ್ಪಡುತ್ತೆ.

ಈ ಸೊಸೈಟಿಯು ೧೯೦೬ನೆ ಜೂನ್‌ನಲ್ಲಿ ಸ್ಥಾಪಿಸಲ್ಪಟ್ಟು ೧೯೦೮ನೆ ಏಪ್ರಿಲ್ ೨೪ರಲ್ಲು ರಿಜಸ್ಟರ್ ಮಾಡಲ್ಪಟ್ಟಿತು. ಇಲ್ಲಿ ಆಹಾರ ಪದಾರ್ಥ ಮತ್ತು ಕೈಸಾಲ ಮೆಂಬರುಗಳಿಗೆ ಕೊಡಲ್ಪಡುತ್ತೆ. ೧೯೦೯ನೆ ಏಪ್ರೆಲ್ ಆಖೈರುವರಿಗೆ ೧೩೦ ಜನ ಮೆಂಬರಿದ್ದರು. ಷೇರಿಗೆ ೫ ರೂಪಾಯಿನಂತೆ ಜಮಾಯಿಸಿದ್ದ ಬಂಡವಾಳವು ಏಪ್ರಿಲ್ ಆಖೈರುವರಿಗೆ ೧,೬೩೦ ರೂಪಾಯಿ

ಆಗಿತ್ತು. ಡಿಪಾಜಿಟ್ಟು ಮೊಬಲಗು ೪೮೨—೧೫—೩ ರೂಪಾಯಿ ಇತ್ತು. ಮತ್ತು ಪೋಸ್ಟಾಫೀಸು ಸೇವಿಂಗ್ಸ್‌ಬ್ಯಾಂಕಿನಲ್ಲಿ ೧೩೫-೯-೧೦ ರೂ. ರಿಜರ್ವ್ ಫಂಡಿರುತ್ತೆ.

ಈ ಸೊಸೈಟಿಯಲ್ಲಿ ಆಹಾರ ಪದಾರ್ಥಗಳ ಮಾರಾಟವೇ ವಿಶೇಷವಾಗಿರುತ್ತೆಂತಲೂ ಈ ವ್ಯಾಪಾರದಲ್ಲಿ ೧೯೦೮ನೆ ಡಿಸೆಂಬರ್ ಆಖೈರಿನ ಭಷ್ಮಾಕೆಲೆಕ್ಕದ ಪ್ರಕಾರ ರೂ. ೪೬೬-೧-೮ ಒಟ್ಟು ನಫೆ ಬಂದಿರುತ್ತೆಂತಲೂ ನಮೂದಿರುತ್ತೆ. ಸೊಸೈಟಿಯಲ್ಲಿ ಒಬ್ಬ ಗುಮಾಸ್ತೆ ೧೦ ರೂ. ತಲಬು, ಒಬ್ಬ ಜವಾನ ೬ ರೂ, ಮನೆ ಬಾಡಿಗೆ ೧೦ ರೂ. ಒಟ್ಟು ೨೬ ರೂಪಾಯಿಗಳು ಮಾಹೆಯಾನ ಖರ್ಚು ಇರುತ್ತೆ. ಆದರೆ ಕಮಿಟಿ ಮೆಂಬರುಗಳು ಸರ್ದಿ ಮೇಲೆ ನಿತ್ಯವೂ ಕೆಲಸವನ್ನು ನಡೆಸುತ್ತಾರೆ.

———o———

೨. ನೆಲಗಡ್ಲೆ ಗಿಡಕ್ಕೆ ಒಂದು ವಿಧವಾದ ರೋಗವು ತಗಲುತ್ತದೆ. ಇದನ್ನು 'ಟಿಕ್ಕಾ' ಎಂದು ಕರಿಯುತ್ತಾರೆ. ಪೂನಾ ಸಮೀಪದ ಕರ್ಕಿ ಸರ್ಕಾರಿ ಫಾರಂನಲ್ಲಿ ಇದಕ್ಕೆ ಪರಿಹಾರ ಕಂಡು ಹಿಡಿಯುವ ವಿಷಯದಲ್ಲಿ ಅಜಮಾಯಿಷಿಗಳು ನಡಿಯುತ್ತಿವೆ. ಬೀಜವನ್ನು ಮೈಲ್‌ತುತ್ತದ ನೀರಿನಲ್ಲಿ ಅದ್ದುವದರಿಂದಲೂ ಗಿಡಕ್ಕೆ ಬೋರ್ಡೋ ಮಿಶ್ರಣವನ್ನು (Bordeaux mixture) ಎರಚುವದರಿಂದಲೂ ಗುಣವೇನೂ ಕಂಡುಬರಲಿಲ್ಲ. ಈ ರೋಗದಲ್ಲಿ ಗಿಡದ ಎಲೆಯ ಹಿಂದುಗಡೆ ಗಂಟುಗಳಾಗುತ್ತೆ. ಪೈರು ಹರಡಿ ನೆಲವನ್ನು ಮುಚ್ಚಿಕೊಳ್ಳುವಕಾರಣ ಈ ಮಿಶ್ರಣವನ್ನು ಎರಚುವದರಿಂದ ಇದು ಎಲೆಯ ಹಿಂಭಾಗಕ್ಕೆ ಸೋಕುವದಿಲ್ಲ. ನೆಲಗಡ್ಲೆ ಪೈರನ್ನು ಹೊಸದಾಗಿ ಒಂದು ಊರಿನಲ್ಲಿ ಬೆಳೆಯುವದಾದರೆ ಮೊದಲು ಇದನ್ನು ಸುಲಿದು ಪೈರಿಡುವ ಊರಿಗೆ ಕಳಿಸುವದಕ್ಕೆ ಮುಂಚೆ ಮೈಲ್‌ತುತ್ತದ ನೀರಿನಲ್ಲಿ ಅದ್ದಿದರೆ ಒಳ್ಳೇದು. ಫಸಲು ಜಾಗ್ರತೆ ಕಟಾವಿಗೆ ಬರುವ ರಕಂಗಳನ್ನು ಬೆಳೆಯುವದರಿಂದಲೂ

ಈ ರೋಗದ ಹಾವಳಿಯನ್ನು ಕಡಿಮೆ ಮಾಡಬಹುದು. ಹೇಗೆಂದರೆ, ಎಲೆಗಳಿಗೆ ಈ ರೋಗವು ಹೆಚ್ಚಾಗಿ ತಗಲುವದಕ್ಕೆ ಮುಂಚೆಯೇ ಕಾಪು ಗಟ್ಟಿಯಾಗುವದರಿಂದ ಇದು ನರಟಿಹೋಗುವದು ತಪ್ಪುತ್ತದೆ.—ಅಗ್ರಿಕಲ್ಚರಲ್ ಜರ್ನಲ್ ಆಫ್ ಇಂಡಿಯಾ, ಎಪ್ರಿಲ್—೧೯೦೮.

---

೩. ಹತ್ತು ವರ್ಷದಿಂದೀಚೆಗೆ ಕಾಶ್ಮೀರಿನಲ್ಲಿ ರೇಷ್ಮೆ ವ್ಯವಸಾಯವು ಅಭಿವೃದ್ಧಿಸ್ಥಿತಿಯಲ್ಲಿರುತ್ತದೆ. ಅಲ್ಲಿ ಈಗ ಉಪ್ಪನೇರಲೇ ಮರವನ್ನು ಕ್ರಮವಾಗಿ ಬೆಳೆಯುತ್ತಿದ್ದಾರೆ. ರೇಷ್ಮೆ ಹುಳುಗಳನ್ನು ಸಾಕುವದರಲ್ಲಿ ಹೆಂಗಸರು ಮಕ್ಕಳು ಒಟ್ಟು ೬೦೦೦೦—೭೦೦೦೦ ಜನ ಕೆಲಸಮಾಡುತ್ತಿದ್ದಾರೆ. ೧೩-೭೪೪ ಮನೆಯವರಿಗೆ ಬೀಜವನ್ನು ಹಂಚಿತ್ತು. ರೇಷ್ಮೆ ಗೂಡುಗಳನ್ನು ಶ್ರೀ ನಗರದಲ್ಲಿರುವ ಸೆಂಟ್ರಲ್ ಫ್ಯಾಕ್ಟರಿಗೆ ಒಂದು ಕ್ಲುಪ್ತ ದರಕ್ಕೆ ಮಾರುತ್ತಾರೆ. ಈ ಕಾರ್ಖಾನೆಯಲ್ಲಿ ಗಂಡಸರು, ಹೆಂಗಸರು, ಮಕ್ಕಳು ಸೇರಿ ಒಟ್ಟು ೬ ಸಾವಿರ ಜನ ರೇಷ್ಮೆಯನ್ನು ರಾಟಿಯಾಡುವ ಕೆಲಸ ಮಾಡುತ್ತಾರೆ. ಕಾಶ್ಮೀರ್ ಸಂಸ್ಥಾನಕ್ಕೆ ಈ ಕೈಗಾರಿಕೆಯಿಂದ ಪ್ರತಿವರ್ಷವೂ ಫಾಯಿದೆ ಹೆಚ್ಚುತ್ತಿದೆ. ೧೯೦೦ನೆ ಇಸವಿಯಲ್ಲಿ ೩೭,೯೦೧ ಪೌಂಡು ತೂಕ ಕಚ್ಚಾ ರೇಷ್ಮೆ ಉತ್ಪತ್ತಿಯಾಗಿ ೧೯೦೬ನೆ ಇಸವಿಯಲ್ಲಿ ೧೯೦,೭೯೬ ಪೌಂಡು ತೂಕದಷ್ಟು ರೇಷ್ಮೆಯು ಉತ್ಪತ್ತಿಯಾಯಿತು. ಕಚ್ಚಾ ರೇಷ್ಮೆಗೂ ಮತ್ತು ಕಾರ್ಖಾನೆಯಲ್ಲಿ ನಿಂತ ಕಸರಿಗೂ ಸಹ ಫ್ರಾನ್ಸ್ ಮತ್ತು ಇಟಲಿ ದೇಶಗಳಲ್ಲಿ ಒಳ್ಳೆ ಗಿರಾಕಿ ಇರುತ್ತದೆ.—ಅಗ್ರಿಕಲ್ಚರಲ್ ಜರ್ನಲ್ ಆಫ್ ಇಂಡಿಯಾ, ಏಪ್ರಿಲ್ ೧೯೦೮.

---

V.B. Soobbiah & Sons, Printers, Bangalore.—1909.

THE MYSORE

# REVENUE & AGRICULTURAL GAZETTE.

ವಾಲ್ಯೂಂ ೩.] ಭಾನುವಾರ, ೧ನೆ ಆಗಸ್ಟು ೧೯೧೯. [ನಂ. ೧೯.

## Contents.



## ಅನುಕ್ರಮಣಿಕೆ.



## Boodi Mannu.

## ಬೂದಿ ಮಣ್ಣು.

ರೆವಿನ್ಯೂ ಕಮಿಷನರ್ ಸಾಹೇಬರವರ ಅಪ್ಪಣೆ ಮೇರೆ ಚಿಕ್ಕಬಳ್ಳಾಪುರದ ಸಬ್‌ಡಿವಿಜನ್ ಸಾಹೇಬರವರು ಅಂದರಲಹಳ್ಳಿ ಜೋಡೀಗ್ರಾಮದ ರೈತರು ತಮ್ಮ ಗ್ರಾಮದ ಕೆಲವು ಜಮೀನುಗಳ ಮಣ್ಣನ್ನೇ ಅಗೆದುಕೊಂಡು ಹೋಗಿ ಗೊಬ್ಬರವಾಗಿ ಉಪಯೋಗಿಸುತ್ತಾರೆಂಬಂಶವನ್ನು ಅಗ್ರಿಕಲ್ಚರಲ್

ಕೆಮಿಸ್ಟರವರಿಗೆ ತಿಳಿಸಿದರು. ಕಾಲಕ್ರಮೇಣ ಈ ಅಂಶವನ್ನು ವಿಚಾರಿಸುವಲ್ಲಿ ಬೆಂಗಳೂರು ಡಿಸ್ಟ್ರಿಕ್ಟಿನ ಕಾಕೋಳ, ಕತನೂರು, ರಾಜಘಟ್ಟ ಮತ್ತು ಚಿಕ್ಕಬಾಣಾವಾರ ಎಂಬ ಊರುಗಳಲ್ಲಿ ಅದೇ ತರಹವಾದ ಬಿಳಿಮಣ್ಣೆಂದು ಕರೆಯಲ್ಪಡುವದನ್ನು ಗೊಬ್ಬರವಾಗಿ ಉಪಯೋಗಿಸುತ್ತಾರೆಂಬುದು ತಿಳಿಯಬಂತು. ಹಾಗೆ ಉಪಯೋಗಿಸಲ್ಪಡುತ್ತಿರುವ ಮಣ್ಣನ್ನು ಬೆಂಗಳೂರಿನಲ್ಲಿರುವ ಅಗ್ರಿಕಲ್ಚರಲ್ ಕೆಮಿಸ್ಟರವರ ಆಫೀಸಿನಲ್ಲಿ ಪರೀಕ್ಷೆ ಮಾಡಿದ್ದರಲ್ಲಿ ಅತಿ ಸಾರವತ್ತಾಗಿರುವ ಭೂಮಿಯಲ್ಲಿರುವದಕ್ಕಿಂತಲೂ ಬಹಳ ಹೆಚ್ಚಾದ ಸಸ್ಯಾಹಾರವು ಇದರಲ್ಲಿರುವದೆಂತಲೂ ರೈತನು ಅಂಥಾ ಮಣ್ಣನ್ನು ಗೊಬ್ಬರವಾಗಿ ಉಪಯೋಗಿಸುವದು ಬಹಳ ಶ್ಲಾಘ್ಯವಾದ್ದೆಂತಲೂ ತಿಳಿದುಬಂದಿರುವದು. ಮೂಳೆಯ ಗೊಬ್ಬರದಲ್ಲೇ ವಿಶೇಷವಾಗಿರುವ ಸುಣ್ಣ ಮತ್ತು ರಂಜಕಾಮ್ಲವೆಂಬ ಸಸ್ಯಾಹಾರಗಳೇ ಈ ಮಣ್ಣಿನಲ್ಲೂ ಬಹಳವಾಗಿರುವವು. ದನದ ಗೊಬ್ಬರದಿಂದಲೇ ಫಸಲಿಗೆ ಬೇಕಾದಷ್ಟು ಮೇಲೆ ಹೇಳಿದ ಸಸ್ಯಾಹಾರಗಳು ದೊರಿಯುವದಿಲ್ಲವಾದ್ದರಿಂದ ದನದ ಗೊಬ್ಬರದೊಂದಿಗೆ ಆ ಮಣ್ಣನ್ನು ಸೇರಿಸಿ ಉಪಯೋಗಿಸಿದರೆ ಬಹಳ ಅನುಕೂಲವಾಗುವದು. ಹಸಿ ಸಸಿ ಗೊಬ್ಬರದೊಂದಿಗೂ ಅದನ್ನು ಬೆರಸಿ ಉಪಯೋಗಿಸಿದರೆ ಬೆಳೆಯೂ ಚನ್ನಾಗಿ ಆಗಬಹುದು.

ಈ ಮಣ್ಣುಗಳ ವಿಷಯವಾಗಿ ಒಂದು ಚಿಕ್ಕ ಉಪನ್ಯಾಸವು ಅಚ್ಚು ಹಾಕಲ್ಪಡುತ್ತದೆಯಲ್ಲದೆ ಕ್ಷಿಪ್ರದಲ್ಲಿಯೇ ಮ॥ರಾ॥ ಎ. ಕೆ. ಯಜ್ಞನಾರಾಯಣ ಅಯ್ಯರ್‌ಯವರಿಂದ ಪ್ರಚುರಪಡಿಸಲ್ಪಡುವದು.

---

## Reshme Kygarike Co-operative Society, T. Narsipur.

## ಟಿ. ನರಸೀಪುರದ ರೇಷ್ಮೆ ಕೈಗಾರಿಕೆ ಕೋ-ಆಪರೇಟೀವ್ ಸೊಸೈಟಿ.

ತಿರುಮಕೂಡ್ಲು ನರಸೀಪುರದ ಶ್ರೀ ಕೃಷ್ಣರಾಜ ಒಡೆಯರ್ ರೇಷ್ಮೆ

ಕೈಗಾರಿಕೆ ಕೊ ಆಪರೇಟಿವ್ ಸೊಸೈಟಿಯು ೧೯೦೮ನೆ ಜೂನ್ ಲಾಗಾಯಿತು ೧೯೦೯ನೆ ಇಸವಿ ಜೂನ್ ೩೦ರ ವರೆಗಿನ ರಿಪೋರ್ಟಿನ ಸಾರಾಂಶ ಇದರಡಿ ಬರೆದಿರುತ್ತೆ.

೧೯೦೮ನೆ ಏಪ್ರಿಲ್ ೫ನಲ್ಲು ಈ ಸಂಘವು ಏರ್ಪಟ್ಟು ವೊ ೧೯೦೪ರಲ್ಲು ಕೋ ಆಪರೇಟಿವ್ ಸೊಸೈಟಿಗಳ ರೆಗ್ಯುಲೇಷನ್ ಅನುಸಾರವಾಗಿ ರಿಜಿಸ್ಟರು ಮಾಡಲ್ಪಟ್ಟಿತು. ೧೧೪ ಜನ ಷೇರು ತೆಗೆದುಕೊಂಡಿರುತ್ತಾರೆ. ಈ ಸಂಘವು ಪ್ರಾರಂಭವಾದಾರಭ್ಯ ೬ ತಿಂಗಳು ಕೆಲಸ ನಡೆದಿರುತ್ತೆ. ಷೇರು ಮೂಲ್ಕ ಬಂದ ಬಂಡವಾಳ ಸಾಲದೆ ೧,೨೯೩ ರೂಪಾಯಿಯವರಿಗೆ ಡಿಪಾಜಿಟ್ಟು ತೆಗೆದುಕೊಳ್ಳಲ್ಪಟ್ಟಿತು. ರೇಷ್ಮೆ ಎಳೆ ತೆಗೆಯುವದಕ್ಕೆ ೪೩೦—೮—೬ ರೂಪಾಯಿ ಅಡ್ವಾನ್ಸು ಕೊಟ್ಟಿತ್ತು. ಇದೇ ಕೆಲಸಕ್ಕೆ ಶ್ರೀಮನ್ ಮಹಾರಾಜರವರು ತಮ್ಮ ತೋಪಿನಲ್ಲಿರುವ ಮರಗಳನ್ನು ರಿಯಾಯಿತಿ ಬೆಲೆಗೆ ತೆಗೆದುಕೊಳ್ಳಲು ಅಪ್ಪಣೆ ದಯಪಾಲಿಸಿರುತ್ತಾರೆ.

ಈ ವರುಷದಲ್ಲಿ ರೇಷ್ಮೆ ಕೊಂಡುಕೊಂಡದ್ದು ೩೪೫ ಮಣ ೮೭ ಶೇರಿಗೆ ೩,೩೪೩—೧೦—೧೧ ರೂಪಾಯಿಗಳು, ಅದರಿಂದ ಉಂಟಾದ ರೇಷ್ಮೆ ೨೨ ಮಣ ೬ ಶೇರು ೧೩ ತೊಲಕ್ಕೆ, ಹಾಜರಿರುವ ೧೨ ಶೇರು ೬೭ ತೊಲ ಜಾತ ಬಿಕರಿಮಾಡಿದ ರೇಷ್ಮೆ ೨೫ ಮಣ ೫೭ ಶೇರಿಗೆ, ೩೨೩೫—೧೪—೯ ರೂಪಾಯಿ ಉತ್ಪತ್ತಿ ಆಗಿರುತ್ತೆ. ನಟ್ಟಿಯಿಂದ ೨೨೨—೨—೦ ರೂಪಾಯಿ ಉತ್ಪತ್ತಿ ಆಗಿರುತ್ತೆ. ಒಟ್ಟು ೩೪೫೮—೦—೯ ರೂಪಾಯಿ ಬಂದಿರುತ್ತೆ. ಇದು ಪ್ರಥಮ ವರ್ಷವಾದುದರಿಂದ ಸ್ವಲ್ಪ ನಷ್ಟ ಕಂಡುಬಂದಾಗ್ಯೂ ಮುಂದೆ ಅನುಕೂಲವಾಗಬಹುದೆಂಬುವ ವಿಷಯದಲ್ಲಿ ರಿಪೋರ್ಟಿನ ಕೊನೆಯಲ್ಲಿ ಸೆಕ್ರೆಟರಿಯವರು ಹೇಳಿರುವದನ್ನು ಇಲ್ಲಿ ಪೂರ್ತಿಯಾಗಿ ಬರೆದಿರುತ್ತೆ.

„ಪ್ರಾರಂಭದಲ್ಲಿ ಕಷ್ಟ ತೋರಿದ ಮಾತ್ರದಿಂದಲೇ ಅಥವ ಆಕಸ್ಮಿಕದಿಂದೊದಗಿದ, ಮತ್ತು ಮುಂಜಾಗರೂಕತೆಯಿಂದ ಊಹಿಸಲಾಗದಿದ್ದ ಸಂದರ್ಭಗಳಿಂದ ನಷ್ಟ ಕಂಡ ಮಾತ್ರದಿಂದಲೇ ವಿವೇಕವುಳ್ಳ ಪುರುಷರು ತಮ್ಮ ಉದ್ದೇಶವನ್ನು ಬಿಡಲಾರರು. ಹೀಗೆ ಹಿಡಿದ ಕೆಲಸಗಳನ್ನು ಅಲ್ಪ

ಕಾರಣಗಳಿಗಾಗಿ ಬಿಡುವಂಥ ಆರಂಭ ಶೂರರು ಯಾವ ದೊಡ್ಡ ಕಾರ್ಯವನ್ನು ತಾನೇ ನೆರವೇರಿಸಬಲ್ಲರು. ನಮ್ಮ ಖಾವಂದರವರ ಅನುಜ್ಞೆ ಪಡೆದು ಅವರ ಹೆಸರನ್ನು ನಾವು ನಮ್ಮ ಸಂಘಕ್ಕೆ ಇಟ್ಟಿರುವದನ್ನು ಸಾರ್ಥಕಗೊಳಿಸಲು ನಾವು ಈ ವರ್ಷದಲ್ಲಿ ಬುದ್ಧಿ ಸಾಹಸಗಳನ್ನು ತೋರಿ ನಮ್ಮ ಸಂಘವನ್ನು ಅಭಿವೃದ್ಧಿ ಗೊಳಿಸಿ ಪರಸ್ಪರಸಹಾಯದಿಂದುಂಟಾಗಬಹುದಾದ ಪ್ರಯೋಜನಗಳನ್ನು ಜನಗಳಿಗೆ ದೃಷ್ಟಾಂತರಗೊಳಿಸುವ ಸನ್ನಾಹವನ್ನು ಮಾಡಬೇಕು. ಭಗವಂತನ ಕೃಪೆಯಿಂದ ಈ ವರ್ಷದ ಕಾಲಸ್ಥಿತಿಯು ಗತಸಾಲಿನ ಕಾಲಸ್ಥಿತಿಗಿಂತಲೂ ಚನ್ನಾಗಿರುವಂತೆ ಕಾಣುತ್ತದೆ. ಆದುದರಿಂದ ಮೆಂಬರುಗಳು ಪರಸ್ಪರಸಹಾಯ ಮತ್ತು ಪ್ರೋತ್ಸಾಹಪೊಡನೆ ಕೆಲಸ ನಿರ್ವಹಿಸಬೇಕಾಗಿ ಕೋರುತ್ತೇನೆ."

## Seed-Rate. *

## ಬಿತ್ತದ ಪ್ರಮಾಣ.

ಪೈರು ಹುಲುಸಾಗಿ ಬೆಳೆಯಲು ಅನೇಕ ಅಂಶಗಳು ಕಾರಣವಾಗುವದರಿಂದ ಇಷ್ಟೇ ಬೀಜವನ್ನು ಪಯೋಗಿಸುವದು ಸರಿಯೆಂದು ನಿರ್ಣಯಿಸುವದು ಅಸಾಧ್ಯ. ಬಿತ್ತುವ ಪ್ರತಿ ಬೀಜವು ಫಲವತ್ತಾದ್ದೆಂದೂ ಮತ್ತು ಬಿತ್ತನೆಕಾಲವು ಸಕಾಲವೆಂದೂ ಇಟ್ಟುಕೊಂಡರೂ ಬೀಜವನ್ನು ಯಾವ ಪ್ರಮಾಣದಲ್ಲಿ ಬಿತ್ತಬೇಕೆಂಬುದು ಇತರ ಕಾರಣಗಳಿಂದ ಅನೇಕವಾಗಿ ಬದಲಾಯಿಸಬಹುದು. ನಾರಿಗೋಸ್ಕರ ಪುಂಡಿ ಗಿಡವನ್ನು ಬೆಳೆದಲ್ಲಿ ಬಿತ್ತದ ಪ್ರಮಾಣವು ಜಾಸ್ತಿಯಾಗುತ್ತೆ. ಹೇಗಂದರೆ ತರಕಾರಿಗಾಗಿ ಬೆಳೆದಾಗ ಒಂದು ಪೌಂಡು ಬಿತ್ತ ಬೇಕಾಗುವದು ; ನಾರಿಗಾಗಿ ಬೆಳೆದಾಗ ೮ ಪೌಂಡಿನಷ್ಟು ಬೇಕಾಗುತ್ತೆ. ಜೋಳವನ್ನು ಧಾನ್ಯಕ್ಕಾಗಿ ಬೆಳೆದಾಗ ಎರಡು ಪಡಿ (ಮದ್ರಾಸ್) ಬಿತ್ತ ಬೇಕಾಗುತ್ತೆ. ಇದನ್ನೇ ಮೇವಿಗೋಸ್ಕರ ಒತ್ತಾಗಿ ಚೆಲ್ಲಿ ಸಣ್ಣ ದಂಟಿನ ಕಡ್ಡಿಗಳನ್ನು ಬೆಳೆದಲ್ಲಿ ೩೦ ಪಡಿಯಷ್ಟು ಬೇಕಾಗುತ್ತೆ.

* ಮದ್ರಾಸ್ ಅಗ್ರಿಕಲ್ಚರಲ್ ಕ್ಯಾಲೆಂಡರ್.—೧೯೦೯.

ಪೈರು ಮಾಡುವದರಲ್ಲಿ ಅನೇಕ ಕ್ರಮಗಳುಂಟು. ಬಿತ್ತುವನ್ನು ಅಗೆಗಳಲ್ಲಿ ಚೆಲ್ಲಿ ನಂತರ ಸಸಿಗಳನ್ನು ಗದ್ದೆಗಳಲ್ಲಿ ನಾಟುತ್ತಾರೆ. ಬತ್ತ, ಮೆಣಸಿನಕಾಯಿ ಮತ್ತು ಹೊಗೆಸೊಪ್ಪು ಇವುಗಳ ಸಾಗುವಳಿಯಲ್ಲಿ ಈ ಪದ್ಧತಿ ಅನುಸರಿಸುತ್ತಾರೆ. ಇದು ಒಳ್ಳೇ ಕ್ರಮವೇ ಸರಿ. ಹೇಗಂದರೆ ಬೀಜದ ಉಳಿತಾಯು ಒಂದಲ್ಲದೆ ಇತರ ಅನುಕೂಲತೆಗಳೂ ಉಂಟು. ಕೂರಿಗೆಯಿಂದ ಸಾಲುಸಾಲಾಗಿ ಬಿತ್ತುವದು ಮತ್ತೊಂದು ಕ್ರಮ; ಇದರಲ್ಲಿ ಬಿತ್ತುವು ಉಳಿತಾಯವಾಗುವದಲ್ಲದೆ ಬೀಜವು ಕ್ರಮವಾಗಿ ಒಂದೇ ಮಟ್ಟದಲ್ಲಿ ಬಿತ್ತನೆಯಾಗುತ್ತದೆ. ಬಿತ್ತುವನ್ನು ಚೆಲ್ಲಿ ನಂತರ ಉಳುವದು ಮೂರನೇ ಕ್ರಮ; ಇದು ಕೆಲವುವೇಳೆ ಸಮರ್ಪಕವಾಗಿದ್ದರೂ ಕಾಳು ಚೆಲ್ಲುವವನು ಬುದ್ಧಿವಂತನಾಗಿಲ್ಲದಿದ್ದರೆ ಕಾಳು ಸಮನಾಗಿ ಹರಡುವದಿಲ್ಲ. ಕಾಳು ಒಂದೇ ಮಟ್ಟದಲ್ಲಿ ಬಿತ್ತನೆಯಾಗುವದಿಲ್ಲವಾದಕಾರಣ ಮೊಳಿಕೆಯು ಏಕಕಾಲದಲ್ಲಿ ಬರದೆ ಅನಾನುಕೂಲವಾಗುತ್ತೆ. ಕೆಲವು ಪ್ರಾಂತ್ಯಗಳಲ್ಲಿಯೂ ಮತ್ತು ಕೆಲವು ತರಹೆ ಜಮೀನುಗಳಲ್ಲಿ ಬಿತ್ತದ ಪ್ರಮಾಣವು ಅಲ್ಲಿನ ಹವಾ ಅನುಸರಿಸಿ ಹೆಚ್ಚು ಕಡಿಮೆಯಾಗುತ್ತೆ. ಹೇಗಂದರೆ ಕೆಲವು ಕಡೆಗಳಲ್ಲಿ ಎರಡನೆ ಸಲ ಬಿತ್ತುವದಕ್ಕೆ ಅವಕಾಶವಿರುವದಿಲ್ಲವಾದಕಾರಣ ಕಾಳು ಮೊಳಕೆ ಏಳುವ ಸಂಭವವು ಕಡಮೆ. ಇಂಥಾ ಸಂದರ್ಭಗಳಲ್ಲಿ ಬಿತ್ತದ ಖರ್ಚು ಹೆಚ್ಚಾಗಲು ಕಾರಣವಾಗುತ್ತೆ. ಗಟ್ಟಿಯಾಗಿರುವ ಕರಿರ್‍ಯಾಗಡೆ ಭೂಮಿಯಲ್ಲಿ ಹತ್ತಿ ಪೈರಿಡುವದರಲ್ಲಿ ರೈತರಿಗೆ ಸಂಭವಿಸುವ ಅನಾನುಕೂಲವೇನಂದರೆ, ಮುಂದಿನ ಮಳೆಗಳು ಬೀಳದಿದ್ದರೆ ಆಳವಾಗಿ ಊರಿದ ಬೀಜಗಳು ಮೊಳಕೆ ಇಡುವದಿಲ್ಲ ಅಥವಾ ಬಿತ್ತನೆಯಾದನಂತರ ಚೆನ್ನಾಗಿ ಬಿಸಿಲುಕಾದಲ್ಲಿ ಮೇಲೆಮೇಲೆ ಊರಿದ ಬೀಜಗಳೂ ಮೊಳಕೆ ಇಡುವದಿಲ್ಲ. ಆದ್ದರಿಂದ ತಿನ್ನವೆಲ್ಲಿ ಜಿಲ್ಲಾದಲ್ಲಿ ರೈತರು ಭೂಮಿಯಲ್ಲಿ ಮೊದಲು ರೂಥಿಯವೇರೆಗೆ ಕಾಳನ್ನು ಚೆಲ್ಲಿ ಉಳುವದು ಪೂರೈಸಿದನಂತರ ಪುನಃ ಎರಡನೇಸಲ ಮೇಲೆಮೇಲೆಯೇ ಪೂರಾ ಬಿತ್ತನೆಮಾಡುತ್ತಾರೆ. ಬಿತ್ತನೆ ಮಳೆಗಳು ಕಾಲದಲ್ಲಿ ಒಂದೆರಡುಸಲ ಬರುವದರಿಂದಲೂ ಹತ್ತಿಬೀಜ ಅಗ್ಗವಾಗಿರುವದರಿಂದಲೂ ಮೇಲೆ ಹೇಳಿದ ಅನಾನುಕೂಲಗಳುಂಟಾಗದರೀತಿ ಹೆಚ್ಚು ಬೀಜ ಬಿತ್ತುವದು ತಪ್ಪಲ್ಲ. ಬಿತ್ತದ ಲಾಗವತು ಜಾಸ್ತಿಯಾಗುವದೆಂದು ಪೈರು ಲುಕ್ಸಾನುಮಾಡಿಕೊಳ್ಳುವದು ಸರಿಯಲ್ಲ.

ಹೀಗಿರುವಲ್ಲಿ ಬಿತ್ತನೆಮಾಡಿದನಂತರ ಪೈರನ್ನು ವಿರಳಪಡಿಸುವದರಲ್ಲಿ
ರೈತರು ಗಮನಕೊಡದೇ ಇರುವದು ಬಹಳ ಶೋಚನೀಯವಾಗಿರುತ್ತೆ. ಏ
ಕೆಂದರೆ ಒಂದುವೇಳೆ ಮೊಳಕೆಗಳು ಚನ್ನಾಗಿ ಬಂದರೂ ಸಸಿಗಳು ಒತ್ತಾಗಿ
ಬೆಳೆದು ಅನೇಕ ಅನಾನುಕೂಲಗಳುಂಟಾಗುತ್ತೆ. ಹೇಗಂದರೆ ಮಳೆ ಕಮ್ಮಿ
ಯಾದ ಪ್ರದೇಶಗಳಲ್ಲಿ ಭೂಮಿಯಲ್ಲಿಯ ತನುವು ಜಾಗ್ರತೆಯಾಗಿ ಉಪ
ಯೋಗಿಸಲ್ಪಟ್ಟು ಪೈರು ಒಣಗಲಾರಂಭಿಸಿ ಕೇವಲ ಮುಂದಾಗಿಯೇ ಬಲಿ
ಯುತ್ತದೆ. ಸೀಡೆಡ್ ಡಿಸ್ಟ್ರಿಕ್ಟುಗಳ ಹತ್ತಿ ಬೆಳೆಯಲ್ಲಿ ಇದು ಚನ್ನಾಗಿ
ಗೋಚರಕ್ಕೆ ಬಂದಿರುತ್ತೆ. ಇಲ್ಲಿ ಕೂರಿಗೆಯಿಂದ ಬಿತ್ತನೆಮಾಡಿ ನಂತರ
ವಿರಳಪಡಿಸದೆ ಇರುವಕಾರಣ ಹವಾದಲ್ಲಿ ಉಷ್ಣ ಹೆಚ್ಚಾದನಂತರ ಗಿಡ ಬ
ಲಿತು, ನರಟಿಹೋಗಿ ಸಣ್ಣ ಎಳೆಯ ಹತ್ತಿ ಉತ್ಪತ್ತಿಯಾಗುತ್ತೆ. ವಿರಳ
ಪಡಿಸಿದ್ದಲ್ಲಿ ಹೀಗಾಗದೆ ಹತ್ತಿಯ ಉತ್ಪತ್ತಿಯೂ ಮತ್ತು ಅದರ ಗುಣವೂ
ಉತ್ತಮವಾಗಿಯೆ ಇರುತ್ತಿತ್ತು. ಮಳೆಗಳು ಕಮ್ಮಿಯಾದಾಗ ವಿರಳವಾಗಿ
ಪೈರಿಟ್ಟಲ್ಲಿ ಉತ್ಪತ್ತಿಯು ಹೆಚ್ಚುವದೆಂದು ರೈತನಿಗೆ ತಿಳಿದಿದ್ದರೂ ಮಳೆ ಹೆ
ಚ್ಚಾದ ಸಂವತ್ಸರದಲ್ಲಿಯೂ ಈರೀತಿ ಪೈರಿಟ್ಟಲ್ಲಿ ಉತ್ಪತ್ತಿಯು ಹೆಚ್ಚುವ
ದೆಂದು ಇವನು ತಿಳಿದಿರುವದಿಲ್ಲ. ಹೀಗೆ ಮಾಡುವದರಿಂದ ಗಿಡಗಳು ಚೆನ್ನಾ
ಗಿ ಆಗುವದೆಂದು ತಿಳಿಯದೇ ಭೂಮಿಯಲ್ಲಿ ಒದಗುವ ತನುವು ಮತ್ತು ಸ
ಸ್ಯಾಹಾರವು ಸಾಲದೇಬರುವರೀತಿ ಹೆಚ್ಚು ಗಿಡಗಳನ್ನು ನಿಲ್ಲಿಸಿಬಿಡುತ್ತಾ
ನೆ. ಜೋಳದ ಬೆಳವಳಿಕೆಯ ಕಾಲದಲ್ಲಿ ಪ್ರತಿ ರೈತನು ಸಣ್ಣ ಸಸಿಗಳ
ನ್ನು ಕಿತ್ತು ವಿರಳಪಡಿಸಿ ಕಾಳಾಗುವ ಸಸಿಗಳಿಗೆ ಹೆಚ್ಚು ಅವಕಾಶಕೊಡು
ತ್ತಾನೆ. ಹತ್ತಿ ಬೆಳೆಯಲ್ಲಿಯೂ ಹೀಗೆಯೇ ಮಾಡಬೇಕು. ತಮಿಳು ಡಿ
ಸ್ಟ್ರಿಕ್ಟುಗಳಲ್ಲಿ ಜೋಳ ಮತ್ತು ಸಜ್ಜೆ ಪೈರು ೨ ಅಡಿ ಬೆಳೆದಾಗ ಭೂಮಿ
ಯನ್ನು ಉತ್ತು ಪೈರನ್ನು ವಿರಳಪಡಿಸಿ ನೆಲವನ್ನು ಸಡಲಿಸುತ್ತಾರೆ.
ಈ ದೇಶದ ಹತ್ತಿಗಳಲ್ಲಿ ಬ್ರೋಚ್ ಹತ್ತಿಗೆ ಒಳ್ಳೆ ಬೆಲೆ ದೊರಕುವದಕ್ಕೆ
ಈ ವ್ಯವಸಾಯವೇ ಕಾರಣ. ತರಿ ಮತ್ತು ಬಾಗಾಯಿತು ವ್ಯವಸಾಯ
ದಲ್ಲಿ ಹೆಚ್ಚು ಬಿತ್ತ ಉಪಯೋಗಿಸುವ ಅವಶ್ಯಕತೆ ಕಮ್ಮಿ. ಆದರೂ ಹೆ
ಚ್ಚು ಬಿತ್ತವನ್ನು ಉಪಯೋಗಿಸುವದುಂಟು. ಅಗೆಗಳಲ್ಲಿ ಒತ್ತಾಗಿ ಚ
ಲ್ಲುವದಲ್ಲದೆ ಗದ್ದೆಗಳಲ್ಲಿಯೂ ಸಸಿಗಳನ್ನು ಒತ್ತಾಗಿ ನಾಟುತ್ತಾರೆ. ಅಗೆ

ಗಳಲ್ಲಿ ವಿರಳವಾಗಿ ಚೆಲ್ಲಿದರೆ ಸಸಿಗಳು ಬಲವಾಗಿ ಬೆಳೆದು ನಾಟಿಮಾಡುವಾಗ ವಿರಳವಾಗಿ ನೆಡುವದಕ್ಕೆ ಅವಕಾಶ ಉಂಟಾಗುತ್ತೆ. ಒಂದು ಎಕರೆ ಬತ್ತದ ಅಗೆಮಾಡಿದರೆ ೨೫ ಎಕರೆಗೆ ನಾಟಿಹಾಕಬಹುದು. ಪ್ರತಿ ಬೀಜವೂ ಫಲವತ್ತಾಗಿದ್ದಲ್ಲಿ ಅಗೆಯಲ್ಲಿ ಅರ್ಧ ಪಡಿ (ಮದ್ರಾಸ್) ಚೆಲ್ಲಿ ಬೆಳೆದ ಸಸಿಗಳು ಒಂದೊಂದೇ ಸಸಿಯಂತೆ ೪ ಅಡಿ ದೂರ ದೂರ ನಾಟಿಮಾಡಿದರೆ ಒಂದು ಎಕರೆಗೆ ಸರಿಹೋಗುತ್ತೆ. ರೂಢಿಯಲ್ಲಿ ಉಪಯೋಗಿಸುವ ಪ್ರಮಾಣವನ್ನು ನೋಡಿದರೆ ಎಷ್ಟು ಕಾಳು ಪೋಲಾಗುತ್ತೆಂಬುದು ವ್ಯಕ್ತಪಡುತ್ತದೆ. ಆದ್ದರಿಂದ ಪ್ರತಿಯೊಬ್ಬ ರೈತನು ಅಗೆಗಳಲ್ಲಿ ಚೆಲ್ಲುವ ಪ್ರಮಾಣವನ್ನು ಕಮ್ಮಿ ಮಾಡುವದಲ್ಲದೆ ವಿರಳವಾಗಿ ನಾಟಿ ಮಾಡುವದನ್ನು ಅಜಮಾಯಿಷಿ ಮಾಡಿ ಆಚರಣೆಗೆ ತಂದರೆ ಒಳ್ಳೇದು. ಕಬ್ಬಿನ ವ್ಯವಸಾಯದಲ್ಲಿಯೂ ಒತ್ತಾಗಿ ಬೆಳೆಯುವದರಿಂದ ಲುಕ್ಸಾನಾಗುತ್ತಿದೆ. ಇದನ್ನು ಅಜಮಾಯಿಷಿ ಮಾಡಲು ಸಾಮಲ್ ಕೋಟೆಯಲ್ಲಿ ೮೦೦೦ ಜೊತೆ ಬೀಜವನ್ನು ಒಂದು ತಾಕಿಗೂ, ಸಮನಾದ ಮತ್ತೊಂದು ತಾಕಿಗೆ ೨೨,೦೦೦ ಜೊತೆಯನ್ನು ಹಾಕಿ ಬೆಳೆದದ್ದರಲ್ಲಿ ಹೆಚ್ಚಾಗಿ ಹಾಕಿದ್ದ ತಾಕಿನಲ್ಲಿ ಜಾಸ್ತಿ ಬೆಳೆಯಾದರೂ, ಬಿತ್ತದ ಖರ್ಚಿಗೆ ಉತ್ಪತ್ತಿಯು ಸಮನಾಯಿತು.

---

## Revenue Appeals.

## ರೆವಿನ್ಯೂ ಅಪೀಲುಗಳು.

೧೯೦೮—೦೯ನೇ ಸಾಲಿನ ೧೮ನೇ ನಂಬರ್ ಅಪೀಲು ಮೊಕದ್ದಮೆ.

| ಅಪೀಲು ವಾದಿ. | | ಅಪೀಲು ಪ್ರತಿವಾದಿ. |
|---|---|---|
| ಚಿಕ್ಕರಂಗೇಗೌಡನ ಮಗ ಸಣ್ಣತಿಮ್ಮೇಗೌಡ. | *vs.* | ದೇವರಂಗೇಗೌಡನ ಮಗ ಪಿಡೋರಂಗೇಗೌಡ. |

ಅಪೀಲು ಪ್ರತಿವಾದಿ ಮತ್ತು ವಾದಿಯೂ ಅಣ್ಣತಮ್ಮಂದಿರ ಮಕ್ಕಳು. ವಾದಿಯು ತಂದೆಯಾದ ಚಿಕ್ಕರಂಗೇಗೌಡನು ಸಿರಾ ತಾಲ್ಲೂಕು ಗಿಡ್ಡಗಾನಹಳ್ಳಿ ಗ್ರಾಮದ ರಿಜಿಸ್ಟರ್ ಪಟೇಲನು. ಇವನು ಗತಿಸಿದ ತರುವಾಯ ವಾದಿ ಪ್ರತಿವಾದಿಗಳಿಬ್ಬರೂ ಪಟೇಲಿ ಕೆಲಸಕ್ಕೆ ಹಕ್ಕು ತರಲು ಅಸಿ

ಸ್ಟೆಂಟ್ ಕಮಿಷನರವರು ವಾದಿಯ ಹಕ್ಕನ್ನು ಅಂಗೀಕರಿಸಿದರು. ಈ ಆರ್ಡರಿನ ಮೇಲೆ ಪ್ರತಿವಾದಿಯು ವಾದಿಯು ಅವನ ತಂದೆಯ ಇನ್ನೊಬ್ಬ ಅಣ್ಣನಾದ ತಮ್ಮಣ್ಣನಿಗೆ ದತ್ತು ಆದ ಪ್ರಯುಕ್ತ ಪಟೇಲಿಗೆ ಅವನಿಗಿರುವ ಹಕ್ಕು ತಪ್ಪಿರುವದಾಗಿಯೂ ವಾದಿಯನ್ನು ದತ್ತು ಕೊಟ್ಟನಂತರ ತನ್ನನ್ನು ಪ್ರತಿವಾದಿ ಚಿಕ್ಕರಂಗೇಗೌಡನು ದತ್ತು ಮಾಡಿಕೊಂಡನೆಂತಲೂ, ಮತ್ತು ಪಕ್ಕಾ ಪೋಟಗಿ ಸೆಟಲ್‌ಮೆಂಟ್ ಕಾಲದಲ್ಲಿ ಪಟೇಲಿ ಹಕ್ಕು ಘನತಿ ಬರಾವರ್ದಾರನಿಗೆ ರಿಜಿಸ್ಟರಾದಾಗ ನಂತರ ಪಟೇಲಿ ಹಕ್ಕು ತನಗೆ ಬರಬೇಕೆಂದು ಹುಕುಂ ಆಗಿರುವದಾಗಿಯೂ ಡೆಪ್ಯುಟಿ ಕಮಿಷನರವರಲ್ಲಿ ಅರ್ಜಿ ಮಾಡಿ, ದತ್ತು ವಿಚಾರವೂ ಮತ್ತು ಪಕ್ಕಾ ಪೋಟಿಗಿ ಸೆಟ್ಲ್‌ಮೆಂಟ್ ಕಾಲದಲ್ಲಿ ಆದ ಹುಕುಮೂ ರುಜುವಾತಾದ್ದರಿಂದ ಪ್ರತಿವಾದಿಗೆ ಪಟೇಲಿಗೆ ಹೆಚ್ಚು ಬಾಧ್ಯತೆ ಇರುವದೆಂದು ಡೆಪ್ಯುಟಿಕಮಿಷನರವರು ಫೈಸಲ್ ಮಾಡಿದರು. ಈ ಆರ್ಡರಿನ ಮೇಲೆ ವಾದಿಯು ಅಪೀಲ್‌ಮಾಡಲು ಗೌರ್ನಮೆಂಟಿನವರು ಫೈಸಲ್ ಹುಕುಂ ಕೊಟ್ಟಿರುವದೇನಂದರೆ.—

ಚಿಕ್ಕರಂಗೇಗೌಡನು ಪ್ರತಿವಾದಿ ಒಡೋರಂಗೇಗೌಡನನ್ನು ದತ್ತು ಮಾಡಿಕೊಂಡಿರುವದಕ್ಕೆ ರುಜುವಾತು ಏನೂ ಇರುವದಿಲ್ಲ. ತಮ್ಮಣ್ಣನಿಗೆ ಮಕ್ಕಳಿಲ್ಲದ್ದರಿಂದ ವಾದಿಯು ತಮ್ಮಣ್ಣನಿಗೂ ತನ್ನ ತಂದೆಗೂ ಸಹ ಮಗನಾಗಿರುವದಾಗಿಯೂ ಇವರಿಬ್ಬರೂ ಏಕ ಗೃಹಕೃತ್ಯದಲ್ಲಿದ್ದುದಾಗಿಯೂ ಬಯಾನಿಸುತ್ತಾನೆ. ಇದಕ್ಕೆ ವಿರೋಧವಾದ ರುಜುವಾತು ಬಂದಿರುವದಿಲ್ಲವಾಗಿ ಇವನ ಹೇಳಿಕೆಯು ನಿಜವಾಗಿ ಕಾಣುತ್ತೆ. ಹ್ಯಾಗೂ ಇದು ವಾದಿಗೆ ತಂದೆಯ ಆಸ್ತಿಯಲ್ಲಿರುವ ಹಕ್ಕನ್ನು ತಪ್ಪಿಸಲು ಸಾಕಾಗಿರುವದಿಲ್ಲ. ಪಕ್ಕಾ ಪೋಟಿಗಿ ರಿಜಸ್ಟರಿನಲ್ಲಿ ಒಡೋರಂಗೇಗೌಡನಿಗೆ ಪಟೇಲಿ ಬದಲಿಯನ್ನು ನೋಡಲು ಹೆಚ್ಚು ಹಕ್ಕು ಇರುವದಾಗಿ ನಮೂದಿರುತ್ತೆ. ಈ ಷರಾವಿಗೆ ಏನು ಅರ್ಥವಿರಬಹುದೆಂಬುದು ವ್ಯಕ್ತಪಡುವದಿಲ್ಲ. ಪ್ರತಿವಾದಿಗೆ ಅನುಕೂಲಿಸುವಂತೆ ಅರ್ಥಮಾಡಿದಲ್ಲಿ ಬರಾವರ್ದಾರನು ಹಕ್ಕುದಾರರಿಲ್ಲದೆ ಮೃತಪಟ್ಟರೆ ಇವನಿಗೆ ಬಾಧ್ಯತೆ ಉಂಟಾಗುವದು. ಆದಕಾರಣ ಡೆಪ್ಯುಟಿಕಮಿಷನರವರ ಆರ್ಡರನ್ನು ಬದಲಾಯಿಸಿ ವಾದಿಯ ಹೆಸರಿಗೆ ಪಟೇಲಿ ಹಕ್ಕನ್ನು ದಾಖಲ್ಮಾಡಲು ಅಪ್ಪಣೆ ಮಾಡಿರುತ್ತೆ.

೧೯೦೮—೦೯ನೇ ಸಾಲಿನ ೫೧ನೇ ನಂಬರು ಅಪೀಲು ಮೊಕದ್ದಮೆ.

| ವಾದಿ. | | ಪ್ರತಿವಾದಿ. |
|---|---|---|
| ತಿಮ್ಮೇಗೌಡ. | *vs.* | ಕಪಿನಿಗೌಡ. |

ಕುಣಿಗಲ್ ತಾ|| ಚಿಕ್ಕ ಮಳಲವಾಡಿ ಪಟೇಲಿ ನೌಕರಿಯನ್ನು ಆದಿಯಲ್ಲಿ ಮುತ್ತೇಗೌಡನು ನಡೆಸುತ್ತಿದ್ದು ನಂತರ ಇವನ ಮಗ ತಿಮ್ಮೆಗೌಡನು ೧೮೬೩—೬೪ನೆ ಸಾಲಿನವರಿಗೆ ನಡಿಸುತ್ತಿದ್ದನು. ತಿಮ್ಮೆಗೌಡನು ಫನತಿಪಟ್ಟ ಕಾಲದಲ್ಲಿ ಇವನ ಫನತಿ ಮಗನ ಮಗ ವಾದಿಯು ಮೈನರಾಗಿದ್ದನು. ತಿಮ್ಮೆಗೌಡನು ಗತಿಸಿದ ತರುವಾಯ ಪ್ರತಿವಾದಿಯ ತಂದೆ ಕಪಿನಿಗೌಡನೂ ಒಬ್ಬ ಹಕ್ಕುದಾರನಾಗಿದ್ದದ್ದರಿಂದ ಪಟೇಲಿ ಕೆಲಸಗಳನ್ನು ನೋಡುತ್ತಿದ್ದು, ೧೮೭೫—೭೬ನೆ ಸಾಲಿನಲ್ಲಿ ಪಟೇಲಿ ಬರಾವರ್ದು ಇವನ ಹೆಸರಿಗೆ ರಿಜಸ್ಟರಾಯಿತು. ೧೮೮೫—೮೬ರಲ್ಲಿ ಕಪಿನೇಗೌಡನು ವೃದ್ಧಾಪ್ಯ ಮತ್ತು ಅಶಕ್ತಿ ಸಬಬು ಪಟೇಲಿಯನ್ನು ತನ್ನ ಮಗ ಪ್ರತಿವಾದಿಯ ಹೆಸರಿಗೆ ವರ್ಗಮಾಡಿಸಿದನು. ವಾದಿಯು ಇದರಮೇಲೆ ಡೆಪ್ಯುಟಿ ಕಮಿಷನರವರ ಕೋರ್ಟಿನಲ್ಲಿ ತನ್ನ ಹಕ್ಕನ್ನು ಸ್ಥಾಪಿಸಲು ದಾವಾ ಮಾಡಲು ಕಪಿನಿಗೌಡನು ಗುಮಾಸ್ತೆ ತರೀಕು ಕೆಲಸಮಾಡಿದನೆಂಬುವದನ್ನೂ, ಮತ್ತು ತನ್ನ ಹಕ್ಕಿಗೆ ವಿರೋಧವಿಲ್ಲದ ರೀತಿ ನೌಕರಿಯು ಸ್ವಾಧೀನಾನುಭವದಲ್ಲಿದ್ದನೆಂಬುವದನ್ನೂ, ರುಜುವಾತುಮಾಡಲಿಲ್ಲವಾಗಿ ಡೆಪ್ಯುಟಿ ಕಮಿಷನರವರು ಮೊಕದ್ದಮೆಯನ್ನು ಡಿಸ್ಮಿಸ್‌ಮಾಡಿದರು. ಇದರಮೇಲೆ ವಾದಿ ತಿಮ್ಮೇಗೌಡನು ಗವರ್ನ್ಮೆಂಟಿನಲ್ಲಿ ಅಪೀಲುಮಾಡಲು, ಪಾರ್ಟಿಗಳಿಬ್ಬರೂ ತಮ್ಮ ಆಸ್ತಿಗಳನ್ನು ವಿಭಾಗಮಾಡಿಕೊಂಡು ಪಟೇಲಿ ನೌಕರಿಯನ್ನು ಪ್ರತಿವಾದಿ ಮತ್ತು ಇವನ ಸಂತತಿಯವರು ಅವಿಚ್ಛಿನ್ನವಾಗಿ ನೋಡಿಕೊಂಡು ಬರಬಹುದೆಂತಲೂ ಪ್ರತಿವಾದಿಯು ಸಂತತಿಯವರು ನೌಕರಿಗೆ ಸಂಬಂಧಪಟ್ಟ ಅರ್ಧ ಪ್ರೋಟಗಿಯನ್ನು ವಾದಿಗೆ ಕೊಡಬೇಕೆಂತಲೂ ಒಪ್ಪಿಕೊಂಡು ಒಂದು ರಿಜಿಸ್ಟರು ದಸ್ತಾವೇಜನ್ನು ಹಾಜರ್ಮಾಡಿದ್ದರಮೇಲೆ ಗೌರ್ನಮೆಂಟಿನವರು ಮೊಕದ್ದಮೆಯನ್ನು ೧೮೮೭ನೇ ಇಸವಿಯಲ್ಲಿ ಡಿಸ್ಮಿಸ್‌ಮಾಡಿದರು.

ಪ್ರತಿವಾದಿಯು ತಕರಾರಿಲ್ಲದೆ ಪಟೇಲಿ ನೌಕರಿಯನ್ನು ೧೯೦೪ವರಿಗೆ

ನಡಿಸುತ್ತಿದ್ದು ಇದೇ ವರ್ಷದಲ್ಲಿ ಏನೋ ತಪ್ಪಿಗೋಸ್ಕರ ಸಸ್ಪೆಂಡುಮಾಡ
ಲ್ಪಟ್ಟದ್ದರಿಂದ ವಾದಿಯು ಆಕ್ಟಿಂಗ್ ಪಟೇಲನಾಗಿ ನೇಮಿಸಲ್ಪಟ್ಟನು. ಸ
ಸ್ಪೆಂಡ್ ಕಾಲವು ಪೂರೈಸಿದನಂತರ ಪಟೇಲಿ ಚಾರ್ಜನ್ನು ಪ್ರತಿವಾದಿಗೆ ವಾಪ
ಸುಕೊಡುವಂತೆ ಡೆಪ್ಯುಟಿ ಕಮಿಷನರವರು ವಾದಿಗೆ ಆರ್ಡರ್ಮಾಡಿದರು. ಇ
ದರಮೇಲೆ ಇವನು ರೆವಿನ್ಯೂ ಕಮಿಷನರವರಲ್ಲಿ ಅಪೀಲುಮಾಡಲು ತಿಮ್ಮೆ
ಗೌಡನು ಚಾರ್ಜು ಕೊಡದೆ ತಕರಾರು ಮಾಡುವದು ನ್ಯಾಯವಲ್ಲವೆಂತಲೂ,
ಹಾಗೆ ಇವನಿಗೆ ಏನಾದರೂ ಹಕ್ಕಿರುವ ಪಕ್ಷದಲ್ಲಿ ಬೇರೆ ದಾವ ತರಬೇಕೆಂದೂ
ಹುಕುಂಮಾಡಿದರು. ನಂತರ ವಾದಿಯು ತಾನು ಜ್ಯೇಷ್ಠ ಸಂತತಿಗೆ ಸೇ
ರಿರುವದರಿಂದಲೂ, ಕರಾರು ಪ್ರಕಾರ ತನಗೆ ಬರಬೇಕಾದ ಅರ್ಧ ಪ್ರೋಟಗಿ
ಯನ್ನು ಪ್ರತಿವಾದಿಯು ಸರಿಯಾಗಿ ಸಲ್ಲಿಸುತ್ತಿಲ್ಲವಾದ್ದರಿಂದಲೂ ಪಟೇಲಿ
ಕೆಲಸಕ್ಕೆ ತನ್ನ ಹಕ್ಕನ್ನು ಸ್ಥಾಪಿಸಲು ಪುನಃ ದಾವ ತಂದನು.

ಗೌರ್ನಮೆಂಟಿನವರ ತೀರ್ಮಾನ.—೧೮೮೭ನೆ ಸಾಲಿನಲ್ಲಿ ವಾದಿ
ಯು ಇದೇ ಪ್ರತಿವಾದಿಯ ಮೇಲೆ ಪಟೇಲಿ ನೌಕರಿಯ ಹಕ್ಕಿಗೋಸ್ಕರ
ವ್ಯಾಜ್ಯ ತಂದಿರುತ್ತಾನೆ. ಅವರವರೇ ಸ್ವಂತದಲ್ಲಿ ಕರಾರು ಮಾಡಿಕೊಂ
ಡು ರಾಜಿಯಾದ್ದರಿಂದ ಈ ಮೊಕದ್ದಮೆಯನ್ನು ಗೌರ್ನಮೆಂಟಿನವರು
ಡಿಸ್ಮಿಸ್ಮಾಡಿದರು. ಈ ಆರ್ಡರು ಈ ವಿಚಾರದಲ್ಲಿ ರೆಸ್ ಜುಡಿಕೇಟಾವಾಗಿ
(Res Judicata) ಪರಿಣಮಿಸುವದರಿಂದ ವಾದಿಗೆ ಪುನಃ ಹೊಸ ದಾವ ತ
ರಲು ಅವಕಾಶವಿರುವದಿಲ್ಲ. ರಿಜಸ್ಟರು ಕರಾರು ಪ್ರಕಾರ ತನಗೆ ನ್ಯಾಯ
ವಾಗಿ ಉಂಟಾಗಿರುವ ಹಕ್ಕುಗಳನ್ನು ವಾದಿಯು ಹೊಂದಬಹುದು. ಆದ್ದ
ರಿಂದ ಪ್ರಸಕ್ತ ಅಪೀಲನ್ನು ಡಿಸ್ಮಿಸ್ಮಾಡಿರುತ್ತೆ.

———o———

## The Conservation of Soil Moisture. *

## ಭೂಮಿಯಲ್ಲಿ ತನುವನ್ನು ನಿಲ್ಲಿಸುವ ವಿಚಾರ.

ಮುಂಗಾರು ಬಿತ್ತನೆಕಾಲದಲ್ಲಿ ಸಕಾಲದಲ್ಲಿ ಬಿತ್ತುವದಕ್ಕೆ ಬದಲಾ
ಗಿ ಒಂದು ವಾರ ಸಾವಕಾಶಮಾಡಿ ಬಿತ್ತನೆ ಮಾಡಿದ್ದೇ ಆದರೆ ಕಾಳಿನ ಉ

* ಅಗ್ರಿಕಲ್ಚರಲ್ ಗೆಜೆಟ್, ಜೂನ್ ೧೯೦೯.

ತ್ಪತ್ತಿಯು ಕಮ್ಮಿಯಾಗುವದಾಗಿ ಒಂಟೇರಿಯು ವ್ಯವಸಾಯಕ ಕಾಲೆಜಿನಲ್ಲಿ ನಡೆದ ಅಜಮಾಯಿಷಿಗಳಿಂದ ಗೊತ್ತಾಗುತ್ತೆ. ಬತ್ತನೆಯಲ್ಲಿ ಪ್ರತಿಯೊಂದು ದಿನದ ಸಾವಕಾಶಕ್ಕೂ ಉತ್ಪತ್ತಿಯಲ್ಲಿ ಎಕರೆ ಒಂದಕ್ಕೆ ಓಟ್ಸ್ ಧಾನ್ಯವು ೫೭ ಪೌಂಡು ತೂಕ, ಜವೆ ಗೋಧಿಯು ೫೨ ಪೌಂಡು, ಗೋಧಿಯು ೭೯ ಪೌಂಡು, ಬಟಾಣಿಯು ೨೩ ಪೌಂಡು ಕಮ್ಮಿಯಾಗುತ್ತೆ. ಭೂಮಿಯಲ್ಲಿ ತನುವು ಆರಿಹೋಗಿ ಕಡಮೆಯಾಗುವದೇ ಇದಕ್ಕೆ ಕಾರಣ.

---

ಪೈರಿಗೆ ಬೆಳೆವಳಿಕೆಯ ಕಾಲದಲ್ಲಿ ಮೇಲೆ ಬೀಳುವ ನೀರಿಗೆ ೨।ರಷ್ಟು ನೀರು ಹೆಚ್ಚಾಗಿ ಸರಾಸರಿ ಬೇಕಾಗುತ್ತೆ. ಆದ್ದರಿಂದ ಬೆಳವಳಿಕೆ ಇಲ್ಲದಿರುವ ಕಾಲಗಳಲ್ಲಿ ಬೇಕಾಗುವಷ್ಟು ನೀರನ್ನು ಸಂಗ್ರಹಿಸಿಡುವದು ಅವಶ್ಯಕ. ಕೆಲವು ಕಾಲಗಳಲ್ಲಿ ನೀರು ವಿಶೇಷ ಹೆಚ್ಚಾಗುವದರಿಂದ ಹೆಚ್ಚು ನೀರು ಬಸಿದುಹೋಗುವ ರೀತಿ ಅವಕಾಶ ಕೊಡುವದು ಅವಶ್ಯಕ. ಒಂದುವೇಳೆ ಮಳೆಗಾಲವು ಹೆಚ್ಚಾದಲ್ಲಿ ಇದರಿಂದಾಗಬಹುದಾದ ಅನಾನುಕೂಲವನ್ನು ತಪ್ಪಿಸುವದಕ್ಕಾಗಿ ಮಾಡುವ ವ್ಯವಸಾಯವು ಮಳೆ ಕಡಮೆಯಾದ ಕಾಲಗಳಲ್ಲಿಯೂ ಸಹ ಅನುಕೂಲಿಸುತ್ತದೆ. ಹೇಗಂದರೆ, ಭೂಮಿಯು ಸಡಲಿದ್ದರೆ ನೀರು ಹೀರುವದಕ್ಕೆ ಹ್ಯಾಗೆ ಅನುಕೂಲವೋ ಹಾಗೆಯೇ ನೀರು ನಿಲ್ಲುವದಕ್ಕೂ ಅನುಕೂಲವಾಗಿರುತ್ತದೆ.

---

ತನುವು ಮುಖ್ಯವಾಗಿ ಹಬೆ ರೂಪವಾಗಿ ಆರಿಹೋಗುತ್ತದೆ. ಭೂಮಿಯಲ್ಲಿ ಈ ತನುವನ್ನು ನಿಲ್ಲಿಸುವದು ಮುಖ್ಯ ವಿಚಾರ. ಇದಕ್ಕೆ ಭೂಮಿಯಮೇಲೆ ಒಂದು ಹೊದ್ದಿಕೆಯಂತೆ ಮಾಡಿ ಮುಚ್ಚುವದು (Mulch) ಮುಖ್ಯ ಉಪಾಯ. ಈರೀತಿ ಮಾಡುವದರಲ್ಲಿ ಅನೇಕ ಕ್ರಮಗಳುಂಟು. ಸಾಧಾರಣವಾಗಿ ರೂಢಿಯಲ್ಲಿ ಮಣ್ಣಿನಿಂದ ಮುಚ್ಚುತ್ತಾರೆ. ಹೇಗಂದರೆ, ಮೇಲ್ಮಣ್ಣನ್ನು ಸಡಲಿಸುವದರಿಂದ ಇದು ಅಡಿ ನೆಲಕ್ಕೆ ಹೊದ್ದಿಕೆಯಂತೆ ಆಗಿ ಒಳಗಿನ ತನುವು ಆರಿಹೋಗದೆ ಮೇಲಿನ ಮಣ್ಣು ಮಾತ್ರ ಒಣಗಲಾಗುತ್ತದೆ. ಅದರ ಅನುಕೂಲಗಳನ್ನು ಸಾಧಾರಣ ರೈತನು ತಿಳಿಯಲಾರನು. ಮೂರು ಅಂಗುಲ ಇಂಥಾ ಮಣ್ಣು ಹೊದ್ದಿಕೆಯನ್ನು ಏರ್ಪಡಿಸಿ ಅಜಮಾಯಿಷಿ ಮಾಡಿ ನೋಡಿದ್ದರಲ್ಲಿ ಇದರಲ್ಲಿ ಈರೀತಿ ಮಾಡದೆ ಇದ್ದಭೂ

ಮಿಯಲ್ಲಿ ಆರಿಹೋಗುವ ತನುವಿಗಿಂತಲೂ ಶೇಕಡಾ ೩೬ರಷ್ಟು ಆರಿಹೋಗುವದು ಕಡಮೆಯಾಯಿತು. ಹೊದ್ಚಿಕೆಯು ದಪ್ಪಕ್ಕನುಸಾರವಾಗಿ ತನುವು ಆರಿಹೋಗುವದು ಶೇಕಡಾ ೨೫ರಿಂದ ೫೦ರ ವರೆಗೆ ಕಡಮೆಯಾಗುತ್ತೆ. ಭೂಮಿಯು ಹಸನಾಗಿರುವಾಗಲೂ ಮತ್ತು ಬೇಸಿಗೆಯಲ್ಲಿ ಪೈರಿಗೆ ತೊಂದರೆಯಾಗದೆ ಇದ್ದಲ್ಲಿ ಭೂಮಿಯನ್ನು ಸಡಲಿಸಿ ಈರೀತಿ ಹೊದ್ಚಿಕೆಯನ್ನು ಕಲ್ಪಿಸುವದು ಬಹಳ ಪ್ರಯೋಜನಕರ. ಮುಂಗಾರಿನಲ್ಲಿಯೂ ಭಾರಿ ಮಳೆ ಬಂದನಂತರವೂ ಈರೀತಿ ಮಾಡುವದರಲ್ಲಿ ಒಂದು ವಾರ ಸಾವಕಾಶಮಾಡಿದ್ದೇ ಆದರೆ ೧½ ಇಂಚು ಮಳೆಯಷ್ಟು ತನುವು ಆರಿಹೋಗುವದು. ಅಂದರೆ ಮಳೆ ಇಲ್ಲದ ಕಾಲದಲ್ಲಿ ಪೈರನ್ನು ೨ ವಾರ ಸುಧಾರಿಸುವದಕ್ಕೆ ಬೇಕಾಗುವಷ್ಟು ನೀರು ಆರಿಹೋಗುತ್ತೆ. ಇದರಿಂದ ಸಾಧ್ಯವಾದಷ್ಟು ಮುಂದಾಗಿಯೇ ಬಿತ್ತನೆ ಮಾಡುವದು ಒಳ್ಳೇದೆಂಬುದು ವ್ಯಕ್ತಪಡುತ್ತೆ.

ಈರೀತಿ ಮೇಲ್ಭಾಗವನ್ನು ಸಡಲಿಸುವದರಿಂದ ಅಡಿಯಲ್ಲಿ ಹೆಚ್ಚು ತನುವು ಆರಿಹೋಗುತ್ತೆ. ಬಹಳ ವಿಸ್ತೀರ್ಣವು ಗಾಳಿಗೆ ಸೋಕುವದೇ ಇದಕ್ಕೆ ಕಾರಣ. ಆದರೆ ಈವಿಧವಾಗಿ ಆರಿಹೋಗುವದು ಸಡಲಿದ ಮಣ್ಣಿನಿಂದ ಮಾತ್ರವೇ. ಮೇಲಿನ ಮಣ್ಣು ಒಣಗಲಾಗಲು ಅಡಿಯ ತನುವು ಆರಿಹೋಗುವದು ಬಹಳ ಕಡಮೆ. ಮೇಲ್ಮಣ್ಣು ಪುನಃ ಗಟ್ಟಿಯಾಗಿಯೂ ಹಸಿಯದಾಗಿಯೂ ಇದ್ದರೆ ಇದನ್ನು ಪುನಃ ಕೆದಕಬೇಕು. ಇದಕ್ಕಾಗಿ ಬಹಳ ಆಳವಾಗಿ ಮಣ್ಣನ್ನು ಕೆದಕಬಾರದು. ಏಕೆಂದರೆ, ಇದು ಮೇಲ್ಮಣ್ಣು, ಒಳ್ಳೇ ಸಾರವಾದ್ದು; ಇದು ಒಣಗಲಾದರೆ ಇದರಿಂದ ಸಸಿಗಳು ಆಹಾರವನ್ನು ತೆಗೆದುಕೊಳ್ಳಲಾರವು. ಮೇಲ್ಮಣ್ಣನ್ನು ಬಹಳ ತೆಳ್ಳಗೆ ಕೆದಕಿ ಭೂಮಿಯ ತನುವನ್ನು ಪೋಲು ಮಾಡದೆ ಕಾಪಾಡಬೇಕು. ಕಾಲಕ್ಕೂ ಪೈರಿಗೂ ಅನುಸಾರವಾಗಿ ಎಷ್ಟು ಮೇಲ್ಮಣ್ಣನ್ನು ಕೆದಕಬೇಕೆಂಬುದನ್ನು ನಿರ್ಧರಿಸಬೇಕು.

ತನುವನ್ನು ಭೂಮಿಯಲ್ಲಿ ನಿಲ್ಲಿಸೋಣವು ಮುಂಗಾರು ಬಿತ್ತನೆಯ ಕಾಲದಲ್ಲಿ ಅವಶ್ಯಕ. ಮುಂದಾಗಿ ಬಿತ್ತನೆ ಮಾಡುವದರಿಂದ ಆರಿಹೋಗುವ ತನುವು ಪೈರಿಗೆ ಒದಗುತ್ತೆ. ಆದರೆ ಬಹಳ ಆತುರದಿಂದ ಬಿತ್ತನೆ

ಮಾಡುವನೂ ಅಹುದು. ಹೇಗಂದರೆ, ಕೇವಲ ಮುಂದಾಗಿ ಬಿತ್ತನೆ ಮಾಡುವದಕ್ಕಿಂತ ಸ್ವಲ್ಪ ಸಾವಕಾಶದಿಂದ ಮಾಡುವದು ಮೇಲು. ಕೇವಲ ಮುಂದಾದರೆ ಪೈರು ಬಲಿಯದೆ ನರಟಿಹೋಗುತ್ತಿಯಲ್ಲದೆ ಬೀಜವು ಭೂಮಿಯಲ್ಲಿ ಕೊಳೆಯುತ್ತೆ. ಇತರ ಕಾಲಗಳಿಗಿಂತ ಮುಂಗಾರಿನಲ್ಲಿ ಉಳುಮೆ ಮಾಡಿ ಭೂಮಿಯಲ್ಲಿ ತನುವನ್ನು ನಿಲ್ಲಿಸುವದು ಒಳ್ಳೇದು. ಈಕಾಲದಲ್ಲಿ ಭೂಮಿಯ ಮೇಲ್ಗಡೆಯು ಒದ್ದೆಯಾಗಿರುವಕಾರಣ ಒಳಗಿನ ತನುವು ಹೆಚ್ಚು ಜಾಗ್ರತೆ ಆರಿಹೋಗುತ್ತದೆ. ಭೂಮಿಯನ್ನು ಅನೇಕಾವರ್ತಿ ಕೆದಕುವದು ಅನುಚಿತ. ಮುಖ್ಯವಾಗಿ ಒಳಗಿನ ತನುವು ಆರಿಹೋಗದರೀತಿ ಮೇಲ್ಗಡೆ ಒಣಗಲಾದ ಪುಡಿಮಣ್ಣಿನ ಹೊದ್ಪಿಕೆಯನ್ನು ಕಲ್ಪಿಸಿದರೆ ಸಾಕು. ವಿಸ್ತೀರ್ಣವು ಭಾರಿಯಾಗಿದ್ದಲ್ಲಿ ಕುಂಟೆಯಿಂದ ಭೂಮಿಯನ್ನು ಕೆರೆಯುವದರಿಂದ ಕೇವಲ ಅನುಕೂಲವಾಗುತ್ತದೆ.

ತನುವನ್ನು ನಿಲ್ಲಿಸಲು ಮೇಲ್ಮಣ್ಣನ್ನು ಕೆದಕುವದು ಒಂದೇ ವಿಧಾನವಲ್ಲ. ಗೊಬ್ಬರವನ್ನು ಹರಡುವದರಿಂದಲೂ ಈ ಅನುಕೂಲ ವುಂಟಾಗುತ್ತದೆ. ಇದರಿಂದ ಎರಡು ವಿಧವಾದ ಪ್ರಯೋಜನ ವುಂಟು. ಮಳೆ ಬಂದಾಗ ಗೊಬ್ಬರದ ಸಾರವು ಭೂಮಿಯಲ್ಲಿ ಇಳಿರಿ ಸಸ್ಯಾಹಾರವಾಗಿ ಒದಗುತ್ತದಲ್ಲದೆ ಮೇಲೆ ನಿಲ್ಲುವ ಕಸವು ತನುವು ಆರಿಹೋಗಲು ಅವಕಾಶ ಕೊಡದೆ ಒಳ್ಳೇ ಹೊದ್ಪಿಕೆಯಾಗುತ್ತೆ.

ನೀರು ಬಸಿಯದ ಜಮೀನುಗಳಿಗಿಂತ ಬಸಿದುಹೋಗುವ ಜಮೀನುಗಳಲ್ಲಿ ಪೈರು ನೀರು ಕಡಮೆಯಾದರೂ ತಡದು ಬೆಳೆಯುತ್ತದೆಂಬುವದು ಎಲ್ಲರೂ ತಿಳಿದಿರುತ್ತಾರೆ. ಏಕಂದರೆ, ನೀರು ಬಸಿದು ಹೋಗುವಂತೆ ಮಾಡುವದರಿಂದ ಭೂಮಿಯ ರಚನೆಯು ಹಸನಾಗಿ ತನುವನ್ನು ಉಳಿಸಿಕೊಳ್ಳುವ ಶಕ್ತಿಯು ಹೆಚ್ಚುತ್ತದೆ.

ಗಾಳಿಯ ಏಟು ಕಡಿಮೆ ಮಾಡುವದರಿಂದಲೂ ಮತ್ತು ಬೇಲಿ ಹಾಕುವದರಿಂದಲೂ ಭೂಮಿಯಲ್ಲಿನ ತನುವು ಆರಿಹೋಗುವದು ಕಡಮೆ. ಗಾಳಿ ಜೋರಾಗಿ ಬೀಸುವ ಕಾಲದಲ್ಲೂ ಮತ್ತು ಪುಡಿ ಪುಡಿಯಾಗುವ ಮ

ಣ್ಣಿನ ಜವಿಾನುಗಳಿಗೂ ಇದರಿಂದ ಅನುಕೂಲತೆ ಹೆಚ್ಚು. ಆದ್ದರಿಂದ ಜಂಗಲು ಪ್ರದೇಶಗಳನ್ನು ಬೈಲು ಮಾಡುವದರಿಂದಲೂ ಮರಗಳನ್ನು ನಾಶಪಡಿಸುವದರಿಂದಲೂ ಅನಾನುಕೂಲ ವುಂಟಾಗುತ್ತೆಂಬುದು ಇದರಿಂದ ತಿಳಿಯಬಹುದು.

---

## Notifications.

## ಇಸ್ತಿಹಾರ್‌ನಾಮೆಗಳು.

೨೨ನೆ ಜುಲೈ ೧೯೦೯. ನಂ|| ೯೭೨.

ಚಿಕ್ಕಮಗಳೂರು ತಾಲ್ಲೂಕು ಆಕ್ಟಿಂಗ್ ಅಮಲ್ದಾರ್ ಮೆ|| ಯಸ್. ಚಕ್ರಪಾಣಿಯ್ಯಂಗಾರ್ರಿಗೆ ಮಂಜೂರಾಗಿದ್ದ ೧೦ ದಿನಗಳ ಪ್ರಿವಿಲೇಜ್ ರಜಾ ಪೈಕಿ ಅವರು ೮ ದಿನಗಳು ಮಾತ್ರ ಉಪಯೋಗಿಸಿಕೊಂಡಿರುವದರಿಂದ ನಿಂತ ೨ ದಿನಗಳ ರಜಾ ರದ್ದುಮಾಡಿರುತ್ತೆ.

---

೨೪ನೆ ಜುಲೈ ೧೯೦೯. ನಂ|| ೧೧೪೬.

ತರೀಕೆರೆ ತಾಲ್ಲೂಕು ಅಮಲ್ದಾರ್ ಮೆ|| ಯಂ. ಕೃಷ್ಣಸ್ವಾಮ್ಯಯ್ಯಂಗಾರ್ರಿಗೆ ಮಂಜೂರಾಗಿದ್ದ ೧೫ ದಿನಗಳ ಪ್ರಿವಿಲೇಜ್ ರಜಾ ಪೈಕಿ ಅವರು ೧೪ ದಿನಗಳು ಮಾತ್ರ ಉಪಯೋಗಿಸಿಕೊಂಡಿರುವದರಿಂದ ನಿಂತ ದಿನದ ರಜಾ ರದ್ದುಮಾಡಿರುತ್ತೆ.

---

೨೮ನೆ ಜುಲೈ ೧೯೦೯. ನಂ|| ೧೩೦೭.

ಮೈಸೂರು ಸರ್ವಿಸ್ ರೆಗ್ಯುಲೇಷನ್ಸ್ ೧೭೭ನೆ ಪ್ರಕರಣದ ಮೇರೆ ತರೀಕೆರೆ ತಾಲ್ಲೂಕು ಅಮಲ್ದಾರ್ ಮೆ|| ಯಂ. ಕೃಷ್ಣಸ್ವಾಮ್ಯಯ್ಯಂಗಾರ್ರಿಗೆ ಜುಲೈ ೧೪ನೆ ತಾರೀಖು ಲಾಗಾಯಿತು ೧೦ ದಿನಗಳ ಪ್ರಿವಿಲೇಜ್ ರಜಾ ಮಂಜೂರ್ಮಾಡಿಧೆ.

ಇವರ ಗೈರ್‌ಹಾಜರಿಯಲ್ಲಿ ತಾಲ್ಲೂಕು ಶಿರಸ್ತೇದಾರ್ ಕೋನೇರಿರಾಯರು ತಾಲ್ಲೂಕು ಛಾರ್ಜಿನಲ್ಲಿರತಕ್ಕದ್ದು.

---

## Potash Manures *
## ಪೊಟಾಷ್ ಗೊಬ್ಬರಗಳು.

ಪೊಟಾಷ್ ಗೊಬ್ಬರಗಳನ್ನುಪಯೋಗಿಸುವದಕ್ಕೆ ಮುಂಚೆ ಭೂಗುಣವನ್ನು ಅಜಮಾಯಿಷಿಮಾಡಿ ತಿಳಿದುಕೊಳ್ಳುವದು ಅವಶ್ಯಕ. ಹೇಗಂದರೆ, ಜಡಿ ಭೂಮಿಗಳಲ್ಲಿ ಪೊಟಾಷ್ ಇರುವದರಿಂದ ಅಂಥಾ ಭೂಮಿಗಳಿಗೆ ಇದನ್ನು ಹಾಕುವದು ಫಾಯಿದೆಕರವಲ್ಲ. ಇಂಥಾ ಭೂಮಿಗಳಿಗೆ ಇತರ ಗೊಬ್ಬರಗಳನ್ನು ಹಾಕುವದರಿಂದ ಇವುಗಳಲ್ಲಿರುವ ಪೊಟಾಷ್ ಗೊಬ್ಬರಗಳು ಉಪಯೋಗಕ್ಕೆ ಬರುತ್ತವೆ.

ನೈಟ್ರೊಜೆನ್ ಪದಾರ್ಥವು ಬೆಳವಳಿಕೆಯನ್ನೂ ಗಾತ್ರವನ್ನೂ ವೃದ್ಧಿಪಡಿಸುತ್ತದೆ. ಜಾಗ್ರತೆ ಬಲಿಯುವದಕ್ಕೆ ಫಾಸ್ಫೇಟು ಅಂದರೆ ರಂಜಕಪದಾರ್ಥ ಕಾರಣವಾಗುತ್ತದೆ. ಪೊಟಾಷ್ ಉಪಯೋಗದಿಂದ ಕಾಳಿನ ಗುಣವು ಉತ್ತಮಪಡುತ್ತದೆ. ಸಾಮಾನ್ಯವಾಗಿ ಗೋಧಿ ಬೆಳೆಗೆ ನೈಟ್ರೊಜನ್ ಮತ್ತು ಫಾಸ್ಫೇಟು ಉಪಯೋಗಿಸುವದರಿಂದ ಕಾಳು ಉತ್ಪತ್ತಿಯು ಜಾಸ್ತಿಯಾಗುತ್ತೆ. ಪೊಟಾಷ್‌ನಿಂದ ಧಾನ್ಯಗಳು ದಡೂತಿಯಾಗಿಯೂ ಉತ್ತಮವಾಗಿಯೂ ಆಗುತ್ತೆ. ತತ್ರಾಪಿ ನೆಲಗಡ್ಲೆ, ಹುರುಳಿ, ಹೊಗೆಸೊಪ್ಪು, ಕೋಸ್‌ಗಡ್ಡೆ, ಉರಳಗಡ್ಡೆ ಮೊದಲಾದವುಗಳ ಬೆಳೆಗೆ ಪೊಟಾಷ್ ಗೊಬ್ಬರವು ಬಹಳ ಅನುಕೂಲಪಡುತ್ತೆ. ಇದೇರೀತಿಯಾಗಿ ಫಲವೃಕ್ಷಗಳಿಗೂ ಇದರಿಂದ ಪ್ರಯೋಜನವುಂಟು. ಹೇಗಂದರೆ, ಹಣ್ಣುಗಳಿಗೆ ತತ್ರಾಪಿ ಹುಳಿಯಾದವುಗಳಿಗೆ ಒಳ್ಳೆ ಬಣ್ಣವೂ, ಸುವಾಸನೆಯೂ ಬರುತ್ತದೆ. ಬರ್ಹಾಂಪೂರ್ ಜೈಲಿನಲ್ಲಿ ಅನೇಕ ನಿಂಬೇಗಿಡಗಳು ಚೆನ್ನಾಗಿ ಬೆಳೆದಿದ್ದಾಗ್ಯೂ ಹಣ್ಣು ಬಿಡುತ್ತಿರಲಿಲ್ಲ. ಪೊಟಾಷ್ ಗೊಬ್ಬರವನ್ನು ಇವುಗಳಿಗೆ ಹಾಕಿದ್ದರಿಂದ ಅದೇ ವರ್ಷವೆ ವಿಶೇಷ ಫಲ ಬಿಟ್ಟವಂತೆ. ಬಂಗಾಳಾದಲ್ಲಿ ಬಾಳೆಗಿಡಕ್ಕೆ ಮರದ ಬೂದಿಯನ್ನು ಸರ್ವೋತ್ತಮವಾದ ಗೊಬ್ಬರವೆಂದು ಭಾವಿಸಿರುತಾರೆ. ಪೊಟಾಷ್ ಬೂದಿಯು ಚುಟ್ಟ ತಯಾರ್ಮಾಡುವದಕ್ಕೆ ಉಪಯೋಗಪಡುವ ಹೊಗೆಸೊಪ್ಪನ್ನು ಬೆಳೆಯುವದಕ್ಕೆ ಉತ್ತಮವಾದ ಗೊಬ್ಬರ. ಇಷ್ಟೇಅಲ್ಲದೆ ಹುಲ್ಲು ಮತ್ತು ಕಾಳು ಪೈರಿಗೆ ಇದು ಬಹಳ ಒಳ್ಳೇದು. ಇದರಿಂದ ದಂಟುಗಳು ಬಲವಾ

* ಅಗ್ರಿಕಲ್ಚರಲ್ ಜರ್ನಲ್ ಆಫ್ ಇಂಡಿಯಾ, ಜುಲೈ—೧೯೦೮.

ಗಿ ಒಳ್ಳೆ ಕಾಳಾಗುತ್ತದೆ. ಈ ಗೊಬ್ಬರದಿಂದ ಮತ್ತೊಂದು ಗುಣವೇನೆಂದರೆ ಗಿಡಗಳಿಗೆ ಬೂದು ರೋಗಗಳು ಅಂಟುವದು ಕಮ್ಮಿ. ಇದರಿಂದ ಗಿಡಗಳು ಬಲವಾಗಿ ಬೆಳೆಯುವದೇ ಇದಕ್ಕೆ ಕಾರಣ. ಪೊಟಾಷ ಗೊಬ್ಬರವನ್ನುಪಯೋಗಿಸುವದರಿಂದ ಗಿಡಗಳ ಬೆಳವಳಿಕೆಯ ಕಾಲವು ಹೆಚ್ಚುತ್ತದೆ. ಆದ್ದರಿಂದ ಉರಳಗಡ್ಡೆಯಂಥಾ ಪೈರುಗಳಿಗೆ ಇದು ಅನುಕೂಲ. ಆದರೆ ಜವೆಗೋಧಿ ಪೈರಿಗೆ ಇದು ಅನಾನುಕೂಲವಾಗಿ ಪರಿಣಮಿಸುತ್ತೆ. ಸಾಧಾರಣವಾಗಿ ಇಂಡಿಯಾದೇಶದಲ್ಲಿ ಮನೆ ಬೂದಿಯನ್ನು ಪೊಟಾಷ್ ಗೊಬ್ಬರಕ್ಕಾಗಿ ಉಪಯೋಗಿಸುತ್ತಾರೆ. ಇಲ್ಲಿ ಸಿಕ್ಕುವ ಪೊಟಾಷ್ ಗೊಬ್ಬರಗಳಲ್ಲಿ ಪೊಟಾಸಿಯಂ ನೈಟ್ರೇಟ್ (Potassium Nitrate) ಮತ್ತು ದನದ ಗಂಜಲ ಈವೆರಡೂ ಬಹಳ ಉತ್ತಮವಾದವು. ಮತ್ತು ಪೊಟಾಸಿಯಂ ನೈಟ್ರೇಟ್ (Potassium Nitrate) ಎಂಬುವದು ಅಗ್ಗವಾಗಿಯೂ ಇರುತ್ತೆ.

---

## Occasional Notes.

## ವಿವಿಧ ವೃತ್ತಾಂತಗಳು.

ಕೆರೆ ಗೋಡನ್ನು ಗೊಬ್ಬರಕ್ಕಾಗಿ ಉಪಯೋಗಿಸುವದು ರೈತರಿಗೆ ಸಾಧಾರಣವಾಗಿ ತಿಳಿದಿದೆ. ಪ್ರತಿವರ್ಷವೂ ಒಳಗೆರೆಯಿಂದ ಗೋಡನ್ನು ಅಗೆದು ಜಮೀನುಗಳಿಗೆ ಹೇರುತ್ತಾರೆ. ಕೆಲವು ಪ್ರದೇಶಗಳಲ್ಲಿ ನಾಲಾ ಗೋಡು ಮಣ್ಣನ್ನು ತೆಗೆದುಕೊಳ್ಳುವ ಹಕ್ಕನ್ನು ಹರಾಜುಮಾಡುತ್ತಾರೆ. ಇದನ್ನು ರೈತರು ಬತ್ತದ ಗದ್ದೆಗಳಿಗೆ ಗೊಬ್ಬರವಾಗಿ ಉಪಯೋಗಿಸುತ್ತಾರೆ. ಖುಷ್ಕಿ ಜಮೀನುಗಳಿಗೆ ಇದೇರೀತಿ ಗೋಡು ಮಣ್ಣನ್ನು ಗೊಬ್ಬರವಾಗಿ ಹೊಲದಮೇಲೆ ಹರಡುವದಕ್ಕೆ ಉಪಯೋಗಿಸುತ್ತಾರೆ. ಕರಲು ಮತ್ತು ಜೌಗು ಭೂಮಿಗಳಿಗೂ ಉಪಯೋಗಿಸುವದುಂಟು. ನದಿಯ ಪ್ರಥಮ ಪ್ರವಾಹದ ಗೋಡಿನಲ್ಲಿ ಇತರ ಕಾಲದ ಪ್ರವಾಹದಲ್ಲಿ ಬರುವ ಗೋಡಿಗಿಂತಲೂ ಸಾರವು ಹೆಚ್ಚಾಗಿರುವದಂತೆ. ಏಕಂದರೆ, ಬಹಳ ಕಾಲದಿಂದ ಭೂಮಿಯಮೇಲೆ ಕೊಳೆತು ಬಿದ್ದುಇರುವ ಸೊಪ್ಪುಸದೆಗಳು ಇದರಲ್ಲಿ ಬಂದು ಸೇರುತ್ತೆ.—ಅಗ್ರಿಕಲ್ಚರಲ್ ಜರ್ನಲ್ ಆಫ್ ಇಂಡಿಯ.—ಜುಲೈ ೧೯೦೮.

V. B. Soobbiah & Sons, Printers, Bangalore.—1909.

THE MYSORE

# REVENUE & AGRICULTURAL GAZETTE.

ವಾಲ್ಯುಂ ೩.] ಭಾನುವಾರ, ೧೫ನೆ ಆಗಷ್ಟ್ ೧೯೦೯. [ನಂ. ೨೦.

## Contents.



## ಅನುಕ್ರಮಣಿಕೆ.



## The Mysore Dasara Exhibition, 1909. *

## ೧೯೦೯ನೆ ದಸರಾ ಎಗ್ಜಿಬಿಷನ್.

ಈ ವರುಷದ ಪ್ರದರ್ಶನವು ಹಿಂದಿನಂತೆ ಮೈಸೂರು ಪಟ್ಟಣದ

* ಮೈಸೂರು ಗೆಜೆಟ್, ೧೨—೮—೦೯.

ಲ್ಲಿ ಅಕ್ಟೋಬರ್ ೧೯ನೇ ತಾರೀಖಿನ ದಿನ ಪ್ರಾರಂಭವಾಗಿ ಅದೇ ಮಾಹೆ ೩೧ನೆ ತೇದಿಗೆ ಆಖೈರು ಮಾಡಲ್ಪಡುತ್ತೆ. ರಾಸುಗಳ ಪ್ರದರ್ಶನ ೨೫ನೆ ತಾರೀಖಿಗೆ ಪ್ರಾರಂಭವಾಗಿ ೨೮ಕ್ಕೆ ಆಖೈರಾಗುವದು. ಮೈಸೂರು ಸೀಮೆಯ ಉತ್ತಮ ತರಹಾ ರಾಸುಗಳನ್ನು ಖರೀದಿಗೆ ತೆಗೆದುಕೊಳ್ಳಲಿಚ್ಛೈಸುವವರಿಗೆ ಈ ಪ್ರದರ್ಶನವು ಒಳ್ಳೆ ಸಮಯವಾಗಿರುತ್ತದೆ.

ಈ ಕಾಲದಲ್ಲಿ ಫಲಪುಷ್ಪಗಳ ಪ್ರದರ್ಶನ ಒಂದು ನಡೆಯುವದು. ವ್ಯವಸಾಯ, ಕೈಗಾರಿಕೆ, ಎಂತ್ರಾಯುಧಗಳ ಪ್ರಯೋಜನ, ಬೆಲೆ, ತಯಾರಿ ಮತ್ತು ರಿಪೇರಿಗಳ ವಿಷಯವಾಗಿ ಇಂಗ್ಲೀಷು ಮತ್ತು ಕನ್ನಡ ಭಾಷೆಗಳಲ್ಲಿ ಉಪನ್ಯಾಸಗಳು ಮಾಡಲ್ಪಡುತ್ತೆ.

ಉಳುವ ಮತ್ತು ನೇಯುವ ಕಸಬುಗಳಲ್ಲಿ ಒಂದು ಪ್ರೋಟಾಪ್ರೋಟಿಯ ಪ್ರದರ್ಶನವೂ ನಡೆಸಲ್ಪಡುತ್ತೆ.

ಪ್ರದರ್ಶನೀಯ ವಸ್ತುಗಳನ್ನು ತಪಶೀಲಾಗಿ ನಮೂದಿಸಲು ಇಲ್ಲಿ ಸ್ಥಳಸಾಲದ್ದರಿಂದ ಅವುಗಳ ತರಗತಿಯನ್ನು ಮಾತ್ರ ಸಂಕ್ಷೇಪವಾಗಿ ಕಾಣಿಸಿರುತ್ತೇವೆ.

| ತರಗತಿ. | ಪದಾರ್ಥ. |
|---|---|
| I. | ತರಿ ಮತ್ತು ಕುಷ್ಕಿ ಪದಾರ್ಥಗಳು. |
| II. | ಸಸ್ಯಗಳು ಮತ್ತು ಬಾಗಾಯಿತು ಪದಾರ್ಥಗಳು. |
| III. | ಬಂಣಗಳು. |
| IV. | ಜಂಗ್ಲಿ ಪದಾರ್ಥಗಳು. |
| V. | ಸಕ್ಕರೆ, ಜೇನುತುಪ್ಪ, ಜೇನುಮೇಣ, ವಗೈರೆ. |
| VI. | ನಾರುಗಳು. |
| VII. | ಮೇವಾಗತಕ್ಕ ಗಿಡಗಳು. |
| VIII. | ಗೊಬ್ಬರಗಳು. |
| IX. | ವ್ಯವಸಾಯ ಸಂಬಂಧ ಯಂತ್ರಗಳು ಮತ್ತು ಮುಟ್ಟುಗಳು. |
| X. | ಕೈಗಾರಿಕೆ ಸಂಬಂಧ ಯಂತ್ರಗಳು ಮತ್ತು ಆಯುಧಗಳು. |
| XI. | ಕೈಗಾರಿಕೆ ಸಂಬಂಧ ಪದಾರ್ಥಗಳು. |

ಈ ಸಂಬಂಧವಾಗಿ ಇನ್ನೂ ಹೆಚ್ಚಿಗೆ ಸಂಗತಿಗಳನ್ನು ತಿಳಿಯಲಪೇ

ಕ್ಷಿಸುವವರು ಎಗ್ಸಿಬಿಷನ್ ಸೆಕ್ರೆಟರಿಯವರಿಗೆ ಸೀದಾ ಬರೆದುಕೊಳ್ಳಬಹುದು.

---

## Artificial Manures. *
## ತಯಾರಿಸಿದ ಗೊಬ್ಬರಗಳು.

ಗಿಡಗಳು ಭೂಮಿಯಲ್ಲಿರುವ ಕೆಲವು ಧಾತು ಪದಾರ್ಥಗಳನ್ನು ಹೀರಿ ಆಹಾರವಾಗಿ ಉಪಯೋಗಿಸುತ್ತವೆ. ಈ ಪದಾರ್ಥಗಳು ಜಮೀನಿನಲ್ಲಿದ್ದರೆ ಇದರ ಹುಲುಸೂ ಚೆನ್ನಾಗಿರುತ್ತದೆ. ಇವು ಭೂಮಿಯಲ್ಲಿ ಮಿತವಾಗಿರುವಕಾರಣ ಸಸ್ಯಾಹಾರವಾಗಿ ಉಪಯೋಗಪಟ್ಟಹಾಗೆಲ್ಲಾ ಇವನ್ನು ಪುನಃ ಭೂಮಿಯಲ್ಲಿ ಒದಗಿಸಲು ತಕ್ಕ ಅನುಕೂಲತೆಗಳನ್ನು ಕಲ್ಪಿಸದೇ ಇದ್ದರೆ, ಅಲ್ಪ ಸ್ವಲ್ಪ ಮಿಕ್ಕ ಈ ಪದಾರ್ಥಗಳು ಗಿಡಗಳಿಗೆ ಸಾಲದೆ ಹೋಗಿ ಪೈರು ಕ್ಷೀಣವಾಗಲು ಕಾರಣವಾಗುತ್ತೆ. ಆದ್ದರಿಂದ ದನವಿನ ಗೊಬ್ಬರ, ತಯಾರಿಸಿದ ಗೊಬ್ಬರ, ಅಥವಾ ಹಸಿ ಸಸಿ ಗೊಬ್ಬರ ಮುಂತಾದವುಗಳನ್ನು ಜಮೀನಿಗೆ ಹಾಕಿ ಇದರಲ್ಲಿ ಸಸ್ಯಾಹಾರವನ್ನು ಒದಗಿಸುತ್ತಾರೆ.

ದನವಿನ ಗೊಬ್ಬರದಂತೆ ತಯಾರಿಸಿದ ಗೊಬ್ಬರಗಳು ಭೂಮಿಯಲ್ಲಿ ಗಿಡಗಳಿಗೆ ಬೇಕಾಗುವ ವಿಸಿಷ್ಟ ಸಸ್ಯಾಹಾರಗಳನ್ನೂ ಒದಗಿಸಿ ಕೊಡುವದಿಲ್ಲ. ಇವು ಒಂದೆರಡು ಪದಾರ್ಥಗಳನ್ನು ಮಾತ್ರ ಒದಗಿಸುತ್ತವೆ. ಆದುದರಿಂದ ಜಮೀನಿನಲ್ಲಿ ಯಾವ ಯಾವ ಪದಾರ್ಥ ಕಮ್ಮಿಯಾಗಿರುತ್ತೊ ಅದಕ್ಕನುಗುಣವಾಗಿ ತಯಾರಿಸಿದ ಗೊಬ್ಬರವನ್ನು ಬಹಳ ವಿವೇಕದಿಂದ ಚುನಾಯಿಸಿ ಹಾಕಬೇಕು. ಇದಕ್ಕೆ ಉದಾಹರಣೆ ಏನೆಂದರೆ, ಮರದ ಬೂದಿಯಾದ ಪೊಟಾಷ್ ಎಂಬ ಉಪ್ಪು (Potash) ಕಡಮೆಯಾಗಿರುವ ಜಮೀನಿಗೆ ರಂಜಕ ಪದಾರ್ಥವನ್ನು (Phosphate) ಹಾಕಿದರೆ ರೈತನಿಗೆ ನಷ್ಟವಾಗಿಯೇ ಪರಿಣಮಿಸುತ್ತದೆ.

ಅನೇಕ ತಯಾರಿಸಿದ ಗೊಬ್ಬರಗಳು ಮಳೆಯಿಂದಲೂ ನೀರು ಹಾ

---

* ಮದರಾಸ್ ಅಗ್ರಿಕಲ್ಚರಲ್ ಕ್ಯಾಲೆಂಡರ್, ೧೯೨೯.

ಯಿಸುವದರಿಂದಲೂ ಕೊಚ್ಚಿ ಹೋಗುವ ಸಂಭವ ಉಂಟು. ಮತ್ತು ಕೆಲವು ಭೂಮಿಯಲ್ಲಿರುವ ಸಣ್ಣ ಅಂಗರಚನೆಗಳಿಂದ (Micro organisms) ನಾಶಹೊಂದಬಹುದು. ಆದಪ್ರಯುಕ್ತ ಜಮೀನಿಗೆ ಬೇಕಾಗುವದಕ್ಕಿಂತಲೂ ಹೆಚ್ಚಾಗಿ ಈ ಗೊಬ್ಬರಗಳನ್ನು ಹಾಕಿದರೆ ನಷ್ಟಕ್ಕೆ ಅವಕಾಶವಾಗುತ್ತೆ. ಅಲ್ಲದೆ ಜಮೀನಿಗೆ ಹಾಕಿದ ಗೊಬ್ಬರದ ಪೈಕಿ ಪೈರುಗಳು ಎಷ್ಟು ಉಪಯೋಗಿಸಿಕೊಳ್ಳುತ್ತವೋ ಅಷ್ಟೇ ಪ್ರಯೋಜನಕರವಾಗಿ ಪರಿಣಮಿಸುತ್ತವೆಯೇ ವಿನಹ ಮಿಕ್ಕವು ಮುಂದಿನ ಬೆಳೆ ಇಡುವವರಿವಿಗೂ ಬಡ್ಡಿಯಿಲ್ಲದ ಬಂಡವಾಳದಂತೆ ಜಮೀನಿನಲ್ಲಿ ನಿಷ್ಪ್ರಯೋಜನವಾಗಿ ಉಳಿಯುತ್ತವೆ. ಈ ಕಾರಣಗಳಿಂದ ತಯಾರಿಸಿದ ಗೊಬ್ಬರಗಳನ್ನು ಜಮೀನುಗಳಿಗೆ ಹಾಕುವ ಭಾಗದಲ್ಲಿ ಮುಖ್ಯವಾಗಿ ಲಕ್ಷಿಸಬೇಕಾದಂಶವೇನಂದರೆ, ಜಮೀನಿನಲ್ಲಿ ಇಡಬಹುದಾದ ಬೆಳೆಗೆ ಎಷ್ಟು ಸಸ್ಯಾಹಾರ ಒದಗಬೇಕೋ ಆದಕ್ಕನುಸಾರವಾಗಿಯೇ ಮಿತವರಿತು ತಯಾರಿಸಿದ ಗೊಬ್ಬರ ಹಾಕಬೇಕು. ಇಂಥಾ ಗೊಬ್ಬರಗಳನ್ನು ಹಾಕುವದು ಪೈರಿಗೆ ಸಸ್ಯಾಹಾರ ಒದಗಿಸುವದಕ್ಕೇ ಹೊರ್ತು ಜಮೀನನ್ನು ಸಾರಗೊಳಿಸುವದಕ್ಕಲ್ಲ. ಇಟ್ಟ ಬೆಳೆಗೆ ಕ್ಷಿಪ್ರವಾಗಿಯೇ ಅನುಕೂಲ ಕಂಡುಬರುವ ರೀತಿ ತಕ್ಕ ತಯಾರಿಸಿದ ಗೊಬ್ಬರವನ್ನು ಚುನಾಯಿಸಬೇಕು.

ತಯಾರಿಸಿದ ಗೊಬ್ಬರಗಳಲ್ಲಿ ಕೆಲವು ಜಾಗ್ರತೆಯಾಗಿಯೂ ಮತ್ತು ಕೆಲವು ನಿಧಾನವಾಗಿಯೂ ವ್ಯಾಪಿಸಿ ಪೈರಿಗೆ ಅನುಕೂಲ ಮಾಡುವದುಂಟು. ಹೇಗಂದರೆ „ಸೂಪರ್‌ಫಾಸ್ಫೇಟ್" ಗೊಬ್ಬರವು ಜಾಗ್ರತೆ ವ್ಯಾಪಿಸುವಕಾರಣ ಇದರ ಗುಣವು ಗೊಬ್ಬರ ಹಾಕಿದ ಕೂಡ್ಲೆ ಇಡುವ ಪೈರಿನಲ್ಲಿ ಮುಖ್ಯವಾಗಿ ಗೋಚರವಾಗುವದು. ಎಲಬಿನ ಪುಡಿಯಾದರೋ ಬಹಳ ಸಾವಕಾಶವಾಗಿ ವ್ಯಾಪಿಸತಕ್ಕ ಗೊಬ್ಬರ. ಇದು ಕೇವಲ ನಿಧಾನದಿಂದ ಸಸ್ಯಾಹಾರವಾಗಿ ಒದಗುವಕಾರಣ ಇದರ ಗುಣವು ಅನೇಕ ವರ್ಷಗಳು ತೋರ್ಪಡುವದು.

ತಯಾರಿಸಿದ ಗೊಬ್ಬರಗಳನ್ನು ಯಾವ ಕಾಲದಲ್ಲಿ ಮತ್ತು ಯಾವ ಕ್ರಮದಲ್ಲಿ ಜಮೀನಿಗೆ ಉಪಯೋಗಿಸಬೇಕೆಂಬ ಅಂಶವನ್ನು ಮುಂದಿನ ಸಂಚಿಕೆಯಲ್ಲಿ ತಿಳಿಸುತ್ತೇವೆ.

# Revenue Appeals.

## ರೆವಿನ್ಯೂ ಅಪೀಲುಗಳು.

### ೧೯೦೮-೦೯ನೆ ಇಸವಿಯ ಅಪೀಲು ನಂ|| ೪೦.

| ವಾದಿಗಳು. | | ಪ್ರತಿವಾದಿ. |
|---|---|---|
| ಘವತಿ ಲಕ್ಷ್ಮೀಬಾಯಿ ಭಾವ ಮೈದುನನ ಮೊಮ್ಮಕ್ಕಳು, ಹನುಮಂತರಾವು, ಶಾಮರಾವು ಮತ್ತು ವೆಂಕಟರಾವು, ಮೈನರುಗಳು, ಇವರ ಗಾರ್ಡಿಯನ್ ಭೀಮರಾವು ಪ್ರೋಲೆ. | *vs.* | ನಂಜೇಗೌಡ. |

ಅಂಕೆಗೌಡನೆಂಬುವನು ಕೃಷ್ಣರಾಜಹಳ್ಳಿ ತಾಲ್ಲೂಕು ಕಾಡಜಕ್ಕಸಂದ್ರ ಗ್ರಾಮದ ಒಟ್ಟು ೬೦ ರೂಪಾಯಿ ಆಕಾರದ ನಾಲ್ಕು ಸರ್ವೆ ನಂಬರುಗಳಿಗೆ ದರಖಾಸ್ತು ಕೊಟ್ಟನು. ಈ ನಡವಳಿಕೆ ನಡೆಯುತ್ತಿದ್ದಾಗ ಸದರಿ ಜಮೀನುಗಳು ಒಟ್ಟು ೧೬-೧೨-೧೦ ರೂಪಾಯಿ ಹುಲ್ಲುಗಾವಲ್ ದರದಮೇಲೆ ಲಕ್ಷ್ಮೀಬಾಯಿ ಎಂಬುವಳ ಅನುಭವದಲ್ಲಿದ್ದಂತೆಯೂ, ೧೮೯೭-೯೮ನೆ ಸರ್ವೆ ಸೆಟ್ಲಮೆಂಟು ಕಾಲದಲ್ಲಿ ಈ ನಂಬರುಗಳು ಖರಾಬ್‌ನಂಬರು ೪೭ ರಲ್ಲಿ ಸೇರಿಸಲ್ಪಟ್ಟು ನಂತರ ಲಕ್ಷ್ಮೀಬಾಯಿಯ ಅರ್ಜಿಯ ಮೇಲೆ ಪ್ರಸಕ್ತ ನಾಲ್ಕು ನಂಬರುಗಳಾಗಿ ವಿಂಗಡಿಸಲ್ಪಟ್ಟಂತೆ ತಿಳಿದುಬಂತು. ಲಕ್ಷ್ಮೀಬಾಯಿ ಮಕ್ಕಳಿಲ್ಲದೆ ಘವತಿ ಪಟ್ಟಳು. ನಂತರ ಮೈನರ್ ವಾದಿಗಳ ಗಾರ್ಡಿಯನ್ ಭೀಮರಾವು ಪ್ರೋಲೆಯು ಅಪೀಲು ವಾದಿಗಳ ಹೆಸರಿನಲ್ಲಿ ಸದರಿ ನಂಬರುಗಳ ಖಾತೆಯಾಗಬೇಕೆಂದು ಅರ್ಜಿಮಾಡಿದನು. ಪ್ರತಿವಾದಿ ನಂಜೇಗೌಡನು ಮೈನರು ವಾರಸುದಾರರ ತಂದೆಯು ಬರದುಕೊಟ್ಟ ಒಂದು ಖರೀದಿ ಪತ್ರದ ಪ್ರಕಾರ ಈ ಜಮೀನುಗಳಲ್ಲಿ ಅರ್ಧ ಹಿಸ್ಸೆಗೆ ಹಕ್ಕು ತಂದನು. ನಂಜೇಗೌಡನು ಸಾಲ್ ಬ ಸಾಲ್ ಹುಲ್ಗಾವಲ ಕಂದಾಯದ ಪೈಕಿ ಅರ್ಧ ಮೊಬಲಗನ್ನು ವಸೂಲು ಕೊಡುತ್ತಿದ್ದನೆಂದು ಗ್ರಾಮ ಶಾನುಭೋಗನು ಒಪ್ಪಿರುತ್ತಾನೆ. ಈ ಜಮೀನುಗಳಲ್ಲಿರುವ ಮರಗಳ ಮಾಲ್ಕಿ ಮೊಬಲಗು ೨೪೧—೧೨—೦ ರೂಪಾಯಿ ಅಂದಾಜಾಗಿರುತ್ತೆ. ಡೆಪ್ಯುಟಿ ಕಮಿಷನರವರು ಲಕ್ಷ್ಮೀಬಾಯಿ ಮತ್ತು ನಂಜೇಗೌಡ ಉಭಯತ್ರರೂ

೮೩೧-೧೨-೦ ರೂಪಾಯಿಗಳನ್ನು ಈ ಜಮೀನುಗಳ ಮೇಲಿನ ಕಂದಾಯದ ಬಾಕೀಯಂತೆ ವಸೂಲು ಕೊಟ್ಟಲ್ಲಿ ಇವುಗಳನ್ನು ಇವರಿಬ್ಬರ ಹೆಸರಿಗೆ ಸಮನಾಗಿ ವಿಭಾಗ ಮಾಡಿ ಕೊಡಬೇಕೆಂದು ಹುಕುಂ ಮಾಡಿದರು. ಅಪೀಲಿನಲ್ಲಿ ಗೌರ್ನಮೆಂಟಿನವರು ತೀರ್ಮಾನಿಸಿರುವದೇನಂದರೆ:— ಮೇಲ್ಕಂಡ ಹುಕುಮು ಈ ಜಮೀನುಗಳ ಹಿಡುವಳಿಗಾಗಿ ಒಂದು ಖುಷ್‌ಖರೀದಿಯನ್ನು ನಿರ್ಣಯಿಸುತ್ತೆಂದು ಭಾವಿಸಬಹುದು. ಆದಕಾರಣ ಅಪೀಲನ್ನು ಡಿಸ್‌ಮಿಸ್ ಮಾಡಿರುತ್ತೆ.

—o—

## ೧೯೦೮—೧೯೦೯ ನೆ ಇಸವಿಯ ಅಪೀಲು ನಂ|| ೬೬.

| ವಾದಿ. | | ಪ್ರತಿವಾದಿಗಳು. |
|---|---|---|
| ವೆಂಕಟೇಶ ಭಟ್ಟ. | vs. | ೧. ಮಹಿಷಿ ಮಂಜಪ್ಪ.<br>೨. ರಾಮಪ್ಪ. |

ಕಂದಾಯದ ಬಾಕಿಗಾಗಿ ಜಮೀನು ಹರಾಜಾದ ವಿಚಾರ.

ಗೌರ್ನಮೆಂಟಿನವರ ತೀರ್ಮಾನ.—ಖಾತೆದಾರನು ಫೌತಿ ಎಂಬ ವಿಷಯವೂ ಮತ್ತು ಪ್ರತಿವಾದಿ ಮಂಜಪ್ಪನು ಭೋಗ್ಯದಾರನಾಗಿ ಹರಾಜಾದ ಜಮೀನುಗಳ ಸ್ವಾಧೀನದಲ್ಲಿದ್ದನೆಂಬ ಅಂಶವೂ ಸಂಬಂಧಪಟ್ಟ ಅಧಿಕಾರಿಗಳಿಗೆ ಗೊತ್ತೇಯಿತ್ತು. ನೋಟೀಸು ಸ್ವತ್ತಿನ ಮೇಲೆ ಚಿಕಟಾಯಿಸಲ್ಪಟ್ಟಿತೇ ಹೊರತು ಖಾತೇದಾರನ ವಾರಸುದಾರರು ಯಾರಾದರೂ ಇಧಾರೆಯೇ ವಿಚಾರಿಸಿ ಅವರಮೇಲೆ ನೋಟೀಸು ಜಾರಿ ಮಾಡಲು ಯಾವ ಪ್ರಯತ್ನ ನಡೆದಿರುವದಿಲ್ಲ. ಈ ಅಕ್ರಮವು ನಡೆದಿರುವ ಹರಾಜನ್ನು ರದ್ದು ಮಾಡಲು ಸಾಕಾದಷ್ಟು ಭಾರಿಯಾಗಿರುತ್ತೆ.

—o—

## Co-operative Societies.

## ಪರಸ್ಪರ ಸಹಾಯಕ ಸಂಘಗಳು.

ಕಳೆದ ಜುಲೈ ತಿಂಗಳಲ್ಲಿ ಈ ಕೆಳಗೆ ನಮೂದಿಸಿರುವ ಸೊಸೈಟಿಗಳು ರಿಜಸ್ಟರು ಮಾಡಲ್ಪಟ್ಟಿರುತ್ತವೆ:—

(೧) ಕಡಕೊಳದ ಶ್ರೀ ಸೋಮೇಶ್ವರ ಸಹಾಯಸಂಘ, ಲಿಮಿಟೆಡ್, ಮೈಸೂರು ತಾಲ್ಲೂಕು.

(೨) ಕೊರಟಗೆರೆ ಕೋ ಆಪರೇಟಿವ್ ಸೊಸೈಟಿ ಲಿಮಿಟೆಡ್, ಕೊರಟಗೆರೆ ಸಬ್ ತಾಲ್ಲೂಕು.

(೩) ಮಳವಳ್ಳಿ ಶ್ರೀ ಲಕ್ಷ್ಮೀನರಸಿಂಹ ಪರಸ್ಪರ ಸಹಾಯ ಸಂಘ ಲಿಮಿಟೆಡ್, ಮಳವಳ್ಳಿ ತಾಲ್ಲೂಕು.

(೪) ಕಡೂರು ಕೋ ಆಪರೇಟಿವ್ ಸೊಸೈಟಿ ಲಿಮಿಟೆಡ್, ಕಡೂರು ತಾಲ್ಲೂಕು.

ಇವುಗಳ ಪೈಕಿ ಕಡಕೊಳ, ಕೊರಟಗೆರೆ ಮತ್ತು ಕಡೂರು ಸೊಸೈಟಿಗಳು ರೈತಾಬಿ ಜನಗಳಿಗೆ ಉಪಯೋಗವಾಗುವಂತೆಯೂ, ಮಳವಳ್ಳಿಯ ಸೊಸೈಟಿಯು ವ್ಯವಸಾಯಗಾರರಿಗೂ ಮತ್ತು ನೇಯಿಗೆ ಕಸಬಿನವರಿಗೂ ಅನುಕೂಲವಾಗುವಂತೆ ಏರ್ಪಾಡು ಮಾಡಲ್ಪಟ್ಟಿರುತ್ತವೆ.

---

ಬೆಂಗಳೂರು ಟವನಿನಲ್ಲಿ ಮೈಸೂರು ಕೋ ಆಪರೇಟಿವ್ ಸೊಸೈಟಿಗಳ ಕಾನೂನು ಪ್ರಕಾರ „ಸೆಂಟ್ರಲ್ ಕೋ ಆಪರೇಟಿವ್ ಬ್ಯಾಂಕು'' ಎಂಬ ಹೆಸರಿನಿಂದ ವ್ಯವಸಾಯ ಸಂಬಂಧವಾದ ಮನೆಗಳನ್ನು ಕಟ್ಟುವ ಮತ್ತು ಒಪ್ಪಬಹುದಾದ ಇತರ ಕೆಲಸಗಳಿಗೋಸ್ಕರ ಜಮೀನುದಾರರಿಗೂ ಮತ್ತು ಇತರರಿಗೂ ಅವರವರ ಕೆಲಸಕ್ಕಾಗಿ ಬೇಕಾಗುವ ಹಣವನ್ನು ಸಾಲಕೊಡುವ ನಿಮಿತ್ತ ಒಂದು ಬ್ಯಾಂಕು ಸ್ಥಾಪಿಸಲ್ಪಟ್ಟಿರುವ ವಿಷಯ ಮತ್ತು ಬ್ಯಾಂಕಿನಿಂದ ಸಾಲವನ್ನು ಹ್ಯಾಗೆ ಯಾರಿಂದ ಪಡೆಯಬಹುದೆಂಬದನ್ನು ಸಹಾ ಆಗಸ್ಟು ತಾರೀಖು ೫ ನೇ ಮೈಸೂರು ಗೆಜೆಟ್ ಕನ್ನಡ ೨ನೇ ಭಾಗದ ೬೧೧ನೆ ಪೇಜಿನಲ್ಲಿ ಪ್ರಚುರಿಸಿದೆ ಮಾಡಿರುತ್ತೆ.

ಮೈಸೂರು ದೇಶದಲ್ಲಿರುವ ಕೋ ಆಪರೇಟಿವ್ ಸೊಸೈಟಿಗಳ ಲೆಖ್ಖಗಳನ್ನು ತನಿಖೆಮಾಡಲು ಬೇಕಾಗುವ ಗವರ್ನಮೆಂಟಿನವರಿಂದ ೩—೭—೧೯ ನೇ ಮರ್ಯ್ಕಂ Fl. ೩೪—೧೩, ೨೪—೦೪ ನೆ ನಂಬರು ಪ್ರೊಸೀಡಿಂಗ್ಸಿನಲ್ಲಿ ಮಂಜೂರ್ಮಾಡಲ್ಪಟ್ಟ ರೂಲ್ಸುಗಳು ಕೋ ಆಪರೇಟಿವ್

ಸೊಸೈಟಿಗಳ ಕಮಿಟಿ ಮೆಂಬರುಗಳ ಮತ್ತು ಇತರ ಮೆಂಬರುಗಳ ತಿಳುವಳಿಕೆಬಗ್ಗೆ ೧೯೦೯ ನೇ ಆಗಸ್ಟು ೫ನೆ ತಾರೀಖಿನ ಮೈಸೂರು ಗೆಜೆಟ್ ಇಂಗ್ಲೀಷಿನ ೨ ನೇ ಭಾಗದ ೧೦೬೫—೧೦೬೮ ನೇ ಪೇಜುಗಳಲ್ಲಿ ಪ್ರಕಟಿಸಿ ಮಾಡಿರುತ್ತೆ.

---

## Leaf Manuring in South Canara. *

## ದಕ್ಷಿಣ ಕನ್ನಡಾದಲ್ಲಿ ಎಲೆ ಗೊಬ್ಬರದ ಉಪಯೋಗ.

ದಕ್ಷಿಣ ಕನ್ನಡಾ ಪ್ರಾಂತ್ಯದಲ್ಲಿ ಎಲೆ ಗೊಬ್ಬರದ ಉಪಯೋಗದ ವಿಷಯವಾಗಿ ಮದರಾಸು ವ್ಯವಸಾಯ ಇಲಾಖೆಯ ಡೈರೆಕ್ಟರ್ ಮೆ|| ಕಾಚ್‌ಮೆನ್ ಯವರು (Mr. M. E. Couchman) ಬರೆದಿರುವ ಲೇಖನದ ಕೆಲವು ಮುಖ್ಯಾಂಶಗಳನ್ನು ನಮ್ಮ ವಾಚಕರ ತಿಳುವಳಿಕೆ ಬಗ್ಗೆ ಇಲ್ಲಿ ನಮೂದಿಸುತ್ತೇವೆ.

ದಕ್ಷಿಣ ಕನ್ನಡಾಜಿಲ್ಲೆಯು ಪಶ್ಚಿಮ ಘಟ್ಟಕ್ಕೂ ಸಮುದ್ರಕ್ಕೂ ನಡುವೆ ಇರುತ್ತದೆ. ಈ ಪ್ರಾಂತ್ಯದಲ್ಲಿ ೧೨೦ರಿಂದ ೨೦೦ ಇಂಚು ಮಳೆಯಾಗುತ್ತೆ. ಇಲ್ಲಿ ಬೆಳೆಯುವದು ಮುಖ್ಯವಾಗಿ ಭತ್ತದ ಬೆಳೆ. ಜೂನ್, ಜುಲೈ, ಆಗಸ್ಟು ಮತ್ತು ಸೆಪ್ಟಂಬರ್ ತಿಂಗಳುಗಳಲ್ಲಿ ಸಂತತವಾಗಿ ಬೀಳುವ ಮಳೆಯು ಬತ್ತದ ಮೊದಲನೆ ಬೆಳೆಗೆ ಸಾಕು. ಪುನಃ ಗುಡ್ಡದ ಪ್ರವಾಹಗಳಿಗೆ ಮಣ್ಣು ಮತ್ತು ಸೊಪ್ಪು ಸದೆಗಳಿಂದ ಅಡ್ಡಗಟ್ಟಿ ನೀರನ್ನು ಗುಡ್ಡದ ಅರಗಿನಲ್ಲಿ ತೆಗದು ಕೊಂಡುಹೋಗುವದರ ಮೂಲಕವಾಗಲಿ ಅಥವಾ ಗದ್ದೆಗಳ ಮೂಲೆಯಲ್ಲಿ ಗುಂಡಿ ತೆಗದು ನೀರು ಬಿಟ್ಟುಕೊಂಡು ಒಂದು ತರಹೆ ಯೂತದಿಂದ ನೀರು ಹಾಯಿಸುವದರ ಮೂಲಕವಾಗಲಿ ಎರಡನೇ ಸಲ ಬತ್ತದ ಬೆಳೆಯನ್ನು ತೆಗೆಯುತ್ತಾರೆ. ಇಷ್ಟೇಅಲ್ಲದೆ ಕೆಲವುವೇಳೆ ಮೂರನೇ ಬೆಳೆಯನ್ನೂ ಸಹ ತೆಗೆಯುವದುಂಟು. ಹೀಗೆ ಸಾಲ್‌ಬಸಾಲ್ ಒಂದೇ ಬೆಳೆಯನ್ನು ತೆಗೆಯುವದರಿಂದ ಜಮೀನು ಬಹಳ ಜಾಗ್ರತೆ ನಿಸ್ಸಾರವಾಗುವ ಸಂಭವ ಹೆಚ್ಚು. ಕೆಲವು ಸಂದರ್ಭಗಳಲ್ಲಿ ಬತ್ತದ ಪೈರು

* ಅಗ್ರಿಕಲ್ಚರಲ್ ಜರ್ನಲ್ ಆಫ್ ಇಂಡಿಯ, ಜುಲೈ ೧೯೦೮.

ವರ್ಷದಲ್ಲಿ ಹನ್ನೊಂದು ತಿಂಗಳೂ ಜಮೀನಿನಲ್ಲಿರುವದು. ಧಾರೆಯಾಗಿ ಬೀಳುವ ಮಳೆಯಿಂದ ಭೂಮಿಯಲ್ಲಿನ ಸಸ್ಯಾಹಾರವು ಕೊಚ್ಚಿ ಹೋಗಿ ಜಮೀನು ಯಾವ ಫಸಲಿಡುವದಕ್ಕೂ ನಾಲಾಯಖಾಗುತ್ತೆ. ಈ ಪ್ರಾಂತ್ಯದಲ್ಲಿ ಹಿಂಡಿಗೊಬ್ಬರಗಳೇ ದೊರೆಯುವದಿಲ್ಲ. ಹೊಂಗೆ ಅಥವಾ ಬೇವು ಇಲ್ಲವೇ ಇಲ್ಲ. ಕೊಬ್ಬರಿ ಹಿಂಡಿಯಾದರೊ ರಫ್ತಾಗುತ್ತದೆ ಇಲ್ಲವೆ ದನಕ್ಕೆ ಮೇವಾಗಿ ಉಪಯೋಗಿಸಲ್ಪಡುತ್ತೆ. ಇಲ್ಲಿ ಕುರಿಗಳಿಲ್ಲ. ಮೇಕೆಗಳು ಕಡಮೆ. ಆದ್ದರಿಂದ ರೊಪ್ಪ ಹಾಕುವ ವಿಚಾರವೇ ಇಲ್ಲ. ಸ್ವಲ್ಪ ಮಾನು ಗೊಬ್ಬರ ದೊರೆತರೆ ಇದನ್ನು ಹೊಗೆಸೊಪ್ಪಿನ ಪೈರಿಗೆ ಮಾತ್ರ ಹಾಕುತ್ತಾರೆ.

ಈ ಕಾರಣಗಳಿಂದ ಇಲ್ಲಿನ ರೈತನಿಗೆ ಎಲೆ ಗೊಬ್ಬರವೇ ಗತಿ. ಇಲ್ಲಿ ರೈತನ ಜಮೀನಿನ ಮೇಲ್ಗಡೆ ಬೆಟ್ಟದ ಕಿಬ್ಬಿಯಲ್ಲಿ ೧೦೦ ಗಜದಷ್ಟು ಜಮೀನನ್ನು ಸರ್ಕಾರದವರು ಸಾಮಾನ್ಯವಾಗಿ ಮುಫತ್ತು ಬಿಟ್ಟಿರುತ್ತಾರೆ. ರೈತನು ಇದರ ಸುತ್ತಲೂ ಗೋಡೆಹಾಕಿ ಕಡಗು ತೆಗದು ಒಳಗಿನ ಜಂಗಲನ್ನು ಬಹಳ ಹುಷಾರಿಯಿಂದ ಕಾಪಾಡುತ್ತಾನೆ. ಇವನು ಮರಗಳಿಂದ ಕೊಂಬೆಗಳನ್ನು ಕಡಿಯುವದಿಲ್ಲ. ಕೆಳಗೆ ಉದುರಿದ ಎಲೆಯನ್ನು ಕೂಡಿಹಾಕುವನು. ರಿಜರ್ವ್ ಫಾರೆಸ್ಟು ವಿನಹ ಬಾಕಿ ಕಡೆಗಳಲ್ಲಿ ಮರಗಳಿಂದ ಹಸರು ಎಲೆಗಳನ್ನೂ ಕಡ್ಡಿಗಳನ್ನೂ ಯಾರು ಬೇಕಾದರೂ ತೆಗದುಕೊಳ್ಳಬಹುದು. ಇಲ್ಲಿನ ಮಳೆ ಮತ್ತು ಹವಾದಿಂದ ಗಿಡಮರಗಳು ಅತಿಜಾಗ್ರತೆಯಾಗಿ ಬೆಳೆದರೂ ರೈತರು ಏಕಪ್ರಕಾರವಾಗಿ ಸೊಪ್ಪು ಕಡ್ಡಿಗಳನ್ನು ತೆಗದುಕೊಳ್ಳುತ್ತಾರಾಗಿ ಬೆಳೆಯುವದಕ್ಕೆ ಅವಕಾಶವೇ ಇಲ್ಲ. ಜನಸಂಖ್ಯೆ ಜಾಸ್ತಿಯಾಗಿರುವ ಕಡೆಗಳಲ್ಲಂತೂ ಈ ಕಾರಣದಿಂದ ಗಿಡಗಳ ಬೆಳವಳಿಕೆಯೇ ಇರುವದಿಲ್ಲ. ಕೆಲವು ಗ್ರಾಮಗಳಲ್ಲಿ ರೈತರು ಒಟ್ಟು ಸೇರಿ ಬಂಜರು ಜಮೀನುಗಳನ್ನು ಪಡೆದು ಎಲೆ ಗೊಬ್ಬರಕ್ಕೋಸ್ಕರ ಕಾಪಾಡುತ್ತಾರೆ. ಇಲ್ಲಿನ ಗಿಡಗಳಿಂದ ಹಸರು ಎಲೆಗಳನ್ನು ಕುಯ್ಯುವದಿಲ್ಲ. ಕೆಳಗೆ ಉದುರಿದ ಒಣ ಎಲೆಗಳನ್ನೇ ಗುಡಿಸಿಕೊಳ್ಳುತ್ತಾರೆ. ಅನೇಕವೇಳೆ ಒಂದೊಂದು ಗ್ರಾಮದ ರೈತರು ಉಪಾಯದಿಂದ ತಮ್ಮ ಗ್ರಾಮಕ್ಕೆ ಸೇರಿದ ಬಂಜರು ಜಮೀನುಗಳ ಗಿಡಮರಗಳನ್ನು ತಮ್ಮ ಗ್ರಾಮದ ಉಪಯೋಗಕ್ಕೆ ಮಾತ್ರ ಉಳಿಸಿಕೊಂಡಿರುತ್ತಾರೆ. ಮೇಲ್ಕಂಡಂತೆ ಜಮಾಯಿಸಿದ ಎಲೆ

ಗಳನ್ನು ಗೊಬ್ಬರಕ್ಕಾಗಿ ಕೊಡಿಟ್ಟು ಉಪಯೋಗಪಡಿಸುವ ವಿಚಾರವ ನ್ನು ಮುಂದಿನ ಸಂಚಿಕೆಯಲ್ಲಿ ತಿಳಿಸುತ್ತೇವೆ.

---

## Government Proceedings.

## ಸರ್ಕಾರಿ ಹುಕುಂಗಳು.

ನಂ॥ ಆರ್. ೯೭೯—೯೦—ಎಲ್. ಆರ್. ೪೩೧—೦೬—೭.

ತಾರೀಖು ೨೯—೭—೦೯.

ತುಮಕೂರು ತಾಲ್ಲೂಕು ಮಲ್ಲಸಂದ್ರ ಗ್ರಾಮದ ಬಳಿ ಚಿತ್ರದುರ್ಗ ದ ಕ್ರಿಷ್ಣರಾಯನೆಂಬಾತನು ಒಂದು ತೋಪನ್ನು ಹಾಕಿಸಿದ್ದನು. ಇದರ ರಕ್ಷಣಾರ್ಥವಾಗಿ ಈತನಿಗೆ ಕೆಲವು ಗ್ರಾಮಗಳು ಇನಾಮಾಗಿ ಕೊಡಲ್ಪ ಟ್ಟಿದ್ದವು. ಕೆಲವು ಕಾಲಾನಂತರ ಈ ಜಮೀನುಗಳು ಭುಜಂಗರಾವು ಮ ತ್ತು ಅಪ್ಪಣ್ಣಶೆಟ್ಟಿ ಎಂಬವರಿಗೆ ಪರಾಧೀನವಾದವು. ಈ ಜಮೀನುಗಳ ಪೈಕಿ ಕೆಲವು ನಂಬರುಗಳನ್ನು ಫಾರೆಷ್ಟು ಇಲಾಖೆಗೆ ಸೇರಿಸಿಕೊಂಡದ್ದ ರಿಂದ, ಇದಕ್ಕೆ ಬದಲಾಗಿ ಮಲ್ಲಸಂದ್ರ ಅಮೃತಮಹಲ್ ಕಾವಲು ಪೈಕಿ ೪೦ ಎಕರೆ ೧೩ ಗುಂಟೆ ಜಮೀನನ್ನು ಇನಾಂದಾರ್ರಿಗೆ ಕೊಡಬೇಕೆಂದು ಹುಕುಂ ಆಯಿತು. ಆದರೆ ಈ ಜಮೀನು ಮಲ್ಲಸಂದ್ರದ ಕೆರೆಯ ಅಂಗಳಕ್ಕೆ ಸೇ ರಿರುವದರಿಂದ ಇದಕ್ಕೆ ಬದಲಾಗಿ ಅಪ್ಪಣ್ಣಶೆಟ್ಟಿಗೆ ಗೂಳೂರು ಅಮಾನಿ ಕೆರೆ ಹಿಂದೆ ಅವನ ಖಾತೆಯಲ್ಲಿರುವ ಸ್ವಲ್ಪ ತರೀಜಮೀನನ್ನು ಅವನ ಹೆಸ ರಿನಲ್ಲಿ ಇನಾಮಾಗಿ ಖಾಯಂ ಮಾಡಬೇಕೆಂತಲೂ ಮತ್ತು ಭುಜಂಗರಾಯು ನಿಗೆ ನಗದು ಪರಿಹಾರವಾಗಿ ೫೦೩—೪—೦ ರೂಪಾಯಿಗಳನ್ನು ಕೊಡಬ ಹುದೆಂದೂ ಡೆಪ್ಯುಟಿ ಕಮಿಷನರವರು ಶಿಫಾರಸು ಮಾಡಿರಲಾಗಿ ಗೌರ್ನ್ಮೆಂ ಟೆನವರು ಹುಕುಂ ಮಾಡಿರುವದೇನಂದರೆ, ಪ್ರಸಕ್ತ ಇನಾಮನ್ನು ಒಂದು ತೋಪಿನ ಸಂರಕ್ಷಣಾರ್ಥವಾಗಿಯೇ ಕೊಟ್ಟಿರುವುದು. ಈ ತೋಪನ್ನು ಸರಿಯಾದ ಸ್ಥಿತಿಯಲ್ಲಿ ಇಟ್ಟುಕೊಂಡು ಇರುವವರೆಗೂ ಮತ್ತು ಅದರಲ್ಲಿರ ಬೇಕಾದ ಮರಗಳ ಸಂಖ್ಯೆ ಸರಿಯಾಗಿದ್ದರೇನೇ ಇದನ್ನು ಇನಾಮಾಗಿ ಮುಂ ದಕ್ಕೂ ನಡೆಸಲಾದೀತು. ಈ ಇನಾಮನ್ನು ಯಾವವಿಧದಲ್ಲಿಯಾದರೂ ಪ

ರಾಧೀನ ಮಾಡಿದಲ್ಲಿ ಇದನ್ನು ಸರ್ಕಾರದವರು ಅಂಗೀಕರಿಸಲು ಬದ್ಧರಲ್ಲ. ಒಂದುವೇಳೆ ಅಂಗೀಕರಿಸಿದರೂ ಇಂಥಾ ಪರಾಧೀನತೆಗಳು ಇನಾಮಿನ ಉದ್ದೇಶಕ್ಕೆ ಒಳಪಟ್ಟಿರುತ್ತೆಯಾಗಿ ತೋಪನ್ನು ಸರಿಯಾದ ಸ್ಥಿತಿಯಲ್ಲಿ ಇಡದೆಯಿದ್ದರೆ ಸದರಿ ಇನಾಮನ್ನು ವಾಪಸು ವಹಿಸಿಕೊಳ್ಳಲು ಸರ್ಕಾರದವರು ಸ್ವತಂತ್ರರಿರುತ್ತಾರೆ. ತೋಪನ್ನು ಕಾಪಾಡುವದರಲ್ಲಿ ಇನಾಮುದಾರ್ರಿಗಿರತಕ್ಕ ಜವಾಬ್ದಾರಿಯನ್ನಾಗಲಿ ಅಥವಾ ಇನಾಮಿನ ಬೆಲೆಯನ್ನಾಗಲಿ ಕಮ್ಮಿ ಮಾಡತಕ್ಕ ಯಾವ ಏರ್ಪಾಟನ್ನೂ ಸರ್ಕಾರದವರು ಅಂಗೀಕರಿಸಲಾರರು. ತೋಪಿನಲ್ಲಿ ಇರಬೇಕಾದಷ್ಟು ಗಿಡ ಮರಗಳಿಲ್ಲವೆಂದು ಡೆಪ್ಯುಟಿ ಕಮಿಷನರವರ ರಿಪೋರ್ಟಿನಿಂದ ತಿಳಿಯುಬರುತ್ತೆ. ಡೆಪ್ಯುಟಿ ಕಮಿಷನರವರು ಈ ಜೋಡಿದಾರರಿಗೆ ಸ್ವಲ್ಪ ಅವಧಿಯನ್ನು ಕೊಟ್ಟು ಅದರೊಳಗಾಗಿ ಕಮ್ಮಿಯಾಗಿರುವ ಗಿಡಗಳನ್ನು ಭರ್ತಿಮಾಡಬೇಕೆಂದೂ ತಪ್ಪಿದಲ್ಲಿ ಹಾಲಿ ಹೊಸದಾಗಿ ಜಮೀನುಗಳನ್ನು ಪಡೆಯುವ ವಿಚಾರದಲ್ಲಿ ಅವರಿಗಿರುವ ವಿಶಿಷ್ಟ ಹಕ್ಕು ತಪ್ಪಿಹೋಗುತ್ತೆಂದು ಸ್ಪಷ್ಟವಾಗಿ ತಿಳಿಸಬೇಕಲ್ಲದೆ ರೈಲ್ ರಸ್ತೆ ಹಾಕುವ ಕಾಲದಲ್ಲಿ ಕತ್ತರಿಸಿದ ಮರಗಳಿಗೋಸ್ಕರ ಇವರಿಗೆ ಕಾಂಪೆನ್ಸೇಷನ್ ಏನೂ ಕೊಡದೇ ಇದ್ದ ಪಕ್ಷದಲ್ಲಿ, ಈಗ ಗಿಡಗಳನ್ನು ಪುನಃ ಹಾಕಲು ತಗಲುವ ಲಾಗವಡಿಗಾಗಿ ಸ್ವಲ್ಪ ಕಂಟ್ರಿಬ್ಯೂಷನ್ ಮೊಬಲಗು ಕೊಡಬಹುದು. ಈರೀತಿ ತೋಪಿನಲ್ಲಿ ಮರಗಳನ್ನು ಪೂರ್ತಿಯಾಗಿ ನೆಟ್ಟ ತರುವಾಯ ಇನಾಮುದಾರ್ರಿಗೆ ಕಮ್ಮಿ ಬೀಳುವ ೪೦ಎ.-೧೩ ಗುಂಟೆ ಜಮೀನನ್ನು ಇನಾಮಾಗಿ ಕೊಡಲು ಅಭ್ಯಂತರವೇನೂ ಇರುವದಿಲ್ಲ. ಕಾನೂನು ಪ್ರಕಾರ ಈ ಸಂದರ್ಭದಲ್ಲಿ ಬದಲಿಯಾಗಿ ಕೊಡತಕ್ಕ ಜಮೀನುಗಳು ಖುಷ್ಕಿಯಾಗಿರಬೇಕು. ಅಪ್ಪಣ್ಣಶೆಟ್ಟಿಗೆ ಹಾಲಿ ಕೊಡಬೇಕೆಂದಿರುವ ಜಮೀನಿನ ಕಂದಾಯವೇನೋ ಇವನ ಹಿಸ್ಸೆಗೆ ಬರಬೇಕಾದ ಜಮೀನಿನ ಕಂದಾಯದಷ್ಟೆ ಇದ್ದಾಗ್ಯೂ, ಇದು ತರಿ ಜಮೀನಾಗಿರುವದ್ದರಿಂದ ಇದನ್ನು ಇನಾಮಾಗಿ ಇವನಿಗೆ ಕೊಡುವದು ಸರಿಯಲ್ಲ. ಈತನಿಗೆ ಖುಷ್ಕಿ ಜಮೀನಿನಲ್ಲೇ ತಕ್ಕಷ್ಟು ವಿಸ್ತೀರ್ಣವನ್ನು ಕೊಡಲು ಪ್ರಯತ್ನಪಟ್ಟು ಸಾಧ್ಯವಾಗದಿದ್ದರೆನೇ ಇವನು ಅಪೇಕ್ಷಿಸುವ ತರಿ ಜಮೀನನ್ನು ಇನಾಮಾಗಿ ಕೊಡಬಹುದು.

ಭುಜಂಗರಾಯನಿಗೆ ನಗದು ಕಾಂಪೆನ್ಸೇಷನ್ ಹಣ ಕೊಟ್ಟವೇ

ಲೆ ತೋಪನ್ನು ಸರಿಯಾದ ಸ್ಥಿತಿಯಲ್ಲಿಟ್ಟುಕೊಂಡಿರುವ ಭಾಗದಲ್ಲಿ ಇವನು
ಜವಾಬ್ದಾರಿ ವಹಿಸುವಂತೆ ನಿರ್ಬಂಧಪಡಿಸಲು ಸರ್ಕಾರದವರಿಗೆ ಮಾರ್ಗವೇ
ಇರುವದಿಲ್ಲವಾಗಿ ಇನಾಮು ಕೊಟ್ಟ ಉದ್ದೇಶವೇ ನಿರರ್ಥಕವಾಗುವದು.
ಆದಕಾರಣ ಈತನು ಇನಾಮಾಗಿ ತೆಗದುಕೊಳ್ಳಲು ಯಾವದಾದರೂ ಖು
ಷ್ಕ ಜಮೀನನ್ನೇ ಚುನಾಯಿಸಬೇಕು. ಇದು ಸಾಧ್ಯವಾಗದಿದ್ದರೆ ಇವ
ನ ಹಿಸ್ಸೆಗೆ ಆಗುವ ಮೊಬಲಗನ್ನು ಸಾಲೆಯಾನ ೨೪—೧೨—೦ ರೂಪಾ
ಯಿನಂತೆ ನಗದು ಹಣ ಪಾವತಿ ಮಾಡಬಹುದು.

ಈರೀತಿ ಅಪ್ಪಣ್ಣಶೆಟ್ಟಿ ಮತ್ತು ಭುಜಂಗರಾಯರ ಹಕ್ಕುಗಳನ್ನು
ಪ್ರತ್ಯೇಕಿಸಿ ಕೊಟ್ಟ ಮಾತ್ರದಿಂದ ತೋಪನ್ನು ಆಬಾದು ಸ್ಥಿತಿಯಲ್ಲಿ ಇ
ಟ್ಟುಕೊಂಡಿರುವ ಭಾಗದಲ್ಲಿ ಇವರಿಬ್ಬರಿಗೂ ಜಂಟಿಯಾಗಿಯೂ ಮತ್ತು ಪ್ರ
ತ್ಯೇಕವಾಗಿಯೂ ಇರುವ ಜವಾಬ್ದಾರಿಯು ಕಮ್ಮಿಯಾಗಲಾರದೆಂಬ ಅಂ
ಶವನ್ನೂ ಮತ್ತು ಇವರಲ್ಲಿ ಯಾರಾದರೂ ಒಬ್ಬರು ಫಡಫೋಸಿ ಮಾಡಿದ
ರೂ ಕೂಡ ಪೂರ್ತಿ ಇನಾಮು ಫಾರ್‌ಫೀಟ್ ಮಾಡಲ್ಪಡುವದೆಂದೂ ಇನಾಂ
ದಾರಿಗೆ ಸ್ಪಷ್ಟವಾಗಿ ತಿಳಿಸತಕ್ಕದ್ದು.

---

ನಂ|| ಫೈ ೮೦೮—೧೭—೧೫೯—೦೯—೧ ತಾರೀಖು ೩೧—೭-೦೯.

ರೈತಾಬಿ ಜನನಲ್ಲಿ ಮಿತವ್ಯಯವನ್ನು ಹೆಚ್ಚಿಸುವ ಉದ್ದೇಶದಿಂದ,
ಅವರು ಕೂಡಿಡುವ ದ್ರವ್ಯವನ್ನು ಭದ್ರಪಡಿಸುವದಕ್ಕೂ ಬೇಕಾದಾಗ ಸು
ಲಭವಾಗಿ ವಾಪಸು ತೆಗೆದು ಕೊಳ್ಳುವದಕ್ಕೂ ಸೌಕರ್ಯಗಳನ್ನು ಕಲ್ಪಿ
ಸಿ ಕೊಡಬೇಕೆಂಬಂಶವು ಸರ್ಕಾರದವರ ಯೋಚನೆಯಲ್ಲಿರುತ್ತೆ. ಇದ
ಕ್ಕೆ ಪ್ರತಿ ಹೋಬಳಿ ಹೆಡ್‌ಕ್ವಾರ್ಟರಿನಲ್ಲೂ ಒಂದು ಸರ್ಕಾರಿ ಸೇವಿಂಗ್ಸು
ಬ್ಯಾಂಕನ್ನು ಸ್ಥಾಪಿಸುವದು ಸರ್ವೋತ್ತಮವಾದ ಏರ್ಪಾಡು. ಆದರೆ
ಈ ಭಾಗದಲ್ಲಿ ತೊಂದರೆಗಳು ಅನೇಕಉಂಟು ಮತ್ತು ಭಾರಿಲಾಗವದೂ
ತಗಲುತ್ತೆ. ಈಗ ಕೆಲವು ಹೋಬಳಿ ಹೆಡ್‌ಕ್ವಾರ್ಟರುಗಳಲ್ಲಿ ಪೋಸ್ಟಲ್
ಸೇವಿಂಗ್ಸು ಬ್ಯಾಂಕುಗಳಿದ್ದಾಗ್ಯೂ, ರೈತರು ಇವುಗಳ ಅನುಕೂಲತೆಗಳ
ನ್ನು ಅರಿತಿಲ್ಲವಾಗಿ ಇವುಗಳಿಂದ ಪೂರ್ಣಪ್ರಯೋಜನವನ್ನು ಹೊಂದುತ್ತಿ

ರುವದಿಲ್ಲ. ಇವಲ್ಲದೆ ವ್ಯವಸಾಯಕ ಬ್ಯಾಂಕುಗಳು ಮತ್ತು ಪರಸ್ಪರಸ
ಹಾಯಕ ಸಂಘಗಳೂ ಇದೇ ಉದ್ದೇಶದಿಂದ ಅಲ್ಲಲ್ಲಿ ಏರ್ಪಟ್ಟಿರುತ್ತವೆ.
ಈಚೆಗೆ ಅನ್ಯೋನ್ಯ ಸಹಾಯಕ ಚಳವಳಿಕೆಯು ಕೈಗೂಡುತ್ತಾ ಬಂದಿ
ರುವದು ನೋಡಿದರೆ ಕ್ಷಿಪ್ರದಲ್ಲಿ ಹಣ ಡಿಪಾಜಿಟ್ಟು ಮಾಡಲು ಅವಕಾಶ
ಕೊಡುವ ಅನೇಕ ಈ ಸಂಘಗಳೂ ಮತ್ತು ಬ್ಯಾಂಕುಗಳೂ ಏರ್ಪಡುವ
ವೆಂದು ನಿರೀಕ್ಷಿಸಿರುತ್ತೆ. ಪ್ರಕೃತ ಪೋಸ್ಟಲ್ ಸೇವಿಂಗ್ಸ್ ಬ್ಯಾಂಕುಗಳು,
ಪರಸ್ಪರ ಸಹಾಯಕ ಸಂಘಗಳು, ವ್ಯವಸಾಯಕ ಬ್ಯಾಂಕುಗಳು ಮತ್ತು
ಡಿಸ್ಟ್ರಿಕ್ಟು ಮತ್ತು ತಾಲ್ಲೂಕು ಹೆಡ್‌ಕ್ವಾರ್ಟರುಗಳಲ್ಲಿರುವ ಸರ್ಕಾರಿ ಸೇ
ವಿಂಗ್ಸ್ ಬ್ಯಾಂಕುಗಳು, ಇವುಗಳಿಂದ ದೊರೆಯುವ ಸೌಕರ್ಯಗಳೇ ಸಾ
ಕಾಗಿರುವಂತೆ ಕಾಣುತ್ತೆ. ಜನರಲ್ಲಿ ಮಿತವ್ಯಯ ಸ್ವಭಾವವು ವೃದ್ಧಿಯಾ
ಗಿ ಈ ಭಾಗದಲ್ಲಿ ಇನ್ನೂ ಹೆಚ್ಚು ಸೌಕರ್ಯಗಳನ್ನು ಕಲ್ಪಿಸುವದು ಅ
ವಶ್ಯವೆಂದು ತೋರಿದಲ್ಲಿ ಸರ್ಕಾರದವರು ಮುಂದೆ ಅನುಕೂಲತೆಗಳನ್ನು ಒ
ದಗಿಸುವದರಲ್ಲಿ ಸಂಶಯವಿಲ್ಲ. ಅದುವರಿವಿಗೆ ಹಾಲಿ ಇರುವ ಅನುಕೂಲ
ತೆಗಳನ್ನು ಗ್ರಾಮಾಂತರದಲ್ಲಿ ಸಮಸ್ತರ ತಿಳುವಳಿಕೆಗೆ ತಂದಲ್ಲಿ ಎಷ್ಟೋ
ಗುಣ ಉಂಟಾಗುತ್ತಾದಪ್ರಯುಕ್ತ ರೆವಿನ್ಯೂ ಆಫೀಸರುಗಳು ಸಂಚಾರ
ಮಾಡುವ ಸ್ಥಳಗಳಲ್ಲಿ ಈ ವಿಚಾರಗಳನ್ನು ರೈತರ ಗೋಚರಕ್ಕೆ ತರತ
ಕ್ಕದ್ದು.

---

## Notifications.

## ಇಸ್ತಿಹಾರ್‌ನಾಮೆಗಳು.

ನಂ|| ೧೭೦೩ ತಾ|| ೫—೮—೦೯.

ತರೀಕೆರೆ ತಾ|| ಅಮಲ್ದಾರ್ ಮೆ|| ಯಂ. ಕೃಷ್ಣಸಾಮಯ್ಯಂಗಾ
ರ್ರಿಗೆ ಕೊಟ್ಟಿದ್ದ ಹತ್ತು ದಿನಗಳ ಪ್ರಿವಿಲೇಜ್ ರಜಾದೊಂದಿಗೆ ಒಂದು
ದಿನ ಜಾಸ್ತಿ ರಜಾ ಕೊಟ್ಟಿರುತ್ತೆ.

---

ನಂ|| ೬೯೧೦ ತಾರೀಖು ೫—೮—೦೯.

ದಾವಣಗೆರೆ ತಾ|| ಅಮಲ್‌ದಾರ್ ಮೆ|| ಟಿ. ವೆಂಕಟರಾಮಯ್ಯನವರಿಗೆ ಕೊಟ್ಟಿದ್ದ ೧೫ ದಿನಗಳ ಪ್ರಿವಿಲೇಜ್ ರಜಾದೊಂದಿಗೆ ಒಂದು ವಾರದರಜಾ ಜಾಸ್ತಿಯಾಗಿ ಕೊಟ್ಟಿರುತ್ತೆ.

೨. ಅವರ ಗೈರ್ ಹಾಜರಿಯಲ್ಲಿ ಹರಿಹರ ಸಬ್ ತಾ|| ಡೆಪ್ಯುಟಿ ಅಮಲ್‌ದಾರು ತಾಲೂಕು ಛಾರ್ಜಿನಲ್ಲಿರತಕ್ಕದ್ದು.

---

ನಂ|| ೨೦೦೫ ತಾ|| ೧೧—೮—೦೯.

ಮೈಸೂರು ಸರ್ವಿಸ್ ರೆಗ್ಯುಲೇಷನ್ಸ್ ೧೭೭ ನೆ ಪ್ರಕರಣದ ಮೇರೆ ಮಳವಳ್ಳಿ ತಾಲ್ಲೂಕು ಅಮಲ್‌ದಾರ್ ಮೆ|| ಪಿ. ಸುಬ್ಬರಾಯಲು ನಾಯುಡುಯವರಿಗೆ ಇದೇ ಆಗಸ್ಟು ತಾರೀಖು ೧೫ರ ಲಾಗಾಯ್ತು ೧೫ ದಿನಗಳ ಪ್ರಿವಿಲೇಜ್ ರಜಾ ಮಂಜೂರ್ಮಾಡಿರುತ್ತೆ.

೨. ಅವರ ಗೈರ್‌ಹಾಜರಿಯಲ್ಲಿ ಕೃಷ್ಣರಾಜ ಪೇಟೆಯಿಂದ ಮಳವಳ್ಳಿಗೆ ಹಾಲಿ ವರ್ಗವಾಗಿರುವ ತಾಲ್ಲೂಕು ಶಿರಸ್ತೇದಾರ್ ಕೆ. ಯನ್. ರಾಮಚಂದ್ರಯ್ಯನವರನ್ನು ತಾಲ್ಲೂಕು ಅಮಲ್‌ದಾರರಾಗಿ ಹಂಗಾಮಿ ತರೀಖು ಮೊಕರರೂರು ಮಾಡಿರುತ್ತೆ.

---

## Occasional Notes.

## ವಿವಿಧ ವೃತ್ತಾಂತಗಳು.

೧. ಇಂಡಿಯಾ ದೇಶದ ಪುಷ್ಪಗಳಿಂದ ತಯಾರಾದ ಬಣ್ಣಗಳು ದಕ್ಷಿಣ ಇಂಡಿಯಾಕಿಂತ ಉತ್ತರ ದೇಶದಲ್ಲಿ ವಿಶೇಷ ಉಪಯೋಗದಲ್ಲಿರುವದಾಗಿ ತಿಳಿದುಬರುತ್ತೆ.—ಅಗ್ರಿಕಲ್ಚರಲ್ ಅಂಡ್ ಇಂಡಸ್ಟ್ರಿಯಲ್ ಪ್ರೋಗ್ರೆಸ್, ಮೆ ೧೯೦೯.

---

೨. ಅಂಜೂರು ಹಣ್ಣನ್ನು ಜೇನು ತುಪ್ಪದಲ್ಲಿ ಅಥವಾ ತುಪ್ಪದಲ್ಲಿ ಬಹುಕಾಲ ಕೆಡದಂತೆ ಇಟ್ಟಿರಬಹುದು. ಈ ಹಣ್ಣನ್ನು ಎರಡು ವಿಧವಾಗಿ ಅಂದರೆ ಅಮುಕಿ ಚಪ್ಪಟೆ ಮಾಡುವದರ ಮೂಲಕವೂ ಮತ್ತು ಅಮುಕದೆ ಹಾಗೆಯೇ ಒಣಗಿಸುತ್ತಾರೆ.—ಅಗ್ರಿಕಲ್ಚರಲ್ ಅಂಡ್ ಇಂಡಸ್ಟ್ರಿಯಲ್ ಪ್ರೋಗ್ರೆಸ್, ಮೆ ೧೯೦೯.

---

೩. ಜಾರ್ಜಿಯಾ ದೇಶದಲ್ಲಿ ಹತ್ತಿ ಕಡ್ಡಿಗಳಿಂದ ಪ್ರಿಂಟಿಗ್ ಕಾಗದ ತಯಾರ್ಮಾಡುವ ಒಂದು ಕಾರ್ಖಾನೆಯು ಏರ್ಪಡುವದರಲ್ಲಿಧೆಯಂತೆ. ದಿನವಹಿ ಕಾರ್ಖಾನೆಯಲ್ಲಿ ೨೪ ಟನ್‌ಗಳಷ್ಟು ಕಾಗದ ತಯಾರು ಆಗಬಹುದೆಂದು ಅಂದಾಜಾಗಿರುತ್ತೆ. ೧೫ ಟನ್ ತೂಕದ ಕಡ್ಡಿಯಿಂದ ೧ ಟನ್ ಕಾಗದ ತಯಾರು ಮಾಡಬಹುದೆಂತಲೂ ಕಂಪೆನಿಯವರು ೧ ಟನ್ ಕಡ್ಡಿಯನ್ನು ೧೨ ರೂಪಾಯಿಗೆ ಕೊಳ್ಳುವವರಾಗಿದ್ದಾರೆಂತಲೂ ತಿಳಿದುಬರುತ್ತೆ.—ಇಂಡಿಯನ್ ಟ್ರೇಡ್ ಜರ್ನಲ್, ೨೯—೩—೦೯.

---

೪. ಇಲಿ ಪಾಷಾಣದ ಮಿಶ್ರಣದಿಂದ ಚರ್ಮಕ್ಕೆ ನುಸಿ ಹಿಡಿಯುವದನ್ನು ತಪ್ಪಿಸಬಹುದು. ಮಿಶ್ರಣವನ್ನು ತಯಾರುಮಾಡುವ ಕ್ರಮ ೨—೧೦ ಗ್ಯಾಲನ್ ನೀರಿನಲ್ಲಿ ೪ ಪೌಂಡು ಇಲಿಪಾಷಾಣ ಮತ್ತು ೬ ಪೌಂಡು ಸೋಡಾ ಉಪ್ಪನ್ನು ಬೆರಿಸಿ ಸುಮಾರು ಅರ್ಧಘಂಟೆ ಹೊತ್ತು ಬೆಂಕಿಮೇಲೆ ನಿಧಾನವಾಗಿ ಕಾಯಿಸಿ ನೀರು ಉಕ್ಕಿ ಬರುತ್ತಲೆ ಇದಕ್ಕೆ ೨ ರಷ್ಟು ತಣ್ಣೀರು ಬೆರಿಸಬೇಕು. ಹೀಗೆ ತಯಾರಾದ ಮಿಶ್ರಣವನ್ನು ತೊಗಲು ಸುಲಿದ ಕೂಡ್ಲೆ ಒಳಭಾಗಕ್ಕೆ ಒಂದು ಬುರುಸಿನಿಂದ ಸವರಬೇಕು.—ಇಂಡಿಯನ್ ಟ್ರೇಡ್ ಜರ್ನಲ್—೨೯—೩—೦೯.

---

೫. ಸಕ್ಕರೆಯಲ್ಲಿ ಅನೇಕ ರಖಂಗಳುಂಟು. ಈ ಪೈಕಿ ಕಬ್ಬಿನಿಂದ ಆಗುವ ಸಕ್ಕರೆಯೇ ಅತಿಸಾಮಾನ್ಯವಾಗಿರುವದು. ಕಬ್ಬಿನ ಹಾಲಿನಿಂದ ಸಕ್ಕರೆಯನ್ನು ತಯಾರ್ ಮಾಡುವದರಲ್ಲಿ ಹರಳು ಹರಳಾಗಿ ಆಗುವ ಸಕ್ಕರೆಯನ್ನು ಹರಳಾಗದ ಸಕ್ಕರೆ, ಕಸರು ಮತ್ತು ನೀರಿನಿಂದ ಪ್ರತ್ಯೇಕಿಸುವದಕ್ಕೋಸ್ಕರ ಹಾಲನ್ನು ಇಂಗಿಸಿ ಮರಳು ಮರಳಾಗಿ ಮಾಡುವ ಕ್ರಮಗಳನ್ನನುಸರಿಸುತ್ತಾರೆ. ಮುಖ್ಯವಾಗಿ ಮರಳು ಮರಳಾಗಿರುವ ಸಕ್ಕರೆಯನ್ನು ಕೂಡಿದ ಮಟ್ಟಿಗೂ ಹೆಚ್ಚಾಗಿ ತೆಗೆಯುವದೇ ಸಕ್ಕರೆ ತಯಾರಿಯ ಉದ್ದೇಶ.

ಬೆಲ್ಲದಿಂದ ಸಕ್ಕರೆ ಮಾಡುವ ಕ್ರಮದಲ್ಲಿ ಅದರಲ್ಲಿನ ಕಶ್ಮಲಗಳು ಹೋಗದೆ ಇನ್ನೂ ಹೆಚ್ಚು ಹರಳಾಗುವ ಸಕ್ಕರೆಯು ಬಹಳ ಹಲಾಕಾಗುತ್ತದೆ. ಅಲ್ಲದೆ ನಮ್ಮ ನಾಟು ಗಾಣದಲ್ಲಿ ಕಬ್ಬಿನಲ್ಲಿರುವ ಹಾಲಿನ ಪೈಕಿ ಶೇಕಡ ೪೦ರಷ್ಟು ಹಿಂಡಬಹುದು. ಈಗಿನ ಹೊಸ ತರಹೆ ಗಾಣಗಳಲ್ಲಾದರೋ ಶೇಕಡ ೮೦ರಿಂದ ೯೦ರಷ್ಟು ಹಾಲು ಇಳಿಯುವದು. ಹೀಗೆ ನಾಟು ಪದ್ಧತಿಯನ್ನು ಅನುಸರಿಸುವದರಿಂದ ಎರಡು ವಿಧದಲ್ಲಿ ಲುಕ್ಸಾನಾಗುತ್ತೆ.—ಸೆಂಟ್ರಲ್ ಪ್ರಾವಿನ್ಸಸ್ ಅಗ್ರಿಕಲ್ಚರಲ್ ಗೆಜೆಟ್, ಮೆ ೧೯೦೯.

---

V. B. Soobbiah & Sons, Printers, Bangalore.—1909.

# THE MYSORE

# REVENUE & AGRICULTURAL GAZETTE.

ವಾಲ್ಯೂಂ ೩.] ಬುಧವಾರ, ೧ನೇ ಸೆಪ್ಟಂಬರ್ ೧೯೦೯. [ನಂ. ೩೧.


## Contents.



## ಅನುಕ್ರಮಣಿಕೆ.



## Weeds. *

## ಕಳೆಗಳು.

ಸಾಮಾನ್ಯವಾಗಿ ರೈತನ ಜಮೀನಿನಲ್ಲಿ ಕಳೆ ವಿಶೇಷ ಬೆಳೆದಿದ್ದರೆ

* ಸೆಂಟ್ರಲ್ ಪ್ರಾವಿನ್ಸಸ್ ಅಗ್ರಿಕಲ್ಚರಲ್ ಗಜೆಟ್, ಜುಲೈ ೧೯೦೯.

ಮಾಲೀಕನು ಬಡವ ಅಥವಾ ಕಂತಿಳಿವಳಿಕೆಯುಳ್ಳವನೆಂದು ತಿಳಿಯಬಾರ
ದು. ಹೇಗಂದರೆ, ಕೂಲಿ ದರ ದುಬಾರಿಯಾದಾಗ ಕಳೆ ತೆಗೆಯುವ ಕೆಲಸ
ದುಬಾರಿಯಾಗುತ್ತದೆ. ರೈತನು ಕಂತಿಳುವಳಿಕಸ್ಥನಾದರೆ ಕಳೆ ತೆಗೆಯು
ವದರಿಂದ ಫಸಲುತ್ಪತ್ತಿ ಹೆಚ್ಚುತ್ತದೆಂಬುದನ್ನು ಅರಿಯಲಾರನು. ಕಳೆ
ಬೆಳೆಯುವದನ್ನು ಪೂರ್ತಿಯಾಗಿ ತಪ್ಪಿಸುವದು ಸಾಧ್ಯವಲ್ಲ. ತಥಾಪಿ
ಮಳೆ ಜಾಸ್ತಿಯಾಗಿ ಸಂತತವಾಗಿ ಬೀಳುವ ಕಡೆ ಕಳೆ ತೆಗೆಯುವದಕ್ಕೆ ಆ
ಸ್ಪದವೇ ದೊರೆಯುವದಿಲ್ಲ. ಆದಕಾರಣ ಮಧ್ಯೆ ಮಳೆ ನಿಂತಾಗ ಸಿಕ್ಕು
ವ ವಿರಾಮವನ್ನು ಉಪಯೋಗಿಸಿಕೊಳ್ಳಬೇಕು ಮತ್ತು ಕಳೆ ಬೆಳೆಯುವ
ದನ್ನು ಕಡಮೆಮಾಡುವ ವ್ಯವಸಾಯ ಕ್ರಮಗಳನ್ನು ಪ್ರೋತ್ಸಾಹಪಡಿ
ಸುವದು ಅವಶ್ಯಕ.

ಬತ್ತವನ್ನು ನಾಟಿ ಕ್ರಮದಿಂದ ಬೆಳೆಯುವ ಕಡೆಗಳಲ್ಲಿ ರೈತನಿಗೆ ಕ
ಳೆ ತೆಗೆಯುವ ಪ್ರಕೃತ ಅಷ್ಟು ಬೀಳುವದಿಲ್ಲವಾದುದರಿಂದ ಆಕಾಲದಲ್ಲಿ ಅ
ವನು ಹತ್ತಿ ಮತ್ತು ಜೋಳದ ಹೊಲದಲ್ಲಿ ಕೆಲಸ ನೋಡಿಕೊಳ್ಳುವದಕ್ಕೆ
ವ್ಯವಧಾನ ಸಿಕ್ಕುತ್ತೆ. ಹೇಗಂದರೆ, ನಾಟಿಗೆ ಜಮೀನನ್ನು ಹಸನುಪಡಿಸು
ವದರಲ್ಲಿ ನೇಗಿಲು ಹೊಡತಕ್ಕೆ ಕಳೆ ಬೇರು ಸಹಿತ ಎದ್ದು ನಾಶವಾಗಿ ಜಮೀ
ನು ಪಾಕಾಗುತ್ತೆ. ಬತ್ತದ ಸಸಿಗೂ ಕಳೆ ಗಿಡಗಳಿಗೂ ಭೇದವೇ ಕಾಣು
ವದಿಲ್ಲವಾದುದರಿಂದ ಕೆಲವು ಸಂದರ್ಭಗಳಲ್ಲಿ ನಾಟಿಮಾಡುವಾಗ ಕಳೆ ಸೇರು
ವದುಂಟು. ಆದರೆ ರೈತನು ಚೊಕ್ಕಟವಾದ ಕಣದಲ್ಲಿ ಕಾಳು ಬಡದು ಒ
ಳ್ಳೆ ಬಿತ್ತವನ್ನು ಹುಷಾರಿಯಿಂದ ಚುನಾಯಿಸಿ ಅಗೆ ಹಾಕಿದಲ್ಲಿ ಇಂಥಾ ಸಂ
ಭವವು ತಪ್ಪುವದು. ಆದಕಾರಣ ನಾಟಿ ವಿಧಾನದಿಂದ ಬತ್ತದ ಫಸಲು
ತ್ಪತ್ತಿ ಹೆಚ್ಚುವದರ ಜೊತೆಗೆ ಎರಡು ವಿಧವಾಗಿ ಲಾಭವಾಗುತ್ತೆ. ಹೇ
ಗಂದರೆ, ಕಳೆ ತೆಗೆಯುವದಕ್ಕೆ ತಗಲುವ ಭಾರಿ ಲಾಗವಡು ಕೂಡಿಬರುತ್ತ
ದೆ. ಬಿತ್ತಕ್ಕಾಗಿ ಶ್ರೇಷ್ಠವಾದ ಮತ್ತು ಬಲವಾದ ತೆನೆಗಳನ್ನೇ ಚುನಾ
ಯಿಸಿ ಕಳೆ ಇಲ್ಲದರೀತಿ ಬಡದು ಉಪಯೋಗಿಸುವದರಿಂದ ಉತ್ಕೃಷ್ಟವಾ
ದ ಫಸಲು ಬರುತ್ತದೆ. ಹೊಲಗಳಲ್ಲಿ ಪೈರಿಡುವದರಲ್ಲಿಯೂ ಕೂಡ ಹೊಸ
ವ್ಯವಸಾಯ ಕ್ರಮಗಳಿಂದ ಕಳೆ ಕೆಲಸವು ಸುಲಭಪಡುತ್ತದೆ. ಹೇಗಂದ
ರೆ, ಹತ್ತಿ ಬೆಳೆಯಲ್ಲಿ ಪೈರನ್ನು ಸಾಲಾಗಿಟ್ಟು ಈ ಸಾಲುಗಳ ನಡುವೆ

ಎತ್ತುಗಳನ್ನು ಕಟ್ಟಿ ಕುಂಟೆಹೊಡೆದು ಮಣ್ಣನ್ನು ಸಡಲಿಸಿದರೆ ಪೈರು ಹುಲುಸಾಗಿ ಬರುವದೇ ಅಲ್ಲದೆ ಕಳೆಗಳು ನಿರ್ಮೂಲವಾಗುತ್ತವೆ. ಪೈರನ್ನು ಸಾಲಾಗಿ ಇಡದ ವಿನಹಾ ಎತ್ತಿನ ಕುಂಟೆಯನ್ನು ಹೊಡುವದಕ್ಕೆ ಆಗುವದಿಲ್ಲ. ಹೀಗೆ ಸಾಲಾಗಿ ಇಡದೇ ಇದ್ದ ಪಕ್ಷದಲ್ಲಿ ಕೈಯಿಂದ ಕಳೆ ತೆಗೆಯಬೇಕು. ಅಂದರೆ ಭಾರಿ ಲಾಗವಡು ತಗಲುವದು. ಇಲ್ಲದೆ ಕಳೆ ತೆಗೆಯದೇನೆ ಇರಬೇಕಾಗುತ್ತೆ. ಇಷ್ಟೇ ಅಲ್ಲದೆ ಹತ್ತಿಯನ್ನು ಉತ್ತಮಪಡಿಸುವದಕ್ಕಾಗಿ ಜಮೀನಿನಲ್ಲಿ ಪೈರಿಟ್ಟನಂತರ ನಡೆಸಬೇಕಾದ ವ್ಯವಸಾಯಕ್ಕೆ ಅವಕಾಶವಿರುವದಿಲ್ಲ. ಕೆಲವು ಜಮೀನುಗಳಲ್ಲಿ ಕಳೆಗಳು ವಿಶೇಷವಾಗಿ ಬೆಳೆಯುತ್ತವೆ ಮತ್ತೆ ಕೆಲವಲ್ಲಿ ಅಷ್ಟು ಬೆಳೆಯುವದಿಲ್ಲ. ಪ್ರತಿ ಗ್ರಾಮದಲ್ಲೂ ಕೆಲವು ಜಮೀನುಗಳಿಗೆ ಈ ಕಟ್ಟ ಹೆಸರಿರುವದುಂಟು. ರೈತರು ಇವುಗಳಲ್ಲಿ ಕಳೆ ತೆಗೆಯುವದಕ್ಕಾಗಿ ವರ್ಷ ವರ್ಷ ಭಾರಿ ಲಾಗವಡು ಇಡುತ್ತಾರೆ. ಇಂಥಾ ಸಂದರ್ಭಗಳಲ್ಲಿ ಒಂದು ಉಪಾಯಮಾಡಬಹುದು. ಅದೇನಂದರೆ, ಕಳೆಗಳಿಂದ ಪೈರುಗಳು ಹೇಗೆ ನಾಶಹೊಂದುತ್ತವೆಯೋ ಹಾಗೆಯೇ ಒಳ್ಳೆ ಪೈರುಗಳಿಂದ ಕಳೆಗಳನ್ನು ನಾಶಪಡಿಸಬಹುದು. ಪೈರನ್ನು ಸ್ವಲ್ಪ ಮುಂದಾಗಿಯೇ ಒತ್ತಾಗಿ ಹಾಕಿದರೆ ಅದು ಭೂಮಿಯನ್ನೆಲ್ಲಾ ಆವರಿಸಿಕೊಳ್ಳುವದರಿಂದ ಕಳೆಗಳಿಗೆ ನೆರಳಾಗಿ ನಾಶವಾಗುತ್ತವೆ. ಪರಂತು ಈ ಕ್ರಮದಲ್ಲಿ ಧಾನ್ಯದ ಉತ್ಪತ್ತಿ ಕಮ್ಮಿ. ಆದಕಾರಣ ಯಾವ ಪೈರಿನಲ್ಲಿ ಕಾಳಿನಿಂದ ಆದಾಯವನ್ನು ನಾವು ನಿರೀಕ್ಷಿಸುವದಿಲ್ಲವೋ ಅಂಥಾ ಪೈರನ್ನಿಡಬೇಕು. ದನದ ಮೇವಿಗಾಗಿ ಜೋಳದ ಪೈರಿಡಬಹುದು ಮತ್ತು ಇದನ್ನು ಸ್ವಲ್ಪ ಮುಂದಾಗಿ ಬಿತ್ತಿ ಪೂರ್ತಿಯಾಗಿ ಬಲಿಯುವದರೊಳಗೆ ಕುಯಿದು ಜಮೀನನ್ನು ಉಕ್ಕೆಮಾಡಿ ಗೊಬ್ಬರ ವಗೈರೆ ಹಾಕಿ ತಯಾರುಮಾಡಿಕೊಳ್ಳಬಹುದು. ಹೀಗೆ ಹೊಲಗಳಲ್ಲಿ ಕಳೆಗಳನ್ನು ನಾಶಪಡಿಸುವ ಪೈರುಗಳಲ್ಲಿ ಸಣಬುನಾರು ಒಂದು. ಬಾಗಾಯಿತು ಜಮೀನುಗಳಲ್ಲಿ ನೆಲಗಡ್ಲೆ ಪೈರು ಬೆಳೆಯಬಹುದು. ಕಳೆಗಳು ಜಮೀನಿನಲ್ಲಿ ಬೆಳೆದ ನಂತರ ಅವುಗಳನ್ನು ಕೈಯಿಂದ ತೆಗೆದುಹಾಕಲು ಭಾರಿ ಖರ್ಚು ಇಡುವದಕ್ಕೆ ಬದಲಾಗಿ ಮೊದಲೆ ಅವುಗಳು ಹುಟ್ಟದಂತೆ ಮಾಡಿದಲ್ಲಿ ರೈತನಿಗೆ ತೊಂದರೆ ಕಡಮೆ.

ಮಳೆ ಬೀಳುವದಕ್ಕೆ ಪೂರ್ವದೇ ಜಮೀನನ್ನು ಚೆನ್ನಾಗಿ ಉಕ್ಕೆಮಾ

ಡಿದರೆ ಅನೇಕವಾಗಿ ಬೇರುಗಳು ನಾಶವಾಗುವವು. ನಂತರ ಪೈರನ್ನು ಸಾಲುಸಾಲಾಗಿ ಬಿತ್ತಿ ಸಸಿಗಳು ಸ್ವಲ್ಪ ಬೆಳೆದ ನಂತರ ಸಾಲುಗಳ ನಡುವೆ ಕುಂಟೆಹೊಡದರೆ ಉಳಿದ ಕಳೆಗಳೂ ಸಾಯುತ್ತವೆ. ಸಸಿಗಳಲ್ಲಿ ಸೇರಿಕೊಂಡಿರುವ ಕಳೆಗಳನ್ನು ಒಬ್ಬಿಬ್ಬರು ಕೂಲಿಯವರನ್ನು ಇಟ್ಟುಕೊಂಡು ಸುಲಭವಾಗಿ ತೆಗೆಸಬಹುದು.

## Leaf Manuring in South Canara. *

## ದಕ್ಷಿಣ ಕನ್ನಡಾದಲ್ಲಿ ಎಲೆ ಗೊಬ್ಬರದ ಉಪಯೋಗ.

ದಕ್ಷಿಣ ಕನ್ನಡಾಪ್ರಾಂತ್ಯದಲ್ಲಿ ರೈತರು ಗೊಬ್ಬರಕ್ಕಾಗಿ ಎಲೆಗಳನ್ನು ಒದಗಿಸಿಕೊಳ್ಳಲು ಕಲ್ಪಿಸಿಕೊಂಡಿರುವ ಅನುಕೂಲಗಳನ್ನು ಹಿಂದಿನ ಸಂಚಿಕೆಯಲ್ಲಿ ಪ್ರಸ್ತಾಪಮಾಡಿದ್ದಾಯಿತು. ಗೊಬ್ಬರವನ್ನು ತಯಾರು ಮಾಡುವದರಲ್ಲಿ ಇವರು ಅನುಸರಿಸುತ್ತಿರುವ ಕ್ರಮಗಳನ್ನು ಈಗ ತಿಳಿಸುತ್ತೇವೆ. ವಿರಾಮ ಕಾಲಗಳಲ್ಲಿ ರೈತನು ಮತ್ತು ಅವನ ಮನೆಯವರೂ ರಿಜರ್ವ್‌ಮಾಡದೆ ಇರುವ ಪ್ರದೇಶಗಳಿಂದ ಹಸರು ಎಲೆಗಳನ್ನು ಜಮಾಯಿಸಿ ಪೆಂಡಿ ಕಟ್ಟಿ ಮನೆಗೆ ತರುತ್ತಾರೆ. ಈ ಪ್ರಾಂತ್ಯದಲ್ಲಿ ಮಳೆ ವಿಶೇಷವಾಗಿರುವದರಿಂದ ದನ ಕಟ್ಟುವದಕ್ಕೆ ನಾಲ್ಕು ಅಡಿ ಆಳ ಮತ್ತು ದನಗಳ ಸಂಖ್ಯೆಯರಿತು ಉದ್ದಳತೆ ಇಟ್ಟು ಗುಂಡಿಯನ್ನು ತೋಡಿ ಮೇಲ್ಗಡೆ ಛಾವಣಿಯನ್ನು ಕಟ್ಟಿ ನಾಲ್ಕು ಕಡೆಗಳಲ್ಲಿ ತಡಿಕೆ ಕಟ್ಟುತ್ತಾರೆ. ಇದರಲ್ಲಿ ರಾತ್ರಿ ದನಗಳನ್ನು ಕೂಡಿ ಬೆಳಿಗ್ಗೆ ೮ ಘಂಟೆಗೆ ಹೊರಗೆ ಬಿಡುತ್ತಾರೆ. ಕೊಟ್ಟಿಗೆಗಳಲ್ಲಿ ಪ್ರತಿದಿನವೂ ಎಲೆಗಳನ್ನು ಹಾಸುತ್ತಾರೆ. ಎಲೆಗಳಿಲ್ಲದ ಪ್ರದೇಶದಲ್ಲಿ ಬತ್ತದ ಕೂಳೆಯನ್ನು ತಂದು ಹಾಸುವದುಂಟು ; ಹೀಗೆ ಒಂದು ತಿಂಗಳಲ್ಲಿ ಗುಂಡಿ ಭರ್ತಿಯಾಗುವದು. ಸಗಣಿ ಮತ್ತು ಗಂಜಲದಲ್ಲಿ ಚೆನ್ನಾಗಿ ನೆನೆದ ಈ ಎಲೆ ಗೊಬ್ಬರವನ್ನು ತೆಗದು ಬೇರೆಕಡೆ ರಾಸಿಹಾಕುತ್ತಾರೆ. ಅಥವಾ ಗುಂಡಿಯಲ್ಲಿ ಹಾಕುತ್ತಾರೆ. ಇಲ್ಲವೆ ನೆಟ್ಟಗೆ ಹೊಲಕ್ಕೇನೇ ಸಾಗಿಸುತ್ತಾರೆ. ಜಮೀನಿನಲ್ಲಿ ಪೈರು ಇಟ್ಟಿದ್ದರೆ ಹೊಲದ ಒಂದು ಮೂಲೆಯಲ್ಲಿ ಇದನ್ನು ಜಮಾಯಿಸಿಡುತ್ತಾರೆ. ಇಲ್ಲವಾದರೆ ಅಲ್ಲಲ್ಲಿ ಗುಪ್ಪೆಮಾಡಿ ಕ್ರಮೇಣ ಜಮೀನಿನಲ್ಲಿ ಉತ್ತುಬಿಡುತ್ತಾರೆ.

* ಅಗ್ರಿಕಲ್ಚರಲ್ ಜರ್ನಲ್ ಆಫ್ ಇಂಡಿಯಾ, ಜುಲೈ ೧೯೦೮.

ಈ ಕ್ರಮದಲ್ಲಿ ದನದ ಸಗಣಿ ಮತ್ತು ಗಂಜಲ ಸಂಪೂರ್ಣವಾಗಿ ಉಪಯೋಗಿಸಲ್ಪಡುವದರಿಂದ ಜಮೀನಿಗೆ ಬಹಳ ಸಾರವತ್ತಾದ ಗೊಬ್ಬರ ಒದಗುತ್ತದಲ್ಲದೆ ಸೊಪ್ಪು ಮತ್ತು ಕಡ್ಡಿಗಳು ಕೊಳೆಯುವದರಿಂದ ಭೂರಚನೆಯೂ ಉತ್ತಮವಾಗುತ್ತದೆ.

ಕೂಲಿ ಆಳುಗಳು ಸಿಕ್ಕುವ ಕಡೆಗಳಲ್ಲಿ ನಾಟಿಕ್ರಮವನ್ನು ಆಚರಿಸುವದುಂಟು. ಕೆಲವು ಸಂದರ್ಭಗಳಲ್ಲಿ ಬಿತ್ತವನ್ನು ಒಂದೆರಡು ದಿನ ನೀರಿನಲ್ಲಿ ನೆನೆಹಾಕಿ ನಂತರ ಚೆನ್ನಾಗಿ ಮಾಗಿದ ಎಲೆ ಗೊಬ್ಬರ ಮತ್ತು ಬೂದಿಯಲ್ಲಿ ಹತ್ತು ಮಂಕರಿ ಗೊಬ್ಬರಕ್ಕೆ ಒಂದು ಮಂಕರಿ ಬಿತ್ತದಂತೆ ಬೆರಸಿ ಕೆಸರುಮಾಡಿದ ಗದ್ದೆಯಲ್ಲಿ ಒಂದೊಂದು ಹಿಡಿಯಾಗಿ ಚೆಲ್ಲುತ್ತಾರೆ. ಅಥವಾ ನೇಗಿಲು ಸಾಲುಗಳಲ್ಲಿ ಬಿತ್ತುವದುಂಟು.

ಇಲ್ಲಿ ಬತ್ತದ ಗದ್ದೆಗಳಿಗೆ ಎಲೆ ಗೊಬ್ಬರ ಒಂದೇಅಲ್ಲದೆ ಮರದ ಬೂದಿ ಮತ್ತು "ಸುಟ್ಟ ಮಣ್ಣನ್ನು" (ಸೊಪ್ಪು ಮತ್ತು ಇತರ ಕಚಡಾವನ್ನು ಮಣ್ಣಿನೊಂದಿಗೆ ಬೆರಸಿ ಸುಡುತ್ತಾರೆ) ಹಾಕುವದುಂಟು. ಎಲೆಗಳನ್ನು ಕೊಟ್ಟಿಗೆಗಳಲ್ಲಿ ಹಾಕಿ ಕೊಳೆಯಿಸಲಿಕ್ಕೆ ಸಾಕಾದಷ್ಟು ರಾಸುಗಳಿಲ್ಲದಿದ್ದರೆ ಇವನ್ನು ನೆಟ್ಟಗೆ ಗದ್ದೆಗೆ ಹಾಕಿಬಿಡುತ್ತಾರೆ. ಈರೀತಿ ಮಾಡುವದಕ್ಕೆ ಹಸುರು ಎಲೆಗಳೇ ಮೇಲು. ತೆಂಗಿನ ತೋಟಗಳಿಗೆ ದನದ ಗೊಬ್ಬರವನ್ನು ವಿಶೇಷವಾಗಿ ಹಾಕುವದುಂಟು. ಗದ್ದೆ ಬದುಗಳಲ್ಲಿ ಅಲ್ಲಲ್ಲಿ ಒಂದೊಂದು ಇರುವ ತೆಂಗಿನ ಗಿಡಗಳಿಗಾದರೊ ಗಿಡದ ಸುತ್ತಲೂ ಒಂದು ಗಜ ಆಳವಾಗಿ ಹಳ್ಳ ತೋಡಿ ಇದರಲ್ಲಿ ಸೊಪ್ಪುಸದೆಗಳನ್ನೂ ಮತ್ತು ನಂಜಿನ ಗಿಡದ ಕೊನೆಗಳನ್ನೂ (Nux Vomica) ತುಂಬಿ ಮೇಲೆ ಮಣ್ಣು ಮುಚ್ಚುತ್ತಾರೆ. ಇದರಿಂದ ಗಿಡದ ಬೆಳವಳಿಕೆಯು ಹೆಚ್ಚುವದೆಂತಲೂ ಮತ್ತು ಗಿಡವನ್ನು ಕೊರೆಯುವ ದುಂಬಿಗಳು ಸೇರುವದಿಲ್ಲವೆಂತಲೂ ಹೇಳುತ್ತಾರೆ.

ತರಿ ಜಮೀನುಗಳ ಹುಲುಸನ್ನು ಗೊಬ್ಬರಗಳನ್ನು ಹಾಕುವದರ ಮೂಲಕವಲ್ಲದೆ ಬತ್ತದ ತರುವಾಯ ದ್ವಿದಳ ಧಾನ್ಯಗಳ ಪೈರನ್ನು ಬೆಳೆಯುವದರಮೂಲಕವೂ ವೃದ್ಧಿಪಡಿಸುವದುಂಟು. ಈ ಪೈರುಗಳನ್ನು ಒಂದೇ ಬೆಳೆ ಕೊಡುವ ತಗ್ಗು ಜಮೀನುಗಳಲ್ಲಿ ಸೆಪ್ಟಂಬರು ಅಕ್ಟೋಬರು

ಮತ್ತು ಕೆಂಪ ಎಂದು ಮೂವರು ಮಕ್ಕಳು. ಕೋಟಿಗೌಡನು ವೃದ್ಧಾಪ್ಯದ ದೆಶೆಯಿಂದ ಕೆಲಸನಡೆಸಲು ಅಶಕ್ತನಾಗಿದ್ದ ಕಾರಣ ನಿಂಗೆಗೌಡನು ಗುಮಾಸ್ತೆ ತರೀಕು ಕೆಲಸ ನೋಡುತ್ತಿದ್ದು ೧೮೯೭ರಲ್ಲಿ ಮೃತಪಟ್ಟನು. ತರುವಾಯ ಜೋಗಿಗೌಡನು ಗುಮಾಸ್ತೆಯಾಗಿ ೮ ವರ್ಷಕಾಲ ಕೆಲಸ ನೋಡುತ್ತಿದ್ದದ್ದರಿಂದಲೂ ಮತ್ತು ವಾದಿಯು ಇನ್ನೂ ೧೯ ವರುಷ ವಯಸ್ಸಿನವನಾಗಿದ್ದದ್ದರಿಂದಲೂ ಖಾಯಮಾಗಿ ಪಟೇಲಿಗೆ ಮೊಕರೂರುಮಾಡಲ್ಪಟ್ಟನು. ವಾದಿಯು ತಕರಾರು ತರಲು, ಪ್ರತಿವಾದಿಯ ತರುವಾಯ ಇವನಿಗೆ ಸದರಿ ಪಟೇಲಿ ಕೆಲಸ ಕೊಡಬೇಕೆಂತಲೂ ಮತ್ತು ಪ್ರತಿವಾದಿಯ ಮರಣಾನಂತರ ಇವನ ಮಗನಿಗೆ ಪಟೇಲಿ ನೌಕರಿಗೆ ಹಕ್ಕಿರುವದಿಲ್ಲವೆಂದೂ ಡೆಪ್ಯುಟಿ ಕಮಿಷನರವರು ಹುಕುಂಮಾಡಿದರು.

ಗೌರ್ನಮೆಂಟಿನವರ ತೀರ್ಮಾನ.—ಪಟೇಲಿಯು ಯಾವಾಗ್ಯೂ ಜ್ಯೇಷ್ಠಸಂತತಿಯವರಲ್ಲಿಯೇ ಇರತಕ್ಕದ್ದೆಂಬುವದಕ್ಕೆ ಕಾನೂನೇನೂ ಇರುವದಿಲ್ಲ. ವಾದಿಯು ಪ್ರತಿವಾದಿಯ ಅಣ್ಣನ ಮಗನಾಗಿದ್ದರೂ ಪಟೇಲಿಗೆ ಇದ್ದವರಲ್ಲಿ ಪ್ರತಿವಾದಿಯೇ ಬಹಳ ಲಾಯಖಾಗಿದ್ದ ಕಾರಣ ಮೊಕರೂರುಮಾಡಲ್ಪಟ್ಟಿರುತ್ತಾನಾಗಿ ಈಗ ಪಟೇಲಿಯನ್ನು ಇವನಿಗೆ ತಪ್ಪಿಸಿ ವಾದಿಗೆ ಕೊಡಲು ಆಗುವದಿಲ್ಲ. ಆದರೆ ಮುಂದೆ ಈ ಕೆಲಸ ಖಾಲಿಬಿದ್ದಾಗ ಇವನು ಇದನ್ನು ಹೊಂದಬಹುದು. ಈ ಕಾರಣಗಳಿಂದ ಅಪೀಲು ವಜಾಮಾಡಿರುತ್ತೆ.

---

## Artificial Manures. *

## ತಯಾರಿಸಿದ ಗೊಬ್ಬರಗಳು.

ಪೈರುಗಳಿಗೆ ತಯಾರಿಸಿದ ಗೊಬ್ಬರಗಳನ್ನು ಉಪಯೋಗಿಸುವ ಉದ್ದೇಶವನ್ನು ಹಿಂದಿನ ಸಂಚಿಕೆಯಲ್ಲಿ ತಿಳಿಸಿದ್ದಾಯಿತು. ಈ ಗೊಬ್ಬರಗಳನ್ನು ಯಾವ ಕಾಲದಲ್ಲಿ ಮತ್ತು ಯಾವ ಕ್ರಮದಲ್ಲಿ ಉಪಯೋಗಿಸಬೇಕೆಂಬುವದನ್ನು ಈಗ ಸಂಕ್ಷೇಪವಾಗಿ ತಿಳಿಸುತ್ತೇವೆ. ತಯಾರಿಸಿದ ಗೊಬ್ಬರಗಳನ್ನು ಸಕಾಲದಲ್ಲಿ ಕ್ರಮವರಿತು ಉಪಯೋಗಿಸುವದರಲ್ಲಿ ಬಹಳ ಬುದ್ಧಿವಂತಿಕೆ ಬೇಕು. ಆದರೆ ಇವುಗಳ ಗುಣಸ್ವಭಾವಗಳಮೇಲೆ

* ಮದರಾಸ್ ಅಗ್ರಿಕಲ್ಚರಲ್ ಕ್ಯಾಲೆಂಡರ್, ೧೯೦೯.

ಉಪಯೋಗಿಸುವ ಕಾಲ ಕ್ರಮಗಳನ್ನು ಗೊತ್ತುಮಾಡಬಹುದು. ಹೇಗಂದರೆ, ಹುಲುಸಾಗಿ ಬೆಳೆಯುವ ಪೈರಿಡುವ ಸಂದರ್ಭಗಳಲ್ಲಿ ಸಸ್ಯಾಹಾರವನ್ನು ಒದಗಿಸಲು ಸುಲಭವಾಗಿ ಕರಗುವ ಮತ್ತು ಬೇಗನೆ ವ್ಯಾಪಿಸುವ ಗೊಬ್ಬರಗಳನ್ನುಪಯೋಗಿಸಬೇಕು. ಇದಕ್ಕೆ ದೃಷ್ಟಾಂತರ, ನೈಟ್ರೇಟ್ ಆಫ್ ಸೋಡ (Nitrate of Soda) ಗೊಬ್ಬರವನ್ನು ಜಮೀನಿನಲ್ಲಿ ಪೈರು ಇರುವಾಗ ಹಾಕಬೇಕು. ಮುಂಚೆಯೇ ಉಪಯೋಗಿಸಿದಲ್ಲಿ ಇದು ಭೂಮಿಯಿಂದ ಕೊಚ್ಚಿಹೋಗುವದು. ಅಮೋನಿಯ ಗೊಬ್ಬರಗಳನ್ನೂ ಇದೇರೀತಿಯಲ್ಲಿಯೇ ಉಪಯೋಗಿಸಬೇಕು. ಏಕಂದರೆ, ಅಮೋನಿಯ ಭೂಮಿಯಲ್ಲಿ ಬಹುಕಾಲ ನಿಲ್ಲುವದಾದರೂ ನೈಟ್ರೇಟಾಗಿ ರೂಪಾಂತರವನ್ನು ಹೊಂದಿ ಕೊಚ್ಚಿಹೋಗುತ್ತದೆ. ಭೂಮಿಯಲ್ಲಿ ಅಮೋನಿಯಾ ಬಹುಕಾಲ ನಿಲ್ಲುವ ಕಾರಣ ತರೀ ಜಮೀನುಗಳಿಗೂ ಮತ್ತು ಮಳೆಗಾಲಗಳಲ್ಲಿಯೂ ನೈಟ್ರೇಟು ಗೊಬ್ಬರಕ್ಕಿಂತಲೂ ಅಮೋನಿಯಾ ಗೊಬ್ಬರವನ್ನು ಉಪಯೋಗಿಸುವದು ಉತ್ತಮ. ಫಾಸ್ಫಾಟಿಕ್ (Phosphatic) ಮತ್ತು ಪೊಟಾಸಿಕ್ (Potassic) ಗೊಬ್ಬರಗಳು ಜಮೀನಿನಲ್ಲಿ ಬಹುಕಾಲ ನಿಲ್ಲುವ ಕಾರಣ ಅನುಕೂಲವರಿತು ಇವುಗಳನ್ನುಪಯೋಗಿಸಬೇಕು. ಹೇಗಂದರೆ, ಸೂಪರ್‌ಫಾಸ್ಫೇಟ್ ಗೊಬ್ಬರವನ್ನು ಸಾಮಾನ್ಯವಾಗಿ ಬಿತ್ತದೊಂದಿಗೆ ಕೂರಿಗೆಯಲ್ಲಿ ಹಾಕುತ್ತಾರೆ. ಅಥವಾ ಬಿತ್ತ ಚಲ್ಲುವ ದಿನವೇ ಇದನ್ನೂ ಚಲ್ಲುವದುಂಟು. ನಿಧಾನವಾಗಿ ವ್ಯಾಪಿಸುವ ಎಲಬು ಮೊದಲಾದ ಗೊಬ್ಬರಗಳನ್ನು ಬಿತ್ತನೆಗೆ ಅನೇಕ ತಿಂಗಳು ಮುಂಚೆಯೇ ಹಾಕಬಹುದು. ಹಾಕಿದ ಗೊಬ್ಬರವನ್ನು ಉಳಿಸಿಕೊಳ್ಳುವ ತ್ರಾಣ ಕಡಮೆಯಾದ ಪುಡಿ ಪುಡಿಯಾಗುವ ಹಗುರ ಮಣ್ಣಿನ ಜಮೀನುಗಳಿಗೆ ಜಾಗ್ರತೆ ಕರಗಿಹೋಗುವ ಗೊಬ್ಬರಕ್ಕಿಂತ ನಿಧಾನವಾಗಿ ಕರಗುವ ಗೊಬ್ಬರವನ್ನು ಹಾಕುವದು ಒಳ್ಳೇದು. ಏಕಂದರೆ, ಗೊಬ್ಬರವು ಕೊಚ್ಚಿಹೋಗುವ ಸಂಭವವು ಕಡಮೆಯಾಗುತ್ತದೆ.

ತಯಾರಿಸಿದ ಗೊಬ್ಬರಗಳು ಭೂಮಿಯಲ್ಲಿ ಹ್ಯೂಮಸ್‌ಸಾರವನ್ನು (Humus) ವೃದ್ಧಿಪಡಿಸುವ ಧಾತು ಪದಾರ್ಥಗಳನ್ನು ಒದಗಿಸಲಾರವು. ಸಸ್ಯ ಮತ್ತು ಪ್ರಾಣಿ ಸಂಬಂಧವಾದ ಪದಾರ್ಥಗಳು ಭೂಮಿಯಲ್ಲಿ ಕೊಳೆ

ತು ಅತ್ಯುತ್ತಮವಾಗಿ ಪರಿಣಮಿಸುವ ಸಾರವೇ ಹ್ಯೂಮಸ್ ಸಾರವೆಂಬುದ ನ್ನು ಹಿಂದಿನ ಸಂಚಿಕೆಗಳಲ್ಲಿ ತಿಳಿಸಿರುತ್ತೇವೆ. ಆದಕಾರಣ ಇಂಥಾ ಧಾ ತು ಪದಾರ್ಥಗಳಿಲ್ಲದಿರುವ ಈ ದೇಶದ ಜಮೀನುಗಳಿಗೆ ಈ ಗೊಬ್ಬರಗಳ ನ್ನು ಹಾಕುವದರಿಂದ ಇದರಲ್ಲಿನ ಹ್ಯೂಮಸ್ ಸಾರವು ಕಮ್ಮಿಯಾಗಿ ಭೂ ಮಿಯ ಸ್ಥಿತಿಯು ಬದಲಾಯಿಸಿ ಮುಂದಿಡುವ ಪೈರುಗಳಿಗೆ ಬಹಳ ವಿ ರೋಧವಾಗಬಹುದು. ಆದ್ದರಿಂದ ದನವಿನ ಗೊಬ್ಬರ, ಹಿಂಡಿಗಳು ಅಥ ವಾ ಹಸಿ ಸಸಿ ಗೊಬ್ಬರವೇ ಮೊದಲಾದ ಧಾತು ಪದಾರ್ಥಗಳಿಂದ ಕೂಡಿ ರುವ ಗೊಬ್ಬರಗಳೊಂದಿಗೆ ತಯಾರಿಸಿದ ಗೊಬ್ಬರಗಳನ್ನು ಬೆರಸಿಹಾಕು ವದೇ ಸರ್ವೋತ್ತಮವಾದ ಕ್ರಮ. ಪರಂತು ಈ ತಯಾರಿಸಿದ ಗೊಬ್ಬ ರಗಳನ್ನು ಪಯೋಗಿಸುವದರಲ್ಲಿ ಇವು ಯಾವ ಪೈರುಗಳಿಗೆ ಅನುಕೂಲವಾ ಗಿಯೂ ಮತ್ತು ಯಾವಕ್ಕೆ ಪ್ರತಿಕೂಲವಾಗಿಯೂ ಪರಿಣಮಿಸುವವೆಂಬ ಸಂಗತಿಗಳಿಗೆ ಗಮನಕೊಡಬೇಕು.

---

## Government Orders.
## ಸರ್ಕಾರಿ ಹುಕುಂಗಳು.

ನಂ. ಆರ್. ೧೪೯೦—೬೦೧—ಅಗ್ರಿ. ೬—೦೫—೩೧.
ತಾ|| ೧೯—೪—೧೯೦೯.

೧೯೦೮ನೆ ಸಾಲ್ ದಸರಾ ರೆಪ್ರೆಸೆಂಟೆಟಿವ್ ಅಸೆಂಬ್ಲಿ ಮೀಟಿಂಗಿನಲ್ಲಿ ಬತರೈತರಿಗೆ ಉತ್ಕೃಷ್ಟವಾದ ಬಿತ್ತವನ್ನು (ಬತ್ತ, ರಾಗಿ ಮತ್ತು ಜೋಳ) ಸಾಲ ಕೊಟ್ಟು ಅದರ ಕಿಮ್ಮತ್ತನ್ನು ಸುಗ್ಗಿಯಾದ ನಂತರ ಅವರಿಂದ ವ ಸೂಲು ತೆಗದುಕೊಳ್ಳುವ ಏರ್ಪಾಟು ಮಾಡಿಕೊಡುವ ವಿಚಾರದಲ್ಲಿ ಚರ್ಚೆ ನಡೆದು ಗೌರ್ನ್ಮೆಂಟಿನವರು ಹುಕುಂ ಮಾಡಿರುವದೇನಂದರೆ.—

ಬೀಜದ ಕೋಠಿಗಳನ್ನು ಸ್ಥಾಪಿಸುವದರಲ್ಲಿ ಎರಡು ಮುಖ್ಯ ಉದ್ದೇ ಶಗಳಿರುತ್ತವೆ.

೧. ಸಂಸ್ಥಾನದಲ್ಲಿ ಹಾಲಿ ಬೆಳೆಯುತ್ತಿರುವ ಧಾನ್ಯ ಮತ್ತು ಇತ ರ ಪೈರುಗಳ ಉತ್ತಮ ತರಹೆ ಬೀಜಗಳನ್ನು ರೈತರಲ್ಲಿ ಹಂಚುವದು.

೨. ಸಂಸ್ಥಾನದಲ್ಲಿ ಹಾಲಿ ಬೆಳೆಯದೆ ಇರುವ ಧಾನ್ಯದ ರಕಂಗಳ

ನ್ನು ಇಲ್ಲಿ ಹೊಸದಾಗಿ ರೂಢಿಗೆ ತರುವದು; ಉಚಿತವಾಗಿದ್ದಲ್ಲಿ ಅಂಥಾ ಬೀಜಗಳನ್ನು ತರಿಸಿ ರೈತರಿಗೆ ಹಂಚುವದು.

ಎರಡನೆ ತರಹೆ ಬೀಜಗಳನ್ನು ಭಾರಿಯಾಗಿ ತರಿಸುವದಕ್ಕೆ ಮೊದಲು ಇವುಗಳು ಎಲ್ಲೆಲ್ಲಿ ಚನ್ನಾಗಿ ಬೆಳೆಯುತ್ತವೆಂಬದು ತಿಳಿಯುವದಕ್ಕೆ ಅಜಮಾಯಿಷಿಗಳು ನಡೆಸಬೇಕಾದೀತು, ಮತ್ತು ಸಾಮಾನ್ಯ ರೈತರು ಈ ತರಹೆ ಬೀಜಗಳಿಂದ ಹೆಚ್ಚು ಪ್ರಯೋಜನ ಹೊಂದಲಾರರು. ಆದಕಾರಣ ಪ್ರಕೃತ ಸಂಸ್ಥಾನದಲ್ಲೇ ಬೆಳೆಯುವ ಬತ್ತ, ರಾಗಿ, ಎಳ್ಳು, ನೆಲಗಡ್ಲೆ ಮತ್ತು ಆಲುಗಡ್ಡೆ ಇವುಗಳನ್ನು ಮಾತ್ರ ಶೇಖರಿಸಿಡುವದು ಯುಕ್ತ ತೋರುತ್ತೆ.

ಬೆಂಗಳೂರಿನಲ್ಲಿರುವ ಲಾಲ್‌ಬಾಗ್ ತೋಟದಲ್ಲಿ ಬಿತ್ತನೆ ಬೀಜವನ್ನು ಶೇಖರಿಸಿಡುವದಕ್ಕೆ ಬೇಕಾಗುವ ಒಂದು ಕೋಠಿಯನ್ನು ಏರ್ಪಡಿಸಿ ಲಾಲ್‌ಬಾಗ್ ಸೂಪರಿಂಟೆಂಡೆಂಟರವರು ರೆವಿನ್ಯು ಕಮಿಷನರವರ ಸಲಹೆ ತೆಗೆದುಕೊಂಡು ಸಾಕಾದಷ್ಟು ಬೀಜಗಳನ್ನು ಜಮಾಯಿಸಿ ಇವನ್ನು ಶುದ್ಧಿಗೊಳಿಸಿ ಕೋಠಿಯಲ್ಲಿ ಶೇಖರಿಸಿಡುವ ಏರ್ಪಾಟುಗಳನ್ನು ಮಾಡಬೇಕು. ಹೀಗೆ ಕೋಠಿಯು ಕ್ರಮಪಟ್ಟು ಬೀಜದ ಧಾನ್ಯಗಳನ್ನು ಜಮಾಯಿಸಿ ಮಾರಾಟ ಮಾಡುವ ಏರ್ಪಾಟುಗಳು ಪೂರ್ತಿಯಾದ ನಂತರ ಈ ಸಂಗತಿಯನ್ನು ಎಲ್ಲರಿಗೂ ತಿಳಿಯುವ ರೀತಿ ಸೂಪರಿಂಟೆಂಡೆಂಟರವರು ಫಾಯಿಷ್‌ಮಾಡಬೇಕು. ಧಾನ್ಯವನ್ನು ಬೆಂಗಳೂರಿನಲ್ಲಿರುವ ಧಾರಣೆ ಮೇರೆಗೆ ವಿಕ್ರಯಿಸಬಹುದು. ಪ್ರತಿಸಾಲ್ ಆಖೈರಿನಲ್ಲೂ ಈ ಕೋಠಿಯ ಕೆಲಸದ ವಿಷಯವಾಗಿಯೂ ಮತ್ತು ಇದರಿಂದ ರೈತರಿಗೆ ಎಷ್ಟರಮಟ್ಟಿಗೆ ಪ್ರಯೋಜನ ಉಂಟಾಗಿರುತ್ತೆಂಬ ಭಾಗದಲ್ಲೂ ಸೂಪರಿಂಟೆಂಡೆಂಟರವರು ರಿಪೋರ್ಟುಮಾಡತಕ್ಕದ್ದು. ಈ ಭಾಗದಲ್ಲಿ ಸ್ವಲ್ಪ ಅನುಭವ ಬಂದ ತರುವಾಯ ಇತರ ಸ್ಥಳಗಳಲ್ಲಿಯೂ ಇಂಥಾ ಕೋಠಿಗಳನ್ನು ಏರ್ಪಡಿಸುವ ಅಂಶವನ್ನು ಆಲೋಚಿಸಲಾದೀತು.

---

## Fruit Growing in India. *

## ಇಂಡಿಯಾದೇಶದಲ್ಲಿ ಫಲಗಳ ವ್ಯವಸಾಯ.

ಪೂರ್ವದಲ್ಲಿ ಮನುಷ್ಯರಿಗೆ ಫಲಗಳು ಒಂದು ಮುಖ್ಯಾಹಾರವಾಗಿ

---

* ಇಂಡಿಯನ್ ಅಗ್ರಿಕಲ್ಚರಿಸ್ಟ್, ೧—೫—೦೯.

ದ್ದವು. ಕಾಲಗತಿಸಿದಹಾಗೆಲ್ಲಾ ಇವುಗಳಿಗೆ ಬದಲಾಗಿ ಇತರ ಆಹಾರ ಪದಾರ್ಥಗಳು ಒದಗಿ ಜನಸಂಖ್ಯೆಯೂ ಹೆಚ್ಚಿದ್ದರಿಂದ ಇವುಗಳ ಪ್ರಾಮುಖ್ಯತೆ ಕಡಮೆಯಾಗುತ್ತಾ ಬಂತು. ಆದರೂ ಇವುಗಳ ಖರೀದಿಯು ದಿನೇ ದಿನೇ ಹೆಚ್ಚಿರುತ್ತೆ. ಫಲಗಳ ಬೆಳೆಯನ್ನು ಹೆಚ್ಚಿಸುವದರಮೂಲಕ ಹೀಗೆ ಏರಿರುವ ಧಾರಣೆಯನ್ನು ಇಳಿಸಬಹುದು. ಆದರೆ ಈ ವ್ಯವಸಾಯವನ್ನು ಅಭಿವೃದ್ಧಿಪಡಿಸುವದಕ್ಕೆ ಒಂದು ಮುಖ್ಯವಾದ ತೊಂದರೆ ಏನೆಂದರೆ, ತತ್‌ಕ್ಷಣ ಲಾಭದಾಶೆಗೆ ಎಲ್ಲೆಲ್ಲೂ ಕೀಳು ರಖಂ ಫಲಗಳನ್ನೇ ಬೆಳೆಯುತ್ತಾರೆ. ಕೊಂಡುಕೊಳ್ಳುವವರೂ ಸಹ ಸ್ವಲ್ಪ ಅಗ್ಗದಾಶೆಗೆ ಈ ಹಣ್ಣುಗಳನ್ನು ಕೊಳ್ಳುತ್ತಾರೆ. ಇದರ ಫಲಿತಾಂಶವೇನೆಂದರೆ, ಶ್ರೇಷ್ಠ ರಖಂ ಫಲಗಳು ಅಪರೂಪವಾಗಿ ಇವುಗಳ ಹುಟ್ಟೆಲ್ಲದಂತಾಗುತ್ತೆ. ಈ ನ್ಯೂನತೆಯನ್ನು ಹೋಗಲಾಡಿಸಲು ಜನಗಳು ಉತ್ತಮತರಹ ಹಣ್ಣುಗಳನ್ನು ಸೇವಿಸುವದು ರೂಢಿಗೆ ತರುವತನಕ ಇವುಗಳ ವ್ಯವಸಾಯವು ವೃದ್ಧಿಹೊಂದುವ ಮಾರ್ಗವಿಲ್ಲ. ಅನನಾಸು, ಬಾಳೆ, ಕಲ್ಲಂಗಡಿ, ಪರಂಗಿಹಣ್ಣು, ದಾಳಿಂಬೆ, ಸೀಬೆ, ಪಿಚ್ಚೀಸು, ಲಕೋಟೆ, ಸೀತಾಫಲ, ಮಾವು, ಬ್ಯಾಲ, ನಿಂಬೆಜಾತಿ ಹಣ್ಣುಗಳು, ಹಲಸು, ತೆಂಗು, ಪನ್ನೇರಳೆ ಮೊದಲಾದ ಹಣ್ಣುಗಳನ್ನು ಈ ದೇಶದಲ್ಲಿ ಬೆಳೆದು ಲಾಭಹೊಂದಬಹುದು. ಇಂಡಿಯಾದೇಶದಲ್ಲಿ ಸಿಕ್ಕುವಷ್ಟು ಫಲಜಾತಿಗಳು ಇತರ ಕಡೆ ಇಲ್ಲವಾದುದರಿಂದ ಈ ವ್ಯಾಪಾರವನ್ನು ಅಭಿವೃದ್ಧಿಪಡಿಸಲು ಇಲ್ಲಿರುವಷ್ಟು ಸೌಕರ್ಯಗಳು ಇನ್ನೆಲ್ಲಿಯೂ ಇಲ್ಲ. ಇಂಡಿಯಾದಲ್ಲಿ ೧೯೦೬-೦೭ನೆ ಇಸವಿಯಲ್ಲಿ ೪೦ ಲಕ್ಷ ಎಕರೆ ಜಮೀನುಗಳು ಹಣ್ಣುಹಂಪಲುಗಳ ವ್ಯವಸಾಯದಲ್ಲಿದ್ದವು. ಈ ಪೈಕಿ ಮೈಸೂರು ಸಂಸ್ಥಾನದಲ್ಲಿ ೧೭೭,೨೮೦ ಎಕರೆಗಳು. ಇಲ್ಲಿ ಹಾಲಿ ಉತ್ಪತ್ತಿಯಾಗುವ ಫಲಗಳು ಇಲ್ಲಿನ ಉಪಯೋಗಕ್ಕೇನೇ ಸಾಲುವವಿಲ್ಲವಾದ್ದರಿಂದ ಇವುಗಳ ರಫ್ತು ವ್ಯಾಪಾರ ಬಹಳ ಕಮ್ಮಿ. ೧೯೦೭-೦೮ನೆ ಸಾಲ್‌ನಲ್ಲಿ ೫,೬೬,೭೪೦ ರೂಪಾಯಿಗಳ ಹಣ್ಣುಗಳು ಅನ್ಯದೇಶಗಳಿಗೆ ರಫ್ತಾಗಿ ೯೯,೯೭,೪೪ ರೂಪಾಯಿಗಳ ಹಣ್ಣುಗಳು ಈ ದೇಶಕ್ಕೆ ಆಮದಾಗಿರುತ್ತವೆ. ಫಲಗಳ ವ್ಯವಸಾಯವು ಮನಸ್ಸಿಗೆ ಸಂತೋಷ ಕೊಡತಕ್ಕ ಉದ್ಯೋಗವಾದ್ದರಿಂದ ವಿದ್ಯಾವಂತರು ಈ ಕೃಷಿಯಲ್ಲಿ ಉದ್ಯುಕ್ತರಾಗಬಹುದು. ಈ ವ್ಯವಸಾಯವನ್ನು ಅ

ಭಿವೃದ್ಧಿಪಡಿಸಿ ಲಾಭಹೊಂದಲು ಅವಕಾಶವಿರುವ ಕಡೆಗಳಲ್ಲಿ, ಮುಖ್ಯ ಕಾಳುಕಡಿಗಳ ಸುಗ್ಗಿ ಆದಮೇಲೆ ಉದ್ಯೋಗವಿಲ್ಲದ ಅನೇಕ ಬಡಬಗ್ಗರಿಗೆ ಈ ಫಲಗಳ ವ್ಯವಸಾಯದಿಂದ ಜೀವನೋಪಾಯವು ದೊರೆಯುತ್ತದೆ. ಈ ವ್ಯವಸಾಯದಲ್ಲಿ ಕಾಳುಕಡಿಗಳ ಬೆಳೆಗೆ ಬೇಕಾಗುವಷ್ಟು ಮುತವರ್ಜಿ ಅವಶ್ಯಕವಿಲ್ಲವಾದ್ದರಿಂದ ಈ ಉದ್ಯೋಗವನ್ನು ಅವಲಂಬಿಸುವದರಲ್ಲಿ ಅನುಕೂಲ ಉಂಟು. ಹೇಗಂದರೆ, ಧಾನ್ಯಾದಿಗಳು ಸಾಲ್ ಫಸಲಾದ್ದರಿಂದ ವರ್ಷ ವರ್ಷ ವಿಶೇಷ ದ್ರವ್ಯ, ಶ್ರಮ ಮತ್ತು ಮುತವರ್ಜಿ ಬೇಕು. ಒಂದು ಬೆಳೆ ಕೆಟ್ಟುಹೋದರೆ ಇಷ್ಟೂ ವ್ಯರ್ಥವಾಗಿ ಪುನಃ ಮೊದಲಿನಂತೆಯೆ ಅವಸ್ಥೆಪಡಬೇಕಾಗುತ್ತೆ. ಹಣ್ಣು ವ್ಯವಸಾಯದಲ್ಲಾದರೋ ಒಂದು ವರ್ಷ ಫಸಲು ಕೆಟ್ಟರೂ ಇಟ್ಟ ಲಾಗವಡು ಮತ್ತು ಪಟ್ಟ ಶ್ರಮವೂ ಪೂರಾ ವ್ಯರ್ಥವಾಗುವದಿಲ್ಲ. ಗಿಡಗಳು ಫಲಿಸುವದಿಲ್ಲ; ಆದರೆ ಅವಕ್ಕಾದ ಆರೈಕೆಯಿಂದ ಮುಂದಿನ ವರ್ಷ ಅನುಕೂಲ ಉಂಟಾಗುವದು. ಈ ವ್ಯವಸಾಯದಲ್ಲಿ ಅನೇಕ ತಿದ್ದುಪಾಟುಗಳನ್ನು ಮಾಡಬಹುದು. ಇವುಗಳನ್ನು ಕ್ರಮೇಣ ಮುಂದಿನ ಸಂಚಿಕೆಗಳಲ್ಲಿ ತಿಳಿಸುತ್ತೇವೆ.

---

## Correspondence.—Castor Seeds.
## ಕರೆಸ್ಪಾಂಡೆನ್ಸ್.-ಹರಳುಬೀಜ.

ಮೈಸೂರು ಪಟ್ಟಣದಲ್ಲಿರುವ „ಸ್ಟೀಂ ಆಯಿಲ್ ಅಂಡ್ ರೈಸ್ ಮಿಲ್ಸ್'' (The Steam Oil and Rice Mills) ಅಂದರೆ ಎಣ್ಣೆ ಮತ್ತು ಅಕ್ಕಿ ಕಾರ್ಖಾನೆಯ ಮ್ಯಾನೇಜರಾದ ಜಿ. ಎಸ್. ಜೋಸ್ಯರ್‌ಯವರು ತಮಗೆ ಮಾಹೆಯಾನ ಸುಮಾರು ಐನೂರು ಪಲ್ಲ ಹರಳುಬೀಜ ಬೇಕಾಗುವಕಾರಣ ಇದು ದೊರಿಯುವ ಸ್ಥಳ ಮತ್ತು ಇದರಲ್ಲಿ ವ್ಯಾಪಾರಮಾಡತಕ್ಕವರ ಹೆಸರು ವಿಳಾಸ ಹಾಗೂ ಈ ದೇಶದ ಮತ್ತು ಹೊರಗಿನ ಕಲ್ಲಿದ್ದಲು ವ್ಯಾಪಾರಮಾಡುವವರ ಹೆಸರು ಮತ್ತು ವಿಳಾಸ ಮುಂತಾದ ತಪಶೀಲುಗಳನ್ನು ತಿಳಿಯಲಪೇಕ್ಷಿಸುತ್ತಾರೆ.

ಈ ತಪಶೀಲುಗಳನ್ನು ತಿಳಿದಿರತಕ್ಕವರು ಮತ್ತು ಮೇಲ್ಕಂಡ ವ್ಯಾಪಾರವನ್ನು ನಡೆಸತಕ್ಕವರೂ ಸಹ ಜೋಸ್ಯರ್ ಅಂಡ್ ಸನ್ ಯವರಿಗೆ ಸೀದ ಬರೆಯಬಹುದು.

---

## Examination in Practical Agriculture.

### ರೂಢಿವ್ಯವಸಾಯದಲ್ಲಿ ಪರೀಕ್ಷೆ.

ಮೈಸೂರು ನಾರ್ಮಲ್ ಸ್ಕೂಲ್‌ನಲ್ಲಿ ಪ್ರತಿವರ್ಷ ನವೆಂಬರು ಮಾಹೆ ಆಖೈರು ವಾರದಲ್ಲಿ ರೂಢಿವ್ಯವಸಾಯದಲ್ಲಿ ಒಂದು ಪರೀಕ್ಷೆಯು ಕನ್ನಡದಲ್ಲಿ ನಡೆಸಲ್ಪಡುತ್ತದೆ.

ಈ ಪರೀಕ್ಷೆಗೆ ಮೇಲ್ಕಂಡ ಸ್ಕೂಲಿನ ಅಪ್ಪರ್ ಸೆಕಂಡೆರಿ ಟ್ರೇನಿಂಗ್ ಕ್ಲಾಸಿನಲ್ಲಿ ಒಂದುವರುಷ ರೂಢಿವ್ಯವಸಾಯದಲ್ಲಿ ತರಬೇತಾದ ವಿದ್ಯಾರ್ಥಿಗಳೂ ಮತ್ತು ವಿದ್ಯಾಭ್ಯಾಸ ಇಲಾಖೆಯ ಇನ್ಸ್‌ಪೆಕ್ಟರ್ ಜನರಲ್‌ಸಾಹೇಬರವರು ಒಪ್ಪಬಹುದಾದ ಇತರ ವಿದ್ಯಾರ್ಥಿಗಳೂ ಹೋಗಬಹುದು.

ಪರೀಕ್ಷಾವಿಷಯಗಳ್ಯಾವವೆಂದರೆ,

೧. ವ್ಯವಸಾಯ ಕ್ರಮಗಳು.—ರಾಗಿ, ಜೋಳ, ಬತ್ತ, ಗೋಧಿ, ಮೊದಲಾದ ಕಾಳುಗಳು; ತೊಗರಿ, ಅವರೆ, ಹುರಳಿ, ಕಡ್ಲೆ, ಅಲಸಂದಿ, ಮೊದಲಾದ ದ್ವಿದಳ ಧಾನ್ಯಗಳು; ನೆಲಗಡ್ಲೆ, ಹರಳು, ಅಚ್ಚೆಳ್ಳು, ಹುಚ್ಚೆಳ್ಳು, ಮೊದಲಾದ ಎಣ್ಣೆಬೀಜಗಳು ; ಜೋಳ ಮತ್ತು ಮಸಾಲಿಸೊಪ್ಪು ಮೊದಲಾದ ದನಗಳ ಮೇವುಪೈರುಗಳು ; ಹತ್ತಿ, ಸಣಬು, ಮೊದಲಾದ ನಾರುಪೈರು; ಮತ್ತು ಕಬ್ಬು, ಹೊಗೆಸೊಪ್ಪು, ಆಲುಗಡ್ಡೆ, ಗೆಣಸು, ಮೆಣಸಿನಕಾಯಿ, ನೀರುಳ್ಳಿ, ತೆಂಗು, ಅಡಿಕೆ, ಶುಂಠಿ ಮತ್ತು ಅರಸಿನ ಮೊದಲಾದ ಕೈಗಾರಿಕೆ ಸಂಬಂಧಪಟ್ಟ ಪೈರುಗಳು. ಈ ಪೈರುಗಳನ್ನು ವ್ಯವಸಾಯ ಮಾಡುವ ಕ್ರಮಗಳು.

೨. ಪೈರಿಗೆ ಬೀಳುವ ಹುಳುಗಳು ಮತ್ತು ಸಸ್ಯಜಾಡ್ಯಗಳು.—ಸಾಮಾನ್ಯವಾದ ಹುಳುಗಳ ಜೀವಿಕೆ ಮತ್ತು ಸ್ವಭಾವ, ಹಟ್ಟು ಮತ್ತು ಆಹಾರ, ಈ ವಿಷಯಕವಾದ ಸಾಮಾನ್ಯ ಸಂಗತಿಗಳು; ಮುಖ್ಯವಾದ ಪೈರುಗಳಿಗೆ ಹುಳುಗಳಿಂದಲೂ ಮತ್ತು ಬೂಜು ಕಟ್ಟುವದರಿಂದಲೂ ಉಂಟಾಗುವ ರೋಗಗಳು ಮತ್ತು ಇವುಗಳಿಗೆ ಕಂಡು ಹಿಡಿದಿರುವ ಪರಿಹಾರಗಳು; ಈ ಔಷಧಿಗಳ ಉಪಯೋಗ ಮತ್ತು ತಯಾರಿ.

ಈ ಪರೀಕ್ಷೆಯಲ್ಲಿ ತೇರ್ಗಡೆಹೊಂದಿದವರು ಸಂಸ್ಥಾನದ ಪಾಠಶಾಲೆಗ

ಳಲ್ಲಿ ವ್ಯವಸಾಯ ನಿದರ್ಶಕರು ಅಥವಾ ಕೃಷಿ ವ್ಯವಸಾಯ ಬೋಧಕರಾಗುವದಕ್ಕೆ ಯೋಗ್ಯರೆನ್ನಿಸಿಕೊಳ್ಳುವರು.

ಪರೀಕ್ಷೆಗೆ ಹೋಗಲು ಅಪೇಕ್ಷಿಸುವವರು ಆಗಸ್ಟ್ ೧೫ರ ಒಳಗಾಗಿ ತಮ್ಮ ಅಪ್ಲಿಕೇಷನ್‌ಗಳನ್ನು ಮೈಸೂರು ಲೋಕಲ್ ಎಗ್ಸಾಮಿನೇಷನ್ಸ್ ಮ್ಯಾನೇಜರವರಿಗೆ ಕಳುಹಿಸಬೇಕು. ಚಾಲ್ತಿ ಇಸವಿಯ ಪರೀಕ್ಷೆಗೆ ಸೆಪ್ಟಂಬರು ೩೦ರೊಳಗಾಗಿ ಅಪ್ಲಿಕೇಷನ್‌ಗಳನ್ನು ಕಳುಹಿಸಬಹುದು.

ಈ ಪರೀಕ್ಷೆಗೆ ೩ ರೂಪಾಯಿ ಅಪ್ಲಿಕೇಷನ್ ಫೀಜು ಆಗುತ್ತದೆ.

ಇನ್ನೂ ಹೆಚ್ಚಿಗೆ ತಪಶೀಲುಗಳನ್ನು ತಿಳಿಯಲಪೇಕ್ಷಿಸುವವರು ೧೯೦೯ನೆ ಆಗಸ್ಟ್ ೨೬ನೆ ತಾರೀಖಿನ ಮೈಸೂರು ಗೆಜೆಟಿನ (ಇಂಗ್ಲೀಷು) ೧೧೩೫ನೆ ಪೇಜನ್ನು ನೋಡಬಹುದಲ್ಲದೆ ವಿದ್ಯಾಭ್ಯಾಸ ಇಲಾಖೆಯ ಇನ್ಸ್ಪೆಕ್ಟರ್ ಜನರಲ್‌ರವರಿಗೂ ಸೀದಾ ಬರೆದುಕೊಳ್ಳಬಹುದು.

---

## Notifications.
## ಇಸ್ತಿಹಾರ್‌ನಾಮೆಗಳು.

ನಂ. ೨೨೯ ತಾ|| ೧೬—೮—೦೯.

ಮೈಸೂರು ಸರ್ವಿಸ್ ರೆಗ್ಯುಲೇಷನ್ಸ್ ೧೭೭ನೆ ಪ್ರಕರಣದ ಮೇರೆ ಶ್ರೀರಂಗಪಟ್ಟಣದ ತಾ|| ಅಮಲ್‌ದಾರ್ ಮೆ|| ಯಸ್. ವೆಂಕಟಾಚಾರ್ಯರಿಗೆ ಅವರು ಉಪಯೋಗಿಸಿಕೊಳ್ಳುವ ತಾರೀಖು ಲಾಗಾಯ್ತು ಒಂದು ತಿಂಗಳ ಪ್ರಿವಿಲೇಜ್ ರಜಾ ಕೊಟ್ಟಿರುತ್ತೆ.

೨. ಅವರ ಗೈರ್‌ಹಾಜರಿಯಲ್ಲಿ ಮೈಸೂರಿಂದ ಶ್ರೀರಂಗಪಟ್ಟಣಕ್ಕೆ ಹಾಲಿ ವರ್ಗವಾಗಿರುವ ತಾಲ್ಲೂಕು ಶಿರಸ್ತೇದಾರ್ ಸಿ. ಯಸ್. ತಾತಯ್ಯಂಗಾರನ್ನು ತಾಲ್ಲೂಕು ಅಮಲ್‌ದಾರಾಗಿ ಆಕ್ಟ್ ಮಾಡಲು ಮಂಜೂರು ಮಾಡಿರುತ್ತೆ.

---

ನಂ. ೨೪೩೮ ತಾ|| ೧೮—೮—೦೯.

ಮೈಸೂರು ಸರ್ವಿಸ್ ರೆಗ್ಯುಲೇಷನ್ಸ್ ೧೭೭ನೆ ಪ್ರಕರಣದ ಮೇರೆ

ಆಲೂರು ಸಬ್ ತಾ|| ಡೆಪ್ಯುಟಿ ಅಮಲ್‌ದಾರ್ ಮೆ|| ಎಸ್. ಅನಂತರಾಮಯ್ಯಂ ಗಾರಿಗೆ ಇದೇ ಇಸವಿ ಆಗಷ್ಟು ೧೬ನೆ ತಾರೀಖು ಲಾಗಾಯ್ತು ೧೫ ದಿನಗಳ ಪ್ರಿವಿಲೇಜ್ ರಜಾ ಕೊಟ್ಟಿರುತ್ತೆ.

೨. ಅವರ ಗೈರ್‌ಹಾಜರಿಯಲ್ಲಿ ಹಾಸನ ತಾ|| ಅಮಲ್‌ದಾರ್ ಮೆ|| ಎಸ್. ಎಣ್. ಅಪ್ಪಣ್ಣಯ್ಯಂಗಾರು, ಆಲೂರು ಸಬ್ ತಾ|| ಛಾರ್ಜಿನಲ್ಲಿಯೂ ಇರತಕ್ಕದ್ದು.

## Occasional Notes.
## ವಿವಿಧ ವೃತ್ತಾಂತಗಳು.

೧. ಜೋಳದ ಬಿತ್ತಕ್ಕೆ ಮೈಲುತ್ತವನ್ನು ಸವರಬೇಕಾದರೆ ಊರಿಡುವದು, ನೆನೇಹಾಕುವದು, ಈ ಎರಡು ವಿಧಾನದಲ್ಲಿ ಮಾಡುತ್ತಾರೆ. ಮೊದಲನೇ ಕ್ರಮದಲ್ಲಿ ಶೇಕಡಾ ೧೭ ರಷ್ಟು ಮೈಲುತುತ್ತವಿರುವಂತೆ ೫ ಸೀಸೆ ನೀರಿನಲ್ಲಿ ಒಂದು ಪೌಂಡು ಮೈಲುತ್ತವನ್ನು ಕರಗಿಸಿ ಬಿತ್ತದ ರಾಶಿಯ ಮೇಲೆ ಚೆಲ್ಲಿ ಅದು ಸರಿಯಾಗಿ ಕಲಿಯುವರೀತಿ ಕೈಯಿಂದ ಚೆನ್ನಾಗಿ ಉಜ್ಜಬೇಕು. ಸರಿಯಾಗಿ ಕಲೆತರೆ ಬೀಜದ ಸುತ್ತಲೂ ಮೈಲುತ್ತವು ತೆಳ್ಳಗೆ ಅಂಟುತ್ತೆ. ಸಣ್ಣರಾಶಿಯಾಗಿದ್ದರೆ ಈ ಕೆಲಸ ಕೆಲವು ನಿಮಿಷಗಳಲ್ಲಿ ಪೂರೈಸುತ್ತೆ. ನಂತರ ಇದನ್ನು ಒಣಗಿಸಲಿಕ್ಕೆ ಬಿಸಲಿನಲ್ಲಿ ಹರಡಬೇಕು. ಬಿತ್ತವನ್ನು ನೆನೆಹಾಕುವ ಭಾಗದಲ್ಲಿ ಶೇಕಡಾ ೭ ರಷ್ಟು ಮೈಲುತ್ತ ವಿರುವಂತೆ ೫೦ ಪೌಂಡು ನೀರಿನಲ್ಲಿ ಒಂದು ಪೌಂಡು ಮೈಲುತ್ತವನ್ನು ಕರಗಿಸಿ ಇದರಲ್ಲಿ ಬಿತ್ತವನ್ನು ಸುಮಾರು ೧೦ ನಿಮಿಷಗಳು ನೆನೇಹಾಕಿ ನಂತರ ಒಣಗಿಸಬೇಕು.—ಸೆಂಟ್ರಲ್ ಪ್ರಾವಿನ್ಸಸ್ ಅಗ್ರಿಕಲ್ಚರಲ್ ಗೆಜೆಟ್—ಜುಲೈ ೧೯೦೯.

೨. ಕಬ್ಬಿನ ಹಾಲಿನಿಂದಲೇ ಸಕ್ಕರೆ ತಯಾರ್‌ಮಾಡುವ ಕ್ರಮ.—ಹೊಸತರಹೆ ಗಾಣದಲ್ಲಿ ಕಣೆಗಳ ನಡುವೆ ಕಬ್ಬು ಕೊಟ್ಟು ರಸ ಹಿಂಡಿ ನಂತರ ರಸವನ್ನು ಸೋಸಿ ಕಾಯಿಸಬೇಕು. ಶಿಪ್ಪೆಯು ಒಲೆಗೆ ಉಪಯೋಗಪಡುತ್ತೆ. ಕಾದ ಹಾಲಿಗೆ ಸುಣ್ಣವನ್ನು ಬೆರಸಿ ತಿಳಿಯಾಗುವದಕ್ಕೆ ಇಟ್ಟು

ನಂತರ ಮಣ್ಣು ಮತ್ತು ಇತರ ಕಲ್ಮಷಗಳು ಇಲ್ಲದಂತೆ ಸೋಸಿ ತಿಳಿ ರಸವನ್ನು ತೆಗೆಯಬೇಕು. ಈ ರಸವನ್ನು ಇದಕ್ಕಾಗಿ ರಚಿಸಲ್ಪಟ್ಟ ಎಂತ್ರದಲ್ಲಿ ಇಂಗಿಸಬೇಕು. ಈ ಕೆಲಸವನ್ನು ಆವಿಯ ಬಲದಿಂದ ಎಂತ್ರದಲ್ಲಿರುವ ವಾಯುವನ್ನು ಕಡಮೆಮಾಡುವದರ ಮೂಲಕ ಶಾಖವನ್ನು ಕ್ರಮಪಡಿಸಿ ರಸದ ಗುಣವು ಕೆಡದರೀತಿ ನಡೆಸಬೇಕು. ನಂತರ ಮಂದವಾದ ರಸವನ್ನು ವಾಯು ಹೊರಡಿಸಿದ ಕೊಪ್ಪರಿಗೆಯಲ್ಲಿ (Vacuum Pan) ಕಾದಿಸಿ ಸಕ್ಕರೆಯ ಹರಳುಗಳು, ಕಾಕಂಬಿ ಮತ್ತು ಸ್ವಲ್ಪ ನೀರು ಉಳಿದಿರುವಂತೆ ಮಂದವಾದ ಪಾಕಕ್ಕೆ ಇಳಿಸಿ ಆಮೇಲೆ ಈ ಪಾಕವನ್ನು ಸೆಂಟ್ರಿಫ್ಯೂಗಲ್ ಎಂತ್ರಗಳಲ್ಲಿ (Centrifugal Machines) ಹಾಕಿ ತಿರಗಿಸಿದಲ್ಲಿ ಮರಳು ಮರಳಾದ ಸಕ್ಕರೆಯು ಪ್ರತ್ಯೇಕವಾಗುವದು.

---

೩. ಸೆಂಟ್ರಲ್ ಪ್ರಾವಿನ್ಸಸ್‌ನಲ್ಲಿ ತೂರುವ ಎಂತ್ರಗಳಿಗೆ ಗಿರಾಕಿಯು ದಿನೇ ದಿನೇ ಹೆಚ್ಚುತ್ತಿದೆಯಂತೆ. ಹಿಂದಿನ ವರುಷ ನಾಲ್ಕೇ ಎಂತ್ರಗಳು ಮಾರಾಟವಾಗಿ ಚಾಲ್ತಿ ಸಾಲಿನಲ್ಲಿ ೩೦—೪೦ ಎಂತ್ರಗಳು ಮಾರಾಟವಾಗಿರುತ್ತೆ. ಇದಕ್ಕೆ ಕಾರಣವೇನಂದರೆ,

(೧) ಪ್ರತಿ ಗ್ರಾಮದಲ್ಲೂ ಈ ಎಂತ್ರದ ಉಪಯೋಗ ಮತ್ತು ಕೆಲಸವನ್ನು ರೈತರಿಗೆ ನಿದರ್ಶನ ಪೂರ್ವಕವಾಗಿ ತೋರಿಸಿದ್ದರಿಂದ ರೈತರೂ ಜಮೀನುದಾರರೂ ಎಂತ್ರವನ್ನು ತಾವೇ ಸ್ವತಃ ನಡೆಸಿ ಅದರ ಯೋಗ್ಯತೆಯನ್ನು ತಿಳಿದುಕೊಳ್ಳುವದಕ್ಕೆ ಸಾಧ್ಯವಾಯಿತು.

(೨) ಈ ಪ್ರಾಂತ್ಯ ಸುಮಾರು ೧೪ ದಿನಗಳು ಏಕ ಪ್ರಕಾರವಾಗಿ ಭಾರಿಮಳೆ ಬೀಳುತ್ತಿದ್ದದ್ದರಿಂದ ಕೈಯಿಂದ ಕಾಳು ತೂರುವದಕ್ಕೆ ಅಸಾಧ್ಯವಾಗಿ ಕಣದಲ್ಲಿಯೇ ಕಾಳು ಬಲಿತು ದಪ್ಪವಾಯಿತು. ಆ ಸಮಯದಲ್ಲಿ ಎಂತ್ರದಿಂದ ಕೆಲಸ ನಡೆಸಿ ದಿನಕ್ಕೆ ೮ ಘಂಟೆಗಳಲ್ಲಿ ೧೧೦ ರಿಂದ ೧೨೦ ಮಣದವರೆಗೂ (ಬಂಗಾಳಾ) ಶುದ್ಧವಾದ ಧಾನ್ಯವನ್ನು ತೂರಿ ಮಳೆ ಘಾಳಿಯನ್ನು ಲಕ್ಷಿಸದೆ ಈ ಎಂತ್ರದಿಂದ ತೂರುವ ಕೆಲಸ ನಡೆಸಬಹುದೆಂಬದನ್ನು ರೈತರಿಗೆ ತೋರಿಸಿಕೊಟ್ಟದ್ದು ಉಪಯೋಗಕರವಾಯಿತು.

V. B. Soobbiah & Sons, Printers, Bangalore.—1909.

THE MYSORE

# REVENUE & AGRICULTURAL GAZETTE.

ವಾಲ್ಯೂಂ ೩.] ಬುಧವಾರ, ೧೫ನೆ ಸೆಪ್ಟೆಂಬರ್ ೧೯೦೯. [ನಂ. ೨೨.

## Contents.



## ಅನುಕ್ರಮಣಿಕೆ.

## Cattle-Breeding and Pasturage. *

## ದನಗಳ ಸಾಕಾಣಿಕೆ ಮತ್ತು ಮೇವು.

ಕೆಲವುಜಾತಿ ರಾಸುಗಳು ಕೆಲವು ಪ್ರಾಂತ್ಯಗಳಲ್ಲಿ ಏಳಿಗೆಹೊಂದುವ
ದಿಲ್ಲ. ಆದಕಾರಣ ಸಾಮಾನ್ಯವಾಗಿ ದೂರದಿಂದ ಹೊಸ ಜಾತಿ ದನಗಳ
ನ್ನು ತರುವದಕ್ಕಿಂತಲೂ ಸ್ಥಳೀಯ ರಾಸುಗಳನ್ನೆ ಉತ್ತಮಪಡಿಸಿಕೊ
ಳ್ಳುವದು ಒಳ್ಳೇದು. ಒಂದು ಕಡೆಯ ದನಗಳನ್ನು ಕೇವಲ ಅಲ್ಲಿನ ಗೂ
ಳಿಗಳಿಂದಲೇ ವೃದ್ಧಿಪಡಿಸಿಕೊಳ್ಳುವದರಲ್ಲಿ ಹುಟ್ಟುವ ಕರುಗಳು ರೂಪಿನಲ್ಲಿ
ಖಾತ್ರಿಯಾಗಿದ್ದಾಗ್ಯೂ ಇದೇ ಕ್ರಮವನ್ನು ಒಂದೆರಡು ತಲೆಗಳು ಅನುಸರಿ
ಸಿದ್ದಾದರೆ ವಿರೋಧವಾಗುತ್ತದೆ. ಈ ರಾಸುಗಳ ಗುಣಸ್ವಭಾವಗಳ
ನ್ನು ಹೋಲುವ ಹೋರಿಗಳು ಆಸ್ ಪಾಸ್ ಗ್ರಾಮಗಳಲ್ಲಿ ಸುಲಭವಾಗಿ ದೊ
ರೆಯುತ್ತವೆ; ಇವುಗಳನ್ನು ಉಪಯೋಗಿಸಬಹುದು. ಈ ದೇಶದ ದನ
ಗಳನ್ನು ಮಂದೆಯಲ್ಲಿ ಮೇಯಿಸುವ ಪದ್ಧತಿಯೇ ದನಗಳು ಕೆಡುವದಕ್ಕೆ
ಒಂದು ಮುಖ್ಯ ಕಾರಣ.

ಗೂಳಿಗಳ ಮೂಲಕ ತಳಿಗಳನ್ನು ಉತ್ತಮಪಡಿಸುವದೇ ಒಳ್ಳೇ
ಕ್ರಮ. ಗೂಳಿಗಳು ನೋಟಕ್ಕೆ ಪುಷ್ಟಿಯಾಗಿಯೂ ಮತ್ತು ಅಂದವಾ
ಗಿಯೂ ಇದ್ದ ಮಾತ್ರಕ್ಕೆ ತಳಿಯನ್ನು ವೃದ್ಧಿಪಡಿಸುವದಕ್ಕೆ ಲಾಯಖ್ಖಾ
ಗುವದಿಲ್ಲ. ಹೇಗಂದರೆ, ಅವುಗಳ ಕಾಲುಗಳು ಸೊಟ್ಟನಾಗಿರಬಹುದು
ಅಥವ ಪಾದಗಳು ಅಸಹ್ಯವಾಗಿ ಹರಡಿಕೊಂಡಿರಬಹುದು. ಇದೇ ಮೊದ
ಲಾದ ಇತರ ಐಬುಗಳಿರುವವುಗಳನ್ನು ಈ ಕೆಲಸಕ್ಕೆ ಉಪಯೋಗಿಸಬಾರ
ದು. ಕಾಲು ಬಲವಾಗಿಯೂ ಮತ್ತು ನೇರವಾಗಿಯೂ ಗೊರಸುಗಳು
ಬಹಳ ಸಂದು ಬಿಡದೇಲೂ ಇರುವ ಗೂಳಿಗಳನ್ನೇ ಹಸುಗಳ ಮೇಲೆ ಹಾರಿ
ಸಬೇಕು. ಹಸುವಿನಲ್ಲಿ ಐಬು ಇದ್ದರೆ ಇದರಿಂದ ಒಂದು ಐಬುಳ್ಳ ಕರು
ಹುಟ್ಟಬಹುದು. ಆದರೆ ವಕ್ರವಾದ ಗೂಳಿಯಿಂದ ೪೦ ಕರುಗಳ ಆರೋ
ಗ್ಯ ಮತ್ತು ಬಲ ಕೆಡುತ್ತದೆ. ಆದಪ್ರಯುಕ್ತ ಬಲವಾದ ಮತ್ತು ಕಾಲು
ಪಾದಗಳುಳ್ಳ ಆರೋಗ್ಯವಾದ ಮತ್ತು ಬಲವಾದ ಗೂಳಿಯನ್ನೇ ಆಕಳು
ಮಂದೆಯಲ್ಲಿಡುವದು ಅತ್ಯವಶ್ಯಕ. ಶ್ರೇಷ್ಠವಾದ ಗೂಳಿಗಳನ್ನು ಹೊಂ

* ಮದರಾಸ್ ಅಗ್ರಿಕಲ್ಚರಲ್ ಕ್ಯಾಲೆಂಡರ್, ೧೯೦೯.

ಗಿನಿಂದ ಸುಮ್ಮನೆ ತರಿಸಿದ ಮಾತ್ರಕ್ಕೆ ಪ್ರಯೋಜನವಿಲ್ಲ. ರಾಸುಗಳಿಗೆ ಒಳ್ಳೆ ಮೇವು ತಿನ್ನಿಸಬೇಕು. ಕರುಗಳಿಗೆ ತಾಯಿಯ ಹಾಲಿನಲ್ಲಿ ಅರ್ಧ ಮತ್ತು ಅಲ್ಪ ಸ್ವಲ್ಪ ಹುಲ್ಲಿನಿಂದ ಬೆಳವಳಿಕೆ ಉಂಟಾಗಲಾರದು. ಹಸುಗಳಿಗೆ ಚೆನ್ನಾಗಿ ತಿಂಡಿ ಹಾಕಿ ಕರುಗಳನ್ನು ಮಕ್ಕಳಂತೆ ಸಾಕಿಕೊಂಡು ಒರುವವರಲ್ಲೀನೇ ಉತ್ತಮವಾದ ರಾಸುಗಳು ಇರುವವು.

ಆರಂಬ ಚೆನ್ನಾಗಿರುವ ಕಡೆಗಳಲ್ಲೂ ಮತ್ತು ಮೇವಿಗಾಗಿಯೇ ಬೆಳೆ ತೆಗೆಯುವ ಕಡೆಗಳಲ್ಲೂ ಒಳ್ಳೆ ದನಗಳು ವಿಶೇಷ. ಕಾವಲುಗಳಲ್ಲಿ ಹುಲ್ಲು ಯಾವಾಗಲೂ ದೊರೆಯುವದಿಲ್ಲ. ಆದ್ದರಿಂದ ಪ್ರಾಯದ ರಾಸುಗಳು ಆರೋಗ್ಯವಾಗಿಯೂ ಬಲವಾಗಿಯೂ ಇರುವಂತೆ ಕಾಪಾಡಬೇಕಾದರೆ ಮೇವು ಬೆಳೆದು ಕೂಡಿಟ್ಟಿರಬೇಕು.

ಫಾರೆಸ್ಟು ರಿಜರ್ವುಗಳಲ್ಲಿ ದನಗಳನ್ನು ಮೇಯಿಸುವದಾದರೆ ಒಂದು ಕ್ರಮವನ್ನು ಅನುಸರಿಸಿದರೆ ಬಹಳ ಪ್ರಯೋಜನವುಂಟು. ಹೇಗಂದರೆ, ದನಗಳನ್ನು ಸ್ವೇಚ್ಛೆಯಾಗಿ ಬಿಡದೆ ರಿಜರ್ವುಗಳನ್ನು ತಾಕುಗಳಾಗಿ ವಿಂಗಡಿಸಿ ಒಂದು ತಾಕು ಆದನಂತರ ಮತ್ತೊಂದರಂತೆ ಕ್ರಮವಾಗಿ ಮೇಯಿಸಿದ್ದಾದರೆ ಹುಲ್ಲು ದನವಿನ ತುಳಿತಕ್ಕೆ ಗುರಿಯಾಗದೆ ಚೆನ್ನಾಗಿ ಬೆಳೆದು ಕೊನೆ ತಾಕಿಗೆ ಬಂದಾಗ ಮೊದಲು ತಾಕಿನಲ್ಲಿ ಹುಲ್ಲು ಎದ್ದು ಬಹಳ ದಿನ ತಡೆಯುತ್ತದೆ. ಸಾಮಾನ್ಯವಾಗಿ ಹಳ್ಳಿ ಹೋರಿಗಳನ್ನು ದನಗಳನ್ನು ಒಟ್ಟಾಗಿ ಮೇಯಿಸುವ ವಾಡಿಕೆ ಇದೆ. ಇವು ಸಿಕ್ಕಿದಹಾಗೆ ಸೇರಿ ಕೆಲಸಕ್ಕೆ ಬಾರದ ಕರುಗಳು ಹುಟ್ಟುತ್ತವೆ. ನಾಲಾಯಖಾದ ಹೋರಿಗಳನ್ನು ಹಿಡಮಾಡಿದ ವಿನಹ ಇದನ್ನು ತಪ್ಪಿಸಲಾಗಲಾರದು; ಮತ್ತು ಮುಂದೆಯಲ್ಲಿ ಇಂಥಾ ಹೋರಿಗಳು ಹಸುಗಳೊಂದಿಗೆ ಸೇರದಂತೆ ಮಾಡುವದು ಅಸಾಧ್ಯವಾದ್ದರಿಂದ ಇವುಗಳನ್ನು ಹಿಡಮಾಡುವದೊಂದೇ ಉಪಾಯ. ಸಾಮಾನ್ಯವಾಗಿ ಹೋರಿಗಳನ್ನು ೩ನೆ ವರುಷದಲ್ಲಿ ಹಿಡಮಾಡುವದುಂಟು. ಆದರೆ ಇವು ಇಷ್ಟರಲ್ಲಿಯೇ ಕೇಡು ಉಂಟುಮಾಡುತ್ತವೆಯಾಗಿ ಇವುಗಳನ್ನು ಹನ್ನೆರಡು ತಿಂಗಳು ತುಂಬಿದ ಕೂಡ್ಲೆ ಹಿಡಮಾಡಿದಲ್ಲಿ ಆರೋಗ್ಯವಾಗಿಯೂ ಅಂದವಾಗಿಯೂ ಸಾಧುವಾಗಿಯೂ ಬೆಳೆದು ನೇಗಲಿಗೆ ಹೂಡುವದಕ್ಕೆ ಲಾಯಖಾಗುತ್ತವೆ.

ಒಂದೆರಡು ಶ್ರಾಯದ ಗೂಳಿಗಳನ್ನು ಮಾತ್ರ ಚುನಾಯಿಸಿ ಹಸುಗಳ ಮಂದೆಯಲ್ಲಿ ಬಿಡಬೇಕು. ಇವಕ್ಕೆ ಹೆಚ್ಚು ತಿಂದಿ ಕೊಟ್ಟು ಆರೋಗ್ಯವಾಗಿಯೂ ಮತ್ತು ಬಲವಾದ ಸ್ಥಿತಿಯಲ್ಲಿಯೂ ಇಡಬೇಕು. ಗೂಳಿಗಳನ್ನು ಒಂದೇಕಡೆ ಕಟ್ಟಬಾರದು. ಏಕೆಂದರೆ, ಇವು ಬಲಗುಂದಿ ಕೀಲುಗಳು ಹಿಡಿದು ಬಹಳ ತುಂಟಾಗುವವು. ಸ್ವೇಚ್ಛೆಯಾಗಿ ತಿರಗಾಡುವದಕ್ಕೆ ಬಿಟ್ಟಲ್ಲಿ ಶಕ್ತಿ ಹೆಚ್ಚುವದು.

---

## Cultural Improvements in Fruit Growing.

## ಫಲವ್ಯವಸಾಯದಲ್ಲಿ ತಿದ್ದುಪಾಟುಗಳು.

ಇಂಡಿಯಾ ದೇಶದಲ್ಲಿ ಫಲವ್ಯವಸಾಯದ ಸಧ್ಯ ಸ್ಥಿತಿಯನ್ನು ಕುರಿತು ಹಿಂದಣ ಸಂಚಿಕೆಯಲ್ಲಿ ಪ್ರಸ್ತಾಪಿಸಿರುತ್ತೇವೆ. ಪ್ರಕೃತ ಈ ಭಾಗದಲ್ಲಾಗಬೇಕಾದ ತಿದ್ದುಪಾಟುಗಳನ್ನು ಸಂಕ್ಷೇಪವಾಗಿ ತಿಳಿಸುತ್ತೇವೆ.

ಫಲವ್ಯವಸಾಯವು ಹೀನಸ್ಥಿತಿಯಲ್ಲಿರುವದಕ್ಕೆ ಕಾರಣವೇನಂದರೆ, ಈ ವ್ಯವಸಾಯದಲ್ಲಿ ಹಣ್ಣಿನ ಉತ್ಪತ್ತಿಯನ್ನು ಜಾಸ್ತಿ ಮಾಡಬೇಕೆಂಬುವದು ಪ್ರಾಧಾನ್ಯವಾಗಿರುತ್ತೇ ಹೊರತು ಅದರ ಗುಣವನ್ನು ಉತ್ತಮಪಡಿಸುವದರಲ್ಲಿ ಗಮನ ಕಡಿಮೆ. ಹೆಚ್ಚಾಗಿ ಉತ್ತಮ ರಕಂ ಹಣ್ಣುಗಳನ್ನು ಬಿಡುವ ಗಿಡಗಳನ್ನು ಚುನಾಯಿಸಿ ಬೆಳೆಯುವದರಲ್ಲಿ ಪ್ರಯತ್ನ ನಡೆಸಿದರೆ ಒಳ್ಳೇದು. ಹೇಗಂದರೆ, ಈರೀತಿ ಚುನಾಯಿಸದೇ ಒಂದೇ ಜಾತಿ ಹಣ್ಣನ್ನು ಏಕಪ್ರಕಾರವಾಗಿ ಬೆಳೆಯುವದರಿಂದ ಅದರ ಗುಣವು ಕ್ರಮೇಣ ಕುಂದಿ ಹೋಗುವದು. ಇತರ ದೇಶಗಳಲ್ಲಿಯಾದರೋ ಚುನಾವಣೆ ಮೂಲಕವೂ ಮತ್ತು ಕಸಿ ಮಾಡುವದರ ಮೂಲಕವೂ ಉತ್ತಮ ರಕಂ ಹಣ್ಣುಗಳನ್ನು ಬೆಳೆಯಲು ಸದಾ ಪ್ರಯತ್ನಗಳು ನಡೆಯುತ್ತಿವೆ. ಮತ್ತು ಹೊಸರಕಂ ದೊರೆಯುತ್ತಲೆ ಹಳೇದನ್ನು ತ್ಯಜಿಸಿಬಿಡುತ್ತಾರೆ. ಆದಕಾರಣ ಆ ರಾಜ್ಯಗಳಲ್ಲಿ ಹಣ್ಣಿನ ರಕಂ ದಿನೇ ದಿನೇ ಉತ್ತಮಪಡುತ್ತಿದೆ. ಇಲ್ಲಿಯಾದರೋ ಈಭಾಗದಲ್ಲಿ ಗಮನ ಕಡಿಮೆಯಾದ್ದರಿಂದ ಕೀಳಾಗುತ್ತಿದೆ.

ಇಲ್ಲಿನ ವ್ಯವಸಾಯ ಕ್ರಮಗಳಲ್ಲಿರುವ ಇತರ ನ್ಯೂನತೆಗಳನ್ನೂ ಸರಿಪ

---

* ಇಂಡಿಯನ್ ಅಗ್ರಿಕಲ್ಚರಿಸ್ಟ್, ೧—೫—೧೯.

ಡಿಸುವದು ಅವಶ್ಯಕ. ಅನೇಕ ಕಡೆಗಳಲ್ಲಿ ಕೆಲವು ತೋಟಗಳು ಕಶಿ, ಗೊಬ್ಬರ, ಅಗತೆ, ಮುಂತಾದವುಗಳನ್ನು ಕಂಡೇ ಇರುವದಿಲ್ಲ. ಯೂರೋಪಿಯನ್ ದೇಶಗಳಲ್ಲಿ ಹಣ್ಣು ಬೆಳೆಯುವವರು ವಿಶೇಷ ಗಮನ ಕೊಡುವ ಅಂಶಗಳ್ಯಾವವೆಂದರೆ, (೧) ಗಿಡದಿಂದ ಗಿಡಕ್ಕೆ ಎಷ್ಟು ದೂರ ಬಿಟ್ಟಿರಬೇಕು (೨) ಚೆನ್ನಾಗಿ ಉಕ್ಕೆ ನಡುವದು, ಹಸಿಸಬಿ ಗೊಬ್ಬರವಾಗುವ ಪೈರುಗಳನ್ನು ಬಿತ್ತುಬಿಡುವದು, ಭೂಮಿಯ ಮೇಲೆ ಹುಲ್ಲು ಹೊದ್ದಿಕೆಯನ್ನು (Grass mulch) ಕಲ್ಪಿಸುವದೇ ಮೊದಲಾದ ಉಪಾಯಗಳಿಂದ ಜಮೀನನ್ನು ಹಸನ ಸ್ಥಿತಿಯಲ್ಲಿಡುವದು, (೩) ಕಶಿ ಕ್ರಮ, (೪) ಚೀರ್ಕೊಳವೆಯ ಉಪಯೋಗ (Spraying)-ಅಂದರೆ, ರೋಗತಗಲಿದ ಅಥವಾ ಹುಳು ಬಿದ್ದ ಗಿಡಗಳಿಗೆ ಔಷಧಿ ದ್ರಾವಕಗಳನ್ನು ಈ ಕೊಳವೆಗಳ ಮೂಲಕ ಎರಚುವದು, (೫) ಹೆಚ್ಚು ಕಾಯಿಗಳು ಬಿಟ್ಟಿದ್ದರೆ ಅವುಗಳನ್ನು ಉದರಿಸಿ ತೆಳ್ಳಗೆ ಮಾಡುವದು. ಒಂದು ಮತ್ತು ಎರಡನೇ ಅಂಶಗಳನ್ನು ಈ ದೇಶದವರು ಸ್ವಲ್ಪ ತಿಳಿದಿರಬಹುದು. ಮಿಕ್ಕವುಗಳ ಪ್ರಾಮುಖ್ಯತೆಯನ್ನು ಇವರು ಸರಿಯಾಗಿ ಅರಿತಿರುವದಿಲ್ಲ. ಬೂಜು ಮತ್ತು ಹುಳುಗಳಿಂದುಂಟಾಗುವ ರೋಗಗಳನ್ನು ತಪ್ಪಿಸುವದಕ್ಕೆ ಇವರು ತಕ್ಕ ಪರಿಹಾರಗಳನ್ನು ತಿಳಿದಿರುವದಿಲ್ಲವಾದಕಾರಣ ಪ್ರತಿಸಾಲಿನಲ್ಲಿಯೂ ಮರದ ಮೇಲೂ ಮರದಿಂದ ಇಳಿಸಿದ ನಂತರವೂ ಕೋಟ್ಯಂತರ ಹಣ್ಣುಗಳು ಕೊಳೆತು ನಾಶವಾಗುತ್ತಿವೆ, ಇಲ್ಲಿ ಹಣ್ಣು ಬೆಳೆಯುವ ಪ್ರದೇಶದ ಭೂಮಿಯು ಸ್ವಾಭಾವಿಕವಾಗಿ ಅಷ್ಟು ನಿಕೃಷ್ಟವಾದ್ದಲ್ಲ. ಈ ಭೂಮಿಗಳನ್ನು ಒಳ್ಳೆ ಸ್ಥಿತಿಗೆ ತಂದು ಗಿಡಗಳನ್ನು ಉತ್ತಮ ರೀತಿಯಲ್ಲಿ ಬೆಳೆಸಿದ್ದಾದರೆ ವಿಶೇಷ ಅನುಕೂಲವಾದೀತು. ಮುಖ್ಯವಾಗಿ ಭೂಗುಣವನ್ನನುಸರಿಸಿ ಶ್ರೇಷ್ಠ ರಖಂ ಹಣ್ಣುಗಳನ್ನು ಚುನಾಯಿಸಿ ಬೆಳೆಯುವದು, ತಕ್ಕ ಗೊಬ್ಬರಗಳನ್ನು ಬುದ್ಧಿವಂತಿಕೆಯಿಂದ ಉಪಯೋಗಿಸುವದು ಮತ್ತು ಉತ್ತಮ ತರಹೆ ವ್ಯವಸಾಯ ಕ್ರಮಗಳನ್ನು ರೂಢಿಗೆತರುವದು, ಈ ಮೂರು ಮಾರ್ಗಗಳಲ್ಲಿ ತಿದ್ದುಪಾಟುಗಳು ಸಧ್ಯ ನಡೆಯ ಬೇಕಾಗಿರುತ್ತೆ. ಬೆಳೆಯುವ ಕಡೆಗಳಿಂದ ವ್ಯಾಪಾರ ಸ್ಥಳಗಳಿಗೆ ಹಣ್ಣುಗಳನ್ನು ಅನೇಕವಾಗಿ ಸರಿಯಾದ ಸ್ಥಿತಿಯಲ್ಲಿ ಕಳುಹಿಸುವದಿಲ್ಲವಾದ್ದರಿಂದ ಅವುಗಳಿಗೆ ಒಳ್ಳೆ ಬೆಲೆ ದೊರೆಯುವದಿಲ್ಲ. ಹಣ್ಣುಗಳಾಗಲಿ

ಅಥವಾ ಇತರ ಯಾವ ವ್ಯಾಪಾರದ ಸರಕುಗಳಾಗಲಿ, ಬೆಳೆಯುವವನು, ಸ್ಥಳದಿಂದ ಸ್ಥಳಕ್ಕೆ ಸಾಗಿಸುವವನು, ದಲ್ಲಾಳಿ ಚಿಲ್ಲರೆ ವ್ಯಾಪಾರಿ ಮತ್ತು ಉಪಯೋಗಿಸುವವನು, ಈ ಐದು ಜನಗಳ ಕೈ ತಡಾಯಬೇಕು. ಮತ್ತು ಈ ಐದುಜನರು ತಮ್ಮ ಕೆಲಸಗಳನ್ನು ಸರಿಯಾಗಿ ಮಾಡಿದರೇನೆ ವ್ಯಾಪಾರವು ಚುರುಕಾಗುತ್ತದೆ. ಹೇಗೆಂದರೆ, ಬೆಳೆಯುವವನು ಹಣ್ಣುಗಳನ್ನು ಒಳ್ಳೇದು ಕೆಟ್ಟದ್ದು ಚಿಕ್ಕದು ದೊಡ್ಡದು ಈ ರೀತಿ ತರಗತಿವಾರು ವಿಂಗಡಿಸಿ ಚೆನ್ನಾಗಿ ಪ್ಯಾಕು ಮಾಡಿ ಕಳುಹಿಸಿದರೆ, ದಲ್ಲಾಳಿಯು ಒಳ್ಳೆ ಗಿರಾಕಿ ಒದಗಿಸುತ್ತಾನಲ್ಲದೆ ಚಿಲ್ಲರೆ ವ್ಯಾಪಾರಿಯು ಮತ್ತು ತಿನ್ನುವವನೂ ಸಹ ತೃಪ್ತಿಪಡುತ್ತಾರೆ. ಮುಖ್ಯವಾಗಿ ತಿನ್ನತಕ್ಕವರೂ ಉತ್ತಮ ರಖಂ ಹಣ್ಣುಗಳನ್ನೆ ಉಪಯೋಗಿಸತೊಡಗಿದಲ್ಲಿ ಬೆಳೆಯುತಕ್ಕವರಿಗೂ ಒಳ್ಳೆ ಹಣ್ಣುಗಳನ್ನೆ ಬೆಳೆಯಲು ಪ್ರೋತ್ಸಾಹ ಉಂಟಾದೀತು.

---

## Revenue Appeals.

## ರೆವಿನ್ಯೂ ಅಪೀಲುಗಳು.

### ೧೯೦೮-೦೯ನೆ ಇಸವಿಯ ಅಪೀಲು ನಂ. ೪೯.

| ಅಪೀಲುವಾದಿ. | | ಅಪೀಲು ಪ್ರತಿವಾದಿಗಳು. |
|---|---|---|
| ಗೋವಿಂದರಾವ್ ಮೈನರು, ಗಾರ್ಡಿಯನ್ ಎ. ವೆಂಕಟರಾವು. | *vs.* | ೧. ಭೀಮಣ್ಣ.<br>೨. ವೆಂಕಪ್ಪ ಅಲಿಯಾಸ್ ಸಿ. ಬಿ. ವೆಂಕಟರಾವು.<br>೩. ಸೀನಪ್ಪ ಉರಫ್ ಶ್ರೀನಿವಾಸರಾವು.<br>೪ ಕೃಷ್ಣಮೂರ್ತಿ.<br>೫. ರಾಮಚಂದ್ರ.<br>೬. ಗೋವಿಂದ. |

ಶಾನಭೋಗಿ ನೌಕರಿಯ ಪೋಟಗಿ ಹಂಚಿಕೆ ವಿಚಾರ.

ಮೊಕದ್ದಮೆ ವಿನ್ಯಾಸ.—ಮೊದಲನೆ ಪ್ರತಿವಾದಿ ಭೀಮಣ್ಣನು ವಾದಿ ಗೋವಿಂದರಾಯನ ದತ್ತು ತಂದೆಯಾದ ಫೌತ್ರಿ ಗುರುರಾಯನೆಂಬುವನ ತಮ್ಮ ಮತ್ತು ಮಿಕ್ಕ ಪ್ರತಿವಾದಿಗಳು ಈ ಭೀಮಣ್ಣನ ಮಕ್ಕಳು. ೧೮೯೮—೯೯ರಲ್ಲಿ ವಾದಿ ಗೋವಿಂದರಾಯ ಮತ್ತು ಇವನ ದ

ತು ತಂದೆ ಗುರುರಾಯ ಇವರಿಬ್ಬರು ಪ್ರತಿವಾದಿಗಳ ಸ್ವಾಧೀನದಲ್ಲಿದ್ದ ಹೊಳಲಕೆರೆ ತಾಲ್ಲೂಕು ಸಾದರಹಳ್ಳಿ ಫಿರ್ಕಾ ಶ್ಯಾನುಭೋಗಿಕೆಯನ್ನು ತಾವು ಪಡೆಯುವ ಬಗ್ಗೆ ರೆವಿನ್ಯೂ ದಾವಾ ತಂದರು. ಇಷ್ಟರೊಳಗೆ ಉಭಯ ಕಕ್ಷಿಗಾರರೂ ರಾಜಿಯಾದ್ದರಿಂದ ಅವರ ಒಪ್ಪಿಕೆಯಂತೆಯೇ ಕೋರ್ಟಿನವರು ವಾದಿಗಳಿಗೆ ಸದರಿ ನೌಕರಿಯ ಪ್ರೋಟಗಿಯಲ್ಲಿ ಮೂರಲ್ಲಿ ಒಂದು ಭಾಗವನ್ನು ಕೊಡತಕ್ಕದ್ದೆಂದು ಹುಕುಂ ಮಾಡಿದರು. ಆ ಕಾಲದಲ್ಲಿ ಡಿಕ್ರಿಯೇನೂ ಬರೆಯಲಿಲ್ಲ. ೧೯೦೭ನೆ ಇಸ್ವಿಯಲ್ಲಿ ಬರೆಯಲ್ಪಟ್ಟ ಡಿಕ್ರಿಯಲ್ಲಿ ಪ್ರತಿವಾದಿಗಳು ವಾದಿಗೆ ಮೂರರಲ್ಲಿ ಒಂದು ಭಾಗ ಪ್ರೋಟಗಿ ಪಾವತಿ ಮಾಡಬೇಕೆಂದು ಹುಕುಂ ಆಯಿತು. ಮೈನರು ವಾದಿಯು ಸದರಿ ಡಿಕ್ರಿಯನ್ನು ಜಾರಿ ಮಾಡಬೇಕೆಂತಲೂ ತನಗೆ ಸಲ್ಲತಕ್ಕ ಭಾಗವನ್ನು ಕೊಡಿಸಬೇಕೆಂದು ಕೇಳಿರುತ್ತಾನೆ.

ಗೌರ್ನ್ಮೆಂಟಿನವರ ತೀರ್ಮಾನ.—ಗ್ರಾಮ ನೌಕರನ ತಲಬು ಅವನ ಸ್ವಂತಕ್ಕೆ ಸೇರತಕ್ಕದ್ದೇ ಹೊರ್ತು ಇದರ ಮೇಲೆ ಮತ್ಯಾರಿಗೂ ಹಕ್ಕಿರುವದಿಲ್ಲವೆಂದು ಪ್ರೋಟಗಿ ರೂಲುಗಳಲ್ಲಿ ಸ್ಪಷ್ಟವಾಗಿ ವಿಧಾಯಕವಾಗಿರುತ್ತಲ್ಲದೆ, ಸದರೀಯಂತೆ ಅನೇಕ ಮೊಕದ್ದಮೆಗಳಲ್ಲಿ ಗೌರ್ನ್ಮೆಂಟಿನವರೂ ತೀರ್ಮಾನಿಸಿರುತ್ತಾರೆ. ಅಸಿಸ್ಟೆಂಟು ಕಮಿಷನರವರು ಈ ಕಕ್ಷಿಗಾರರು ಮಾಡಿಕೊಂಡ ರಾಜಿಯನ್ನು ಅಂಗೀಕರಿಸಿದ್ದು ತಪ್ಪು. ಅಲ್ಲದೆ ವರ್ಷಾಶನದ ಬಟವಾಡೆ ವಿಚಾರವಾಗಿ ಡಿಕ್ರಿ ಕೊಡುವದೇ ಆಗಲಿ ಅಥವಾ ಅಂಥಾ ಡಿಕ್ರಿಯನ್ನು ಜಾರಿಯಲ್ಲಿ ತರುವದೇ ಆಗಲಿ ರೆವಿನ್ಯೂ ಆಫೀಸರುಗಳ ಅಧಿಕಾರಕ್ಕೆ ಒಳಪಟ್ಟದ್ದಲ್ಲ. ಈ ಕಾರಣಗಳಿಂದ ಡೆಪ್ಯುಟಿ ಕಮಿಷನರವರ ಹುಕುಮನ್ನು ಖಾಯಂ ಇಟ್ಟು ಪ್ರಸಕ್ತ ಅಪೀಲನ್ನು ಡಿಸ್ಮಿಸ್ ಮಾಡಿರುತ್ತೆ.

---

೧೯೦೮—೦೯ನೆ ಇಸವಿಯ ಅಪೀಲು ನಂ. ೧೦೬.

| ಅಪೀಲುವಾದಿ. | | ಅಪೀಲು ಪ್ರತಿವಾದಿ. |
|---|---|---|
| ಮುನಿಯಪ್ಪ. | *vs.* | ಕಾಶಿ ಚನ್ನಪ್ಪ. |

ಕೇಸಿನ ವಿಷ್ಯಮಾನ.—ವಾದಿ ಮತ್ತು ಪ್ರತಿವಾದಿಗಳಿಬ್ಬರೂ ಅಮಲ್ದಾರ್ರವರ ರೂಬರೂ ಹಾಜರಾಗಿ ಪ್ರತಿವಾದಿಯು ತನ್ನ ಖಾತೆಯ

ಲ್ಲಿದ್ದ ಒಂದು ಸರ್ವೆ ನಂಬರನ್ನು ವಾದಿಯು ಹೆಸರಿಗೆ ವರ್ಗಮಾಡಿಕೊಡಬೇ
ಕೆಂದು ಖಾಯಿಷ್ ಮಾಡಿ ವರ್ಗರಾಜೀನಾಮೆಯನ್ನು ಹಾಜರುಮಾಡಿದನು.
ಅಮಲ್ದಾರು ಇದನ್ನು ಅಂಗೀಕರಿಸಿ ಲೆಖ್ಖಗಳಲ್ಲಿ ಅವಶ್ಯವಾದ ಬದಲಾವಣೆ
ಬಗ್ಗೆ ವರ್ಗರಾಜೀನಾಮೆಯನ್ನು ಶೇಕದಾರನಿಗೆ ಕಳುಹಿಸಿದರು. ಶೇಕ
ದಾರನು ಶ್ಯಾನಭೋಗನಿಗೆ ದಾಖಲೆ ಕೊಟ್ಟನಂತರ ಈ ಮಂಜೂರಿ ಹು
ಕುಮನ್ನು ಪ್ರತಿವಾದಿಗೆ ತಿಳಿಸಲು ಇವನು ರಾಜೀನಾಮೆಯಲ್ಲಿ ದಾಖಲಾಗಿ
ರುವ ನಂಬರು ಸ್ಥಿರಿಯಾಗಿರುವದಿಲ್ಲವೆಂತಲೂ ಸದರಿ ನಂಬರಿನಲ್ಲಿ ಕೃಷ್ಣಸ್ವಾ
ಮೆಂಬುವನಿಗೆ ಹಿಸ್ಸೆ ಇರುವದರಿಂದ ಇದಕ್ಕೆ ಬದಲಾಗಿ ಸರಿಯಾದ ನಂಬರ
ನ್ನು ವರ್ಗಮಾಡಿಕೊಡುವದಾಗಿಯೂ ಸದರಿ ವರ್ಗರಾಜೀನಾಮೆಯನ್ನು ರ
ದ್ದು ಮಾಡಬೇಕೆಂದು ಕೇಳಿಕೊಳ್ಳಲು ಶೇಕದಾರನು ಈ ವಿಚಾರದಲ್ಲಿ ಇವ
ನ ಕೈಫೀತು ಮಾಡಿ ಇದನ್ನೂ ವರ್ಗರಾಜೀನಾಮೆಯನ್ನೂ ಅಮಲ್ದಾ
ರರ ಹುಕ್ಕುಂ ಬಗ್ಗೆ ವಾಪಸು ಕಳುಹಿಸಿದನು. ಈ ವರ್ಗರಾಜೀನಾ
ಮೆಯು ಆಗಲೇ ಮಂಜೂರಾಗಿದ್ದದ್ದರಿಂದ ಇದನ್ನು ರದ್ದು ಮಾಡಲಾಗು
ವದಿಲ್ಲವೆಂದು ಅಮಲ್ದಾರರು ಹುಕ್ಕುಂ ಮಾಡಿದರು. ಲೆಖ್ಖಗಳಲ್ಲಿ ಅವಶ್ಯಕ
ವಾದ ಬದಲಾವಣೆಗಳು ಮಾಡಲ್ಪಟ್ಟವು. ಪ್ರತಿವಾದಿಯು ಡೆಪ್ಯುಟಿ ಕಮಿ
ಷನರವರಲ್ಲಿ ಅಪೀಲು ಮಾಡಲು, ಇವರು ಸದರಿ ರಾಜೀನಾಮೆಯನ್ನು ರ
ದ್ದು ಮಾಡಿದರು.

ಗೌರ್ನ್ಮೆಂಟಿನವರ ತೀರ್ಮಾನ:—ಅಮಲ್ದಾರರು ಉಭಯ ಕಕ್ಷಿಗಾ
ರರನ್ನು ತನಿಖೆ ಮಾಡಿ ರಾಜೀನಾಮೆಯನ್ನು ಅಂಗೀಕರಿಸಿ ಗ್ರಾಮ ಲೆಖ್ಖಗ
ಳಲ್ಲಿ ಬದಲಾವಣೆ ಬಗ್ಗೆ ಶೇಕದಾರನಿಗೆ ಹುಕುಂ ಕೊಟ್ಟಿರುತ್ತಾರೆ. ಹಿಂ
ದಿನ ಖಾತೆದಾರನು ತಪ್ಪಿನಿಂದ ಈ ವರ್ಗ ನಡೆದಿರುತ್ತೆಂದು ತಕರಾರು ಮಾ
ಡಿದ್ದನ್ನು ಶೇಕದಾರನು ತನ್ನ ರಿಪೋರ್ಟಿನಲ್ಲಿ ನಮೂದಿಸಿದ್ದಾನೆ. ಅ
ಮಲ್ದಾರರು ಈ ತಕರಾರನ್ನು ಅಂಗೀಕರಿಸದೆ ವರ್ಗವನ್ನು ರಿಜಸ್ಟರ್ ಮಾ
ಡಿಕೊಳ್ಳುವ ರೀತಿ ಹುಕ್ಕುಂ ಮಾಡಿರುವದು ನ್ಯಾಯವಾಗಿರುತ್ತೆ. ಅಮ
ಲ್ದಾರರು ಆಖೈರು ಹುಕ್ಕುಂ ಮಾಡಿದಾಗಲೆ ವರ್ಗವು ಪೂರೈಸಿದಂತಾಯಿ
ತು. ಅದರಂತೆ ಗ್ರಾಮ ಲೆಖ್ಖಗಳಲ್ಲಿ ಬದಲಾವಣೆಗಳು ಮಾಡಬೇಕಾದ್ದೊಂ
ದೇ ಉಳಿದಿತ್ತು. ಶೇಕದಾರನು ಇದನ್ನು ಜಾರಿಯಲ್ಲಿ ತರಬೇಕಾಗಿತ್ತೆ
ಹೊರ್ತು ಮೊದಲಿನ ಖಾತೆದಾರನನ್ನು ಈ ವಿಚಾರವಾಗಿ ಪುನಃ ಪ್ರಶ್ನೆ

ಮಾಡಿದ್ದು ಇವನ ಅಧಿಕಾರಕ್ಕೆ ಮೀರಿದ ಕೆಲಸವಾಗಿರುತ್ತೆ. ಆದಕಾರಣ ಡೆಪ್ಯುಟಿ ಕಮಿಷನರವರ ಹುಕ್ಕುಮನ್ನು ರದ್ದು ಮಾಡಿ ಚರ್ಚಾಸ್ಪದವಾದ ಸರ್ವೆ ನಂಬರಿನ ಖಾತೆಯನ್ನು ಅಪೀಲುದಾರಿಯ ಹೆಸರಿನಲ್ಲಿ ದಾಖಲ್‌ಮಾಡಬೇಕು.

## A New Rubber Tree. *

## ಒಂದು ಹೊಸ ರಬ್ಬರ್‌ಗಿಡ.

“ಡಿಕೋಟೋಮ” ಗಿಡದಲ್ಲಿ ರಬ್ಬರ್ ಉತ್ಪತ್ತಿಯು ಹೆಚ್ಚು. ಚೆನ್ನಾಗಿ ಬಲಿತ ಮರಗಳಿಂದ ಎಷ್ಟಾವರ್ತಿಯಾದರೂ ಹಾಲು ತೆಗೆಯಬಹುದು. ವರ್ಷಕ್ಕೆ ಸುಮಾರು ೧೦—೧೨ ಪೌಂಡು ತೂಕದಷ್ಟು ರಬ್ಬರು ಒಂದು ಮರದಿಂದ ಆಗುತ್ತೆ. ಇದರಲ್ಲಿ ಇಳಿಯುವ ಹಾಲು ಬಹಳ ಶುದ್ಧವಾಗಿರುತ್ತಲ್ಲದೆ ಈ ರಬ್ಬರಿಗೆ ಒಳ್ಳೆ ಬೆಲೆ ದೊರೆಯುತ್ತೆ. ನ್ಯೂಯಾರ್ಕ್ ವ್ಯಾಪಾರಿಗಳು ಇದನ್ನು ಉತ್ಕೃಷ್ಟವಾದ ಪ್ಯಾರಾ ರಬ್ಬರಿಗೆ ಸಮಾನವೆಂದು ಹೇಳುತ್ತಾರೆ ಮತ್ತು ಅಲ್ಲಿ ಇದು ಪೌಂಡಿಗೆ ೪ ಷಿಲಿಂಗಿನಂತೆ ಬಿಕರಿಯಾಗಿರುತ್ತೆ. ಈ ಮರವು ಬಹಳ ಗಟ್ಟಿ ಮತ್ತು ಅತಿಜಾಗ್ರತೆ ಬೆಳೆಯುತ್ತೆ. ಇದಕ್ಕೆ ಇರುವೆ ಮತ್ತು ಇತರ ಹುಳುಗಳು ಬೀಳುವದಿಲ್ಲ. ಈ ಗಿಡದಲ್ಲಿ ಎಷ್ಟುಸಲ ಹಾಲು ಇಳಿಸಿದರೂ ಬಾಧಕವಿಲ್ಲ. ಇದರಲ್ಲಿ ಹೆಚ್ಚು ಉತ್ಪತ್ತಿ ಒಂದೇ ಅಲ್ಲದೆ ಇದರ ವ್ಯವಸಾಯಕ್ಕೆ ಅಷ್ಟು ಮುತವರ್ಜಿ ಬೇಕಿಲ್ಲ; ಹಾಗೂ ಇದಕ್ಕೆ ಖರ್ಚು ತಗಲುವದು ಸಹ ಕಮ್ಮಿ.

ಇದು ಮೂರು ವರುಷದಲ್ಲೇ ಹಾಲು ಇಳಿಸುವದಕ್ಕೆ ಲಾಯಖಾಗುತ್ತೆ. ಗಿಡವು ಅತಿ ದೊಡ್ಡದಾಗಿ ಬೆಳೆಯದೆ ಸುಮಾರು ೨೪ ಅಡಿ ಎತ್ತರ ಮತ್ತು ೧೮-೨೦ ಇಂಚು ಸುತ್ತಳತೆ ಉಳ್ಳದ್ದಾಗಿ ಇರುತ್ತಾದ್ದರಿಂದ ಎಕರೆಗೆ ಸಾಧಾರಣವಾಗಿ ೧೨೪೦ ಗಿಡಗಳ ತನಕ ಹಾಕಬಹುದು.

ಇದರ ವ್ಯವಸಾಯಕ್ಕೆ ಇಂಡಿಯಾದೇಶದ ಅನೇಕ ಭಾಗಗಳು ಬಹಳ ಲಾಯಖಾಗಿವೆ.

ಇದರ ಬೀಜದ ಮೇಲೆ ದಪ್ಪನಾದ ಹೊಟ್ಟು ಇರುತ್ತಾಗಿ ಬೀಜಗಳ

* ಪ್ಲಾಂಟರ್ಸ್ ಕ್ರಾನಿಕಲ್, ಮೇ ೧೯೦೯.

ನ್ನು ಕೆಡಸೆ ಸ್ಥಳದಿಂದ ಸ್ಥಳಕ್ಕೆ ಕಳುಹಿಸಬಹುದು. ಬೀಜದ ಬಿತ್ತನೆಗೆ ಕಾಲನಿರ್ಣಯವಿಲ್ಲ. ಯಾವಾಗ ಬೇಕಾದರೂ ಹಾಕಬಹುದು.

---

## Potato. *

## ಆಲುಗಡ್ಡೆ.

ಜರ್ಮನಿ ದೇಶದಲ್ಲಿ ಆಲುಗಡ್ಡೆಯನ್ನು ಕೊಬ್ಬರಿ ತುರಿಯಂತೆ ತುರದು ಅಥವಾ ಹಿಟ್ಟುಮಾಡಿ ಹಸುಗಳಿಗೆ ಮೇವಾಗಿ ಕೊಡುತ್ತಾರೆ. ಆಲುಗಡ್ಡೆಯನ್ನು ಮೆಲಕು ಹಾಕುವ ಪಶುಗಳೆಲ್ಲ ತಿಂದು ಸುಲಭವಾಗಿ ಜೀರ್ಣಸಿಕೊಳ್ಳುತ್ತವೆಯಂತೆ. ೨ ಪೌಂಡು ಆಲುಗಡ್ಡೆ ತುರಿಯನ್ನು ಸುಮಾರು ೧೦ ಸೇರು ಹಾಲು ಮತ್ತು ೧ ಪೌಂಡು ಅಗಸೆ ಹಿಂಡಿಯೊಂದಿಗೆ ಬೆರಸಿ ಕರುಗಳಿಗೆ ಕೊಟ್ಟರೆ ಸರ್ವೋತ್ಕೃಷ್ಟವಾದ ಆಹಾರವಾಗುತ್ತೆ. ಹುಲ್ಲಿನೊಂದಿಗೆ ೫ ಪೌಂಡು ಆಲುಗಡ್ಡೆ ತುರಿ ಮತ್ತು ೪ ಪೌಂಡು ಓಟ್ಸ್ ಧಾನ್ಯ ಕುದುರೆಗಳಿಗೂ ಕರಾವುಹಸುಗಳಿಗೆ ಇತರ ಮೇವಿನೊಂದಿಗೆ ೨ ಪೌಂಡು ತುರಿ ಮತ್ತು ೨ ಪೌಂಡು ತವಡು ಬೆರೆಸಿ ಕೊಡುವದುಂಟು. ಆಲುಗಡ್ಡೆ ಬಡಬಗ್ಗರಿಗೂ ಒಳ್ಳೆ ಆಹಾರ. ವಿಶೇಷವಾಗಿ ಬೆಳೆಯುವ ಮತ್ತು ಅಗ್ಗವಾಗಿರುವ ಪ್ರದೇಶಗಳಲ್ಲಿ ಇದನ್ನು ಹಸುಗಳಿಗೆ ತಿನ್ನುವದಕ್ಕೆ ಹಾಕಬಹುದು. ಗಡ್ಡೆಯನ್ನು ಬಹಳ ದಿನಗಳು ಕೆಡದಂತೆ ಇಡಬೇಕಾದರೆ ಅದನ್ನು ತೊಳೆದು ಒಣಗಿಸಿ ನಂತರ ತೆಳುವಾದ ಬಿಲ್ಲೆಯಾಗಿ ಕತ್ತರಿಸಿ ಮುಟ್ಟಿದರೆ ಪುಡಿ ಪುಡಿಯಾಗುವಹಾಗೆ ಕೆಲವು ದಿನಗಳು ಚೆನ್ನಾಗಿ ಬಿಸಲಿನಲ್ಲಿ ಒಣಗಿಸಬೇಕು. ಒಣಗಲಿಕ್ಕಿಡುವಾಗ ಧೂಳು ಕೂಡದಂತೆಯೂ ಮತ್ತು ತುಂಬಿಡುವಾಗ ತ್ಯಾವ ಸೇರದಂತೆಯೂ ಹುಷಾರಾಗಿ ನೋಡಿಕೊಳ್ಳಬೇಕು. ಹೀಗೆ ಒಣಗಿದ ಆಲುಗಡ್ಡೆ ಚೂರುಗಳನ್ನು ಗಡ್ಡೆ ಧಾರಣೆ ತಗ್ಗಾಗಿರುವಾಗಲೂ ಸಿಕ್ಕದಿರುವಾಗಲೂ ಮನುಷ್ಯರೂ ಆಹಾರವಾಗಿ ಉಪಯೋಗಿಸಬಹದು.

---

* ಇಂಡಸ್ಟ್ರಿಯಲ್ ಇಂಡಿಯಾ—ಜುಲೈ ೧೯೭೯.

## Correspondence.—*Stalking Til.*

### ಕರೆಸ್ಪಾಂಡೆನ್ಸ್ —ಎಳ್ಳುಪೈರನ್ನು ಒಟ್ಟುವದು.

ಅರಸೀಕೆರೆ ತಾ|| ದೊಡ್ಡಮೇಟೀಕುರ್ಕೆ ಜಮೀನುದಾರರು ಮ|| ಎಂ. ಎಚ್. ಹರಿಯಣ್ಣನವರು ಬರೆದಿರುವದೇನೆಂದರೆ.—

ನನ್ನ ಸ್ವಂತ ಜಮೀನಿನಲ್ಲಿ ಎಳ್ಳಿನ ಪೈರು ಮಾಡಿಸಿದೆ. ಕಟಾವಿಗೆ ಬಂದ ಕಾಲದಲ್ಲಿ ಕುಯಿಸಿ ಎರಡು ದೊಡ್ಡ ಗುಪ್ಪೆಗಳಾಗಿ ಒಟ್ಟಿಸಿದ್ದಾಯ್ತು. ಮೊದಲನೆ ಗುಪ್ಪೆಯನ್ನು ಒಟ್ಟುವಾಗ ಪ್ರತಿ ವರಸೆಗೂ ಅಂದರೆ ಗೇಣುಮಟ್ಟ ಎಳ್ಳಿನ ಗಿಡಗಳನ್ನು ಇಟ್ಟು ಅದರಮೇಲೆ ಎಲೆ ಸಹಿತವಾಗಿ ಎಕ್ಕದ ಕಡ್ಡಿಗಳನ್ನು ಹರವಿಸಿದೆ. ನಂತರ ಎಳ್ಳಿನ ಗಿಡಗಳನ್ನು ಎಕ್ಕದ ಕಡ್ಡಿಗಳಮೇಲೆ ಒಟ್ಟಿಸಿದೆ. ಪುನಃ ಎಕ್ಕದ ಕಡ್ಡಿಗಳನ್ನು ಹರವಿಸಿದೆ. ಈರೀತಿ ಪ್ರತಿ ಎಳ್ಳಿನ ವರಸೆಗೂ ಎಕ್ಕದ ಕಡ್ಡಿಗಳನ್ನಿಡುತ್ತಾ ಗುಪ್ಪೆಯನ್ನು ಹಾಕಿಸಿದೆ. ಎರಡನೆಯ ಗುಪ್ಪೆಯನ್ನು ಬರೀ ಎಳ್ಳಿನ ಗಿಡಗಳನ್ನೆ ಒಟ್ಟಿಸಿದೆ. ಇವೆರಡನ್ನೂ ಆಜಮಾಯಿಷಿ ಮಾಡಿದ್ದರಲ್ಲಿ ಮೊದಲನೆಯ ಗುಪ್ಪೆಯ ಎಳ್ಳು ತುಂಬಾ ಕಪ್ಪಾಗಿದ್ದು ಕಹಿ ಇಲ್ಲದೆಯೂ ಇತ್ತು. ಎರಡನೆ ಬಣವೆಯ ಎಳ್ಳು ಬಾಯಿಯಲ್ಲಿ ತಿನ್ನಲಾರದಷ್ಟು ಕಹಿಯೂ ಮಬ್ಬಾದ ಕಪ್ಪುಬಣ್ಣ ಉಳ್ಳದ್ದಾಗಿಯೂ ಇತ್ತು. ಮೇಲ್ಕಂಡ ರೀತಿ ಎಳ್ಳನ್ನು ಕಟಾವು ಆದನಂತರ ಗುಪ್ಪೆಗಳಾಗಿ ಹಾಕಿಸುವದರಲ್ಲಿ ಎಳ್ಳು ಕೆಡುವುದಿಲ್ಲವೆಂಬುವುದು ನನ್ನ ಅನುಭವಕ್ಕೆ ಬಂದಿದೆ. ಸರ್ವರೂ ಇದರಂತೆ ಆಚರಣೆಗೆ ತರುವದು ಒಳ್ಳೆಯದು.

[ಮೇಲೆ ಹೇಳಿರುವ ಕ್ರಮದಲ್ಲಿ ಅನುಭವವುಳ್ಳವರು ಈ ವಿಚಾರದಲ್ಲಿ ತಮ್ಮ ಅನುಭವದಲ್ಲಿ ಕಂಡುಬಂದ ಸಾಧಕ ಬಾಧಕಗಳನ್ನು ತಿಳಿಸಿದಲ್ಲಿ ಇದನ್ನು ರೈತಾಬಿಜನರ ತಿಳುವಳಿಕೆ ಬಗ್ಗೆ ಪ್ರಕಟಿಸುತ್ತೇವೆ]

---

## Indian Crops.

### ಇಂಡಿಯಾ ದೇಶದ ಪೈರುಗಳು.

ಸಾಲೆಸಾಲ್ ಪ್ರಸಿದ್ಧಪಡಿಸುವ ಮೈಸೂರು ಸಂಸ್ಥಾನದ ಕಾಲಸ್ಥಿತಿ ಮತ್ತು ಫಸಲುತ್ಪತ್ತಿ ವಿಷಯಕವಾದ ರಿಪೋರ್ಟಿನ ಮುಖ್ಯಾಂಶಗಳನ್ನು

ಈ ಪತ್ರಿಕೆಯ ಹಿಂದಿನ ಸಂಚಿಕೆಗಳಲ್ಲಿ ನಮೂದಿಸಿರುವದು ಸರಿಯಷ್ಟೆ.
ಇದರಿಂದ ಸಂಸ್ಥಾನಾವುಳೆ ಒಟ್ಟು ವಿಸ್ತೀರ್ಣ, ಈ ಪೈಕಿ ಸಾಗಿನಲ್ಲಿ ಎ
ಷ್ಟಿತ್ತು, ಯಾವ ಯಾವ ಪೈರು ಎಷ್ಟು ವಿಸ್ತೀರ್ಣದಲ್ಲಿಟ್ಟಿತ್ತು, ಅಂದಾ
ಜಾ ಉತ್ಪತ್ತಿ, ಮುಂತಾದ ತಪ್ಸೀಲು ತೋರಿಸಿರುವದು ವಾಚಕರಿಗೆ ಗೊ
ತ್ತೇ ಇದೆ. ಈ ತಪಶೀಲುಗಳು ಪಹಣಿ, ಖೇತವಾರ ಪತ್ರಿಕೆ, ಮುಂತಾದ
ಗ್ರಾಮ ಲೆಖ್ಖಗಳಿಂದ ಗೊತ್ತು ಮಾಡಲ್ಪಡುತ್ತವೆ.

ಇದೇ ವೇಳೆ ಇಂಡಿಯಾದೇಶದಲ್ಲಿ ಮುಖ್ಯವಾದ ಫಸಲುಗಳ ವಿಚಾರದ
ಕೆಲವು ತಪಶೀಲುಗಳನ್ನು ಕಳೆದ ೨ ಸಾಲ್‌ಗಳಿಗೆ ನಮ್ಮ ವಾಚಕರ ತಿಳುವ
ಳಿಕೆಗೆ ತರುತ್ತೇವೆ.

| ಬೆಳೆ. | | 1907–08. | | 1908–09. | |
|---|---|---|---|---|---|
| | | ಒಟ್ಟು ಅಂದಾಜಾ ಉತ್ಪತ್ತಿ. | ಸರಾಸರಿ ಧಾರಣೆ. | ಒಟ್ಟು ಅಂದಾಜಾ ಉತ್ಪತ್ತಿ. | ಸರಾಸರಿ ಧಾರಣೆ. |
| | | | ಬೇಲು ೧ಕ್ಕೆ. | | ಬೇಲು ೧ಕ್ಕೆ. |
| ಹತ್ತಿ | ಬೇಲುಗಳು | 3,122,000 | 93·95 | 3,643,000 | 94·03 |
| ಜೂಟ್‌ನಾರು | ,, | 9,817,800 | ,, 37·02 | 6,310,800 | ,, 26·57 |
| | | | ಟನ್ ೧ಕ್ಕೆ. | | ಟನ್ ೧ಕ್ಕೆ. |
| ಗೋಧಿ | ಟನ್‌ಗಳು | 8,491,700 | ,, 93·34 | 6,104,200 | 102·16 |
| ಬತ್ತ | ,, | 18,960,565 | ,, 123·03 | 19,945,490 | ,, 133·98 |
| ಅಗಸೇಬೀಜ | ,, | 425,200 | ,, 139·34 | 163,500 | ,, 143·56 |
| 'ರೇಪು' ಮತ್ತು ಸಾಸ್ವೆಬೀಜ | ,, | 1,053,100 | ,, 149·49 | 688,000 | ,, 159·32 |
| ಎಳ್ಳು | ,, | 280,300 | ,, 207·96 | 492,900 | ,, 214·68 |
| ನೆಲಗಡ್ಲೆ | ,, | 352,500 | ,, 154·7 | 442,000 | ,, 151·6 |
| | | | ೧ ಪೌಂಡಿಗೆ. | | ಪೌಂಡು ೧ಕ್ಕೆ |
| ಟೀಎಲೆ | ಪೌಂಡು | 248,020,398 | ·4167 | 247,476,324 | ·3646 |

## Notifications.

## ಇಸ್ತಿಹಾರ್‌ನಾಮೆಗಳು.

ನಂ. ೨೯೪೭ ತಾ|| ೨—೯—೦೯.

ಮೈಸೂರು ಸರ್ವಿಸ್ ರೆಗ್ಯುಲೇಷನ್ಸ್ ೧೭೭ನೆ ಪ್ರಕರಣದ ಷೋ

ರೆ ದೊಡ್ಡಬಳ್ಳಾಪುರ ತಾಲ್ಲೂಕು ಅಮಲ್ದಾರ್ ಮೆ|| ಎಂ. ಸದಾಸಿವರಾಯರಿಗೆ ಈ ಮಾಹೆ ೫ನೇ ತಾರೀಖು ಅಥವಾ ಅವರು ಉಪಯೋಗಿಸಿಕೊಳ್ಳುವ ತಾರೀಖು ಲಾಗಾಯಿತು ೧೫ ದಿನಗಳ ಪ್ರಿವಿಲೇಜ್ ರಜಾ ಮಂಜೂರು ಮಾಡಿರುತ್ತೆ.

ಅವರ ಗೈರ್ ಹಾಜರಿಯಲ್ಲಿ ತಾಲ್ಲೂಕು ಶಿರಸ್ತೇದಾರು ತಾಲ್ಲೂಕಿನ ಚಾಲ್ತಿ ಕೆಲಸಗಳ ಛಾರ್ಜಿನಲ್ಲಿರತಕ್ಕದ್ದು.

---

## Occasional Notes.
## ವಿವಿಧ ವೃತ್ತಾಂತಗಳು.

೧. ಪೂಸಾ ಪಟ್ಟಣದಲ್ಲಿನ ಅಗ್ರಿಕಲ್ಚರಲ್ ರಿಸರ್ಚ್ ಇನ್‌ಸ್ಟಿಟ್ಯೂಟ್ ಎಂಬ ವ್ಯವಸಾಯ ಶಾಲೆಗೆ ಸೇರಿದ ಹೊಲಗಳಲ್ಲಿ ಅನೇಕ ರಖಂ ಸ್ಥಳೀಯ ಮತ್ತು ಹೊರಗಿನ ಹೊಗೇಸೊಪ್ಪನ್ನು ಬೆಳೆಯುತ್ತಿರುವದಲ್ಲದೆ ಸೊಪ್ಪನ್ನು ಹದಗೊಳಿಸುವ ಅಂಶದಲ್ಲೂ ಅಜಮಾಯಿಷಿಗಳು ನಡೆಯುತ್ತಿವೆ.—ಇಂಡಿಯನ್ ಅಗ್ರಿಕಲ್ಚರಿಸ್ಟ್, ೧—೭—೧೯.

---

೨. ಹತ್ತಿ ಬೆಳೆಗೆ ಇತರ ಹೊಲ ಪೈರುಗಳಿಗೆ ಬೇಕಾಗುವದಕ್ಕಿಂತಲೂ ಹೆಚ್ಚಾಗಿ ವ್ಯವಸಾಯವೂ ಅನುಭವವೂ ಅವಶ್ಯಕವಿರುವದಿಲ್ಲ. ಸೀತ ಕಾಲಗಳಲ್ಲಿ ಹತ್ತಿಯನ್ನು ಬಿಡಿಸಬಾರದು. ಬುಡ್ಡಿಗಳು ಚೆನ್ನಾಗಿ ಅರಳಿದ್ದ ಪಕ್ಷದಲ್ಲಿ ಭಾರಿ ಮಳೆ ಬಿದ್ದಾಗ್ಯೂ ಕೆಡುವದಿಲ್ಲ. ಸ್ವಲ್ಪವೇ ಅರಳಿ ಒಳಗೆ ನೀರು ಇಳಿಯುವದಕ್ಕೆ ಅವಕಾಶವಿದ್ದರೆನೇ ಕೆಡುತ್ತವೆ.—ಅಗ್ರಿಕಲ್ಚರಲ್ ಅಂಡ್ ಇಂಡಸ್ಟ್ರಿಯಲ್ ಪ್ರೋಗ್ರೆಸ್, ಆಗಸ್ಟು ೧೯೧೯.

---

೩. ಬೆಂಗಳೂರಿನಲ್ಲಿರುವ ಸೆಂಟ್ರಲ್ ಕೋಆಪರೇಟಿವ್ ಬ್ಯಾಂಕು ಇತರ ಪರಸ್ಪರ ಸಹಾಯ ಸಂಘಗಳಿಗೆ ಸಾಲಾ ಕೊಡುವ ವಿಷಯದಲ್ಲಿ ಹಿಂದಿನ ಸಂಚಿಕೆಯಲ್ಲಿ ಸೂಚಿಸಿರುತ್ತಷ್ಟೆ. ಆ ಬ್ಯಾಂಕಿನ ನಿಬಂಧನೆಗಳು ೧೯೧೯ ನೆ ಆಗಸ್ಟು ತಾರೀಖಿನ ಮೈಸೂರು ಗೆಜೆಟ್ ೨ನೇ ಭಾಗದ ೧೧೮೫ನೇ ಪೇಜಿನಲ್ಲಿ ಇಂಗ್ಲೀಷ್‌ನಲ್ಲಿ ಎಲ್ಲರ ತಿಳುವಳಿಕೆ ಬಗ್ಯೆ ಪ್ರಾಯಿಷ್ ಮಾಡಿರುತ್ತೆ. ಇವುಗಳನ್ನು ಕನ್ನಡದಲ್ಲಿಯೂ ಪ್ರಾಯಿಷ್ ಮಾಡತಕ್ಕ ಏರ್ಪಾಡು ಜಾಗ್ರತೆಯಾಗಿ ಮಾಡಲ್ಪಡುತ್ತೆ.

೪. ಈ ವರುಷಲಾಗಾಯಿತು ರೋಥಿ ವ್ಯವಸಾಯದಲ್ಲಿ ಒಂದು ಪರೀಕ್ಷೆಯು ಮೈಸೂರಿನಲ್ಲಿ ಜರಗುವದಾಗಿ ಹಿಂದಿನ ಸಂಚಿಕೆಯಲ್ಲಿ ಘೋಷಿಸ ಮಾಡಿತ್ತಷ್ಟೆ. ಈ ವಿಷಯಕವಾದ ಒಂದು ಇಂಗ್ಲೀಷು ಇಸ್ತಿಹಾರ್ ನಾಮೆಯು ಈ ಮಾಹೆ ೨ನೆ ತಾರೀಖಿನ ಮೈಸೂರು ಗೆಜೆಟ್ಟಿನಲ್ಲಿ ಘೋಷಿಸ ಮಾಡಲ್ಪಟ್ಟಿದ್ದನ್ನು ನಮ್ಮ ವಾಚಕರ ತಿಳುವಳಿಕೆಗೆ ಮೊದಲೇ ತಂದಿರುತ್ತೇವೆ. ಇದೇ ಇಸ್ತಿಹಾರ್ ನಾಮೆಯು ಕನ್ನಡಿಸಲ್ಪಟ್ಟು ೯ನೆ ತಾರೀಖಿನ ಕನ್ನಡ ಮೈಸೂರು ಗೆಜೆಟ್ಟಿನಲ್ಲಿ ವಿಶದವಾಗಿ ಪ್ರಸಿದ್ಧಪಡಿಸಲ್ಪಟ್ಟಿರುತ್ತೆ.

---

೫. ಸೆಂಟ್ರಲ್ ಪ್ರಾವಿನ್ಸಸ್ ವ್ಯವಸಾಯ ಇಲಾಖೆಯವರು ಗೋಧಿ ಬೆಳೆಗೆ ನೀರು ಹಾಯಿಸುವ ವಿಧಾನವನ್ನು ರೈತರಿಗೆ ತೋರಿಸಿಕೊಡುತ್ತಾರೆ. ಈ ಕ್ರಮವು ಇಲ್ಲಿನ ರೈತರಿಗೆ ಗೊತ್ತೇ ಇಲ್ಲ. ಬತ್ತಕ್ಕೆ ನೀರು ಕಟ್ಟುವಂತೆಯೇ ಗೋಧಿಗೂ ಜಾಸ್ತಿ ನೀರು ಕಟ್ಟಿ ಪೈರನ್ನು ಹಾಳುಮಾಡಿಕೊಂಡಿರುತ್ತಾರೆ. ಈಗ ಎರಡು ವರ್ಷಗಳಿಂದಲೂ ರೈತರಿಗೆ ಕ್ರಮವಾಗಿ ನೀರು ಹಾಯಿಸುವ ಮಾರ್ಗವನ್ನು ತೋರಿಸಿ ಕೊಡುತ್ತಿರುವ ಪ್ರಯುಕ್ತ ನೀರು ಹಾಯಿಸಿ ಬೆಳೆ ಮಾಡುವವರಿಂದ ಹುಲ್ಲು ಮತ್ತು ಧಾನ್ಯದ ಉತ್ಪತ್ತಿಯು ವಿಶೇಷವಾಗಿ ಹೆಚ್ಚುತ್ತೆಂಬ ಅಂಶವು ರೈತರ ಮನಸ್ಸಿಗೆ ನಾಟಿರುತ್ತೆ. ಅನೇಕ ಸ್ಥಳಗಳಲ್ಲಿ ಈ ಇಲಾಖೆಯವರು ನೀರು ಹಾಯಿಸಿಯೂ ನೀರು ಹಾಯಿಸದೆಲೂ ಈ ಬೆಳೆಯನ್ನಿಟ್ಟು ನೋಡಿದ್ದರಲ್ಲಿ ನೀರು ಹಾಯಿಸಿದ ತಾಕಿನಲ್ಲಿ ಉತ್ಪತ್ತಿಯು ಮತ್ತೊಂದು ತಾಕಿನಲ್ಲಾದದ್ದಕ್ಕಿಂತಲೂ ಸ್ವಲ್ಪ ಹೆಚ್ಚು ಕಡಿಮೆ ಎರಡರಷ್ಟು ಜಾಸ್ತಿಯಾಗಿರುತ್ತೆ.—ಸೆಂಟ್ರಲ್ ಪ್ರಾವಿನ್ಸಸ್ ಅಗ್ರಿಕಲ್ಚರಲ್ ಗೆಜೆಟ್, ಆಗಸ್ಟ್ ೧೯೦೯.

---

೬. ಸೆಂಟ್ರಲ್ ಪ್ರಾವಿನ್ಸಸ್ ರಾಯಪುರ ಫಾರಂನಲ್ಲಿ 'ವರ್ಜೀನಿಯ', 'ಜಪಾನಿಸ್‌ಬಿಗ್' 'ಪಾಂಡಿಚೆರಿ', 'ಮದರಾಸ್', 'ಮೊಜಾಂಬಿಕ್' ಮತ್ತು ಸ್ಥಳೀಯ ರಕಂ ನೆಲಗಡ್ಲೆಗಳನ್ನು ಅಜಮಾಯಿಷಿ ತರೀಖು ಬೆಳೆಯುತ್ತಿದ್ದಾರೆ. ಚಾಲ್ತಿ ಸಾಲ್ ಅಜಮಾಯಿಷಿಯಲ್ಲಿ ಇವಕ್ಕೆ ಸಾಗುವಳಿ ಖರ್ಚು ೪೮-೧೨-೦

ರೂಪಾಯಿಗಳು ಜಾತಾ ಈ ಕೆಳಗೆ ಕಂಡನೇರಿಗೆ ಒಂದೊಂದರಿಂದಲೂ ಆದಾಯ ತೇಲಿರುತ್ತೆ.

| ನೆಲಗಡ್ಲೆ ರಖಂ. | ಎಕ್ರೆವಾರ್ ಉತ್ಪತ್ತಿ. ಪೌಂಡು ತೂಕದಲ್ಲಿ. | ಖರ್ಚು ಜಾತಾ ನಫೆ ಮೊಬಲಗು. |
|---|---|---|
| ವರ್ಜಿನಿಯ ... | ೧೫೫೦ | ೫೪—೧೨—೦ |
| ಜಪಾನಿಸ್ ಬಿಗ್ ... | ೧೬೦೦ | ೬೧—೧೪—೦ |
| ಪಾಂಡಿಚೇರಿ ... | ೧೪೪೦ | ೩೯— ೬—೦ |
| ಮದರಾಸ್ ... | ೧೪೦೦ | ೩೪— ೬—೦ |
| ಮೊಜಾಂಬಿಕ್ ... | ೧೪೦೦ | ೩೪— ೬—೦ |
| ಸ್ಥಳೀಯ ರಖಂ ... | ೭೮೧೦ | ೪೨—೪—೦ |

ಸಾಮಾನ್ಯ ವರ್ಷಗಳಲ್ಲಿ ನೀರು ಹಾಯಿಸದೇ ಈ ಪೈರು ತೆಗೆಯ.ಬಹುದು. ಆದರೆ ಉತ್ಪತ್ತಿಯನ್ನು ಹೆಚ್ಚಿಸಬೇಕಾದರೆ ಒಂದೆರಡುಸಲ ನೀರು ಹಾಯಿಸುವದವಶ್ಯಕ. ಕಾಯಿಗಳನ್ನು ಎಬ್ಬುವದಕ್ಕೆ ಮುಂಚೆ ಸೊಪ್ಪನ್ನು ದನದ ಮೇವಾಗಿ ಉಪಯೋಗಿಸಬಹುದು.—ಸೆಂಟ್ರಲ್ ಪ್ರಾವಿನ್ಸಸ್ ಅಗ್ರಿಕಲ್ಚರಲ್ ಗೆಜಿಟ್, ಆಗಸ್ಟ ೧೯೧೯.

---

೨. ಜೋಳ, ಕಬ್ಬು ಮತ್ತು ಮುಸುಕಿನಜೋಳಕ್ಕೆ ಒಂದು ಬಗೆಯ ದುಂಬಿ ಕೊರದು ದಂಟಿನೊಳಗಿನ ಗರ್ಭವನ್ನೆ ತಿಂದು ದ್ವಾರವನ್ನು ಮಾಡುತ್ತದೆ. ಗಿಡ ಎಳತಾಗಿದ್ದಾಗ ಹುಳು ಬಿದ್ದರೆ ಹುಳು ತಾಕಿದ ದಂಟು ಒಣಗಿ ಹೊಸ ಚಿಗುರುಗಳು ಹೊರಟು ಗಿಡ ಚೇತರಿಸಿಕೊಳ್ಳುತ್ತದೆ. ಗಿಡ ಬಲಿತನಂತರ ಹುಳು ಬಿದ್ದರೆ ಅನೇಕವಾಗಿ ಒಣಗಿಹೋಗುವದು. ಇದಕ್ಕೆ ಪರಿಹಾರವೇನಂದರೆ.—

ಹುಳು ನೊಂಕಿದ ಕಡ್ಡಿಗಳನ್ನೆಲ್ಲಾ ಬುಡದಿಂದ ಕತ್ತರಿಸಿ ಸುಟ್ಟರೆ ಒಳಗಿರುವ ಹುಳ ಸತ್ತುಹೋಗುತ್ತದೆ. ಇಲ್ಲವಾದರೆ ಇದು ರೂಪಾಂತರಗಳನ್ನು ಹೊಂದಿ ಇತರ ದಂಟುಗಳಿಗೂ ವ್ಯಾಪಿಸಿ ಮೊಟ್ಟೆಗಳಿಟ್ಟು ಈ ಮೂಲಕ ಹುಳಗಳು ಹೆಚ್ಚಿ ಪೈರು ನಾಶವಾಗುವದು.

ಈ ಹುಳವು ಕಬ್ಬಿಗಿಂತ ಮುಸುಕಿನಜೋಳಕ್ಕೆ ಬೀಳುವದು ಹೆಚ್ಚು. ಆದಕಾರಣ ಕಬ್ಬಿನ ಗದ್ದೆಯಲ್ಲಿ ಹುಳದ ಕಾಟ ತಪ್ಪಿಸಬೇಕಾದರೆ ಕಬ್ಬು ನೆಡುವ ಕಾಲದಲ್ಲಿ ಅಲ್ಲಲ್ಲಿ ಒಂದೊಂದು ಮುಸುಕಿನಜೋಳದ

ನ್ನು ಬಿತ್ತಿದ್ದರೆ ಹುಳವು ಕಬ್ಬನ್ನು ಬಿಟ್ಟು ಜೋಳಕ್ಕೆ ಬೀಳುವದು. ಈ ಜೋಳದ ಕಡ್ಡಿಗಳನ್ನು ನಂತರ ಕಿತ್ತು ದನಕ್ಕೆ ಹಾಕಬಹುದು.

ಜೋಳದ ಹೊಲಕ್ಕೆ ಹುಳು ಬಿದ್ದಿದ್ದರೆ ಫಸಲು ಕಟಾವುಮಾಡಿದ ನಂತರ ಕೂಳೆಗಳನ್ನೂ ಬುಡ ಸಹಿತ ಕಿತ್ತು ಸುಡಬೇಕು. ಹಾಗೇ ಬಿಟ್ಟರೆ ಹುಳು ಬೇಸಿಗೆಯಲ್ಲಿ ಜೀವಿತವಾಗಿದ್ದು ಮುಂದಿನ ಪೈರನ್ನೂ ನಾಶಪಡಿಸುವದು.— ಸೆಂಟ್ರಲ್ ಪ್ರಾವಿನ್ಸಸ್ ಅಗ್ರಿಕಲ್ಚರಲ್ ಗಜೆಟ್, ಜುಲೈ ೧೯೦೯.

---

V. ಮೈಸೂರು ಸೀಮೆಯಲ್ಲಿ ತಾಲ್ಲೂಕು ಮತ್ತು ಗ್ರಾಮಗಳಲ್ಲಿ ರೈತಾಪಿ ಜನಗಳಿಗೆ ವ್ಯವಸಾಯ ಸಂಬಂಧವಾಗಿ ಏರ್ಪಾಡಾಗುವ ಪರಸ್ಪರ ಸಹಾಯ ಸಂಘಗಳ ಮೇಲ್ವಿಚಾರಣೆಗೋಸ್ಕರ ಸಾಮಾನ್ಯ ತಿಳುವಳಿಕೆಯುಳ್ಳ ಜನರು ದೊರಿಯುವುದು ಅಪರೂಪವಾಗಿರುವದಾಗಿಯೂ, ಇಂಥವರು ಇಲ್ಲದ್ದರಿಂದ ಸಂಘಗಳ ಕೆಲಸಗಳು ರೂಲ್ಸು ಪ್ರಕಾರ ನಡಿಸಲು ಆಗದೆ ಅನೇಕ ತಪ್ಪುಗಳು ಉಂಟಾಗುವುದಾಗಿಯೂ, ಹಾಲಿ ಇಬ್ಬರು ಕೋ ಆಪರೇಟಿವ್ ಸೊಸೈಟಿಗಳ ಆನರರಿ ಆರ್ಗನೈಸರ್ ಇದ್ದರೂ ಇವರಿಗಿಂತಲೂ ಸ್ವಲ್ಪ ಕಮ್ಮಿ ದರ್ಜೆಯವರಾಗಿ ರೈತಾಪಿ ಜನರಲ್ಲಿ ಸಂಕೋಚವಿಲ್ಲದೆ ಸೇರಿ ಅವರ ಅಹವಾಲ್ ವಿಚಾರಿಸಿ ಸಂಘಗಳನ್ನು ನಡಿಸಲು ಅವಶ್ಯವಾದ ಬುದ್ಧಿ ಮಾರ್ಗವನ್ನು ಹೇಳುತ್ತಾ ಆಗಿಂದಾಗ್ಗೆ ರಿಜಸ್ಟ್ರಾರವರಿಂದ ಸೊಸೈಟಿಗಳಿಗೆ ಬರುವ ಹುಕುಂಗಳನ್ನು ವಿಶದವಾಗಿ ತಿಳಿಸಲು ಅನುಕೂಲವಾಗಿರುವಂಥ ತಾಲ್ಲೂಕು ಶಿರಸ್ತೆಗೆ ಕಮ್ಮಿ ಇಲ್ಲದ ಗೌರವವಾದ ಸರ್ಕಾರದ ನೌಕರಿಯಲ್ಲಿದ್ದು ಹಾಲಿ ಪೆನ್ಷನ್‌ದಾರರಾಗಿ ಜನಗಳಿಗೆ ಸಹಾಯ ಮಾಡಲು ಉತ್ಸಾಹ ಮತ್ತು ಶಕ್ತಿಯುಳ್ಳವರಾಗಿ ಮುಂದಾಳಾಗಿ ಸೊಸೈಟಿಗಳ ಅಭಿವೃದ್ಧಿಗೆ ಸಹಾಯ ಮಾಡಲು ಬರುವಂಥವರನ್ನು ರಿಜಸ್ಟ್ರಾರವರು ನೇಮಿಸಬಹುದೆಂದೂ ಮತ್ತು ಅಂಥವರು ಮಾಡುವ ಕೆಲಸಕ್ಕೆ ತಮ್ಮ ಸ್ವಂತ ಖರ್ಚು ಬೀಳದಂತೆ ದಿನಕ್ಕೆ ಒಂದು ರೂಪಾಯಿಗೆ ಮೀರದ ಭತ್ಯವನ್ನು ರಿಜಸ್ಟ್ರಾರವರು ಕೊಡಬಹುದೆಂತಲೂ ಗವರ್ನಮೆಂಟಿನವರು ಹುಕುಂ ಮಾಡಿರುತ್ತಾರೆ. ಈ ಪ್ರಕಾರ ಸಹಾಯ ಮಾಡಲು ಅನೇಕರು ಮುಂದಾಗಿ ಬರುವರೆಂದು ಕೋರಲ್ಪಟ್ಟಿರುತ್ತೆ.

V. B. Soobbiah & Sons, Printers, Bangalore.—1909.

THE MYSORE

# REVENUE & AGRICULTURAL GAZETTE.

ಸಂಪುಟ ೩.] ಶುಕ್ರವಾರ, ೧ನೆ ಅಕ್ಟೋಬರ್ ೧೯೦೯. [ನಂ. ೨೩.

## Contents.



## ಅನುಕ್ರಮಣಿಕೆ.



## Single Planting of Paddy. *

## ಬತ್ತದ ಸೊಸಿಯನ್ನು ಒಂದೊಂದಾಗಿ ನಾಟುವ ಕ್ರಮ.

ಮದರಾಸು ಸರ್ಕಾರಿ ವ್ಯವಸಾಯ ಇಲಾಖೆಯವರು ಬತ್ತದ ನಾಟಿ

* ಹಿಂದೂ ಪತ್ರಿಕೆ, ೨೯—೯—೦೯.

ಪೈರು ಮಾಡುವದರಲ್ಲಿ ಸಸಿಗಳನ್ನು ಗುತ್ತಿಯಾಗಿ ನಾಟುವದಕ್ಕೆ ಬದಲಾಗಿ ಒಂದೊಂದಾಗಿ ನಾಟಿ ಅಜಮಾಯಿಷಿಮಾಡಿದ್ದರಲ್ಲಿ ಉತ್ಪತ್ತಿಯು ಗುತ್ತಿಯಾಗಿ ನಾಟುವ ಕ್ರಮದಿಂದ ಬರುವದಕ್ಕಿಂತಲೂ ಸುಮಾರು ಒಂದೂವರೆಯಷ್ಟು ಹೆಚ್ಚಿರುತ್ತಯಲ್ಲದೆ ಈ ತರಹ ಪೈರಿನಿಂದ ಆಗುವ ಬಿತ್ತವೂ ಕೂಡ ಶ್ರೇಷ್ಠವಾಗಿರುತ್ತೆ. ಇದಕ್ಕೆ ಕಾರಣವೇನಂದರೆ, ಗುತ್ತಿಯಾಗಿ ನಾಟುವ ಕ್ರಮದಲ್ಲಿ ೧೫-೨೦ ಸಸಿಗಳು ತೆಗದುಕೊಳ್ಳುವ ಜಾಗ ಮತ್ತು ಗೊಬ್ಬರವು ಮೇಲ್ಕಂಡ ಕ್ರಮದಲ್ಲಿ ಒಂದೇ ಸಸಿಗೆ ಒದಗುವದರಿಂದ ನಾಟಿದ ಸಸಿಯು ಬಹಳ ಬಲವಾಗಿ ಬೆಳೆಯುವದಕ್ಕೆ ಅವಕಾಶವುಂಟಾಗಿ ತೆನೆಗಳಲ್ಲಿ ಕಾಳುಗಳು ಹೆಚ್ಚಾಗಿಯೂ ಮತ್ತು ದಡವತಿಯಾಗಿಯೂ ಕಟ್ಟುತ್ತವೆ. ಪುನಃ ಈ ದಡವತಿಯಾದ ಬಿತ್ತದಿಂದ ಹುಟ್ಟುವ ಸಸಿಗಳು ತಾಯಿ ರಖಮಿನ ವೈಲಕ್ಷಣ್ಯಗಳನ್ನೆ ಹೊಂದಿ ಹೆಚ್ಚಾಗಿ ಕಾಲುಗಳೊಡೆದು ಧಾನ್ಯದ ಉತ್ಪತ್ತಿಯೂ ಜಾಸ್ತಿಯಾಗುವದು. ಈ ಕ್ರಮವನ್ನು ಬಿಡದೆ ಅನುಸರಿಸುತ್ತಾ ಬಂದರೆ ಕಾಳಿನ ದಡವತಿಯೂ, ಸಸಿಗಳಲ್ಲಿ ಕಾಲುಗಳು ಒಡೆಯುವ ಶಕ್ತಿಯೂ ಮತ್ತು ಧಾನ್ಯದ ಉತ್ಪತ್ತಿಯೂ ಕ್ರಮೇಣ ಹೆಚ್ಚುತ್ತಲೆ ಬರುವದು. ಈ ಅಂಶವು ಹಾಲೂರು ಅಗ್ರಿಕಲ್ಚರಲ್ ಸ್ಟೇಷನ್ನಲ್ಲಿ ಜರಗಿದ ಅಜಮಾಯಿಷಿಗಳಿಂದ ನಿರ್ಧಾರಪಟ್ಟಿದೆ. ಇದಕ್ಕಾಗಿಯೇ ೧೯೦೭-೦೮ನೆ ಸಾಲ್‌ನಲ್ಲಿ ೧೬ ಬೇರೆ ಬೇರೆ ತಾಕುಗಳಲ್ಲಿ ಒಂದೊಂದೇ ಸಸಿ ನಾಟಿ ಬೆಳೆಮಾಡಿ ನೋಡಿದರು. ಎಕರೆಗೆ ೧,೯೪೦ ಪೌಂಡಿನಂತೆ ಬತ್ತ ಹುಟ್ಟುವಳಿಯಾಯಿತು. ಅದೇ ಜಮೀನಿನಲ್ಲಿ ೧೯೦೮-೦೯ರಲ್ಲಿ ೨,೭೬೪ ಪೌಂಡು ಹುಟ್ಟುವಳಿಯಾಯಿತು. ಈ ಎರಡು ಸಾಲುಗಳಲ್ಲೂ ಅಜಮಾಯಿಷಿ ತಾಕುಗಳಿಗೆ ಒಂದೇ ತರದ ಗೊಬ್ಬರವನ್ನು ಒಂದೇ ಪ್ರಮಾಣದಲ್ಲಿ ಹಾಕಿತ್ತು. ಮಿಕ್ಕ ಹವಾ, ನೀರು, ಮುಂತಾದ ಸ್ಥಿತಿಗಳಲ್ಲಿ ವ್ಯತ್ಯಾಸವೇನೂ ಇರಲಿಲ್ಲ. ಆದ್ದರಿಂದ ಈ ಎರಡನೇ ಸಾಲಿನಲ್ಲಿ ಆದ ಹೆಚ್ಚು ಹುಟ್ಟುವಳಿಗೆ ಸಸಿಗಳನ್ನು ಒಂದೊಂದಾಗಿ ನಾಟಿದ್ದ ತಾಕುಗಳಿಂದ ಬಿತ್ತವನ್ನು ತೆಗೆದು ಪೈರುಮಾಡಿದ್ದದ್ದೇ ಕಾರಣವೆಂದು ಹೇಳಬೇಕಾಗುತ್ತೆ.

ಈ ಕ್ರಮದಲ್ಲಿ ಒಂದು ವರುಷ ಕೆಲವು ಸಸಿಗಳಲ್ಲಿ ಒಂದು ಕಾ

ಲು ಮತ್ತು ಕೆಲವಲ್ಲಿ ಎರಡು ಕಾಳುಗಳು ಇದ್ದವು. ಎರಡನೆ ವರುಷ ಮೂರು ಕಾಳುಗಳು ಒಡೆದವು. ಮೂರನೆ ವರುಷ ಎಲ್ಲಾ ಸೊಸಿಗಳಲ್ಲು ಮೂರು ಕಾಳುಗಳು ಧಾರಾಳವಾಗಿ ಬಂದು ಕೆಲವಲ್ಲಿ ಐದೂ ಒಡೆದಿದ್ದವು.

ಒಂದೊಂದೇ ಬೇರು ನಾಟುವ ಕ್ರಮದಲ್ಲಿ ಅಗೆಯಲ್ಲಿ ಜಾಸ್ತಿ ಬಿತ್ತ ಒಟ್ಟು ಹಾಕಕೂಡದು. ಒಂದು ಎಕರೆಯು ಸಾಗುವಳಿಗೆ ಬೇಕಾಗುವ ಸೊಸಿಗಳನ್ನು ತಯಾರ ಮಾಡಿಕೊಳ್ಳುವದಕ್ಕೆ ೭ ಸೆಂಟು ಅಥವ ಸುಮಾರು ೩ ಗುಂಟೆಯಾಗುವಷ್ಟು ಅಗೆ ಸಿದ್ಧಪಡಿಸಿಕೊಂಡು ೭ ಮದರಾಸು ಸೇರು ಬಿತ್ತ ಒಟ್ಟು ಹಾಕಿದರೆ ಸಾಕಾಗುತ್ತೆ. ಅಗೆಗೆ ಚೆನ್ನಾಗಿ ಮಾಗಿದ ದನದ ಗೊಬ್ಬರವನ್ನು ಸಮೃದ್ಧಿಯಾಗಿ ಹಾಕಿದರೆ ಚೆನ್ನಾಗಿ ಮೊಳಕೆ ಏಳುತ್ತೆ. ಸೊಸಿಗಳನ್ನು ಅಗೆಯಲ್ಲಿ ಹಾನೆ ದಿನಗಳು ಬಿಡದೆ ಎಳೆತಾಗಿರುವಾಗಲೆ ಕಿತ್ತು ನಾಟಬೇಕು. ಅಂದರೆ ೫ ತಿಂಗಳ ಫಸಲಿಗೆ ೩೫ ದಿನಗಳಿಗೆ ಮೀರದ ಸೊಸಿಗಳು ಅನುಕೂಲ. ಮೇಲೆ ಹೇಳಿದಮೇರೆ ಅಗೆಯನ್ನು ತಯಾರುಮಾಡಿಕೊಂಡಲ್ಲಿ ಸೊಸಿಗಳು ಬಲವಾಗುವದಲ್ಲದೆ ಅವನ್ನು ಒಂದೊಂದಾಗಿ ಪ್ರತ್ಯೇಕಿಸುವದೂ ಸುಲಭವಾಗುತ್ತೆ.

ನಾಟುವಾಗ ಸೊಸಿಗೆ ಸೊಸಿ ಎಷ್ಟು ದೂರ ಇರಬೇಕೆಂಬುವ ಭಾಗದಲ್ಲಿ ಎಕರೆಗೆ ೧,೦೦೦ ಮದರಾಸು ಸೇರು ಹುಟ್ಟುವಳಿಯಾಗುವ ಜಮೀನಿನಲ್ಲಿ ಸೊಸಿಯಿಂದ ಸೊಸಿಗೆ ಒಂದು ಗೇಣು ಇದ್ದರೆ ಸಾಕು. ೧,೫೦೦ ಸೇರು ಆಗುವ ಜಮೀನಾದರೆ $\frac{3}{4}$ ಗೇಣು ಇರಬಹುದು. ೫೦೦ ಸೇರು ಮತ್ತು ಕಮ್ಮಿ ಉತ್ಪತ್ತಿಯಾಗುವ ಭಾಗದಲ್ಲಿ $\frac{1}{2}$ ಗೇಣು ಇರಬೇಕಾಗುತ್ತೆ. ಅಪೂರ್ವವಾಗಿ ೧,೫೦೦ ಸೇರು ಆಗುವ ಉತ್ಕೃಷ್ಟ ಜಮೀನಾದರೆ ೨ ಗೇಣು ಬಿಟ್ಟರೂ ಬಾಧಕವಿಲ್ಲ. ಆದರೆ ಈ ವಿಧಾನವು ನಿಕೃಷ್ಟ ಜಮೀನಿಗೆ ಅಷ್ಟು ಅನುಕೂಲಿಸುವಂತೆ ಇಲ್ಲ. ಯಾಕಂದರೆ, ಒಂದೊಂದೇ ಸೊಸಿ ನಾಟುವದಕ್ಕೆ ತಗಲುವ ಲಾಗವಡು ದುಬಾರಿಯಾಗಿರುತ್ತೆ.

## Cotton.

## ಹತ್ತಿ.

ಹತ್ತಿ ವ್ಯವಸಾಯಗಾರರು ಯಾವತರಹ ಹತ್ತಿಯನ್ನು ಬೆಳೆಯಬೇ

ಕಂಬ ಭಾಗದಲ್ಲಿ ಈ ಕೆಳಗೆ ಕಂಡ ಕೆಲವು ಮುಖ್ಯಾಂಶಗಳಿಗೆ ಗಮನ ಕೊಡಬೇಕು.

ವ್ಯವಸಾಯಕ್ಕೆ ಚುನಾಯಿಸತಕ್ಕ ಹತ್ತಿಯು ಹವಾಸ್ಥಿತಿಗಳ ಬದಲಾವಣೆಗಳನ್ನು ತಡೆದು ಜಾಗ್ರತೆ ಬೆಳೆಯುವದಾಗಿಯೂ, ಹೊಲದಲ್ಲಿ ಜಾಸ್ತಿ ಉತ್ಪತ್ತಿಯನ್ನೂ ರಾಟೆಯಾದಾಗ ಹೆಚ್ಚು ಅರಳೆಯನ್ನೂ ಕೊಡತಕ್ಕದ್ದಾಗಿಯೂ ಮತ್ತು ಉದ್ದವಾಗಿಯೂ, ನಾರಾಗಿಯೂ ಮತ್ತು ಜಾಸ್ತಿ ಬೆಲೆ ಕೊಡತಕ್ಕ ಎಳೆ ಬರುವದಾಗಿಯೂ ಇರಬೇಕು.

ಹೀಗೆ ರಖಮನ್ನು ಗೊತ್ತುಮಾಡಿಕೊಂಡು ನಂತರ ಒಳ್ಳೆ ಬೀಜವನ್ನು ಸಂಪಾದಿಸಬೇಕು.

ಮೊದಲು ಹೊಲದ ಒಂದು ಕಡೆ ಬಿತ್ತಿ ಸರಿಯಾದ ರೀತಿ ವ್ಯವಸಾಯ ಮಾಡಿ ಅಲ್ಲಿಂದ ಒಳ್ಳೆ ಬೀಜವನ್ನು ಆರಿಸಿಕೊಳ್ಳಬೇಕು.

ವ್ಯವಸಾಯ ಕ್ರಮಗಳು.—

(೧) ಸಸಿಗಳನ್ನು ಸಾಲುಸಾಲಾಗಿ ಏರುಗಳಮೇಲೆ ಅಥವಾ ಸಮ ಭೂಮಿಯಲ್ಲೊ ಹಾಕುವದು.—ಇದು ಬಹಳವಾಗಿ ಭೂಗುಣವನ್ನನುಸರಿಸಿಯೇ ಇರುತ್ತೆ. ಅಂದರೆ ಹೆಚ್ಚಾಗಿ ನೀರು ನಿಲ್ಲುವ ಜಮೀನು ಹತ್ತಿಯ ಸಾಗುವಳಿಗೆ ಸುತರಾಂ ಲಾಯಖಾದ್ದಲ್ಲ. ಹೆಚ್ಚಿಗೆ ಮಳೆಯಿಂದ ಜಮೀನಿನಲ್ಲಿ ಸ್ವಲ್ಪಕಾಲ ನೀರು ನಿಲ್ಲುವ ಸಂದರ್ಭಗಳಲ್ಲಿ ಏರುಹಾಕಿ ಬಿತ್ತುವದು ಒಳ್ಳೇದು. ನೀರು ನಿಲ್ಲದ ಸಮಭೂಮಿಗಳಲ್ಲಿ ಏರು ಇಲ್ಲದೇನೇ ಬಿತ್ತಬಹುದು.

(೨) ಹತ್ತಿ ಗಿಡಗಳು ಹುಲುಸಾಗಿ ಬೆಳೆಯುವದಕ್ಕೆ ಬೆಳಕು ಮತ್ತು ಘಾಳಿ ಚೆನ್ನಾಗಿ ಆಡಬೇಕಾಗಿರುವದರಿಂದ ಹೊಲವನ್ನು ಬಹಳ ಪಾಕಾಗಿಡಬೇಕಾದ್ದು ಅವಶ್ಯಕ. ಹತ್ತಿ ಹೊಲದಲ್ಲಿ ಹುಲ್ಲು ಬೆಳೆಯಲಿಕ್ಕೆ ಅವಕಾಶ ಕೊಟ್ಟರೆ ಹತ್ತಿ ಪೈರು ಫಲಿಸುವದಕ್ಕೆ ಬದಲಾಗಿ ಕಳೆ ಗಿಡಗಳಾಗಿ ಪರಿಣಮಿಸುತ್ತವೆಯಲ್ಲದೆ ಎಲೆಗಳು ಅತಿ ಜಾಗ್ರತೆ ಬಲಿತು ಹಳದಿ ಬಣ್ಣಕ್ಕೆ ತಿರುಗುವುದರಿಂದ ಹಟ್ಟುವಳಿಯು ಕಮ್ಮಿಯಾಗುತ್ತೆ.

(೩) ಪರಿಶುದ್ಧವಾದ ಹತ್ತಿಯನ್ನೆ ಬಿಡಿಸಿಕೊಳ್ಳುವದು ಅತ್ಯವಶ್ಯ

ಕವಾದ್ದರಿಂದ ಈ ಕಾಲದಲ್ಲಿ ರೈತನು ಆಗಾಗ್ಯೆ ಬಹಳ ಜಾಗರೂಕತೆಯಿಂದ ನಿಗಾ ಕೊಡುತ್ತಿರಬೇಕು.

(೪) ಬಿಡಿಸಿದ ಹತ್ತಿಯನ್ನು ಒಳ್ಳೇದು ಕೆಟ್ಟದ್ದೆಂದು ತರಹೆವಾರ್ ವಿಂಗಡಿಸಿಕೊಳ್ಳಬೇಕು.

ಚೆನ್ನಾಗಿ ಅರಳಿದ ಹತ್ತಿಯನ್ನು ಬಿಡಿಸಿಕೊಳ್ಳುವದು ಅಷ್ಟು ಪ್ರಯಾಸವಲ್ಲ. ಹದವಾಗಿ ಬಲಿತ ಹತ್ತಿಯನ್ನು ಕೂಡ್ಲೆ ಬಿಡಿಸಿಕೊಳ್ಳಬೇಕಲ್ಲದೆ ಶಿವಾಯಿ ಅದನ್ನು ಬಹಳ ಕಾಲ ಗಿಡದಲ್ಲೇ ಬಿಡಬಾರದು. ಬಿಡಿಸಿದ ಹತ್ತಿಯನ್ನು ಸೋಸಿ ಒಣಗಿಸಿ ೩ರಿಂದ ೬ ವಾರ ಪರ್ಯಂತರ ಇಟ್ಟಿದ್ದು ನಂತರ ರಾಟೆಯಾಡಬೇಕು.

ಬೇರೆ ಬೇರೆ ಜಾತಿ ಹತ್ತಿಗಳನ್ನು ಬೆರೆಕೆ ಮಾಡಬಾರದು.—[ಅಗ್ರಿಕಲ್ಚರಲ್ ಅಂಡ್ ಇಂಡಸ್ಟ್ರಿಯಲ್ ಪ್ರೋಗ್ರೆಸ್.—ಸೆಪ್ಟೆಂಬರ್ ೧೯೦೯.]

---

ಹತ್ತಿ ಬೀಜಕ್ಕೆ ನಾನಾತರದ ರೋಗತಗಲಿ ಮೊಳಕೆ ಏಳುವದೇ ಇಲ್ಲ. ಇದನ್ನು ತಪ್ಪಿಸುವದಕ್ಕಾಗಿ ಅಮೇರಿಕಾದೇಶದಲ್ಲಿ ೧೦೦೦ ಭಾಗ ನೀರಿಗೆ ೧ ಭಾಗ ಕರೋಸಿವ್ ಸಬ್ಲಿಮೇಟ್ ಔಷಧಿಯನ್ನು (Corrosive Sublimate)ಸೇರಿಸಿ ಈ ನೀರಿನಲ್ಲಿ ಬೀಜವನ್ನು ನೆನೆಹಾಕುತ್ತಾರೆ. ದ್ರಾವಕವನ್ನು ತಯಾರು ಮಾಡಬೇಕಾದರೆ ಔಷಧಿಯನ್ನು ಮೊದಲು ಸ್ವಲ್ಪ ಬಿಸಿನೀರಿನಲ್ಲಿ ಕರಗಿಸಿ ನಂತರ ಅಳತೆ ಮಾಡಿಟ್ಟುಕೊಂಡಿರುವ ನೀರಿನಲ್ಲಿ ಬೆರಸಬೇಕು. ತೊಟ್ಟಿಯ ಒಳಪಾರ್ಶ್ವಗಳಿಗೆ ಮೊದಲು ಈ ಪಾಷಾಣದ ನೀರನ್ನು ಸವರಿ ನಂತರ ದ್ರಾವಕವನ್ನು ಸುರಿಯಬೇಕು. ಇಲ್ಲವಾದರೆ ದ್ರಾವಕದಲ್ಲಿನ ವಿಷವೆಲ್ಲಾ ತೊಟ್ಟಿಗೇನೆ ತಗಲಿ ದ್ರಾವಕದ ಬಲ ಕಮ್ಮಿಯಾಗುವದು. ಹೀಗೆ ತಯಾರಾದ ದ್ರಾವಕದಲ್ಲಿ ಬೀಜವನ್ನು ೧೦-೨೦ ನಿಮಿಷಗಳು ನೆನೆಇಟ್ಟು ಚೆನ್ನಾಗಿ ಕಲಕಬೇಕು. ೧೨ ರಾತಲು ಬೀಜಕ್ಕೆ ಒಂದು ಗ್ಯಾಲನ್ ದ್ರಾವಕದ ನೀರು ಹಿಡಿಯುತ್ತೆ. ಬೀಜವನ್ನು ಇನ್ನು ಒದ್ದೆ ಇರುವಾಗಲೇ ಬಿತ್ತಬೇಕು, ಇಲ್ಲವೆ ಚೆನ್ನಾಗಿ ಒಣಗಿಸಿ ಗೋಣಿಚೀಲಗಳಲ್ಲಿ ಮೂಟೆ ಕಟ್ಟಿಡಬಹುದು. ಈ ಪ್ರಕಾರ ತಯಾರು ಮಾಡಿದ ಬೀಜದಿಂದ ಹೊರಡುವ ಮೊಳಕೆಗಳಿಗೆ ರೋಗಗಳು ಅಂಟುವದಿಲ್ಲ.—ಕುಂಭಕೋಣ ವ್ಯವಸಾಯ ಸಂಘದ ಮಾಸಪತ್ರಿಕೆ, ಸೆಪ್ಟಂಬರು ೧೯೦೯.

---

## Revenue Appeals.

## ರೆವಿನ್ಯೂ ಅಪೀಲುಗಳು.

೧೯೦೮—೦೯ನೆ ಇಸವಿಯ ಅಪೀಲ್ ನಂ. ೧೧೩.

| ಅಪೀಲ್ ವಾದಿ. | | ಅಪೀಲ್ ಪ್ರತಿವಾದಿ. |
|---|---|---|
| ವೆಂಕಟರಮಣಯ್ಯ | *vs.* | ರಂಗೇಗೌಡ. |

ಮೊಕದ್ದಮೆಯ ವಿದ್ಯಮಾನ.—ವಾದಿಯು ಕೃಷ್ಣರಾಜಪೇಟೆ ತಾಲ್ಲೂಕು ಭೂಕನಕೆರೆ ಗ್ರಾಮದ ೩೭ನೆ ಗೋಮಾಳ ಸರ್ವೆ ನಂಬರು ಪೈಕಿ ೩ ಎಕರೆಗೆ ೧೯೦೦ರಲ್ಲಿ ದರಖಾಸ್ತು ಕೊಟ್ಟನು. ೧೯೦೩ರಲ್ಲಿ ಈ ನಂಬರು ಪೋಡು ಮಾಡಲ್ಪಟ್ಟು ಹರಾಜಿಗೆ ಗುರಿಪಡಿಸಲ್ಪಟ್ಟಿತು. ಹರಾಜಿನಲ್ಲಿ ವಾದಿಯು ತಾನು ಖಾಯಿಷ್ ಮಾಡಿದ ಭಾಗವನ್ನು ೧೦ ರೂಪಾಯಿಗೆ ಪಡೆದನು. ವಾದಿಯು ಕ್ರಯದಾರನೆಂದು ಭಾವಿಸಲ್ಪಟ್ಟು ೧೯೦೪ನೆ ಡಿಸೆಂಬರು ೭ನೆ ತಾರೀಖಿನಲ್ಲಿ ಇವನಿಗೆ ಸಾಗುವಳಿ ಚೀಟಿಯೂ ಪಾವತಿಯಾಯಿತು. ೧೯೦೬ನೆ ಜನವರಿ ೨೦ರಲ್ಲಿ ಈ ಹರಾಜು ವಿಚಾರ ತಕರಾರು ಅರ್ಜಿ ಬಂದು ಅಮಲ್ದಾರರಿಗೆ ರಿಫರಾಯಿತು. ಇವರ ರಿಪೋರ್ಟು ಅದೇ ಮಾರ್ಚಿ ೫ಕ್ಕೆ ಅಸಿಸ್ಟೆಂಟ್ ಕಮಿಷನರವರಲ್ಲಿ ತಲಪಿರುತ್ತೆ. ಇದನ್ನು ಅಸಿಸ್ಟೆಂಟ್ ಕಮಿಷನರವರು ಒಂದು ವರುಷಕ್ಕೆ ಮೇಲ್ಪಟ್ಟು ಇಟ್ಟುಕೊಂಡಿದ್ದು ೧೯೦೭ನೆ ಮಾರ್ಚಿ ೮ರಲ್ಲಿ ಸರಿಯಾದ ಕಾರಣಗಳನ್ನು ನಮೂದಿಸದೆ ಹರಾಜು ಕ್ಯಾನ್ಸಲ್ ಆಗಬೇಕೆಂದು ಸಿಫಾರಸ್ಸು ನಿಸಿ ಡೆಪ್ಯುಟಿ ಕಮಿಷನರವರಲ್ಲಿಗೆ ರಿಪೋರ್ಟು ಮಾಡಿದರು. ಡೆಪ್ಯುಟಿ ಕಮಿಷನರವರು ಅದೇ ನವಂಬರು ೨೭ರಲ್ಲಿ ತಕರಾರುದಾರರ ಅರ್ಜಿಯನ್ನು ತಿರಸ್ಕರಿಸಿ ಹುಕುಂ ಮಾಡಿದರು. ಈ ಹುಕುಮನ್ನು ಅಮಲ್ದಾರರವರು ೧೯೦೮ನೇ ಜನವರಿ ೧೦ರಲ್ಲಿ ಕ್ರಯದಾರನಿಗೆ ತಿಳಿಸಿರುತ್ತಾರೆ. ಈಮಧ್ಯೆ ತಕರಾರುದಾರರು ೧೯೦೭ನೆ ಡಿಸೆಂಬರು ೧೬ರಲ್ಲಿ ಹರಾಜು ಕ್ಯಾನ್ಸಲ್ ಮಾಡುವ ಬಗ್ಗೆ ಡೆಪ್ಯುಟಿಕಮಿಷನರವರಿಗೆ ಮತ್ತೊಂದು ಅರ್ಜಿಯನ್ನು ಕೊಡಲು ಇವರು ಕ್ರಯದಾರನಿಗೆ ನೋಟೀಸು ಇಲ್ಲದೇನೆ ತಮ್ಮ ಹಿಂದಿನ ಹುಕುಮನ್ನು ರದ್ದುಮಾಡಿ, ಈ ವಿಷಯವನ್ನು ಅಸಿಸ್ಟೆಂಟ್ ಕಮಿಷನರವರು ಸೂಕ್ತಾನುಸಾರ ಫೈಸಲ್ಮಾಡಬಹು

ಬೆಂದು ಹುಕುಂ ಮಾಡಿದರು. ಅಸಿಸ್ಟೆಂಟ್ ಕಮೀಷನರವರು ೧೯೦೮ನೆ
ಆಗಸ್ಟ್ ೧೯ರಲ್ಲಿ ತಾವು ಹಿಂದೆ ನಮೂದಿಸಿದ್ದ ಆಧಾರಗಳಮೇಲೆಯೇ ಹ
ರಾಜನ್ನು ಕ್ಯಾನ್ಸಲ್ಮಾಡಿದರು. ಈ ಹುಕುಮಿನಮೇಲೆ ವಾದಿಯು ಪು
ನಃ ಡೆಪ್ಯುಟಿ ಕಮೀಷನರವರಲ್ಲಿ ಅಪೀಲು ತರಲು ಇವರು ಈ ವಿಷಯವ
ನ್ನು ತಾವು ಮೊದಲೇ ಪರ್ಯಾಲೋಚಿಸಿ ಫೈಸಲ್ಮಾಡಿರುತ್ತೇವೆಂಬ ತಪ್ಪು
ಕಾರಣದಮೇಲೆ ಇದರಲ್ಲಿ ಪ್ರವೇಶಿಸಲಾಗುವದಿಲ್ಲವೆಂದು ಹುಕುಂ ಮಾಡಿದರು.

ಗವರ್ನ್ಮೆಂಟಿನವರ ತೀರ್ಮಾನ:—ಈ ನಡವಳಿಕೆಯಲ್ಲಿ ಲಾ ಮತ್ತು
ಪ್ರೊಸೀಜರ್‌ಗೆ ಸಂಬಂಧಪಟ್ಟ ರೂಲುಗಳನ್ನು ಸಖ್ತ ಜಾರಿಗೆ ತರದೇ ಉ
ದಾಸೀನತೆ ತೋರಿಸಿರುವದು ವ್ಯಕ್ತಪಡುತ್ತೆ. ಮೊದಲಿನ ತಕರಾರು ಅ
ರ್ಜಿಯು ನಾಗುವಳಿ ಚೀಟಿ ಕೊಟ್ಟ ೨ ತಿಂಗಳನಂತರ ಹಾಜರ್ಮಾಡಲ್ಪ
ಟ್ಟಿತು ಮತ್ತು ಈ ಕಾರಣದಮೇಲೆಯೇ, ಇದನ್ನು ಅಪೀಲೆಂದು ಭಾವಿಸಿ
ದಾಗ್ಯೂ ಕೂಡ, ತಿರಸ್ಕರಿಸಬಹುದಾಗಿತ್ತು. ಅಸಿಸ್ಟೆಂಟ್ ಕಮೀಷನರ
ವರ ಆಫೀಸಿನಲ್ಲಿ ಕಾರಣವಿಲ್ಲದೆ ಒಂದು ವರುಷಕ್ಕೆ ಮೇಲ್ಪಟ್ಟು ಸುಸ್ತಿ ಪಡ
ದಿರುತ್ತದಲ್ಲದೆ ಕೊನೆಗೆ ಅವರು ಮಾಡಿರುವ ರಿಪೋರ್ಟ್ ಕೇವಲ ಫಡ
ಪೋಸಿಯಾಗಿರುತ್ತೆ. ಇವರು ಊಹಿಸಿದ ಮೋಸವು ಯಾವಪ್ರಕಾರ
ಯಾರಿಂದ ನಡೆಯಿತೆಂಬ ಭಾಗದಲ್ಲಿ ಕಾರಣಗಳನ್ನು ಕೇಳಿದ್ದಕ್ಕೆ ಇವುಗಳ
ನ್ನು ಸ್ಪಷ್ಟಪಡಿಸಲು ಇವರಿಂದಾಗಲಿಲ್ಲ. ಡೆಪ್ಯುಟಿ ಕಮೀಷನರವರು ತಕ
ರಾರು ಅರ್ಜಿಯನ್ನು ಮೊದಲೇ ತಿರಸ್ಕರಿಸಿದ್ದಕಾರಣ ಕ್ರಯದಾರನಿಗೆ
ನೋಟೀಸು ಇಲ್ಲದೆ ಪುನಃ ತಮ್ಮ ಹುಕುಮನ್ನು ಕ್ಯಾನ್ಸಲ್‌ಮಾಡಬಾ
ರದಾಗಿತ್ತು ಮತ್ತು ತಮ್ಮ ಫೈಸಲಾತಿಗೆ ಅಸಿಸ್ಟೆಂಟ್ ಕಮೀಷನರವರು
ಕಳುಹಿಸಿದ್ದ ಕೇಸನ್ನು ಪುನಃ ಅವರ ತೀರ್ಪಿಗೇನೆ ಬಿಟ್ಟದ್ದು ತಪ್ಪಾಗಿರು
ತ್ತೆ. ವಾದಿಯೇನೋ ಜಮೀನನ್ನು ಅದು ಬಾಳುವದಕ್ಕಿಂತಲೂ ಕಮ್ಮಿ
ಖರೀದಿಗೆ ಪಡೆದಿರಬಹುದು. ಆದರೆ ಇಷ್ಟು ಕಾಲವಿಳಂಬವಾಗಿರುವದರಿಂ
ದಲೂ, ನಡವಳಿಕೆಯಲ್ಲಿ ಅನೇಕ ಭಾರಿ ಅಕ್ರಮಗಳು ನಡೆದಿರುವದರಿಂದ
ಲೂ ಡೆಪ್ಯುಟಿಕಮೀಷನರವರ ಹುಕುಮನ್ನು ಖಾಯಂ ಮಾಡಲಾಗುವದಿಲ್ಲ.
ಆದಕಾರಣ ದುಸರಾ ಹರಾಜು ಮಾಡಬೇಕೆಂಬ ಹುಕುಮನ್ನು ರದ್ದುಮಾ
ಡಿ ಜಮೀನನ್ನು ವಾದಿಯು ಸ್ವಾಧೀನಪಡಿಸಬೇಕೆಂದು ಆರ್ಡರ್‌ಮಾಡಿರುತ್ತೆ.

### ೧೯೦೪—೦೫ನೆ ಇಸವಿಯ ಅಪೀಲ್ ನಂ. ೧೧೯.

| ಅಪೀಲುವಾದಿ. | | ಅಪೀಲು ಪ್ರತಿವಾದಿ. |
|---|---|---|
| ಚನ್ನಬಸಪ್ಪ ಪವತಿ, ವಾರಸು ಹೆಂಡತಿ ಗಂಗಮ್ಮ. | *vs.* | ಪುಟ್ಟಬಸಪ್ಪ. |

ಕಂದಾಯ ಬಾಕಿಗಾಗಿ ಆದ ಜಮೀನು ಹರಾಜು ವಿಚಾರ.

ಮೊಕದ್ದಮೆಯ ವಿದ್ಯಮಾನ:—ಪ್ರತಿವಾದಿಯ ಖಾತೆಯಲ್ಲಿದ್ದ ಜಮೀನು ಕಂದಾಯ ಬಾಕಿಗಾಗಿ ಹರಾಜಾಗಿ ವಾದಿಯು ಇದನ್ನು ೩೧ ರೂಪಾಯಿಗೆ ಪಡೆದನು. ಹರಾಜಾದ ಮಾರನೆ ದಿನ ರಾಮಾಚಾರಿ ಎಂಬುವನು ಸದರಿ ಜಮೀನು ತನಗೆ ೧೦೦ ರೂಪಾಯಿಗೆ ಆಧಾರವಾಗಿರುವದಾಗಿ ತಕರಾರು ಅರ್ಜಿ ಕೊಟ್ಟನು. ಇದಾದ ೭ ದಿನಗಳಲ್ಲಿ ಖಾತೇದಾರನು ಹರಾಜಾದ ನಂಬರು ೩೦೦ ರೂಪಾಯಿ ಬೆಲೆ ಬಾಳತಕ್ಕದ್ದೆಂದೂ ಮತ್ತು ತನ್ನಿಂದ ಬಾಕಿಯನ್ನು ವಸೂಲು ತೆಗದುಕೊಂಡು ಹರಾಜನ್ನು ರದ್ದುಪಡಿಸಬೇಕೆಂದು ಕೇಳಿಕೊಂಡನು. ಅಮಲ್ದಾರರು ಸದರಿ ಜಮೀನು ಪ್ರತಿವಾದಿ ಬಯಾನಿಸುವಮೇರೆ ೩೦೦ ರೂಪಾಯಿ ಬಾಳತಕ್ಕದ್ದಲ್ಲವೆಂತಲೂ ಆಧಾರ ಮಾಡಿಕೊಂಡಿರುವವನೇ ಅದಕ್ಕೆ ೨೦೦ ರೂಪಾಯಿ ಬೆಲೆ ಕಟ್ಟುವದಾಗಿಯೂ ರಿಪೋರ್ಟು ಮಾಡಿದರು. ಅಸಿಸ್ಟೆಂಟ್ ಕಮಿಷನರವರು ಹರಾಜು ಇಸ್ತಿಹಾರು ಕಾನೂನು ಮೇರೆ ಕ್ರಮವಾಗಿ ಪ್ರಕಟವಾಗಿಲ್ಲ ಹಾಗೂ ಜಮೀನಿಗೆ ಸರಿಯಾದ ಬೆಲೆಯೂ ಬಂದಿಲ್ಲವೆಂಬ ಕಾರಣದಮೇಲೆ ಹರಾಜನ್ನು ರದ್ದುಪಡಿಸಿದರು. ಅಪೀಲಿನಲ್ಲಿ ಡೆಪ್ಯುಟಿ ಕಮಿಷನರವರೂ ಈ ಹುಕುಮನ್ನು ಖಾಯಂ ಮಾಡಿದರು.

ಗವರ್ನ್ಮೆಂಟಿನವರ ತೀರ್ಮಾನ:—ಹರಾಜಿನಲ್ಲಿ ಸರಿಯಾದ ಕ್ರಯ ದೊರೆತಿಲ್ಲವೆಂಬ ಆಧಾರದ ಮೇಲೆ ಹರಾಜು ರದ್ದಾಗಿರುತ್ತೆ ಮತ್ತು ಈ ವಿದ್ಯಮಾನವು ಅಮಲ್ದಾರ್ರ ರಿಪೋರ್ಟಿನಲ್ಲೂ ಕಂಡಿರುತ್ತೆ. ಆದಕಾರಣ ಡೆಪ್ಯುಟಿ ಕಮಿಷನರವರು ಮಾಡಿರುವ ಹುಕುಮಿನಲ್ಲಿ ಸರ್ಕಾರದವರು ಪ್ರವೇಶಿಸಲು ಇಷ್ಟಪಡುವದಿಲ್ಲವಾಗಿ ಪ್ರಸಕ್ತ ಅಪೀಲನ್ನು ಡಿಸ್ಮಿಸ್ ಮಾಡಿರುತ್ತೆ.

## Remedies against Ring Disease of Potatoes.*

## ಆಲುಗಡ್ಡೆಗೆ ಬಂಗಡಿರೋಗ ತಗಲದಹಾಗೆ ಉಪಾಯಗಳು.

ಆಲುಗಡ್ಡೆಗೆ ಬಂಗಡಿ ರೋಗವು ಬಾರದಿರುವದಕ್ಕೆ ಈ ಕೆಳಗೆ ಕಂಡ ಕೆಲವು ಉಪಾಯಗಳನ್ನು ಸಾಧ್ಯವಾದ ಮಟ್ಟಿಗೂ ಮಾಡಬೇಕಾದ್ದು ಅತ್ಯವಶ್ಯಕವು—

೧. ರೋಗದ ಕಲೆಯೇ ಇಲ್ಲದ ಜಮೀನಿನಲ್ಲಿ ಬೆಳೆದ ಗೆಡ್ಡೆಗಳನ್ನೇ ಬೀಜವಾಗಿ ಉಪಯೋಗಿಸಬೇಕು. ರೋಗದ ರೇಖೆಯು ಇರುವ ಗೆಡ್ಡೆಗಳನ್ನು ಮಾತ್ರವೇ ತಿರಸ್ಕರಿಸಿದರೆ ಸಾಲದು. ರೋಗವಿರುವ ಜಮೀನಿನಲ್ಲಿ ಬೆಳೆದ ಗೆಡ್ಡೆಯಲ್ಲೂ ರೋಗದ ಕ್ರಿಮಿಗಳಿರಬಹುದೆಂಬುವದನ್ನು ಚನ್ನಾಗಿ ತಿಳಿದಿರಬೇಕು.

೨. ಇದೂಅಲ್ಲದೆ ಗೆಡ್ಡೆಗಳನ್ನು ಕತ್ತರಿಸಿ ಕಣ್ಣುಗಳನ್ನು ಮಾತ್ರವೇ ಬೇರೆಬೇರೆ ನೆಡುವಾಗ ರೋಗವನ್ನು ಸೂಚಿಸುವ ಚುಕ್ಕೆಯಾಗಲಿ ರೇಖೆಯಾಗಲಿ ಸ್ವಲ್ಪವಾದರೂ ಕಂಡುಬಂದರೆ ಅಂಥಾ ಕಣ್ಣುಗಳನ್ನೆಲ್ಲಾ ಬಿಸಾಟುಬಿಡಬೇಕು.

೩. ಯಾವದಾದರೂ ಒಂದು ಜಮೀನಿನಲ್ಲಿ ಆ ರೋಗವಿದ್ದು ಪೈರು ಬಹಳ ಮಟ್ಟಿಗೆ ಕೆಡವಿದ್ದರೂ ಸರಿಯೇ ಇನ್ನೊಂದು ಸಾಲಿಗೆ ಅಂಥಾ ಜಮೀನಿನಲ್ಲಿ ಬೇರೆ ಪೈರನ್ನು ಇಡಬೇಕು. ಎಷ್ಟು ಸ್ವಲ್ಪವಾಗಿ ಆದರೂ ರೋಗವು ಕಾಣಿಸಿಕೊಂಡ ತಾಕಿನಲ್ಲಿ ಒಂದು ವರ್ಷಕಾಲವಾದರೂ ಆಲುಗೆಡ್ಡೆಯನ್ನು ಬೆಳೆಯದೆ ಬಿಡುವದು ಬಹಳ ಒಳ್ಳೇದು. ಹಾಗೆ ಮಾಡದ ಪಕ್ಷದಲ್ಲಿ ಆ ತಾಕಿನಲ್ಲೆಲ್ಲಾ ರೋಗವು ಹರಡುವದು ಬಹುಮಟ್ಟಿಗೆ ಖಂಡಿತವಾಗಿರುವದಲ್ಲದೆ ಆಜೂಬಾಜಿನಲ್ಲಿರುವ ತಾಕುಗಳಿಗೆ ಕೂಡ ರೋಗವು ಹತ್ತುವದು. ಒಂದು ಸಾಲು ಪೈರಿಗೆ ರೋಗ ಬಂದಿರುವ ತಾಕಿನಲ್ಲಿ ಇನ್ನೊಂದು ಸಾಲಿಗೆ ರೋಗ ಹತ್ತದೇ ಇರುವ ಬೇರೆ ವಿಧವಾದ ಪೈರನ್ನು ಇಡಬೇಕು. ಇದೂ ಅಲ್ಲದೆ ರೋಗವಿರುವ ತಾಕಿನಿಂದ ರೋಗವಿಲ್ಲದಿರುವ ತಾಕಿಗೆ ನೀರನ್ನು ಹಾಯಿಸದಂತೆ ಎಚ್ಚರಿಕೆಯಿಂದ ನೋಡಿಕೊಳ್ಳಬೇಕಲ್ಲದೆ

* ಮೈಸೂರು ಸರ್ಕಾರಿ ವ್ಯವಸಾಯ ಇಲಾಖೆಯ ಬುಲೆಟಿನ್ ೧.

ಕೆಲಸಮಾಡುವವರ ಕಾಲಿಗೆ ಅಂಟಿಕೊಳ್ಳುವ ಮಣ್ಣಿನ ಮೂಲಕವಾಗಿಯಾಗಲಿ ಬೇಸಾಯಮಾಡುವ ಗುದ್ದಲಿ ಮುಂತಾದವುಗಳಿಗೆ ಅಂಟುವ ಮಣ್ಣಿನ ಮೂಲಕವಾಗಿಯಾಗಲಿ ರೋಗವಿರುವ ತಾಕಿನ ಮಣ್ಣನ್ನು ರೋಗವಿಲ್ಲದಿರುವ ತಾಕಿನ ಮಣ್ಣಿಗೆ ಸೇರದಂತೆ ಬಹಳ ಹುಷಾರಿನಿಂದ ನೋಡಿಕೊಳ್ಳಬೇಕು. ಈ ರೀತಿಯಲ್ಲಿ ರೋಗವು ಅಂಟದಂತೆ ಮಾಡಬೇಕಾದರೆ ರೋಗವಿಲ್ಲದಿರುವ ತಾಕಿನಲ್ಲಿ ಬೇಸಾಯವನ್ನೂ ನೀರು ಕಟ್ಟುವದನ್ನೂ ಮೊದಲು ತೀರಿಸಿಕೊಂಡು ನಂತರ ರೋಗವಿರುವ ತಾಕಿನಲ್ಲಿ ಕೆಲಸ ಮಾಡಬೇಕೇ ಹೊರ್ತು ರೋಗವಿರುವ ತಾಕಿನ ಕೆಲಸವನ್ನು ತೀರಿಸಿಕೊಂಡು ರೋಗವಿಲ್ಲದಿರುವ ತಾಕಿಗೆ ಹೋಗಬಾರದು. ಇದೂ ಅಲ್ಲದೆ ರೊಗವಿರುವ ತಾಕಿನ ಕೆಲಸವೆಲ್ಲಾ ಮುಗಿದ ಮೇಲೆ ರೋಗವಿಲ್ಲದಿರುವ ತಾಕಿಗೆ ರೋಗವು ಅಂಟದೇ ಇರುವದಕ್ಕೋಸ್ಕರ ಕೆಲಸಗಾರರು ತಮ್ಮ ಕಾಲುಗಳನ್ನೂ ಗುದ್ದಲಿ ಮೊದಲಾದವುಗಳನ್ನೂ ಚೊಕ್ಕಟವಾಗಿ ತೊಳೆದುಕೊಳ್ಳಬೇಕು. ರೋಗವಿರುವ ತಾಕಿನಲ್ಲಿ ಆಲೂಗಡ್ಡೆಯು ಪೈರಾದನಂತರ ಚಪ್ಪರಬದನೆಯನ್ನೂ ಬದನೇಕಾಯನ್ನೂ ಬೆಳೆಯಬಾರದೆಂಬುದು ಜ್ಞಾಪಕದಲ್ಲಿರಬೇಕು. ಯಾಕಂದರೆ, ಈ ಎರಡು ಪೈರುಗಳಿಗೂ ಬಂಗಡಿ ರೋಗವು ಹತ್ತಬಹುದು. ಅಂಥಾ ತಾಕಿನಲ್ಲಿ ಒಂದು ವರ್ಷಕಾಲವಾದರೂ ಆಲೂಗೆಡ್ಡೆ, ಚಪ್ಪರಬದನೆ ಮತ್ತು ಬದನೆ ಗಿಡಗಳನ್ನು ಬೆಳೆಯದೆ ಇರಬೇಕು. ಎರಡು ವರ್ಷಗಳು ಬೆಳೆಯದೇ ಇರುವದು ಇನ್ನೂ ಒಳ್ಳೇದೆಂದು ತೋರುತ್ತೆ.

೪. ಹುಳಗಳನ್ನು ಕೊಲ್ಲುವ ದ್ರಾವಕಗಳನ್ನು ಗಿಡಗಳಮೇಲೆ ಚಿಮುಕಿಸುವದರಿಂದ ದ್ರವ್ಯ ವ್ಯಯವೂ, ಕಾಲಹರಣವೂ ಆಗುವದೇ ಹೊರ್ತು ಉಪಯೋಗವೇನೂ ಆಗುವದಿಲ್ಲ. ಯಾಕಂದರೆ ಹುಳುಗಳ ಮೂಲಕವಾಗಿಯಾಗಲಿ ಘಾಳಿಯ ಮೂಲಕವಾಗಿಯಾಗಲಿ ಈ ರೋಗವು ಗಿಡದಿಂದ ಗಿಡಕ್ಕೆ ಬಹುಮಟ್ಟಿಗೆ ಅಂಟುವದಿಲ್ಲ.

ಈ ಅಂಶವು ಅಂಥಾ ದ್ರಾವಕಗಳನ್ನು ಚಿಮುಕಿಸಿ ಮಾಡಿರುವ ಅಜಮಾಯಿಷಿಗಳಿಂದ ತಿಳಿದುಬಂದಿರುವದು.

೫. ಈ ರೋಗಕ್ಕೆ ಒಳಗಾಗದ ಜಾತೀಯ ಆಲೂ ಗೆಡ್ಡೆಯನ್ನು

ತರಿಸಿ ಬೆಳೆಯುವದರಿಂದ ರೋಗದ ಪ್ರಾಬಲ್ಯವು ಬಹಳಮಟ್ಟಿಗೆ ಕಡಿಮೆ ಯಾಗುವದು.

---

## Government Proceedings.

## ಸರ್ಕಾರಿ ಹುಕುಂಗಳು.

### I

ನಂ. ೨೫೦೭—೮—ಎಲ್. ಬಿ. ೩೬೭-೦೬—೮. ತಾ|| ೧೪-೯-೦೯.

ಕೊಂಡಾಪುರ ಇನಾಂಗ್ರಾಮದ ಅನುಮಂಚೆ ಗೌಡನೆಂಬಾತನು ಚೆನ್ನಪಟ್ಣ ತಾಲ್ಲೂಕಿನಲ್ಲಿ ಕೋಡಂಬಳ್ಳಿಯಿಂದ ಸಿಂಗರಾಜಪುರಕ್ಕೆ ಒಂದು ರಸ್ತೆಯನ್ನು ಧರ್ಮಾರ್ಥವಾಗಿ ಸ್ವಂತಲಾಗವಡಿನಿಂದ ಹಾಕಿಸುವದಾಗಿಯೂ ಮತ್ತು ಇದನ್ನು ತನ್ನ ಖರ್ಚಿನಿಂದಲೇ ಸಾಲಾಬಾದು ಮಾಡಿಸಿ ದುರಸ್ತು ಸ್ಥಿತಿಯಲ್ಲಿಟ್ಟುಕೊಂಡಿರುವ ಕಬೂಲು ಇರುತ್ತಾನೆ, ಇದರಿಂದ ಜನಗಳಿಗೆ ತುಂಬಾ ಅನುಕೂಲಉಂಟು, ಮತ್ತು ಸರ್ಕಾರಕ್ಕೂ ನಷ್ಟವಿಲ್ಲ ವಾದ್ದರಿಂದ ಸದರಿ ಕೆಲಸ ನಡೆಸುವದಕ್ಕೆ ಗೌರ್ನಮೆಂಟಿನವರು ಅಪ್ಪಣೆ ಕೊಡಬಹುದೆಂದೂ ಬೆಂಗಳೂರು ಡಿಸ್ಟ್ರಿಕ್ಟ್ ಬೋರ್ಡು ಪ್ರೆಸಿಡೆಂಟರವರು ಮಾಡಿದ ಸಿಫಾರಸನ್ನು ಗೌರ್ನಮೆಂಟಿನವರು ಅಂಗೀಕರಿಸಿ, ರಸ್ತೆ ಕೆಲಸ ಪೂರೈಸಿದ್ದಕ್ಕೆ ರಿಪೋರ್ಟು ಮಾಡಬೇಕೆಂದು ಹುಕುಂ ಮಾಡಿರುತ್ತಾರೆ.

### II

ಸಂಸ್ಥಾನದಲ್ಲಿ ೫ ವರುಷಕ್ಕೆ ಒಂದಾವರ್ತಿ ವ್ಯವಸಾಯಕ್ಕೆ ಸಂಬಂಧಪಟ್ಟ ಜಾನ್ವಾರುಗಳ ಸೆನ್ಸಸ್ಸನ್ನು ತೆಗೆಯುವ ಬಗ್ಗೆ ೧೮೯೯ನೆ ಏಪ್ರಿಲ್ ೨೪ನೆ ಮುರ್ಕಂ ೭೬೦೧—೬೧೫ ರೆ. ಫೈ. ೪೬—೯೭—೮ನೆ ನಂಬರು ಸರ್ಕಾರಿ ಹುಕುಮಿನಲ್ಲಿ ವಿಧಿಸಿದ ಏರ್ಪಾಡಿನ ಮೇರೆಗೆ ೩ನೆ ಪಂಚವಾರ್ಷಿಕ ಸೆನ್ಸಸ್ಸು ಚಾಲ್ತಿ ಕ್ಯಾಲೆಂಡರ್ ಸಾಲಿನಲ್ಲಿ ಬರುತ್ತದೆ. ಆದರೆ ಸಂಸ್ಥಾನದ ಜನಸಂಖ್ಯೆಯನ್ನು ಕುರಿತು ಹತ್ತು ವರುಷಕ್ಕೆ ಒಂದಾವರ್ತಿ ತೆಗೆಯತಕ್ಕ ಸೆನ್ಸಸ್ಸು ೧೯೧೧ನೆ ಇಸವಿಯ ಷುರುವಿನಲ್ಲಿ ಆರಂಭವಾಗುವದ್ದರಿಂದ ಈ ಎರಡನ್ನೂ ಒಂದೇಆವರ್ತಿ ತೆಗೆದುಕೊಳ್ಳಬಹುದೆಂತಲೂ, ಜಾನ್ವಾರುಗಳ ವಿಷಯವಾಗಿ ಮುಂದೆ ತೆಗೆಯತಕ್ಕ ಸೆನ್ಸಸ್ ಲೆಖ್ಖವನ್ನು ಪ್ರಾಥಮಿಕ ಯೂ ಷುರು ಜನರಲ್ ಸೆನ್ಸಸಿನ ಸಂಗಡಲೇ ತೆಗೆಯಬೇಕೆಂತಲೂ ಗೌರ್ನ

ಮೆಂಟಿನವರು ೧೯೯ನೆ ಸೆಪ್ಟಂಬರು ೧ನೆ ಮುರ್ಕುಂ ರೆ. ೧೯೧೮—೨೬ ವ್ಯವಸಾಯ ೨೦—೯—೩ನೆ ನಂಬರ್ ಹುಕುಂ ಮಾಡಿರುತ್ತಾರೆ.

III

ಸರ್ಕಾರದವರು ಮಾಡಿದ ನಿಬಂಧನೆಗಳನ್ನೂ ಮುಖ್ಯವಾದ ಸರ್ಕಾರೀ ಹುಕುಮುಗಳನ್ನೂ ಜನಗಳು ತಿಳಿದುಕೊಳ್ಳುವದಕ್ಕೆ ಅನುಕೂಲಿಸುವಂತೆ ಸರ್ಕಾರದವರು ಮಾಡಿದ ಏರ್ಪಾಟುಗಳನ್ನು ಜನಗಳು ಸಾಕಾದಷ್ಟುಮಟ್ಟಿಗೆ ಉಪಯೋಗಿಸಿಕೊಳ್ಳದೆ ಇರುವದ್ದರಿಂದ ಸದರಿ ಏರ್ಪಾಟನ್ನು ಮುಂದೂ ನಡೆಸುವದು ಅವಶ್ಯಕವಿಲ್ಲವೆಂತ ವಿದ್ಯಾಭ್ಯಾಸ ಇಲಾಖಾ ಇನ್ಸ್ಪೆಕ್ಟರ್ ಜನರಲ್ರವರ ರಿಪೋರ್ಟಿನ ಮೇರೆ ಗೌರ್ನಮೆಂಟಿನವರು ಸರ್ಕಾರಿ ಹುಕುಮುಗಳ ಕನ್ನಡ ಪ್ರತಿಗಳ ಮಾರಾಟವನ್ನು ಇನ್ನು ಮುಂದೆ ಮೌಕೂಫ್ ಮಾಡತಕ್ಕದ್ದೆಂದೂ, ಮುಖ್ಯವಾದ ಹುಕುಂಗಳನ್ನು ಕನ್ನಡಕ್ಕೆ ತರ್ಜುಮೆ ಮಾಡಿ ಸರ್ಕಾರೀ ಕನ್ನಡ ಗೆಜೆಟ್ಟಿನಲ್ಲಿ ಪ್ರಕಟಿಸತಕ್ಕದ್ದಲ್ಲದೆ ರೆವಿನ್ಯೂ ಕಮಿಷನರವರ ಯುಕ್ತಾನುಸಾರವಾಗಿ ರೆವಿನ್ಯೂ ಮತ್ತು ವ್ಯವಸಾಯ ಗೆಜೆಟ್ಟಿನಲ್ಲಿಯೂ ಪ್ರಕಟಿಸತಕ್ಕದ್ದೆಂದೂ, ೧೯೯ನೆ ಸೆಪ್ಟಂಬರು ೧ನೆ ಮುರ್ಕಂ ಜ. ೧೩೧೩—೪೨ ಜ. ಮಿ. ೨೦೮—೦೮—೧೧ನೆ ನಂಬರು ಪ್ರೊಸೀಡಿಂಗ್ಸ್ ಆರ್ಡರ್ ಮಾಡಿರುತ್ತಾರೆ.

———o———

## Tata's Silk Farm at Bangalore.

## ಬೆಂಗಳೂರಿನಲ್ಲಿರುವ ಟಾಟಾಯವರ ರೇಷ್ಮೆ ಕಾರ್ಖಾನೆ.

ತಿರುಮಕೂಡ್ಲು ನರಸೀಪುರದ ಶ್ರೀ ಕೃಷ್ಣರಾಜ ಒಡೆಯರ್ ರೇಷ್ಮೆ ಕೈಗಾರಿಕೆ ಕೋ ಆಪರೇಟಿವ್ ಸೊಸೈಟಿಯ ಸೆಕ್ರಿಟರಿ ಮ॥ ಟಿ. ಕೃಷ್ಣರಾಯರು ಬೆಂಗಳೂರಿಗೆ ಈ ಮಾಹೆಯಲ್ಲಿ ಬಂದಿದ್ದಾಗ ಟಾಟಾಸಾಹೇಬರ ರೇಷ್ಮೆ ಕಾರ್ಖಾನೆಯನ್ನು ನೋಡಬೇಕೆಂದು ಅಪೇಕ್ಷೆಪಟ್ಟು ಕೋ ಆಪರೇಟಿವ್ ಸೊಸೈಟಿಗಳ ರಿಜಿಸ್ಟ್ರಾರ್ರವರ ಮುಖಾಂತರ ಅಲ್ಲಿನ ಮ್ಯಾನೇಜರ್ ಮ॥ ಟಿ. ಒಡ್ಜುಯವರಿಗೆ ಕಾಗದಬರೆಸಿ ೧೦ನೆ ತಾರೀಖಿನ ದಿವಸ ಕಾರ್ಖಾನೆಗೆ ಹೋಗಿದ್ದರು. ಅಲ್ಲಿ ಈಗ ಹುಳುಗಳನ್ನು ಮೇಯಿಸುತ್ತಿರುವುದರಿಂದ ರೇಷ್ಮೆ ತೆಗೆಯುವ ಕೆಲಸ ನಡೆಯುತ್ತಿಲ್ಲವಿದ್ದರೂ ಇತರ ಎಲ್ಲಾ

ವಿಷಯಗಳನ್ನು ಚೆನ್ನಾಗಿ ತಿಳಿಯುವಂತೆ ಮ್ಯಾನೇಜರವರು ತಿಳಿಸಿದರು. ೧೧ ದಿವಸದ ಹುಳುಗಳು ಮತ್ತು ೩೧ ದಿವಸದ ಹುಳುಗಳು ಇದ್ದವು. ಕೈನಲ್ಲಿ ಮುಟ್ಟದಂತೆ ಇರುವದಕ್ಕೆ ತಟ್ಟೆಗಳ ಮೇಲೆ ಬಲೆಗಳನ್ನು ಹಾಕಿದ್ದರು. ಇನ್ನು ಸ್ವಲ್ಪ ದಿವಸದಲ್ಲಿಯೇ ಗೂಡುಕಟ್ಟುವುದಾಗಿಯೂ ರೇಷ್ಮೆ ತೆಗಿಯುವುದಾಗಿಯೂ ಹೇಳಿದರು. ರೇಷ್ಮೆಗಳಲ್ಲಿ ಜರ್ಮ, ಫ್ರೆಂಚ್ ಮತ್ತು ಬಂಗಾಳ ಶೀಮೆಗಳ ಮಾದರಿಗಳನ್ನು ತೋರಿಸಿದರು. ಮತ್ತು ಕಾಡುರೇಷ್ಮೆಯ ಗೂಡನ್ನು ತೋರಿಸಿದರು. ತೋಟದಲ್ಲಿ ಜರ್ಮ ಬಗೆಯಿಂದ ಮತ್ತು ಮೈಸೂರು ಸೀಮೆಗಳ ಹಿಪ್ಪನೇರಳೆ ಗಿಡಗಳನ್ನು, ಅವುಗಳ ಎಲೆಗಳಲ್ಲಿರುವ ವ್ಯತ್ಯಾಸಗಳನ್ನು ತೋರಿಸಿದರು. ಅಲ್ಲಿ ಕೆಲವು ಗಿಡಗಳನ್ನು ದೊಡ್ಡಮರಗಳನ್ನಾಗಿ ಮಾಡುವದಕ್ಕೆ ಬಿಟ್ಟಿರುತ್ತಾರೆ. ಇದರಿಂದ ಆಗಿಂದಾಗ್ಗೆ ಗಿಡಗಳಿಗೆ ನೀರು ಹಾಕುವುದು ತಪ್ಪುವದು. ಅಲ್ಲಿ ಅನೇಕ ರಬ್ಬರು ಗಿಡಗಳು ಬೆಳಕೊಂಡಿರುತ್ತವೆ. ಇದನ್ನೆಲ್ಲಾ ತೋರಿಸಿದ ನಂತರ ಸೆಕ್ರೆಟರಿಯವರಿಗೆ ಅಲ್ಲಿನ ಯಂತ್ರದಲ್ಲಿ ಕೆಲಸ ಮಾಡುವದನ್ನು ತೋರಿಸುವದಕ್ಕೆ ಸ್ವಲ್ಪ ಗೂಡನ್ನು ತರಿಸಿ ಒಂದು ರಾಟೆಯಲ್ಲಿ ಹಸನಾದ ನೂಲು ಅಂದರೆ ೧೦ ಎಳೆ ರೇಶ್ಮೆಯುಳ್ಳದ್ದು ತೆಗೆಯಲು ಒಬ್ಬ ಹುಡುಗನನ್ನು ಏರ್ಪಾಡು ಮಾಡಿದರು. ಗಂಟು ಆಗದಂತೆ ಒಂದು ಗಾಜಿನ ಗುಂಡಿಯು ರಂಧ್ರದಲ್ಲಿ ದಾರಬರುತ್ತಿತ್ತು. ಇದಲ್ಲದೆ ರೇಷ್ಮೆಯನ್ನು ತರಹಾವಾರಿ ವಿಂಗಡಿಸಲು ಅನುಕೂಲಮಾಡುವ ಒಂದು ತೂಕಮಾಡುವ ಯಂತ್ರವನ್ನು ತೋರಿಸಿದರು.

ಜರ್ಮ ದೇಶದಲ್ಲಿ ರೇಷ್ಮೆ ಕೋಆಪರೇಟಿವ್ ಸೊಸೈಟಿಗಳು ಮಾಡುವ ಮುಖ್ಯ ಕೆಲಸವೇನಂದರೆ—ಸೊಸೈಟಿಯ ಮೆಂಬರುಗಳು ತಮ್ಮ ಮನೆಗಳಲ್ಲಿ ಸ್ವಂತವಾಗಿ ತಯಾರ್ಮಾಡುವ ರೇಷ್ಮೆಯನ್ನು ಸೊಸೈಟಿಯ ಕಾರ್ಖಾನೆಯಲ್ಲಿ ಪುನಃ ತೋಡುವದಕ್ಕೆ ಕಳುಹಿಸುತ್ತಾರೆ. ಹೀಗೆ ೨ನೆ ದಫಾ ತೋಡುವದರಿಂದ ರೇಷ್ಮೆ ಹಸನಾಗುತ್ತೆ. ಹೀಗೆ ಹಸನುಮಾಡಿದ ರೇಷ್ಮೆಯ ಕ್ರಯ ಜಾಸ್ತಿ ಯಾಗುತ್ತೆ.

ಮೆ|| ಓಡ್ಜ್ಜಯವರು ಬಹಳ ವಿಶ್ವಾಸದಿಂದ ಕಾರ್ಖಾನೆಯ ವಿಷಯವನ್ನು ಎಲ್ಲರಿಗೂ ತಿಳಿಸುತ್ತಾರೆ.

## Notifications.

## ಇಸ್ತಿಹಾರ್‌ನಾಮೆಗಳು.

ನಂ. ೩೫೮೦ ತಾ|| ೧೬—೯—೦೯.

ಆಲೂರು ಸಬ್ ತಾಲ್ಲೂಕು ಡೆಪ್ಯುಟಿ ಅಮಲ್ದಾರ್ ವೆ|| ಯಸ್. ಅನಂತರಾಮಯ್ಯಂಗಾರ್ರಿಗೆ ೧೯೦೯ನೆ ಇಸವಿ ಆಗಸ್ಟ ೧೮ನೆ ತಾರೀಖಿನ ೨೪೩೮ನೆ ನಂಬರಿನಲ್ಲಿ ಕೊಟ್ಟಿದ್ದ ೧೫ ದಿನಗಳ ಪ್ರಿವಿಲೇಜ್ ರಜಾವನ್ನ ಅವರು ಉಪಯೋಗಿಸಿಕೊಳ್ಳದೆ ಇರುವ ಸಬಬು ರದ್ದುಮಾಡಿರುತ್ತೆ.

---

## Occasional Notes.

## ವಿವಿಧ ವೃತ್ತಾಂತಗಳು.

೧. ಹುಲ್ಲುಗಾವಲುಗಳಲ್ಲಿ ಹುಲ್ಲು ಬೆಳೆಯುದಿರುವ ಕಡೆಗಳಲ್ಲಿ ಆಗಾಗ್ಯೆ ಕೆದಕುತ್ತಿದ್ದು ಬೀಜ ಹಾಕಿ ಹುಲ್ಲು ಬೆಳಸಿ ಮೇವನ್ನು ಹೆಚ್ಚಿಸಬೇಕು. ಮದರಾಸ್ ಅಗ್ರಿಕಲ್ಚರಲ್ ಕ್ಯಾಲೆಂಡರ್ ೧೯೦೯.

---

೨. ಅನನಾಸ್ ನಾರು ಸೆಣಬುನಾರಿಗಿಂತಲೂ ಬಲವಾಗಿಯೂ ಗಟ್ಟಿಯಾಗಿಯೂ ಇರುತ್ತೆ. ಇದರ ಹೊಳಪೂ ಹೆಚ್ಚು. ಇದರಲ್ಲಿ ನೀರಿಳಿಯುವದಿಲ್ಲವಾಗಿ ಇದನ್ನು ಬಹಳ ಕಾಲ ನೀರಿನಲ್ಲಿ ಹಾಕಿದ್ದರೂ ಕೆಡುವದಿಲ್ಲ.—ಅಗ್ರಿಕಲ್ಚರಲ್ ಅಂಡ್ ಇಂಡಸ್ಟ್ರಿಯಲ್ ಪ್ರೋಗ್ರೆಸ್, ಸೆಪ್ಟಂಬರ್ ೧೯೦೯.

---

೩. ಅಮೇರಿಕಾಖಂಡದ ಬ್ರೆಜಿಲ್ ದೇಶದವರು ಒಂದು ಹೊಸ ರಖಂ ಕಾಫಿಯನ್ನು ಕಂಡುಹಿಡಿದಿರುತ್ತಾರೆ. ಇದು ಅತಿ ಜಾಗ್ರತೆಯಾಗಿಯೂ ಥಂಡಿಯಾಗಿಯೂ ಫಲಿಸ್ಸುವದಲ್ಲದೆ ಇದರ ಕಾಯಿಗಳು ಬಹು ಗಾತ್ರವಾಗಿಯೂ ಚನ್ನಾಗಿಯೂ ಇರುತ್ತೆ. ಆ ಪ್ರಾಂತ್ಯದಲ್ಲಿ ಈ ರಖಮನ್ನು ವಿಶೇಷವಾಗಿ ಬೆಳೆಯಲು ಉದ್ಯುಕ್ತರಾಗಿರುತ್ತಾರಂತೆ.—ಇಣ್ಡಿಯನ್ ಟ್ರೇಡ್ ಜರ್ನಲ್, ೧೯—೮—೦೯.

---

೪. ಚೌಬೀನಿ ಕೆಲಸಕ್ಕೆ ಉಪಯೋಗ ಪಡುವ ಮರಗಳನ್ನು ಬೆಳೆಸುವ

ದರಲ್ಲಿ ಸೊಸಿಗಳನ್ನು ನೆಡುವದಕ್ಕೆ ಗುಣಿಗಳು ಎಷ್ಟು ದೊಡ್ಡವಾಗಿದ್ದರೆ ಅಷ್ಟು ಒಳ್ಳೇದು. ಏಕಂದರೆ, ಬೇರುಗಳು ಸಡಲಿದಮಣ್ಣಿನಲ್ಲಿ ಸುಲಭ ವಾಗಿ ಇಳಿಯುತ್ತವೆ. ಅಗೆಯಲ್ಲಿ ಸೊಸಿಯು ಯಾವ ಮಟ್ಟಕ್ಕೆ ನಿಂತಿ ತ್ತೊ ಗುಣಿಯಲ್ಲಿಯೂ ಕೂಡ ಅದೇ ಮಟ್ಟದವರೆಗೆ ಮಣ್ಣು ಮುಚ್ಚ ಬೇಕು. ನಂತರ ಮುಚ್ಚಿದ ಮಣ್ಣನ್ನು ಕಾಲಿನಿಂದ ಚನ್ನಾಗಿ ತುಳಿಯಬೇ ಕು.—ಅಗ್ರಿಕಲ್ಚರಲ್ ಅಂಡ್ ಇಂಡಸ್ಟ್ರಿಯಲ್ ಪ್ರೋಗ್ರೆಸ್, ಸೆಪ್ಟಂಬರ್-೦೯.

———o———

೫. ಯೂಕಲಿಪ್ಟಸ್ (Eucalyptus) ಎಂಬ ಗಿಡದಿಂದ ಯೂಕಲಿಪ್ಟಸ್ ಎಣ್ಣೆಯನ್ನು ಮತ್ತು ಎಂತ್ರಗಳ ಬಾಯಿಲರ್ ಯಾ ನೀರು ಕಾಯಿಸುವ ಪಾತ್ರೆಗಳನ್ನು ಕ್ಷಾರ ಮುಂತಾದ ಪದಾರ್ಥಗಳಿಂದ ತುಕ್ಕು ಹಿಡಿಯದೆ ಸ್ವಚ್ಛವಾಗಿಡುವದಕ್ಕೆ ಬಹಳ ಉಪಯೋಗಕರವಾಗಿರುವ ಒಂದು ರಸವ ನ್ನೂ ಸಹ ತಯಾರುಮಾಡುತ್ತಾರೆ. ನಾಲ್ಕು ಟನ್ ಎಲೆಗಳಿಂದ ಒಂದು ಟನ್ ಈ ರಸವನ್ನೂ ೨೦—೮೦ ಪೌಂಡಿನಷ್ಟು ಎಣ್ಣೆಯನ್ನೂ ಹಿಂಡಬ ಹುದಂತೆ.—ಇಂಡಿಯನ್ ಟ್ರೇಡ್ ಜರ್ನಲ್, ೧೮—೮—೦೯.

———o———

೬. ಮೈಸೂರು ಸರ್ಕಾರಿ ಕೃಷಿ ಶಾಸ್ತ್ರಜ್ಞರಾದ ಮೆ॥ ಲೆಸ್ಲಿ ಸಿ. ಕೋಲ್‌ಮನ್ ರವರು (Mr. Leslie C. Coleman)ಆಲುಗಡ್ಡೆಗೆ ಬರು ವ ಬಂಗಡಿ ರೋಗದ ವಿಚಾರವಾಗಿ ಒಂದು ಪುಸ್ತಕವನ್ನು ಇಂಗ್ಲಿಷ್ ಮ ತ್ತು ಕನ್ನಡ ಭಾಷೆಗಳಲ್ಲಿ ಬರೆದು ಪ್ರಾಯಿಷ್ಮಾಡಿರುತ್ತಾರೆ. ಆಲುಗಡ್ಡೆ ವ್ಯವಸಾಯದಲ್ಲಾಸಕ್ತರಾಗಿದ್ದು ಸದರಿ ಪುಸ್ತಕವನ್ನು ಓದಿ ಪ್ರಯೋ ಜನ ಹೊಂದಲಪೇಕ್ಷೆಯುಳ್ಳವರು ಮೆ॥ ಕೋಲ್‌ಮನ್‌ರವರಿಗೆ ಬರೆದುಕೊಂಡ ಲ್ಲಿ ಅಂಥವರಿಗೆ ಒಂದು ಪ್ರತಿಯನ್ನು ಮುಫತ್ತಾಗಿ ಕಳುಹಿಸಿಕೊಡುವದಾಗಿ ಸಾಹೇಬರವರು ಸೂಚಿಸಿರುತ್ತಾರೆ.

———o———

೭. ತೆಂಗಿನನಾರು ಕೈಗಾರಿಕೆ ಕಸಬಿನಲ್ಲಿ ಅನೇಕ ಕೆಲಸಗಳಿಗೆ ಉಪಯೋ ಗವಡುವದು ಸರಿಯಷ್ಟೆ. ಇದರಂತೆ ತಾಳೆನಾರು ಬಹಳ ಉಪಯೋಗಕ ರವಾದದ್ದು. ತಾಳೆ ಬೋಸುಗಳು (Aerial roots) ವಿಶೇಷವಾಗಿಯೂ

ಸಿಸ್ಟೆಂಟ್ ವೆಟರಿನರಿ ಇನ್ಸ್ಪೆಕ್ಟರ್‌ಗಳು ಕೆಲಸ ನೋಡುತ್ತಾ ಇದ್ದಾರೆ. ಇವರ ಮುಖ್ಯ ಕೆಲಸಗಳು ಯಾವವೆಂದರೆ, ಗ್ರಾಮಾಂತರಗಳಲ್ಲಿ ಅಂಟುರೋಗಗಳು ಪ್ರಾರಂಭವಾದಾಗ ಅಂಥಾ ಸ್ಥಳಗಳಿಗೆ ಹೋಗಿ ರೋಗಪೀಡಿತವಾದ ದನಕರುಗಳಿಗೆ ತಕ್ಕ ಚಿಕಿತ್ಸೆ ಮಾಡುವದು, ರೋಗದ ವಿಚಾರವಾಗಿ ರೈತರಿಗೆ ಬೇಕಾದ ಕೆಲವು ಉಪಯೋಗವಾದ ಸಂಗತಿಗಳನ್ನು ತಿಳಿಪಡಿಸುವದು, ಅಲ್ಲದೆ ತಳಿಗಳ ಅಭಿವೃದ್ಧಿ ವಿಷಯವಾಗಿ ಅನೇಕ ಉಪಯೋಗವಾದ ಸಂಗತಿಗಳನ್ನು ತಿಳಿಪಡಿಸುವದು, ಮತ್ತು ದನಕರುಗಳ ಪ್ರದರ್ಶನಗಳಲ್ಲಿ ಒಳ್ಳೆ ರಾಸುಗಳನ್ನು ಚುನಾಯಿಸಿ ಅವುಗಳಿಗೆ ತಕ್ಕ ಬಹುಮಾನಗಳನ್ನು ಕೊಡುವದು, ಕಾಲುಜ್ವರ, ಬಾಯಿಜ್ವರ, ದೊಡ್ಡರೋಗ, ನರಡಿರೋಗ, ಚಪ್ಪೆರೋಗ, ಮೆಟ್ರಿಗಟ್ಟು ಮುಂತಾದ ಅಂಟುರೋಗಗಳಿಗೆ ಶಿಡುಬನ್ನು ಹಾಕುವದು, ಇವೆ ಮುಖ್ಯವಾದವು. ಈ ಪಶುವೈದ್ಯಶಾಲೆಗಳಲ್ಲಿ ೧೯೦೭-೦೮ ರಲ್ಲಿ ೧೭೭೧ ರಾಸುಗಳಿಗೆ ಚಿಕಿತ್ಸೆ ಮಾಡಲ್ಪಟ್ಟಿತು ಮತ್ತು ೪೮೫೬ ರಾಸುಗಳಿಗೆ ದೊಡ್ಡರೋಗಕ್ಕೆ ಶಿಡುಬು ಹಾಕಲ್ಪಟ್ಟಿತು. ೧೯೦೮—೦೯ನೆ ಇಸವಿಯಲ್ಲಿ ೮ ಡಿಸ್ಟ್ರಿಕ್ಟುಗಳಲ್ಲಿಯೂ ೫೮೦೫ ರಾಸುಗಳಿಗೆ ನಾನಾ ರೋಗಗಳಿಗೆ ಚಿಕಿತ್ಸೆಮಾಡಲ್ಪಟ್ಟಿತು. ಮತ್ತು ೧೪,೪೮೧ ರಾಸುಗಳಿಗೆ ಶಿಡುಬು ಹಾಕಲ್ಪಟ್ಟಿತು. ಅಲ್ಲದೆ ಕಳೆದ ವರುಷ ದೊಡ್ಡರೋಗವು ಶೀಮೆಯಲ್ಲೆಲ್ಲಾ ವ್ಯಾಪಿಸಿ ಬಹಳ ಅನಾಹುತಗಳನ್ನುಂಟುಮಾಡಿದರೂ ರೈತರು ಶಿಡುಬು ಹಾಕಿಸುವದರಲ್ಲಿಯೂ ರೋಗ ಪೀಡಿತವಾದ ರಾಸುಗಳಿಗೆ ಸರ್ಕಾರಿ ಪಶುವೈದ್ಯರಿಂದ ಚಿಕಿತ್ಸೆ ಮಾಡಿಸುವದರಲ್ಲಿಯೂ ಬಹಳ ಆಸಕ್ತಿ ಉಳ್ಳವರಾಗಿದ್ದರು.

ಒಟ್ಟು ೮ ಆಸ್ಪತ್ರೆಗಳಲ್ಲಿಯೂ ೧೭೧೬ ಕುದುರೆಗಳಿಗೂ, ೩೪೫೧ ಹಸು ಎಮ್ಮೆಗಳಿಗೂ, ೯೬೩ ನಾಯಿಗಳಿಗೂ, ೯೩ ಆಡು ಕುರಿಗಳಿಗೂ ಮತ್ತು ೮೭ ಇತರ ಪ್ರಾಣಿಗಳಿಗೂ ಚಿಕಿತ್ಸೆ ಮಾಡಲ್ಪಟ್ಟಿತು. ಚಿಕಿತ್ಸೆಹೊಂದಿದ ಪ್ರಾಣಿಗಳಲ್ಲಿ ೬೯೨ ದೊಡ್ಡರೋಗ, ಚಪ್ಪೆರೋಗ ಮುಂತಾದ ಅಂಟುರೋಗಗಳಿಗೂ, ೧೬೩೮ ಅಜೀರ್ಣ ಸಂಬಂಧವಾದ ರೋಗಗಳಿಗೂ, ೩೯೯ ಬೆಮ್ಮೆಜಾಡ್ಯಗಳಿಗೂ, ೧೪೯ ರಕ್ತಕೋಶಸಂಬಂಧವಾದ ರೋಗಗಳಿಗೂ, ೭೯ ಮೂತ್ರಕೋಶಸಂಬಂಧವಾದ ರೋಗಗಳಿಗೂ, ೫೮ ವಾತ

ರೋಗಗಳಿಗೂ, ೧೬೪೨ ವ್ರಣಜಾತ್ಯಗಳಿಗೂ, ೧೧೯೩ ಮೂಚೇಂದ್ರಿಯ ಸಂಬಂಧವಾದ ರೋಗಗಳಿಗೂ ಚಿಕಿತ್ಸೆ ಮಾಡಲ್ಪಟ್ಟಿತು. ಒಟ್ಟು ವರ್ಷಾಂತರದಲ್ಲಿ ಸರ್ಕಾರಿ ಪಶುವೈದ್ಯಶಾಲೆಗಳಲ್ಲಿ ೨೩,೯೨೮ ರಾಸುಗಳಿಗೆ ಚಿಕಿತ್ಸೆ ಮಾಡಲ್ಪಟ್ಟಿತು. ಮತ್ತು

| | | | |
|---|---|---|---|
| ಬೆಂಗಳೂರು ಡಿಸ್ಟ್ರಿಕ್ಟ | | ... | 1809 |
| ಮೈಸೂರು | ,, | ... | 4257 |
| ಕಡೂರು | ,, | ... | 858 |
| ಶಿವಮೊಗ್ಗ | ,, | ... | 746 |
| ಕೋಲಾರ | ,, | ... | 2446 |
| ತುಮಕೂರು | ,, | ... | 975 |
| ಹಾಸನ | ,, | ... | 2558 |
| ಚಿತ್ರದುರ್ಗ | ,, | ... | 772 |
| | | | 14481 |

ರಾಸುಗಳಿಗೆ ಶಿಡಬು ಹಾಕಲ್ಪಟ್ಟಿತು.

ಕಳೆದ ವರ್ಷದಲ್ಲಿ ಪಶುವೈದ್ಯ ಇಲಾಖಾದವರು ಮೈಸೂರು, ಚಾಂಚನಕಟ್ಟೆ, ನಂದಿ, ಘಾಟಿ ಸುಬ್ರಹ್ಮಣ್ಯ, ಚಿಂತಾಮಣಿ, ಕೂಡ್ಲಿ ಮುಂತಾದ ದನಕರುಗಳ ಪ್ರದರ್ಶನಗಳಲ್ಲಿ ಕಮಿಟಿ ಮೆಂಬರುಗಳಿಗೆ ಬೇಕಾದ ಸಹಾಯಗಳನ್ನು ಮಾಡಿದ್ದಲ್ಲದೆ ಶಿಡಬಿನ ವಿಚಾರದಲ್ಲೂ ಮತ್ತು ಸಾಂಕ್ರಾಮಿಕ ರೋಗಗಳ ವಿಚಾರದಲ್ಲೂ ಅನೇಕ ಉಪಯೋಗವಾದ ಸಂಗತಿಗಳನ್ನು ತಿಳಿಯಪಡಿಸಿದರು.

## Rice-Weevil. *

### ಬತ್ತ ಮತ್ತು ಅಕ್ಕಿಗೆ ಬೀಳುವ ನುಸಿ ಹುಳ.

ಬತ್ತ ಮತ್ತು ಅಕ್ಕಿಗೆ ನುಸಿ ಹಿಡಿಯುವದು ಸಾಧಾರಣವಾಗಿ ಎಲ್ಲರಿಗೂ ಗೊತ್ತಿರುವ ಸಂಗತಿಯಷ್ಟೆ. ಇದನ್ನು ತಪ್ಪಿಸುವದಕ್ಕೆ ಈ ಕೆಳಗೆ ಕಂಡ ಕೆಲವು ಉಪಾಯಗಳನ್ನು ಮಾಡಬೇಕು.

(೧) ಧಾನ್ಯವನ್ನು ಉಗ್ರಾಣದಲ್ಲಿ ತುಂಬಿಡುವದಕ್ಕೆ ಮೊದಲು

* ಇಂಡಸ್ಟ್ರಿಯಲ್ ಇಂಡಿಯಾ—ಮೆ, ೧೯೦೯.

ಕಳಪು ಕಾಳುಗಳಿಲ್ಲದಂತೆ ಚೊಕ್ಕಟ ಮಾಡಬೇಕು. ಕಳಪು ಧಾನ್ಯದಲ್ಲಿ
ಹುಳುಗಳು ವೃದ್ಧಿಯಾಗಿ ಕಣ್ಣಿಗೆ ಕಾಣದಂತೆ ಸೇರಿಕೊಂಡಿರುತ್ತವೆ.

(೨) ಹುಳು ಬಿದ್ದಿರುವ ಧಾನ್ಯವನ್ನು ಉಗ್ರಾಣದಲ್ಲಿಡಬಾರದು.
ಒಂದು ನುಸಿ ಇದ್ದರೂ ಅದು ಅತಿ ಜಾಗ್ರತೆ ಅಭಿವೃದ್ಧಿ ಹೊಂದಿ ಧಾನ್ಯವ
ನ್ನೆಲ್ಲಾ ಕೆಡಿಸಬಲ್ಲದು.

(೩) ಧಾನ್ಯವನ್ನು ಒಡಕಿಲ್ಲದ ಘಟ್ಟಿಯಾದ ಒಸೆ ಗುಣಾಣ ಮು
ತಾದ ಪಾತ್ರೆಗಳಲ್ಲಿ ತುಂಬಿಡಬೇಕು. ಮುಚ್ಚಳವಿಲ್ಲದ ಪಾತ್ರೆಗಳಲ್ಲಿ
ನುಸಿಯಾಡುವದಕ್ಕೆ ಅವಕಾಶವಿರುವದರಿಂದ, ಅವುಗಳಲ್ಲಿ ಕಾಳನ್ನು ತುಂ
ಬಿಟ್ಟರೆ ಪ್ರಯೋಜನವಿಲ್ಲ. ಏಕೆಂದರೆ, ಕಾಳು ತುಂಬಿದ ಕೂಡ್ಲೆ ಅಥವಾ
ಕ್ಷಿಪ್ರದಲ್ಲೆ ಧಾನ್ಯಕ್ಕೆ ಹುಳುಬಿದ್ದು ಅದರ ಮೇಲೆ ಮೊಟ್ಟೆಇಡುತ್ತದೆ.
ಉಗ್ರಾಣವೇ ಹುಳುಗಳ ಪ್ರವೇಶಕ್ಕೆ ಆಸ್ಪದ ವಿಲ್ಲದಂತಿರಬೇಕು ಅಥವಾ
ಧಾನ್ಯವನ್ನಾದರೂ ಗಟ್ಟಿಯಾದ ಪಾತ್ರೆಗಳಲ್ಲಿ ತುಂಬಿಡಬೇಕು. ಬಿದಿರು
ಗೂಡೆಗಳು, ಮಣ್ಣು ಮತ್ತು ಸಗಣಿಯನ್ನು ಬೆರೆಸಿ ಚೆನ್ನಾಗಿ ಮೆತ್ತಿದ
ಹೊರತು, ಹುಳುಗಳಿಗೆ ತಡೆಯಿಲ್ಲ. ಒಂದು ನುಸಿ ನುಗ್ಗುವಷ್ಟು ಬಿರು
ಕು ಇದ್ದರೂ ಸಾಕು, ಧಾನ್ಯವೆಲ್ಲ ಕೆಟ್ಟುಹೋಗುವದು.

(೪) ಉಗ್ರಾಣದಲ್ಲಿ ತುಂಬಿಟ್ಟ ಧಾನ್ಯಕ್ಕೆ ನುಸಿ ತಗಲಿದರೆ ಅದ
ನ್ನು ಕೂಡ್ಲೆ ತೆಗದು ಚೊಕ್ಕಟಮಾಡಬೇಕು. ನುಸಿಗಳನ್ನು ಗಾಳಿಯಾಡ
ದ ಸೀಸೆ ಅಥವಾ ಜಾಡಿಯಲ್ಲಿಟ್ಟಿದ್ದರೂ ಸೀಸೆಯಾ ಜಾಡಿಯನ್ನು ಧಾನ್ಯದ
ಲ್ಲಿ ಇಟ್ಟರೆ ಹುಳುಗಳು ಬದುಕಿದ್ದು ವೃದ್ಧಿ ಹೊಂದುತ್ತವೆ. ಧಾನ್ಯಕ್ಕೆ
ಹುಳು ಬಿದ್ದಕೂಡ್ಲೆ ಅದನ್ನು **ಈಚೆಗೆ** ತೆಗದು ಒಳ್ಳೆಧಾನ್ಯವನ್ನೂ ಕೆಟ್ಟ
ಧಾನ್ಯವನ್ನೂ ಪ್ರತ್ಯೇಕಿಸಬೇಕು. ಹುಳು ಸೋಂಕಿದ ಧಾನ್ಯವನ್ನು
ಪುನಃ ಉಗ್ರಾಣದಲ್ಲಿ ತುಂಬಿಡುವದಕ್ಕೆ ಮೊದಲು, ಅದಕ್ಕೆ ಗಾಳಿಯಾಡದ
ಒಂದು ಪಾತ್ರೆ ಅಥವಾ ಕಟ್ಟಡದಲ್ಲಿ ಕಾರ್ಬನ್ ಬೈಸಲ್ಫೈಡ್ (Carbon
Bisulphide) ಹೊಗೆಯಾಡಿಸಬೇಕು. ೧೫ ಸಲೆ ಅಡಿ ಪ್ರದೇಶಕ್ಕೆ ಒಂದು
ಔನ್ಸು ಈ ಔಷಧಿ ಹತ್ತಿಸಿ ಧಾನ್ಯವನ್ನು ೨೪ ಘಂಟೆ ಕಾಲ ಹೊಗೆಯಲ್ಲಿ
ಟ್ಟರೆ ಹುಳುಗಳು ಪರಿಹಾರವಾಗುವದಲ್ಲದೆ, ಮೊಟ್ಟೆಗಳು ಕೂಡ ಸತ್ತು
ಹೋಗುತ್ತವೆ. ಧಾನ್ಯಕ್ಕೆ ಏನೂ ಬಾಧಕವಿಲ್ಲ. ಅದನ್ನು ತಿನ್ನಬಹು

ದು ಅಥವಾ ಬೀಜಕ್ಕೂ ಉಪಯೋಗಿಸಬಹುದು. ೨೪ ಘಂಟೆಯಾದ ನಂತರ ಪಾತ್ರೆ ಅಥವಾ ಕಟ್ಟಡವನ್ನು ತೆರದು ಹೊಗೆಯೆಲ್ಲಾ ಹೋದ ಮೇಲೆ ಧಾನ್ಯವನ್ನು ಹುಳು ಬರುವದಕ್ಕೆ ಅವಕಾಶವಿಲ್ಲದ ಪಾತ್ರೆಯಲ್ಲಿ ಕೋಠಡಿಯಲ್ಲಾಗಲಿ ತುಂಬಿಡಬೇಕು. ಕಾರ್ಬನ್ ಬೈಸಲ್ಫೈಡ್ ಔಷಧ ಅತಿಜಾಗ್ರತೆ ಬೆಂಕಿ ಹತ್ತಿಕೊಳ್ಳುವದರಿಂದ ಇದನ್ನು ಬಹಳ ಜಾಗರಿಯಿಂದ ಬಳಸಬೇಕು. ಇದರ ಹೊಗೆಗೆ ಸ್ವಲ್ಪ ಬೆಂಕಿ ತಗಲಿದ ಮಾತ್ರಕ್ಕೆ ಫಕ್ಕನೆ ಹತ್ತಿಕೊಂಡು ಅಪಾಯ ಸಂಭವಿಸುವದರಿಂದ ಈ ಹೊಗೆಯಾಡುವ ಕಡೆ ದೀಪ, ಬೆಂಕಿ, ಹಚ್ಚಿದ ಹೊಗೆಸುತ್ತು ಮೊದಲಾದವುಗಳನ್ನು ತೆಗೆದುಕೊಂಡು ಹೋಗಬಾರದು.

(೫) ಧಾನ್ಯವಿರುವ ಪಾತ್ರೆಗಳಲ್ಲಿ ನಾಪ್ತಲೀನ್ ಗುಳಿಗೆಗಳನ್ನು (Napthalin Pills) ಇಡುವದು ಧಾನ್ಯಗಳಿಗೆ ನುಸಿ ಹುಳುಗಳು ಬಾರದಂತೆ ಮತ್ತೊಂದು ಸುಲಭೋಪಾಯ.

---

## Revenue Appeals.

## ರೆವಿನ್ಯೂ ಅಪೀಲುಗಳು.

### ೧೯೦೮—೦೯ನೇ ಇಸವಿಯ ಅಪೀಲ್ ನಂ. ೮೭.

| ಅಪೀಲುವಾದಿ. | | ಅಪೀಲು ಪ್ರತಿವಾದಿ. |
|---|---|---|
| ಗೌರಮ್ಮ ಕೋಂ ಬುಟ್ಟಣ್ಣಗೌಡ. | *vs.* | ರುದ್ರೇಗೌಡ. |

ಪಟೇಲಿ ಹಕ್ಕು ವಿಚಾರ.

ಕಕ್ಷಿಗಾರರು ಈ ಕೆಳಗೆ ಕಂಡಮೇರೆ ಸಂಬಂಧಿಗಳಾಗಿರುತ್ತಾರೆ.

ವರಸಪ್ಪ.

| | |
|---|---|
| ದೊಡ್ಡವೀರಪ್ಪ. | ಚಿಕ್ಕವೀರಪ್ಪ. |
| ಬುಟ್ಟಣ್ಣ. | ಬಸಪ್ಪ. |
| ಬಸವನಗೌಡ. | ರುದ್ರೇಗೌಡ (ಪ್ರತಿವಾದಿ). |
| ಬುಟ್ಟಣ್ಣಗೌಡ, ಮಾಜಿ ರಿಜಸ್ಟರ್‌ದಾರ್ ಪಟೇಲ್ ಮತ್ತು ವಾದಿ ಗೌರಮ್ಮನ ಗಂಡ. | |

ವಾದಿಯು ಮಾವ ಮತ್ತು ಪ್ರತಿವಾದಿ ಇಬ್ಬರೂ ೧೮೭೩ನೆ ಸಾಲಿನ ರೆಗೆ ಜಂಟಿ ಪಟೇಲರಾಗಿದ್ದು ಸಾವಿಮೇಲೆ ಕೆಲಸ ನೋಡುತ್ತಿದ್ದರು. ೧೮೭೩ರಲ್ಲಿ ಡೆಪ್ಯುಟಿ ಕಮೀಷನರವರು ವಾದಿಯ ಮಾವನೊಬ್ಬನನ್ನೇ ಪಟೇಲನ್ನಾಗಿ ಮೊಕರರೂ ಮಾಡಿದರು. ೧೮೮೮ರಲ್ಲಿ ಪ್ರತಿವಾದಿ ರುದ್ರಗೌಡನು ಬಸವನಗೌಡನಿಗೆ ಕೆಲಸ ತಪ್ಪಿಸಬೇಕೆಂದು ಡೆಪ್ಯುಟಿ ಕಮೀಷನರವರಲ್ಲಿ ದಾವಾ ಮಾಡಿದನು. ಡೆಪ್ಯುಟಿ ಕಮೀಷನರವರು ವಾದಿಯ ಮಾವ ೧೮೭೩ರ ಲಾಗಾಯಿತು ನೌಕರಿಯಲ್ಲಿದ್ದು, ಸರಿಯಾದ ಆಫೀಸರವರಿಂದ ಕ್ರಮವಾದ ವಿಚಾರಣಾನಂತರ ಮೊಕರರೂ ಮಾಡಲ್ಪಟ್ಟಿದ್ದರಿಂದ, ಇವನನ್ನು ಪ್ರತಿವಾದಿಯ ಹೇಳಿಕೆಮೇಲೆ ಕೆಲಸದಿಂದ ತಪ್ಪಿಸುವದಕ್ಕೆ ಆಗುವದಿಲ್ಲವೆಂದು ಅಭಿಪ್ರಾಯಪಟ್ಟು ದಾವೆಯನ್ನು ವಜಾಮಾಡಿ ಪ್ರತಿವಾದಿಯು ಪಟೇಲಿಗೆ ಹಕ್ಕುದಾರನೇನೋ ಹೌದು, ನೌಕರಿ ಖಾಲಿಯಾದಾಗ ಇವನ ಹಕ್ಕು ವಿಚಾರವನ್ನು ಯೋಚನೆ ಮಾಡಬಹುದೆಂದು ಆರ್ಡರು ಮಾಡಿದರು.

ವಾದಿಯ ಮಾವ ಜೀವಂತನಾಗಿರುವಾಗ ವಾದಿಯ ಗಂಡ ಬುಳ್ಳಣ್ಣಗೌಡನು ತನ್ನ ತಂದೆಗೋಸ್ಕರ ಗುಮಾಸ್ತೆ ತರೀಕು ಕೆಲಸ ನೋಡುತ್ತಿದ್ದನು. ಅವನ (ಬಸವನ ಗೌಡನ) ಮರಣಾನಂತರ, ಅಂದರೆ, ೧೯೦೬ರಲ್ಲಿ ಪಟೇಲಿಯು ಬುಳ್ಳಣ್ಣಗೌಡನ ಹೆಸರಿನಲ್ಲಿ ರಿಜಿಸ್ಟರ್‌ಮಾಡಲ್ಪಟ್ಟಿತು.

ವಾದಿಯ ಗಂಡ ೧೯೧೦ನೆ ಅಕ್ಟೋಬರ್ ಮಾಹೆಯಲ್ಲಿ ಮೃತಪಡಲು ಪ್ರತಿವಾದಿಯು ಪಟೇಲಿಯು ತನಗೆ ಆಗಬೇಕೆಂತಲೂ, ೧೮೮೮ರಲ್ಲಿ ತಾನು ತಂದ ದಾವೆಯಲ್ಲಿ ತನ್ನ ಹಕ್ಕು ಸ್ಥಿರಪಟ್ಟಿರುವದಾಗಿಯೂ ಮತ್ತು ವೌತ್ರಿದಾರನ ವಂಶಕ್ಕೆ ತಾನೊಬ್ಬನೇ ಉಳಿದಿರುವ ಗಂಡು ವಾರಸುದಾರನೆಂತಲೂ ಬಯಾನಿಸಿದನು. ವಾದಿಯು ಕೂಡ ತಾನು ಮಾಜಿ ಬರಾವರ್ದುದಾರನ ಹೆಂಡತಿಯಾದ್ದರಿಂದ ನೌಕರಿಯು ತನ್ನ ಹೆಸರಿನಲ್ಲಿ ರಿಜಿಸ್ಟರಾಗಬೇಕೆಂದು ತನ್ನ ಹಕ್ಕನ್ನು ಮುಂದು ಮಾಡಿದಳು.

ಸಬ್ ಡಿವಿಜನ್ ಆಫೀಸರವರು ೧೮೮೮ನೆ ಇಸವಿಯ ಡಿಕ್ರಿ ಪ್ರಕಾರ ಪ್ರತಿವಾದಿಗೆ ಏನಾದರೂ ಹಕ್ಕು ಉಳಿದಿದ್ದರೂ ಕೂಡ, ಇವನು ವಾದಿಯ ಗಂಡನ ಮೊಕರರೂ ರಾಶಿಯನ್ನು ಒಪ್ಪಿರುವ ಕಾರಣ ಪುನಃ ಈ ವಿಚಾರವಾಗಿ

ಚರ್ಚಿಸಲು ಇವನಿಗೆ ಅವಕಾಶವಿಲ್ಲದಿದ್ದರೂ ಪ್ರತಿವಾದಿಯು ಫೌತಿದಾರನ ವಾರಸದಾರನಾಗಿಯೇ ಹಕ್ಕುದಾರನ ಗಿರುತ್ತಾನೆ. ಆದರೆ, ವಾದಿಯು ಚಿಕ್ಕ ವಯಸ್ಸಿನಲ್ಲಿ ಗಂಡನನ್ನು ಕಳೆದುಕೊಂಡು ಜೀವನಕ್ಕೆ ಮಾರ್ಗವಿಲ್ಲದೆ ಮೂವರು ಹೆಣ್ಣುಮಕ್ಕಳನ್ನು ಸಂರಕ್ಷಿಸಬೇಕಾಗಿರುವುದರಿಂದ ಈಕೆಗೆ ಸ್ವಲ್ಪ ರಿಯಾಯಿತಿ ತೋರಿಸುವದು ಯುಕ್ತವಾಗಿತ್ತೆಂಬದಾಗಿ ಎಣಿಸಿ ಪಟೇಲಿಯನ್ನು ಈಕೆಯ ಹೆಸರಿನಲ್ಲಿ ರಿಜಸ್ಟರುಮಾಡಿ ಇವಳ ಮರಣಾನಂತರ ಪ್ರತಿವಾದಿಗೆ ಆಗಬೇಕೆಂದೂ ಈಮಧ್ಯೆ ಇವನು ಕೆಲಸವನ್ನು ಇವಳ ಗುಮಾಸ್ತೆ ತರೀಕು ನೋಡುತ್ತಿದ್ದು ಅವಳ ಜೀವನಾಂಶಕ್ಕಾಗಿ ಅರ್ಧ ಪ್ರೋಟಿಗಿಯನ್ನು ಕೊಡಬೇಕೆಂತಲೂ ಹುಕುಂಮಾಡಿದರು.

ಅಪೀಲಿನಲ್ಲಿ ಡೆಪ್ಯುಟಿ ಕಮಿಾಷನರವರು, ಪ್ರತಿವಾದಿಯ ಹೆಸರು ೧೮೬೫ನೆ ಇಸವಿಯ ಬಾರಾಬಲೂತಿ ರಿಜಸ್ಟರಿನಲ್ಲಿ ನಮೂದಿಸೆ ; ಈತನು ೧೮೭೩ನೆ ಇಸವಿವರಿಗೂ ಜಂಟಿಯಾಗಿ ಪಟೇಲಿ ಕೆಲಸ ನೋಡುತ್ತಿದ್ದನು ; ಅಲ್ಲದೆ ೧೮೮೮ನೆ ಇಸವಿಯಲ್ಲಿ ತನ್ನ ಹಕ್ಕನ್ನು ಒಂದು ವಿಧವಾಗಿ ಸ್ಥಿರಪಡಿಸಿಕೊಂಡಿಧಾನೆ; ಇಂಥಾವನಿಗಿಂತಲೂ ಗಂಡು ಸಂತತಿಯಿಲ್ಲದ ವಿಧವೆಗೆ ಹೆಚ್ಚು ಹಕ್ಕಿರುವದೆಂದು ಹೇಳಲಿಕ್ಕಾಗುವದಿಲ್ಲವೆಂದು ಅಭಿಪ್ರಾಯಪಟ್ಟು ಪಟೇಲಿಯನ್ನು ಪ್ರತಿವಾದಿಯ ಹೆಸರಿನಲ್ಲಿ ರಿಜಸ್ಟರು ಮಾಡಬೇಕೆಂದು ಹುಕುಂ ಮಾಡಿದರು.

ಗೌರ್ನಮೆಂಟಿನವರ ತೀರ್ಮಾನ.—ಪ್ರತಿವಾದಿಯು ೧೮೮೮ರಲ್ಲಿ ವಾದಿಯ ಮಾವನನ್ನು ಕೆಲಸದಿಂದ ತಪ್ಪಿಸುವದಕ್ಕಾಗಿ ತಂದ ದಾವೆಯಲ್ಲಿ ಡೆಪ್ಯುಟಿ ಕಮಿಾಷನರವರು ಪ್ರತಿವಾದಿಯ ಹಕ್ಕು ನಿರಾಧಾರವಾದ್ದೆಂತ ಅದನ್ನು ತಿರಸ್ಕರಿಸಿರುತ್ತಾರೆ. ಆದರೆ ಇವರು, ಪ್ರತಿವಾದಿಯೂ ಕೂಡ ಒಬ್ಬ ಹಕ್ಕುದಾರ, ಇವನ ಹಕ್ಕನ್ನು ನೌಕರಿ ಖಾಲಿಬಿದ್ದಾಗ ಪರ್ಯಾಲೋಚಿಸಬಹುದೆಂದು ನಮೂದುಮಾಡಿದ್ದು ಅಸಂಗತ. ಈ ಹುಕುಮಿನ ಮೇಲೆ ಪ್ರತಿವಾದಿಯು ಗೌರ್ನಮೆಂಟಿಗೆ ಅಪೀಲುಮಾಡಿಕೊಂಡಿರಲು ಗೌರ್ನಮೆಂಟಿನವರು, ಈ ಮೊಕದ್ದಮೆಯಲ್ಲಿ ವಾದಿಯ ಮಾವನನ್ನು ಕೆಲಸದಿಂದ ತಪ್ಪಿಸಲು ಸರ್ಕಾರದವರು ಪ್ರವೇಶಿಸುವ ಪ್ರಮೇಯವೇನು ಇರುವದಿಲ್ಲ, ಆದರೆ ಸಧ್ಯದಲ್ಲಿ ಜಾರಿಯಲ್ಲಿ ತರಬೇಕೆಂಬಿರುವ ,, ಸರದಿಮೇಲೆ ಕೆಲಸಮಾಡುವ

ಕ್ರಮವು ಈ ಮೊಕದ್ದಮೆಗೆ ಅನ್ವಯಿಸುತ್ತೆಂದು ತಿಳಿಸಿದರು. ಆ ಕಾ ಕಾನೂನೇನೋ ಜಾರಿಯಲ್ಲಿ ಬರಲಿಲ್ಲ. ಆದರೆ ವಾದಿಯು ಗಂಡನ ಮರಣಾನಂತರ ವಾದಿಗಿಂತ ಪ್ರತಿವಾದಿಗೆ ಹೆಚ್ಚು ಹಕ್ಕು ಉಂಟಾಯಿತೆ ಎಂಬ ವಿಚಾರವನ್ನು ನಿರ್ಣಯಮಾಡಬೇಕಾಗಿರುತ್ತೆ. ಡೆಪ್ಯುಟಿ ಕಮಿಷನರವರ ಹುಕುಮೇ ಆಗಲಿ ಅಥವಾ ಗೌರ್ನಮೆಂಟಿನವರ ಹುಕುಮೇ ಆಗಲಿ ಪ್ರತಿವಾದಿಯು ಪಟೇಲಿ ಕೆಲಸಕ್ಕೆ ಹಕ್ಕುದಾರನೆಂದು ಸ್ಥಾಪನೆಮಾಡುತ್ತೆಂದು ಹೇಳಲಾಗುವದಿಲ್ಲ. ಬಸವನಗೌಡ ಪೌತ್ರಿಪಟ್ಟನಂತರ ಅವನ ಮಗನಾದ ವಾದಿಯ ಗಂಡನು ನೌಕರನಾಗಿ ಮಾಡಲ್ಪಟ್ಟನೇ ಶಿವಾಯಿ ಪ್ರತಿವಾದಿಯ ಹಕ್ಕು ಅಂಗೀಕರಿಸಲ್ಪಡಲಿಲ್ಲ.

ಡೆಪ್ಯುಟಿ ಕಮಿಷನರವರು ಹಳೆ ಹುಕುಮುಗಳನ್ನೂ ಮತ್ತು ಪ್ರತಿವಾದಿಯು ಗಂಡು ಸಂತತಿಇಲ್ಲದ ವಿಧವೆಗಿಂತಲೂ ಶ್ರೇಷ್ಠನಾದ ವಾರಸುದಾರನೆಂಬ ಅಭಿಪ್ರಾಯವನ್ನೂ ಆಧಾರವಾಗಿಟ್ಟುಕೊಂಡು ತೀರ್ಮಾನಮಾಡಿರುತ್ತಾರೆ. ಪ್ರತಿವಾದಿಯು ವಾದಿಯ ಮಾವನನ್ನು ಕೆಲಸದಿಂದ ತಪ್ಪಿಸಬೇಕೆಂದು ತಕರಾರು ತಂದನೇ ಶಿವಾಯಿ ತನ್ನ ಹಕ್ಕನ್ನು ಸ್ಥಾಪಿಸಿಕೊಳ್ಳುವದಕ್ಕಲ್ಲವಾದ್ದರಿಂದ ಡೆಪ್ಯುಟಿ ಕಮಿಷನರವರು ತೋರಿಸಿರುವ ಮೊದಲನೆ ಆಧಾರವು ಊರ್ಜಿತವಾಗತಕ್ಕದ್ದಲ್ಲ. ಅನೇಕ ಸಂದರ್ಭಗಳಲ್ಲಿ ಗಂಡನ ತರುವಾಯ ಪಟೇಲಿ ನೌಕರಿಗೆ ಹೆಂಡತಿಯ ಹಕ್ಕನ್ನು ಅಂಗೀಕರಿಸಿರುತ್ತೆ. ಮತ್ತು ಪ್ರಸಕ್ತ ಮೊಕದ್ದಮೆಯಲ್ಲಿ ಹಿಂದಿನ ನೌಕರದಾರನು ಗ್ರಾಮ ನೌಕರರ ಕಾನೂನು ಜಾರಿಯಲ್ಲಿ ಬರುವದಕ್ಕೆ ಮೊದಲೇ ಪೌತ್ರಿಪಟ್ಟನಾಗಿದ್ದನಾದಕಾರಣ ವಾದಿಯ ಹಕ್ಕನ್ನು ಈಗ ನಿರ್ವಿವಾದವಾಗಿ ವಜಾಮಾಡಲಾಗುವದಿಲ್ಲ. ಆದಕಾರಣ ಡೆಪ್ಯುಟಿ ಕಮಿಷನರವರು ಪ್ರತಿವಾದಿಯನ್ನು ನೇಮಕಮಾಡಿರುವ ಹುಕುಮನ್ನು ರದ್ದುಮಾಡಿರುತ್ತೆ. ಪ್ರತಿವಾದಿಯು ಗುಮಾಸ್ತೆಯಾಗಿದ್ದುಕೊಂಡು ವಿಧವೆಗೆ ಅರ್ಧ ಪ್ರೋಟಗಿಯನ್ನು ಕೊಡಬೇಕೆಂದು ಮಾಡಿರುವ ಅಸಿಸ್ಟೆಂಟು ಕಮಿಷನರವರ ಆರ್ಡರು ಗೌರ್ನಮೆಂಟಿನವರು ಮಾಡಿರುವ ಹುಕುಂಗಳಿಗೂ ಮತ್ತು ನ್ಯಾಯಕ್ಕೂ ವಿರೋಧವಾಗಿರುತ್ತೆ. ಆದ್ದರಿಂದ ನೌಕರಿಯು ವಿಧವೆಯ ಹೆಸರಿನಲ್ಲಿ ರಿಜಿಸ್ಟರು ಆಗತಕ್ಕದ್ದು. ಮತ್ತು ಆಕೆಯು ಡೆಪ್ಯುಟಿ ಕಮಿಷನರವರು ನಿ

ಭಿರುವ ಕಾಲದಲ್ಲಿ ಒಬ್ಬ ಲಾಯಖಾದ ಗುಮಾಸ್ತೆಯನ್ನು ನೇಮಿಸಬೇಕು ತಪ್ಪಿದಲ್ಲಿ ಡೆಪ್ಯುಟಿ ಕಮಿಷನರವರೇ ಲಾಯಖಾದ ಗುಮಾಸ್ತೆಯನ್ನು ನೇಮಕರೂಪು ಮಾಡಿಕೊಳ್ಳಬಹುದು.

———o———

## ೧೯೦೮—೦೯ನೇ ಇಸವಿಯ ಅಪೀಲ್ ನಂ. ೧೧೪.

| ಅಪೀಲ್ ವಾದಿ. | | ಅಪೀಲ್ ಪ್ರತಿವಾದಿ. |
|---|---|---|
| ವೆಂಕಟಶೆಟ್ಟಿ ವುರಫ್ ಮಲ್ಲಶೆಟ್ಟಿ. | *vs.* | ಚೆನ್ನವೀರಶೆಟ್ಟಿ. |

ಕಂದಾಯ ಬಾಕಿಗಾಗಿ ಆದ ಜಮೀನು ಹರಾಜು ವಿಚಾರ.

ವಾದಿಯು ಖಾತೆಯಲ್ಲಿದ್ದ ೨ ಸರ್ವೆ ನಂಬರುಗಳು ಕಂದಾಯದ ಬಾಕಿಗಾಗಿ ಹರಾಜಾಗಿ ಪ್ರತಿವಾದಿಯ ಹೆಸರಿಗೆ ೨೩—೮—೦ ರೂಪಾಯಿಗೆ ನಿಂತವು. ಇದಾದ ೧೬ ದಿನಗಳ ಮೇಲೆ ವಾದಿಯು ಬಾಕಿ ಹಣವನ್ನು ನೋಟೀಸು ಫೀ ಮತ್ತು ಇತರ ಖರ್ಚುಗಳ ಡೇಖೀಲ್ ಹಾಜರ್ಮಾಡಿ ತಾನು ಊರಲ್ಲಿ ಇಲ್ಲದ್ದರಿಂದ ಈ ಹರಾಜು ಸಂಗತಿಯೇ ತನಗೆ ಗೊತ್ತಾಗಲಿಲ್ಲವಾಗಿ ಹರಾಜನ್ನು ರದ್ದುಮಾಡಬೇಕೆಂದು ಅಮಲ್ದಾರ್ರವರಲ್ಲಿ ಕೇಳಿಕೊಂಡನು. ಈ ನಡವಳಿಕೆ ಕಟ್ಟು ಹುಕುಂ ಬಗ್ಗೆ ಅಸಿಸ್ಟೆಂಟ್ ಕಮಿಷನರವರಲ್ಲಿಗೆ ಬಂದಿರಲು ಇವರು ಹರಾಜು ಇಸ್ತಿಹಾರು ಖಾತೆದಾರನ ವಾಸಸ್ಥಾನದ ಮೇಲೆ ಜಾರಿಯಾಗಿಲ್ಲವೆಂಬ ಆಧಾರದ ಮೇಲೆ ಹರಾಜನ್ನು ಕ್ಯಾನ್ಸಲ್‌ಮಾಡಿದರು. ಅಪೀಲಿನಲ್ಲಿ ಡೆಪ್ಯುಟಿ ಕಮಿಷನರವರು ಅಸಿಸ್ಟೆಂಟ್ ಕಮಿಷನರವರು ಹೇಳುವ ಅಂಶವು ತಪ್ಪೆಂದು ಎಣಿಸಿ ಹರಾಜನ್ನು ಖಾಯಂಮಾಡಿದರು.

ಗೌರ್ನ್ಮೆಂಟಿನವರ ತೀರ್ಮಾನ.—ಖಾತೆದಾರನ ಮನೆ ಮೇಲೆ ಜಾರಿಬಗ್ಗೆ ಕಳಿಸಿದ್ದ ಹರಾಜು ಇಸ್ತಿಹಾರುಗಳು ವಾಸ್ತವವಾಗಿ ಜಾರಿಮಾಡಲ್ಪಟ್ಟವೆಂಬುದು ರಿಕಾರ್ಡಿನಿಂದ ಗೊತ್ತಾಗುವದಿಲ್ಲ. ಈ ನೋಟೀಸು ಕಳುಹಿಸಿದ್ದಕ್ಕೆ ಅಸಲು ಹರಾಜು ಇಸ್ತಿಹಾರಿನಲ್ಲಿ ಷರಾ ಮಾತ್ರ ಇದೆ. ಮತ್ತು ಇದನ್ನೆ ಡೆಪ್ಯುಟಿ ಕಮಿಷನರವರು ತಮ್ಮ ಹುಕುಂನಲ್ಲಿ ನಮೂದಿಸಿರುವುದು. ರಿಕಾರ್ಡಿನಲ್ಲಿ ಪ್ರತಿ ಒಂದು ನಡವಳಿಕೆಯನ್ನೂ ಸ್ಪಷ್ಟವಾಗಿ ನಮೂದಿಸಬೇಕಾದ್ದು ಅತ್ಯವಶ್ಯಕ. ಲ್ಯಾಂಡು ರೆವಿನ್ಯೂ ಕೋಡು ೧೭೨ನೇ ಸೆಕ್ಷನ್ ಮೇರೆ ಹರಾಜು ನೋಟೀಸನ್ನು ಬಾಕಿದಾರನ ಮನೆ

ಮೇಲೆ ಚಿಕಟಾಯಿಸಬೇಕಾಗಿರುತ್ತೆ. ಈ ಕೇಸಿನಲ್ಲಿ ಹೀಗೆ ಮಾಡತಕ್ಕ ದ್ದಕ್ಕೆ ದಾಖಲೆಗಳ್ಯಾವದೂ ಇರುವದಿಲ್ಲವಾದ್ದರಿಂದ ಅಸಿಸ್ಟೆಂಟು ಕಮಿಷ ನರವರು ಹರಾಜನ್ನು ರದ್ದುಪಡಿಸಿದ್ದು ಅಕ್ರಮವೆಂದು ಹೇಳಲಾಗುವದಿಲ್ಲ. ಆದಕಾರಣ ಡೆಪ್ಯುಟಿ ಕಮಿಷನರವರ ಹುಕುಮನ್ನು ರದ್ದುಪಡಿಸಿರುತ್ತೆ.

## Powers of Village Panchayat in Ceylon.*

## ಸಿಲೋನ್‌ನಲ್ಲಿ ಗ್ರಾಮ ಪಂಚಾಯಿತ್ರರ ಅಧಿಕಾರಗಳು.

ಸಿಲೋನ್‌ನಲ್ಲಿ ಗ್ರಾಮ ಪಂಚಾಯಿತಿಯು ೧೮೭೧ನೆ ಇಸವಿಯಲ್ಲಿ ಏ ರ್ಪಟ್ಟು ತಹಲ್‌ವರಿಗೂ ನಡೆದುಬರುತ್ತಿದೆ. ಇದಕ್ಕೆ ಅನೇಕ ಅಧಿಕಾರಗ ಳು ಮತ್ತು ಸ್ವಾತಂತ್ರ್ಯಗಳನ್ನು ವಹಿಸಿರುತ್ತಾರೆ. ಇವುಗಳಲ್ಲಿ ಮುಖ್ಯ ವಾದವುಗಳ್ಯಾವವೆಂದರೆ,

(೧) ಗ್ರಾಮಾಂತರಗಳಲ್ಲಿರುವ ಕಾಲುಹಾದಿ, ಸೇತುವೆ, ಮಂಟಪ, ಭಾವಿ, ಊಟೆ, ಸ್ನಾನಕ್ಕೆ ಅನುಕೂಲವಾದ ಕೊಳ, ಹಳ್ಳ, ದೋಣಿ, ಅಂಗಡಿ ಸಾಲು, ಕಸಾಯಿ ಅಂಗಡಿ, ಸ್ಮಶಾನ, ನದಿ, ಮೊದಲಾದವುಗಳ ಮೇಲ್ವಿಚಾರಣೆ.

(೨) ಬಾಲಕ ಬಾಲಕಿಯರ ಪಾಠಶಾಲೆಗಳನ್ನು ಕಟ್ಟಿಸುವದು ಮ ತ್ತು ಅವುಗಳ ರಿಪೇರಿ ವಗೈರೆ ವಿಚಾರ; ಹುಡುಗರು ಸರಿಯಾಗಿ ಪಾಠಶಾ ಲೆಗೆ ಬರುತ್ತಾರೆಯೋ ಎಂಬ ವಿಚಾರದಲ್ಲಿ ತನಿಖೆ.

(೩) ಮಾಮೂಲು ಅನುಸರಿಸಿ ಗ್ರಾಮ ಪಾಷ್ವಾರ್ (ಮೀನು ಹಿಡಿ ಯುವದು) ಗುತ್ತಿಗೆಯ ಏರ್ಪಾಡು.

(೪) ಕೆರೆ, ಗೋಮಾಳ ಮತ್ತು ಸರ್ಕಾರಿ ಖರಾಬುಗಳ ಉಸ್ತು ವಾರಿ.

(೫) ಕಾಲ್ನಡೆಗಳ ಅಭಿವೃದ್ಧಿ ಮತ್ತು ಅವುಗಳಿಗೆ ರೋಗಗಳು ಬಾರದಂತೆ ತಡೆಯುವದು.

(೬) ಬಾಂದುಗಳು ಮತ್ತು ಬೇಲಿಗಳ ಉಸ್ತುವಾರಿ.

(೭) ರಸ್ತೆ ಪಕ್ಕಗಳಲ್ಲಿ ಗಲೀಜು ಮಾಡುವದನ್ನು ತಪ್ಪಿಸುವದು.

---

*ಕುಂಬಕೋಣಂ ವ್ಯವಸಾಯ ಸುಭೂದ ಮಾಸಪತ್ರಿಕೆ, ಜುಲೈ ೧೯೦೯.

(೮) ಜನಗಳನ್ನು ಒಬ್ಬರನ್ನೊಬ್ಬರು ಬೈದಾಡುವದನ್ನು ತಡಿಯುವದು.

(೯) ಸೇಂದಿ ಇಳಿಸುವದಕ್ಕೆ ಉಪಯೋಗಿಸುವ ಗುಡಿಗಳು ಮುಂತಾದವುಗಳು ಸರಿಯಾಗಿವೆಯೆ ಎಂಬ ವಿಚಾರದಲ್ಲಿ ತನಿಖೆ.

(೧೦) ಕಳ್ಳತನದಿಂದ ಬಿಲ್ಲು (ಅಂಬು), ತುಪಾಕಿ, ಬಲೆಗಳನ್ನು ಇಟ್ಟುಕೊಂಡಿರುವದನ್ನು ಕಂಡುಹಿಡಿದು ದಂಡಿಸುವದು.

(೧೧) ಜೂಜಾಟ, ಕೋಳಿ ಕಾಳಗ, ಜನಗಳು ತಿರಗಾಡುವ ರಸ್ತೆಗಳಲ್ಲಿ ಗಾಡಿಗಳ ಜೂಜು ಬಿಡೋಣ, ಇವುಗಳ ನಿರೋಧ.

(೧೨) ಗ್ರಾಮ ಪಂಚಾಯಿತರು ಸಭೆ ಸೇರುವ ಕಟ್ಟಡದ ರಿಪೇರಿ ಮತ್ತು ಮೇಲ್ವಿಚಾರಣೆ.

(೧೩) ಸುಂಕದ ಕಟ್ಟೆಗಳ ಸ್ಥಾಪನೆ ಮತ್ತು ಅಲ್ಲಿನ ವಸೂಲಿ.

(೧೪) ೧೨ ಅಡಿಗಿಂತ ಜಾಸ್ತಿ ಅಗಲವಿಲ್ಲದಿರುವ ಗ್ರಾಮರಸ್ತೆಗಳ ದುರಸ್ತು. ಇದಕ್ಕಾಗಿ ನಿರ್ಬಂದಪಡಿಸಿ ಗ್ರಾಮಸ್ಥರಿಂದ ಹಣವನ್ನೆ ಆಗಲಿ ಅಥವ ಕೆಲಸವನ್ನೆ ಆಗಲಿ ತೆಗದುಕೊಳ್ಳಬಾರದು; ಆದರೆ ಒಂದು ವರ್ಷದಲ್ಲಿ ಯಾವಾಗಲಾದರು ಸರಿಯೆ ೧೦ ದಿನದ ಕೆಲಸವನ್ನು ಗ್ರಾಮಸ್ಥರು ಮಾಡಬೇಕೆಂದು ಹೇಳಬಹುದು.

(೧೫) ಗ್ರಾಮದಲ್ಲಿನ ಕಾಲ್ವೆಗಳನ್ನು ಆಬಾದು ಸ್ಥಿತಿಯಲ್ಲಿಟ್ಟುಕೊಳ್ಳೋಣ.

(೧೬) ೧, ೨, ೧೨, ೧೪, ೧೫ನೆ ಕಲಮುಗಳಲ್ಲಿ ಕಂಡ ಕೆಲಸಗಳನ್ನು ಇಂಥಿಂಥವರು ಇಷ್ಟಿಷ್ಟು ದಿನಗಳು ನೋಡಿಕೊಳ್ಳಬೇಕೆಂದು ಗೊತ್ತುಮಾಡಿ ಸದರಿಯಂತೆ ನಡೆದುಕೊಳ್ಳಲು ಖಾತರಿಪಡಿಸೋಣ, ಆದರೆ ವರುಷದಲ್ಲಿ ೧೦ ದಿನದ ಕೆಲಸಕ್ಕಿಂತ ಜಾಸ್ತಿಯಾಗಿ ಮಾಡಬೇಕೆಂದು ನಿರ್ಬಂಧಿಸಕೂಡದು.

(೧೭) ಸೇಂದಿ, ಸಾರಾಯಿ, ಮೊದಲಾದ ನಿಷಾ ಪದಾರ್ಥಗಳನ್ನು ಯಾವ ಕಾರಣದಿಂದಲೇ ಆಗಲಿ ಹೆಂಗಸರಿಗೆ ಮಾರಕೂಡದೆಂದು ನಿರೋಧಿಸೋಣ.

(೧೮) ವ್ಯವಸಾಯ, ಕೆರೆಗಳ ದುರಸ್ತು, ಗ್ರಾಮ ಕಾವಲು, ಈ ವಿಷಯಗಳಲ್ಲಿ ಮಾಮೂಲು ಅನುಸರಿಸಿ ಕೆಲಸ ನಡೆಸುವದು.

(೧೯) ಗ್ರಾಮ ಸಂಬಂಧವಾದ ಎಲ್ಲಾ ವಿಷಯಗಳಲ್ಲೂ ವಿಚಾರಣೆ.

---

## Sunn-hemp. *

## ಸಣಬುನಾರು.

ಸಣಬು ಪೈರು ಬಿತ್ತನೆಯಾದ ಮೂರು ತಿಂಗಳಲ್ಲಿ ಕಟಾವಿಗೆ ಬರುತ್ತೆ. ಇದು ಕೀಳು ಅಥವಾ ಮರಳು ಭೂಮಿಯಲ್ಲಿ ಚೆನ್ನಾಗಿ ಬೆಳೆಯುತ್ತದೆ. ಇದಕ್ಕೆ ಗೊಬ್ಬರ ಬೇಕಿಲ್ಲ ಮತ್ತು ಬಿತ್ತಿದ್ದಾದಮೇಲೆ ಬೇರೆ ಯಾವ ಬೇಸಾಯವೂ ಅವಶ್ಯವಿಲ್ಲವಾಗಿ ಇದರ ವ್ಯವಸಾಯಕ್ಕೆ ಅಷ್ಟು ಲಾಗವಡು ತಗಲುವದಿಲ್ಲ. ಇದು ಚೆನ್ನಾಗಿ ಕೊಳೆತರೆ ನಾರು ಸುಲಭವಾಗಿ ಬಿಡುವದು. ಬೇರಿನ ಗಡ್ಡೆಗಳಲ್ಲಿರುವ ಸೂಕ್ಷ್ಮ ಕ್ರಿಮಿಗಳ ಮೂಲಕ ಭೂಮಿಯಲ್ಲಿನ ಗಾಳಿಯಿಂದ ನೈಟ್ರೋಜೆನ್ ವಾಯುವನ್ನು ಆಕರ್ಷಿಸಿ ತನ್ನ ಮೂಲಕವೂ ಮತ್ತು ಗಿಡದಿಂದ ಉದುರುವ ಎಲೆಗಳ ಮೂಲಕವೂ ಜಮೀನನ್ನು ಸಾರವತ್ತಾಗಿ ಮಾಡುತ್ತದೆ. ಈ ಬೆಳೆಗೆ ಕಪ್ಪು ಮತ್ತು ಕೆಂಪು ಮಿಶ್ರವಾದ ಜಿಗಟು ಭೂಮಿ ಸರ್ವೋತ್ಕೃಷ್ಟವಾದದ್ದು. ಜಿಗಟಾದ ಕಪ್ಪು ಭೂಮಿಯು ಇದರಷ್ಟು ಉತ್ತಮವಾದದ್ದಲ್ಲ. ಜಿಗಟು ಕೆಂಪು ಭೂಮಿಯಾದರೊ ಕಪ್ಪು ಭೂಮಿಗಿಂತಲೂ ಇನ್ನೂ ಕೀಳಾದದ್ದು. ಮರಳು ಭೂಮಿಯಲ್ಲಿ ಪೈರು ಎತ್ತರವಾಗಿ ಬೆಳೆಯುತ್ತಲ್ಲದೆ ಬೇಗನ್ನೂ ಉದ್ದವಾಗಿ ಬಿಡುತ್ತೆ. ಮಾರ್ಚಿ ಮಾಹೆಯಲ್ಲಿ ಕಟಾವಿಗೆ ಬರುವ ಪೈರಿನಿಂದ ಸರ್ವೋತ್ತಮವಾದ ಬೀಜವು ಹೇರಳವಾಗಿ ಸಿಕ್ಕುತ್ತದೆ. ಬಹಳ ಒತ್ತಾಗಿ ಬೆಳೆದಿರುವ ಗಿಡಗಳ ಬೀಜವು ಸಣ್ಣದಾಗಿರುತ್ತದೆ. ಇಂಥಾ ಬೀಜವನ್ನು ಮುಂದೆ ನವಂಬರಿನಲ್ಲಿ ಮೇವಿಗೋಸ್ಕರ ಇಡುವ ಪೈರಿಗೆ ಉಪಯೋಗಿಸುತ್ತಾರೆ. ದಪ್ಪನಾಗಿರುವ ಬೀಜವು ನಾರು ಪೈರಿಗೆ ಉಪಯೋಗವಡುತ್ತದೆ. ತಿನ್ನವಲ್ಲಿ ಡಿಸ್ಟ್ರಿಕ್ಟಿನಲ್ಲಿ ಈ ಬೀಜ ರೂಪಾಯಿಗೆ ೭೪-೯೪

---

* ಅಗ್ರಿಕಲ್ಚರಲ್ ಅಂಡ್ ಇಂಡಸ್ಟ್ರಿಯಲ್ ಪ್ರೋಗ್ರೆಸ್.—ಸೆಪ್ಟಂಬರ ೧೯೦೯.

ಸೇರು (ಮದರಾಸಿನ ಸೇರು) ಕೊಯಮತ್ತೂರಿನಲ್ಲಿ ರೂಪಾಯಿಗೆ ೧೬ ಸೇರು ದೊರೆಯುತ್ತೆ.

ತರಿ ಜಮೀನಿನಲ್ಲಿ ಇದನ್ನು ಕೆಲವುವೇಳೆ ಬತ್ತದೊಂದಿಗೆ ಕೆಲವುವೇಳೆ ಅರಿಸಿನದೊಡನೆ ಪರಿವರ್ತನೆಯಿಂದ ಬೆಳೆಯುತ್ತಾರೆ. ಕೆಲವುಕಡೆ ಸಣಬನ್ನು ಮೊದಲು ಬೆಳೆದು ನಂತರ ಅದೇ ಜಮೀನಿನಲ್ಲಿ ಹೊಗೆಸೊಪ್ಪು, ಹುರಳಿ ಕಡ್ಲೆ ಮತ್ತು ಜೋಳವನ್ನು ಮತ್ತೆ ಕೆಲವುಕಡೆ ಕಂಬು ಮತ್ತು ಮೇವಿನ ಜೋಳದಪೈರು ಆದನಂತರ, ಸಣಬನ್ನು ಬೆಳೆಯುವದುಂಟು.

ಮದರಾಸು ಅಧಿಪತ್ಯದಲ್ಲಿ ರೈತರು ಎಕರೆಗೆ ಇಷ್ಟೇ ಬೀಜವನ್ನು ಚೆಲ್ಲಬೇಕೆಂದು ನಿರಕಾಗಿಟ್ಟುಕೊಂಡಿಲ್ಲ. ಒಂದೊಂದುಕಡೆ ಒಂದೊಂದು ರೀತಿ ರೂಢಿಯಲ್ಲಿರುತ್ತೆ. ತಿನ್ನವೆಲ್ಲಿಯಲ್ಲಿ ಎಕರೆಗೆ ೩೦ ಮದರಾಸು ಸೇರು, ಕೊಯಮತ್ತೂರಿನಲ್ಲಿ ೪೪ ಸೇರು, ಗೋದಾವರಿ ಮತ್ತು ಕ್ರಿಷ್ಣಾ ಡಿಸ್ಟ್ರಿಕ್ಟುಗಳಲ್ಲಿ ೧೮-೨೦ ಸೇರು, ಗಂಜಾಂ ಮತ್ತು ವಿಶಾಖಪಟ್ಟಣದಕಡೆ ೪೦ ಸೇರು ಈಪ್ರಕಾರ ಉಪಯೋಗಿಸುತ್ತಾರೆ. ಬೇಸಿಗೆ ಪೈರಿಗೆ ಮಳೆಗಾಲದ ಪೈರಿಗಿಂತಲೂ ಕಮ್ಮಿ ಬಿತ್ತ ಹಿಡಿಯುತ್ತದೆ.

ಸಾಧಾರಣವಾಗಿ ಪೈರು ಒತ್ತಾಗಿ ಬೆಳೆಯುವದರಿಂದ ಕಳೆಗಳಿಗೆ ಅವಕಾಶವಿರುವದಿಲ್ಲ.

ಭೂಮಿಯನ್ನು ಉತ್ತಮೇಲೆ ನೀರು ಕಟ್ಟಿ ಹಲಿಗೆ ಹೊಡೆದು ನೀರೆಲ್ಲಾ ಬಸಿದಮೇಲೆ ಬಿತ್ತಬೇಕು. ಪೈರಿಗೆ ಹತ್ತುದಿನ ಬಿಟ್ಟುಕೊಂಡು ನೀರು ಹಾಯಿಸುತ್ತಾರೆ. ಅಮೇಲಿಂದ ಮಳೆ ಇಲ್ಲದಿದ್ದರೆ ೧೫ ದಿನಕ್ಕೊಂದಾವರ್ತಿ ಪೈರಿಗೆ ನೀರು ಕಟ್ಟಬೇಕು. ಹವಾ ತಂಪಾಗಿದ್ದರೆ ೩೦ ಗಳಿಗೆ ಒಂದುಸಲ ನೀರು ಬಿಟ್ಟರೂ ಸಾಕು. ನೀರು ಹಾಯಿಸಿ ಮಾಡಿದ ಪೈರು ಬಿತ್ತನೆಯಾದ ಮೂರು ತಿಂಗಳಲ್ಲಿ ಕಟಾವಿಗೆ ಬರುತ್ತೆ. ಕೆಲವು ವೇಳೆ ಹೂವುಗಳು ಉದುರಿಹೋಗುವದುಂಟು. ಇಂಥಾ ಸಂದರ್ಭದಲ್ಲಿ ಪೈರನ್ನು ಪುನಃ ಹೂ ಮತ್ತು ಕಾಯಿ ಬಿಡುವವರೆಗೂ ಕಟಾವುಮಾಡುವದಿಲ್ಲ. ಬೀಜ ಬಲಿತಮೇಲೆ ಕುಯಿಲಾದ ಪೈರಿನಿಂದಾಗುವ ನಾರು ಇನ್ನೂ ಹೂ ಬಿಟ್ಟಿರುವಾಗಲೇ ಕಟಾವು ಆದ ಪೈರಿನಿಂದಾಗುವ ನಾರಿಗಿಂತಲೂ ವಿಶೇಷ ಬಲವಾಗಿದ್ದರೂ ಒರಟು ಮತ್ತು ಮಾಸಲಾಗಿರುತ್ತೆ. ಗಿಡಗಳನ್ನು

ಬುಡವವರಿಗೆ ಕತ್ತರಿಸಿ ಅಲ್ಲಲ್ಲಿ ರಾಸಿಗಳಾಗಿ ಹಾಕಿದರೆ ಎಲೆಗಳು ಕೊಳೆತು ಕಡ್ಡಿಗಳನ್ನು ಅಲ್ಲಾಡಿಸಿದ ಮಾತ್ರಕ್ಕೆ ಉದುರಿಹೋಗುವವು. ಕಡ್ಡಿಗಳನ್ನು ೧೦೦—೧೫೦ಕ್ಕೆ ಒಂದರಂತೆ ಕಟ್ಟುಗಳು ಕಟ್ಟಿ ಕಣಕ್ಕೆ ಸಾಗಿಸುತ್ತಾರೆ. ಪೈರು ಸರಾಸರಿ ೬ರಿಂದ ೮ ಅಡಿ ಉದ್ದಕ್ಕೆ ಬೆಳೆದು ಗಿಡದ ದಂಟುಗಳ ಮಧ್ಯೆ ಕಾಲುಂಗುಲ ದಪ್ಪನಾಗಿರುತ್ತವೆ. ಕಡ್ಡಿಗಳನ್ನು ಕುಯಿಲಾದ ಕೂಡ್ಲೆ ನೀರಿನಲ್ಲಿ ನೆನೆಹಾಕಬೇಕು. ಕಟ್ಟುಗಳು ಮಾತ್ರ ಮಳೆಯಲ್ಲಿ ನೆನೆಯಬಾರದು.

ಕಡ್ಡಿಗಳನ್ನು ಬೆರಳಿನಿಂದ ತಿಕ್ಕಿದಕೂಡ್ಲೆ ನಾರು ಸುಲಭವಾಗಿ ಬಿಟ್ಟರೆ ಅವು ಹದವಾಗಿರುತ್ತವೆಂದು ತಿಳಿಯಬೇಕು. ತಿನ್ನವಲ್ಲಿ ಡಿಸ್ಟ್ರಿಕ್ಟಿನಲ್ಲಿ ಎಕರೆಗೆ ಸುಮಾರು ೮೪೫ ಪೌಂಡು ನಾರು ಉತ್ಪತ್ತಿಯಾಗುತ್ತೆ. ಇದರ ಬೆಲೆ ಸುಮಾರು ೪೨ ರೂಪಾಯಿಗಾಗುವದು. ಮಳೆಗಾಲದ ಪೈರು ಬೇಸಿಗೆಯ ಪೈರಿಗಿಂತಲೂ ಜಾಸ್ತಿ ಉತ್ಪತ್ತಿಕೊಡುವದು.

## Notifications.

### ಇಸ್ತಿಹಾರ್‌ನಾಮೆಗಳು.

ನಂ. ೪೧೦೩, ತಾರೀಖು ೨—೧೦—೦೯.

ದೊಡ್ಡಬಳ್ಳಾಪುರದ ತಾಲ್ಲೂಕು ಅಮಲ್ದಾರ್ ಮೆ॥ ಸದಾಶಿವರಾಯರಿಗೆ ೧೯೦೯ನೆ ಇಸವಿ ಸೆಪ್ಟಂಬರ್ ೨ನೆ ತಾರೀಖಿನ ೨೯೪೭ನೆ ನಂಬರಿನಲ್ಲಿ ಕೊಟ್ಟಿದ್ದ ೧೫ ದಿನಗಳ ಪ್ರಿವಿಲೇಜ್ ರಜಾವಲ್ಲದೆ ೧೦ ದಿನಗಳು ಜಾಸ್ತಿಯಾಗಿ ಕೊಟ್ಟಿರುತ್ತೆ.

ಅವರ ಗೈರ್‌ಹಾಜರಿಯಲ್ಲಿ ತಾಲ್ಲೂಕು ಶಿರಸ್ತೇದಾರ್ ಸಿ. ಜಿ. ಸುಬ್ಬರಾಯರು ಚಾಲ್ತಿ ಕೆಲಸಗಳ ಛಾರ್ಜಿನಲ್ಲಿರತಕ್ಕದ್ದು.

ನಂ. ೪೧೬೧, ತಾರೀಖು ೬—೧೦—೦೯.

ಮೈಸೂರು ಸರ್ವಿಸ್ ರೆಗ್ಯುಲೇಷನ್ಸ್ ೧೭೭ನೆ ಪ್ರಕರಣದ ಮೇರೆ ರೆವಿನ್ಯೂ ಕಮಿಷನರವರ ಆಫೀಸ್ ಮ್ಯಾನೇಜರ್ ಮತ್ತು ಅಮಲ್ದಾರಾಗಿರುವ ಮೆ॥ ಬಿ. ನಾರಾಯಣಸ್ವಾಮಯ್ಯಂಗಾರ್ ಬಿ.ಎ., ಬಿ.ಎಲ್., ಯವರ

ರಿಗೆ ೧೯೦೯ನೇ ಇಸವಿ ಸೆಪ್ಟಂಬರ್ ತಾರೀಖು ೨೮ರ ಲಾಗಾಯಿತು ೧೫ ದಿನಗಳ ಪ್ರಿವಿಲೇಜ್ ರಜಾಕೊಟ್ಟಿರುತ್ತೆ.

---

ನಂ. ೪೨೦೫, ತಾರೀಖು ೯—೧೦—೦೯.

ಮೇಲ್ಕಂಡವರಿಗೆ ಕೊಟ್ಟಿದ್ದ ೧೫ ದಿನಗಳ ಪ್ರಿವಿಲೇಜ್ ರಜಾ ಪೈಕಿ ಅವರು ಉಪಯೋಗಿಸಿಕೊಳ್ಳದ ೨ ದಿನಗಳ ರಜಾವನ್ನು ರದ್ದುಮಾಡಿರುತ್ತೆ.

---

ನಂ. ೪೨೩೦, ತಾರೀಖು ೧೨—೧೦—೦೯.

ಮೈಸೂರು ಸರ್ವಿಸ್ ರೆಗ್ಯುಲೇಷನ್ಸ್ ೧೭೭ನೇ ಪ್ರಕರಣದ ಮೇರೆ ಬಾಗೇಪಲ್ಲಿ ತಾಲ್ಲೂಕು ಅಮಲ್ದಾರ್ ಮೆ|| ವಿ. ಗೋಪಾಲರಾಯರಿಗೆ ೧೯೦೯ನೇ ಇಸವಿ ಆಗಸ್ಟ್ ೨೩ನೇ ತಾರೀಖು ಲಾಗಾಯಿತು ೧೨ ದಿನಗಳ ಪ್ರಿವಿಲೇಜ್ ರಜಾ ಕೊಟ್ಟಿರುತ್ತೆ.

ಅವರ ಗೈರ್ ಹಾಜರಿಯಲ್ಲಿ ತಾಲ್ಲೂಕು ಶಿರಸ್ತೇದಾರ್ ವೆಂಕಟರಮಣಯ್ಯನವರು ತಾಲ್ಲೂಕು ಛಾರ್ಜಿನಲ್ಲಿರತಕ್ಕದ್ದು.

---

ನಂ. ೪೩೧೮ ತಾರೀಖು ೧೬—೧೦—೦೯.

ಮೈಸೂರು ಸರ್ವಿಸ್ ರೆಗ್ಯುಲೇಷನ್ಸ್ ೧೭೭ನೇ ಪ್ರಕರಣದ ಮೇರೆ ಮಧುಗಿರಿ ತಾಲ್ಲೂಕು ಆಕ್ಟಿಂಗ್ ಅಮಲ್ದಾರ್ ಮೆ|| ಹೆಚ್. ಬಸವರಾಜ ಅರಸಿಯವರಿಗೆ ೧೯೦೯ನೇ ಇಸವಿ ಅಕ್ಟೋಬರ್ ೮ನೇ ತಾರೀಖು ಲಾಗಾಯಿತು ೧೩ ದಿನಗಳ ಪ್ರಿವಿಲೇಜ್ ರಜಾ ಕೊಟ್ಟಿರುತ್ತೆ.

ಅವರ ಗೈರ್ ಹಾಜರಿಯಲ್ಲಿ ಮಧುಗಿರಿಯ ಸಬ್ ರಿಜಿಸ್ಟ್ರಾರ್ ಇ. ಎಸ್. ವೆಂಕಟರಮಣಅಯ್ಯಂಗಾರ್ರವರು ಅಮಲ್ದಾರ್ರ ಚಾರ್ಜಿ ಕೆಲಸಗಳು ನೋಡತಕ್ಕದ್ದು.

---

ನಂ. ೪೩೫೨ ತಾರೀಖು ೧೨—೧೧—೦೯.

ಮೈಸೂರು ಸರ್ವಿಸ್ ರೆಗ್ಯುಲೇಷನ್ಸ್ ೧೭೭ನೇ ಪ್ರಕರಣದ ಮೇರೆ ಮಾಗಡಿ ತಾಲ್ಲೂಕು ಅಮಲ್ದಾರ್ ಮೆ|| ಯಮ್. ಗೋಪಾಲಕೃಷ್ಣಯ್ಯಂಗಾರ್ರಿಗೆ ೧೯೦೯ನೇ ಇಸವಿ ಅಕ್ಟೋಬರ್ ತಾರೀಖು ೨೫ರ ಲಾಗಾಯಿತು ೧೧ ದಿನಗಳ ಪ್ರಿವಿಲೇಜ್ ರಜಾ ಕೊಟ್ಟಿರುತ್ತೆ.

ಅವರ ಗೈರ್ ಹಾಜರಿಯಲ್ಲಿ ತಾಲ್ಲೂಕು ಶೆರಸ್ತೆದಾರ್ ಪಿ. ನಾರಾಯಣ ರಾಯರು ತಾಲ್ಲೂಕು ಚಾರ್ಜಿನಲ್ಲಿರತಕ್ಕದ್ದು.

---

ನಂ. ೪೩೭೬, ತಾರೀಖು ೧೨—೧೦—೦೯.

ಸೊರಬದ ತಾಲ್ಲೂಕು ಆಕ್ಟಿಂಗ್ ಅಮಲ್ದಾರ್ ಮಿ|| ಜಿ. ಮಾದಪ್ಪನವರಿಗೆ ಈ ಆಫೀಸಿನ ೧೯೦೯ನೆ ಇಸವಿ ಜೂನ್ ೧೫ನೆ ತಾರೀಖಿನ ೧೩೬೭೭ನೆ ನಂ. ಇಸ್ತಹಾರ್ ನಾಮೆಯಲ್ಲಿ ಕೊಟ್ಟಿದ್ದ ೧೫ ದಿವಸಗಳ ಪ್ರಿವಿಲೇಜ್ ರಜಾವನ್ನು ಅವರು ಉಪಯೋಗಿಸಿಕೊಳ್ಳದೇ ಇರುವ ಸಬಬು ರದ್ದು ಮಾಡಿರುತ್ತೆ.

---

## Occasional Notes.

## ವಿವಿಧ ವೃತ್ತಾಂತಗಳು.

೧. "ಎಣ್ಣೆ ಬೀಜಗಳನ್ನು ಬೆಳೆಯುತಕ್ಕವರು ಅನ್ಯದೇಶದ ನೆಲಗಡ್ಲೆ ಪೈರನ್ನು ಬೆಳೆದಲ್ಲಿ ಹೆಚ್ಚು ಆದಾಯ ಉಂಟು. ಯಾಕಂದರೆ ಹೊರಗಿನ ನೆಲಗಡಲೆಯಲ್ಲಿ ಸ್ಥಳೀಯ ರಕಂಗಿಂತಲೂ ಉತ್ಪತ್ತಿ ಜಾಸ್ತಿ ಮತ್ತು ಎಣ್ಣೆ ಬರುವದೂ ಹೆಚ್ಚು" ಎಂದು ಸರ್ ಜಾರ್ಜ್ ಮ್ಯೂರ್ ಮೆಕಂಜಿಯವರು ಪೂನಾ ಪಟ್ಟಣದಲ್ಲಿ ಜರುಗಿದ ಅಗ್ರಿಕಲ್ಚರಲ್ ಕಾನ್ಫರೆನ್ಸ್ ಯಾನೆ ವ್ಯವಸಾಯ ಸಂಬಂಧಕವಾದ ಸಭೆಯಲ್ಲಿ ಹೇಳಿರುತ್ತಾರೆ.—ಡೆಯ್ಲಿ ಪೋಸ್ಟ್ ೭—೧೦—೦೯.

---

೨. ಉಪ್ಪಿನಲ್ಲಿ ಬಹುಮಟ್ಟಿಗೆ ಕಾಲರಾ ರೋಗವನ್ನು ತಡಿಯತಕ್ಕ ಗುಣ ಉಂಟು. ಈ ರೋಗ ಕಾಣಿಸಿಕೊಂಡ ಸಂದರ್ಭಗಳಲ್ಲಿ ಉಪ್ಪನ್ನು ಊಟದಲ್ಲಿ ವಿಶೇಷವಾಗಿ ಉಪಯೋಗಿಸಿ ಪರೀಕ್ಷೆ ಮಾಡಿ ನೋಡಿದ್ದರಲ್ಲಿ ಇದು ಬಹಳ ಪ್ರಯೋಜನಕರವೆಂದು ಕಂಡುಬಂದಿದೆ. ಇದನ್ನು ಅಡಿಗೆಯಲ್ಲಿ ಸಾಮಾನ್ಯವಾಗಿ ಬಳಿಸುವದಕ್ಕಿಂತಲೂ ದ್ವಿಗುಣವಾಗಿ ಉಪಯೋಗಿಸುವವರಿಗೆ ರೋಗ ತಗಲುವ ಸಂಭವ ಕಮ್ಮಿ.—ಅಗ್ರಿಕಲ್ಚರಲ್ ಅಂಡ್ ಇಂಡಸ್ಟ್ರಿಯಲ್ ಪ್ರೋಗ್ರೆಸ್, ಜುಲೈ ೧೯೦೯.

V. B. Soobbiah & Sons, Printers, Bangalore.—1909.